# ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಂಸ್ಕೃತಿಕ ಅನನ್ಯತೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಪರವ್ವಗೋಳ ಕೆಂಪಣ್ಣ ಶಿವಲಿಂಗಪ್ಪ

ಮಾರ್ಗದರ್ಶಕರು
ಡಾ. ಎಸ್.ಆರ್. ಚನ್ನವೀರಪ್ಪ
ಪ್ರಾಧ್ಯಾಪಕರು




ಭಾಷಾನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೪

# ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಂಸ್ಕೃತಿಕ ಅನನ್ಯತೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಮಹಾಪ್ರಬಂಧ)

ಸಂಶೋಧಕರು
ಪರವ್ವಗೋಳ ಕೆಂಪಣ್ಣ ಶಿವಲಿಂಗಪ್ಪ

ಮಾರ್ಗದರ್ಶಕರು
ಡಾ. ಎಸ್.ಆರ್. ಚನ್ನವೀರಪ್ಪ
ಪ್ರಾಧ್ಯಾಪಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ



ಭಾಷಾನಿಕಾಯ
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

**'ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಂಸ್ಕೃತಿಕ ಅನನ್ಯತೆ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಪರವ್ವಗೋಳ ಕೆಂಪಣ್ಣ ಶಿವಲಿಂಗಪ್ಪ** ಅವರು ನನ್ನ ಮಾರ್ಗದರ್ಶನದಲ್ಲಿ ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಎಸ್.ಆರ್. ಚನ್ನವೀರಪ್ಪ**
ಮಾರ್ಗದರ್ಶಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 30/10/18
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಘೋಷಣಾ ಪತ್ರ

**'ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಂಸ್ಕೃತಿಕ ಅನನ್ಯತೆ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು **ಡಾ. ಎಸ್. ಆರ್. ಚನ್ನವೀರಪ್ಪ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಭಾಷಾ ನಿಕಾಯದ ಹಸ್ತಪ್ರತಿಶಾಸ್ತ್ರ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಪರವ್ವಗೋಳ ಕೆಂಪಣ್ಣ ಶಿವಲಿಂಗಪ್ಪ**
**ಸಂಶೋಧನಾ ವಿದ್ಯಾರ್ಥಿ**
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ :

ಸ್ಥಳ : ವಿದ್ಯಾರಣ್ಯ

# ಪರಿವಿಡಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಸಾವಿರಾರು ವರ್ಷಗಳಿಂದ ನಮ್ಮ ನಾಡಿನ ಸಾಹಿತ್ಯ–ಸಂಸ್ಕೃತಿಗಳನ್ನು ಲೋಕದ ಮುಂದಿಡಲು ಪ್ರಮುಖ ಆಕರಗಳೆಂದರೆ ಹಸ್ತಪ್ರತಿ ಮತ್ತು ಶಾಸನಗಳು. ಶಾಸನಗಳಿಗೆ ರಾಜಮಹಾರಾಜರ ಪ್ರಶಂಸೆ–ಹೊಗಳಿಕೆಯ ಒಂದು ಮಿತಿ ಇರುತ್ತದೆ. ಆದರೆ ಹಸ್ತಪ್ರತಿಗಳು ನಿಜವಾದ ಸಾಂಸ್ಕೃತಿಕ ಇತಿಹಾಸವನ್ನು ನಮ್ಮ ಕಣ್ಣು ಮುಂದೆ ತಂದು ನಿಲ್ಲಿಸುತ್ತವೆ. ಹಸ್ತಪ್ರತಿಗಳಿಗೆ ಸುಮಾರು ಸಾವಿರ ವರ್ಷಗಳ ಇತಿಹಾಸವಿದೆ. ಅಂತೆಯೆ ಹಸ್ತಪ್ರತಿಗಳು ಲೋಕಜ್ಞಾನದ ಸಮಸ್ತ ವಿಷಯಗಳನ್ನು ಒಳಗೊಂಡು ನಮ್ಮ ಜ್ಞಾನದ ಕ್ಷಿತಿಜವನ್ನು ವಿಸ್ತಾರಗೊಳಿಸುವ ಸಂಸ್ಕೃತಿಯ ವಾಹಕಗಳಾಗಿವೆ. ಕನ್ನಡದಲ್ಲಿ ವಚನಸಾಹಿತ್ಯ, ದಾಸಸಾಹಿತ್ಯ, ಚಂಪೂ, ರಗಳೆ, ಷಟ್ಪದಿ, ಚೌಪದಿ, ಕಂದ, ಅಷ್ಟಕ, ದಂಡಕ, ತಾರಾವಳಿ, ಸ್ವರವಚನ, ತತ್ವಪದ, ಭಜನಾಪದ ಮೊದಲಾದ ಜನಪ್ರಿಯ ಸಾಹಿತ್ಯ ಪ್ರಕಾರಗಳ ಜೊತೆಗೆ ಉಪೇಕ್ಷಿತ ಮತ್ತು ಲಘುಸಾಹಿತ್ಯ ಪ್ರಕಾರಗಳ ಕುರಿತು ಸಾವಿರಾರು ಹಸ್ತಪ್ರತಿಗಳು ನಮ್ಮ ನಾಡಿನ ತುಂಬಾ ಚೆಲ್ಲುವರಿದಿವೆ. ಇಂಥ ಉಪೇಕ್ಷಿತ ಸಾಹಿತ್ಯದ ಒಂದು ವಿವರಣೆಯನ್ನು ಎಂ.ಎಂ. ಕಲಬುರ್ಗಿ ಅವರು ಹೀಗೆ ವಿವರಿಸಿದ್ದಾರೆ.

"ಇಂಥ ಉಪೇಕ್ಷಿತ ಕ್ಷೇತ್ರಗಳಲ್ಲಿ ಮುಖ್ಯವಾದುದು, ಲೌಕಿಕಶಾಸ್ತ್ರಕ್ಷೇತ್ರ, ಇಲ್ಲಿ ಗಣಿತ, ಜ್ಯೋತಿಷ್ಯ, ವೈದ್ಯ, ಸೂಪ, ಸಂಗೀತ, ವಾಸ್ತು, ಕ್ರೀಡೆ ಮೊದಲಾದುವು ಕನ್ನೆನೆಲಗಳಾಗಿ ಉಳಿದಿವೆ. ವೈದ್ಯಶಾಸ್ತ್ರವೊಂದನ್ನೇ ತೆಗೆದುಕೊಂಡರೆ, ನರವೈದ್ಯದಲ್ಲಿಯೇ ಸ್ತ್ರೀವೈದ್ಯ, ಬಾಲವೈದ್ಯ ಇತ್ಯಾದಿ ಗ್ರಂಥಗಳೂ, ಪಶುವೈದ್ಯದಲ್ಲಿಯೇ ಗೋವೈದ್ಯ, ಅಶ್ವವೈದ್ಯ, ಗಜವೈದ್ಯ ಇತ್ಯಾದಿ ಕೃತಿಗಳೂ ನಮ್ಮಲ್ಲಿ ಸೃಷ್ಟಿಯಾಗಿವೆ. ಇವುಗಳಲ್ಲೆಲ್ಲ ಕರ್ನಾಟಕದ ಸ್ಥಳಜನ್ಯ ಜ್ಞಾನಗಳು ಅಡಗಿರಬಹುದಾಗಿದೆ.ಉಪೇಕ್ಷೆಗೆ ಗುರಿಯಾಗಿರುವ ಇಂತಹದೇ ಇನ್ನೊಂದು ಕ್ಷೇತ್ರ ಟೀಕೆ–ವ್ಯಾಖ್ಯಾನ ಸಾಹಿತ್ಯವಾಗಿದ್ದು, ಸಂಪಾದಕರಿಗೆ ಇಲ್ಲಿ ವಿಪುಲಸಾಮಗ್ರಿ ಕಾದುಕುಳಿತಿದೆ. ಈವರೆಗೆ ಶಂಕರ–ಮಾಧ್ವ–ರಾಮಾನುಜ ಧರ್ಮಗಳ ಕೀರ್ತನಸಾಹಿತ್ಯ ಸಮಗ್ರ ರೂಪದಲ್ಲಿ ಪ್ರಕಟವಾಗಿವೆ. ಜೈನಕೀರ್ತನೆಗಳ ಸಮಗ್ರ ಸಂಪುಟವೂ ಹೊರಬಂದಿದೆ. ಇವೆಲ್ಲವುಗಳಿಗಿಂತ ವಿಸ್ತಾರವಾಗಿರುವ ಲಿಂಗಾಯತ ಸ್ವರವಚನ ಸಾಹಿತ್ಯದ ಸಮಗ್ರ

ಪ್ರಕಟಣೆ ದೊಡ್ಡ ಆಹ್ವಾನವಾಗಿ ಉಳಿದಿದೆ. ವಣಿಜೋತ್ಪತ್ತಿ, ಪಂಚಾಚಾರ್ಯ ನಿರ್ಣಯ, ಮತಸ್ಥಲ, ಸಮಾಧಿಕ್ರಿಯಾ ಮೊದಲಾದ ಸಣ್ಣ ಸಣ್ಣ ರಚನೆಗಳು, ಲಾವಣಿ ಮೊದಲಾದ ಹಾಡುಗಳು ದೊಡ್ಡ ಸಮಸ್ಯೆಗಳನ್ನು ಬಿಡಿಸಲು ಕೆಲವೊಮ್ಮೆ ನೆರವಾಗುತ್ತಿದ್ದು, ಇವುಗಳ ವ್ಯವಸ್ಥಿತ ಪರಿಷ್ಕರಣ–ಪ್ರಕಟಣೆ ಕೈಕೊಳ್ಳಬೇಕಿದೆ. ಬೇತಾಳ ಪಂಚವಿಂಶತಿ ಕಥೆ, ಜೈನಕಥೆಗಳು ಮೊದಲಾದ ಕಥಾಕೃತಿಗಳು ಕತ್ತಲಲ್ಲಿ ಉಳಿದಿವೆ. ಇವೆಲ್ಲವುಗಳನ್ನು ಕ್ರಮಬದ್ಧವಾಗಿ ಸಂಗ್ರಹಿಸಿ 'ಪ್ರಾಚೀನ ಸಮಗ್ರ ಕಥಾ ಸಂಪುಟ'ಗಳನ್ನು ಹೊರತರಲು ಯಾರೂ ಮನಸ್ಸು ಮಾಡಿಲ್ಲ. ಮುತ್ತಿನ ಚಿಪ್ಪಿನಸೂತ್ರ, ಬಣ್ಣಾಂತರದ ಸೂತ್ರ, ಗೂಢಲಿಪಿ, ಚಿತ್ರ ಹಸಿಗೆ, ಕಾಮದೇವನ ತೊರವಿ, ಬಂದಣಿಕೆ ಕಲ್ಲ, ಗಿಳಿ ಹಾಡು, ಕೃಷ್ಣರಾಜ ಪೇಟಕಾ, ಚಾಳಾಂಕಿ ಶತಕ, ವಾವೆಯ ಪದ, ಪಂದೆ, ಮಾಸಾಳು ವರ್ಣದ ತ್ರಿವಿಧಿ, ನಾರಾಯಣ ಕವಚ, ಚೂರ್ಣಿಕೆಗಳು, ದಿಮ್ಮಿಸಾಲೆ, ಕೀರಣಿಕೆ ಲೆಕ್ಕ, ಚೌತಾಣ, ರಾತ್ರಿ ನಲ್ಲನ ಪದ್ಯಗಳು ಈ ಶೀರ್ಷಿಕೆಗಳೇ ನಮಗೆ ಹೊಸವು. ಪಗಡಿ ಆಟಗಳು, ೧೨ ಮನೆ ಚದುರಂಗದಾಟ, ದಿಕ್ಪಾಲ ಗಂಜೀಪು, ದೇವಿ ದಶಾವತಾರ ಗಂಜೀಪು, ನವಗ್ರಹ ಗಂಜೀಪು ಈ ಆಟಗಳ ಸ್ವರೂಪ ನಮಗೆ ಗೊತ್ತಿಲ್ಲ. ಖಡ್ಗಶಾಸ್ತ್ರ, ಕತ್ತಿ ಲಕ್ಷಣ, ಬಾಣಗಾರಿಕೆ, ಸಭಾಪತಿ ಲಕ್ಷಣ–ಇವು ಖಂಡಿತ ಹೊಸ ವಿಚಾರ ತಿಳಿಸುತ್ತವೆ. ಇಂಥ ಹಸ್ತಪ್ರತಿಗಳನ್ನು ಒಮ್ಮೆಯಾದರೂ ಬಿಚ್ಚಿ ನೋಡಬೇಕು." (ಎಂ.ಎಂ. ಕಲಬುರ್ಗಿ : ನನ್ನ ಹಸ್ತಪ್ರತಿ ಕಥೆ ಮಾರ್ಗ ಸಂ. ೫. ಪು. ೫೪೦)

ಹೀಗೆ ವೈವಿಧ್ಯಮಯವಾಗಿರುವ ಕನ್ನಡ ಹಸ್ತಪ್ರತಿಗಳ ವಿಷಯವಾಗಿ ನಮ್ಮ ಜನರು ನೂರಾರು ವರ್ಷಗಳಿಂದ ಮೂಢನಂಬಿಕೆಗಳನ್ನು ಬೆಳೆಸಿಕೊಂಡು, ಅವುಗಳನ್ನು ಭಕ್ತಿಭಾವದಿಂದ ಜಗುಲಿ ಮೇಲಿಟ್ಟು, ಕುಂಕುಮ, ಗಂಧ, ನೀರು ಹಾಕಿ ಹಾಳುಮಾಡಿದ್ದೇ ಹೆಚ್ಚು. ನಮ್ಮ ನಾಡಿನ ನಿಜವಾದ ಸಾಂಸ್ಕೃತಿಕ ಸಂಪತ್ತೆನಿಸಿದ ಹಸ್ತಪ್ರತಿಗಳು ಅಜ್ಞಾನಿಗಳ ಕೈ ಸೇರಿ ಹಾಳಾಗಿಹೋದವು. ಸ್ವಾತಂತ್ರ್ಯಾನಂತರವೂ ಇಡೀ ಭಾರತ ಹತ್ತು ಹಲವು ಕ್ಷೇತ್ರಗಳಲ್ಲಿ ಮುಂದುವರೆದರೂ, ನಮ್ಮ ಪಾರಂಪರಿಕ ಜ್ಞಾನವಾಹಕಗಳಾದ ಹಸ್ತಪ್ರತಿಗಳನ್ನು ಕಾಪಾಡಿಕೊಳ್ಳುವಲ್ಲಿ ಶ್ರಮಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಆಂಗ್ಲ ಅಧಿಕಾರಿಗಳಾದ ಮೆಕೆಂಜಿ, ಸಿ.ಪಿ.ಬ್ರೌನ್, ಬಿ. ಎಲ್. ರೈಸ್, ಇ.ಎಲ್. ರೈಸ್, ಮೊಗ್ಲಿಂಗ್, ಫ್ಲೀಟ್, ಕಿಟೆಲ್ ಮೊದಲಾದವರು ಹಸ್ತಪ್ರತಿ ಮತ್ತು ಶಾಸನಗಳನ್ನು ಸಂಗ್ರಹಿಸದೆ ಹೋಗಿದ್ದರೇ ನಮ್ಮ ಸಂಸ್ಕೃತಿಯ ಅಸ್ಮಿತೆಯನ್ನು ನಾವು ಅರಿತುಕೊಳ್ಳುವುದು ಕಷ್ಟಸಾಧ್ಯವಾಗುತ್ತಿತ್ತು.

ಬ್ರಿಟಿಷ್ ಅಧಿಕಾರಿಗಳು ಹಸ್ತಪ್ರತಿಗಳನ್ನು ಸಂಗ್ರಹಿಸಿ ಅವುಗಳನ್ನು ಸಂರಕ್ಷಿಸುವ ವಿಧಾನವನ್ನು ತೋರಿಸಿಕೊಟ್ಟರು. ನಂತರ ವಿಶ್ವವಿದ್ಯಾಲಯಗಳು, ಪ್ರಾಚ್ಯಸಂಶೋಧನಾಲಯಗಳು ತಲೆಎತ್ತಿ ಸಾವಿರಾರು ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯದಲ್ಲಿ ಸಮರ್ಪಣಾ ಮನೋಭಾವದಿಂದ ದುಡಿದವು. ನಂತರ ಪಾಶ್ಚಾತ್ಯ–ದೇಶಿಯ ವಿದ್ವಾಂಸರು ಈ ಹಸ್ತಪ್ರತಿಗಳನ್ನು ಶಾಸ್ತ್ರಶುದ್ಧವಾಗಿ ಸಂಪಾದಿಸಿ,

ಪರಿಷ್ಕರಿಸಿ ಪ್ರಕಟಿಸುವ ಕೈಂಕರ್ಯದಲ್ಲಿ ತೊಡಗಿದರು. ನಮ್ಮ ನಾಡಿನ ಬಹುತೇಕ ವಿದ್ವಾಂಸರು ಹಸ್ತಪ್ರತಿಗಳ ಒಡಲಲ್ಲಿರುವ ಅಪಾರಜ್ಞಾನ ಸಂಪತ್ತಿನ ವಾರುಧಿಯನ್ನು ಬೆಳಕಿಗೆ ತಂದು, ಕರ್ನಾಟಕ ಸಂಸ್ಕೃತಿಯ ವಿಸ್ಮಯವನ್ನು ಜಗತ್ತಿಗೆ ತೋರಿಸಿಕೊಟ್ಟರು. ಇಷ್ಟೆಲ್ಲ ಆದರೂ ಹಸ್ತಪ್ರತಿಗಳ ವಿಷಯವಾಗಿ ನಮ್ಮ ವಿದ್ವಾಂಸರು ಮಾಡಿದ ಅಧ್ಯಯನ ಅತ್ಯಂತ ವಿರಳವೆಂದೇ ಹೇಳಬೇಕು.

ಬಿ.ಕೆ. ಹಿರೇಮಠ ಅವರು 'ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ' ಎಂಬ ಪಿಎಚ್.ಡಿ. ಅಧ್ಯಯನ ಹೊರತು ಪಡಿಸಿದರೆ ಎಂ. ಎಂ. ಕಲಬುರ್ಗಿ ಅವರ 'ಕನ್ನಡ ಹಸ್ತಪ್ರತಿಶಾಸ್ತ್ರ', ಬಿ. ಎಸ್. ಸಣ್ಣಯ್ಯ ಅವರ 'ಹಸ್ತಪ್ರತಿಶಾಸ್ತ್ರ' ಎಚ್. ದೇವೀರಪ್ಪ ಅವರ 'ಕನ್ನಡ ಹಸ್ತಪ್ರತಿಗಳ ಇತಿಹಾಸ', ನಾ ಗೀತಾಚಾರ್ಯ ಅವರ 'ಹಸ್ತಪ್ರತಿಶಾಸ್ತ್ರ', ಬಿ.ಎಂ. ಶ್ರೀ ಪ್ರತಿಷ್ಠಾನದ 'ಮಣಿಹ' (ಹಳಕಟ್ಟಿ ಶತಮಾನೋತ್ಸವ ಸಂಸ್ಮರಣ ಗ್ರಂಥ), ಬಿ. ಆರ್. ಹಿರೇಮಠ ಅವರ 'ಹಸ್ತಪ್ರತಿ ಲಿಪಿಕಾರರು' ಹೀಗೆ ಬೆರಳೆಣಿಕೆಯ ಕೃತಿಗಳು ಮಾತ್ರ ಹಸ್ತಪ್ರತಿ ಅಧ್ಯಯನ ಮಾಡುವವರಿಗೆ ದಾರಿ ದೀಪವಾಗಿದ್ದವು. ಹಂಪಿ ಕನ್ನಡ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬರುತ್ತಲೇ ಹಸ್ತಪ್ರತಿಶಾಸ್ತ್ರ ವಿಭಾಗ ಇನ್ನಷ್ಟು ವಿಸ್ತಾರವಾಗಿ ಬೆಳೆಯಿತು. ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದ ಮೂಲಕ 'ಹಸ್ತಪ್ರತಿಶಾಸ್ತ್ರ'ದ ವಿವಿಧ ಮುಖಗಳ ಅಧ್ಯಯನ ನಡೆಯಿತು. ಹಸ್ತಪ್ರತಿಗಳ ವಿಷಯವಾಗಿ ಅನೇಕ ಹೊಸ ವಿಷಯಗಳು ಮೊದಲ ಬಾರಿಗೆ ಬೆಳಕುಕಂಡವು.

ಬೆಳಗಾವಿ ಪರಿಸರದಲ್ಲಿ ಅಪಾರ ಪ್ರಮಾಣದ ಹಸ್ತಪ್ರತಿ ಸಂಪತ್ತು ಇರುವುದು ನನ್ನ ಗಮನಕ್ಕೆ ಬಂದಿತು. 'ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಂಸ್ಕೃತಿಕ ಅನನ್ಯತೆ' ಎಂಬ ವಿಷಯ ಕುರಿತು ಸಂಶೋಧನೆ ಮಾಡಬೇಕೆಂದು ನಿರ್ಧರಿಸಿ, ಆ ನಿಟ್ಟಿನಲ್ಲಿ ಮುಂದುವರೆದ ಫಲವೇ ಪ್ರಸ್ತುತ ಮಹಾಪ್ರಬಂಧದ ವಿಷಯವಾಗಿದೆ.

**ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ :**

ನನ್ನ ಸಂಶೋಧನೆ ಮಹಾಪ್ರಬಂಧದ ಮುಖ್ಯ ಉದ್ದೇಶ, ಬೆಳಗಾವಿ ಪರಿಸರದ ಹಸ್ತಪ್ರತಿಗಳ ವೈವಿಧ್ಯಮಯ ಮಗ್ಗಲುಗಳನ್ನು ಕುರಿತು ವಿಶ್ಲೇಷಿಸುವುದು. ಹಸ್ತಪ್ರತಿಗಳ ವಿವರ, ಅವುಗಳ ಸಂಖ್ಯೆ ಮೊದಲಾದವುಗಳನ್ನು ಗುರುತಿಸುವುದು. ವ್ಯಕ್ತಿಒಡೆತನ, ಧಾರ್ಮಿಕ ಸಂಸ್ಥೆಗಳ ಒಡೆತನದಲ್ಲಿರುವ ಹಸ್ತಪ್ರತಿಗಳ ವಿವರ ಸಂಗ್ರಹಿಸುವದು, ಅಪ್ರಕಟಿತ ಹಸ್ತಪ್ರತಿಗಳನ್ನು ಗುರುತಿಸುವುದು. ಮೇಲಾಗಿ ಹಸ್ತಪ್ರತಿಗಳ ಸಾಂಸ್ಕೃತಿಕ ಅನನ್ಯತೆಯನ್ನು ಸಾಮಾಜಿಕ–ಸಾಹಿತ್ಯಿಕ–ಧಾರ್ಮಿಕ–ಚಾರಿತ್ರಿಕ ನೆಲೆಗಳಲ್ಲಿ ಗುರುತಿಸುವ ಪ್ರಯತ್ನ ಮಾಡುವ ಉದ್ದೇಶದಿಂದ ಈ ಮಹಾಪ್ರಬಂಧದ ರಚನೆಗೆ ಮುಂದಾಗಿದ್ದೇನೆ.

ಈ ಮಹಾಪ್ರಬಂಧದ ವ್ಯಾಪ್ತಿ ಬೆಳಗಾವಿ ಪರಿಸರಕ್ಕೆ ಮಾತ್ರ ಸೀಮಿತವಾಗಿದೆ. ಸೀಮಿತ ವಲಯದಲ್ಲಿ ವಿಷಯದ ವ್ಯಾಪ್ತಿ ಇಟ್ಟುಕೊಂಡು ಕ್ಷೇತ್ರಕಾರ್ಯ ಮಾಡಿ, ವಿಷಯದ ಸಮಗ್ರ ವಿಶ್ಲೇಷಣೆ ಮಾಡಬಹುದು. ಹೀಗಾಗಿ ಬೆಳಗಾವಿ ಪರಿಸರವನ್ನು ಮಾತ್ರ ಆಯ್ದುಕೊಂಡಿರುವೆ. ಬೆಳಗಾವಿ ಜಿಲ್ಲೆಯ ಅನೇಕ ಹಳ್ಳಿಗಳನ್ನು ಸುತ್ತಾಡಿ ಕ್ಷೇತ್ರಕಾರ್ಯ ಕೈಗೊಂಡು ವಿಷಯ ಸಂಗ್ರಹ

ಮಾಡಿ, ಅಧಿಕೃತ ಮಾಹಿತಿಯನ್ನು ನೀಡುವ ಪ್ರಯತ್ನ ಮಾಡಲಾಗಿದೆ.

**ಮಹಾಪ್ರಬಂಧದ ರೂಪರೇಷೆ :**

ಪ್ರಸ್ತುತ ಮಹಾಪ್ರಬಂಧವನ್ನು ೯ ಅಧ್ಯಾಯಗಳಲ್ಲಿ ವಿಸ್ತರಿಸಲಾಗಿದೆ. ಪ್ರತಿಯೊಂದು ಅಧ್ಯಾಯಗಳಲ್ಲಿ ವಿಷಯದ ಖಚಿತತೆಗಾಗಿ ಕ್ಷೇತ್ರಕಾರ್ಯದ ಅಧ್ಯಯನದ ಫಲ ಮತ್ತು ಈವರೆಗೆ ಹಸ್ತಪ್ರತಿ ವಿಷಯವಾಗಿ ಪ್ರಕಟವಾದ ಸಾಹಿತ್ಯದ ಸಹಾಯದಿಂದ ನಿಖರವಾದ ಮಾಹಿತಿಯನ್ನು ನೀಡುವುದರ ಜೊತೆಗೆ, ಹೊಸ ಹೊಸ ವಿಚಾರಗಳನ್ನು ಮೊದಲ ಬಾರಿಗೆ ಇಲ್ಲಿ ಹೇಳಲಾಗಿದೆ. ಹೀಗಾಗಿ ಇದೊಂದು ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಸಂಸ್ಕೃತಿಗಳ ಅಧ್ಯಯನಕ್ಕೆ ಮಾರ್ಗದರ್ಶಿ ಆಕರ ಕೃತಿಯಾಗಬಹುದೆಂಬ ನಿಟ್ಟಿನಲ್ಲಿ ಪರಿಪೂರ್ಣ ಮತ್ತು ಸಮೃದ್ಧ ಮಾಹಿತಿಗಳನ್ನು ಸಂಗ್ರಹಿಸಿ, ವಸ್ತುನಿಷ್ಠವಾಗಿ ವಿಶ್ಲೇಷಿಸುವ ಕಾರ್ಯವನ್ನು ಮಾಡಲಾಗಿದೆ.

**ಮೊದಲನೆಯ ಅಧ್ಯಾಯ : ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ**

ಪ್ರಥಮ ಅಧ್ಯಾಯದಲ್ಲಿ ನನ್ನ ಮಹಾಪ್ರಬಂಧದ ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪವನ್ನು ಕುರಿತು ವಿವರಿಸಲಾಗಿದೆ. ಮಹಾಪ್ರಬಂಧ ರಚನೆಗೆ ಹಾಕಿಕೊಂಡ ಮಿತಿ, ಕೈಗೊಂಡ ಕ್ಷೇತ್ರಕಾರ್ಯ ಮತ್ತು ವಿಷಯ ಸಂಗ್ರಹದ ಮಾಹಿತಿ ನೀಡಲಾಗಿದೆ. ಹಸ್ತಪ್ರತಿಶಾಸ್ತ್ರ ಕುರಿತು ಅಧ್ಯಯನ ಇಲ್ಲಿಯವರೆಗೆ ನಡೆದ ಸಂಶೋಧನೆಯ ವಿವರ ಮತ್ತು ಹಸ್ತಪ್ರತಿಗಳ ಒಡಲಲ್ಲಿ ಅಡಕವಾಗಿರುವ ವಿಷಯ ಸಂಪತ್ತನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ.

**ಎರಡನೆಯ ಅಧ್ಯಾಯ : ಬೆಳಗಾವಿ ಪರಿಸರದ ಹಸ್ತಪ್ರತಿ ನೆಲೆಗಳು**

ಬೆಳಗಾವಿ ಪರಿಸರದಲ್ಲಿನ ಹಸ್ತಪ್ರತಿ ನೆಲೆಗಳ ವಿವರಗಳು ಯಾವ ರೀತಿ ಇವೆ. ವೈಯಕ್ತಿಕ ಒಡೆತನದ ಹಸ್ತಪ್ರತಿಗಳು, ಸಾಂಸ್ಥಿಕ ಒಡೆತನದ ಹಸ್ತಪ್ರತಿಗಳಲ್ಲಿ ಧಾರ್ಮಿಕ ಸಂಸ್ಥೆ ಮತ್ತು ಇತರ ಸಂಘ ಸಂಸ್ಥೆಗಳ ನೆಲೆಯಲ್ಲಿ ಸಂಗ್ರಹಿತವಾದ ಒಟ್ಟು ಹಸ್ತಪ್ರತಿಗಳ ವಿವರವನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಜಿಲ್ಲೆಯಾದ್ಯಂತ ವ್ಯಾಪಕ ಕ್ಷೇತ್ರಕಾರ್ಯ ಮಾಡುವುದರ ಮೂಲಕ ಈ ವಿವರವನ್ನು ಸಂಗ್ರಹಿಸಲಾಗಿದೆ. ಹುಡುಕುತ್ತ ಹೋದಂತೆ, ಹಸ್ತಪ್ರತಿಗಳ ಅದ್ಭುತ ಲೋಕದ ಬಾಗಿಲೇ ತೆರೆಯುತ್ತದೆ. ಇನ್ನೂ ಹತ್ತಾರು ಜನ ಈ ಕುರಿತು ಅಧ್ಯಯನ ಮಾಡುವಷ್ಟು ಹಸ್ತಪ್ರತಿಗಳು ಅಲ್ಲದೇ ಸಾವಿರಾರು ಜನರ ಮನೆಯ ಜಗುಲಿಯಲ್ಲಿ, ಅಟ್ಟದ ಮೇಲೆ, ಕಪಾಟಿನೊಳಗೆ ಕುಳಿತು ಅನಾಥಪ್ರಜ್ಞೆಯನ್ನು ಅನುಭವಿಸುತ್ತಿವೆ. ಕೆಲವು ಜನ ಹಸ್ತಪ್ರತಿಗಳನ್ನು ಅವಲೋಕಿಸಲು ಕೊಡದೆ ಸತಾಯಿಸಿದ್ದು ನನ್ನ ಕ್ಷೇತ್ರಕಾರ್ಯದ ಅಧ್ಯಯನದಲ್ಲಿ ನಾನು ಕಂಡ ಸತ್ಯ. ಈ ಜಿಲ್ಲೆಯ ಸಾವಿರಾರು ಹಸ್ತಪ್ರತಿಗಳು ಹೊರಗೆ ಹೋದ ದಾಖಲೆಗಳು ನಮಗೆ ದೊರೆಯುತ್ತವೆ. ಕೋಥಳಿ ಜೈನ ಬಸದಿಯಲ್ಲಿದ್ದ ಸಾವಿರಾರು ಹಸ್ತಪ್ರತಿಗಳು ನೆರೆಯ ಮಹಾರಾಷ್ಟ್ರದ ಕೊಲ್ಲಾಪುರ ಲಕ್ಷ್ಮೀಸೇನ ಮಠಕ್ಕೆ ಹೋದದ್ದು, ಅರಭಾವಿ–ಗೋಕಾಕ ಪ್ರದೇಶದಲ್ಲಿ ಶಿ.ಚೆ. ನಂದೀಮಠ ಅವರು ಸಂಗ್ರಹಿಸಿದ ೮೦೦ಕ್ಕೂ ಹೆಚ್ಚು ಹಸ್ತಪ್ರತಿಗಳು ಧಾರವಾಡ

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯನ್ನು ಸೇರಿದ್ದು, ಮುರಗೋಡ ಮಹಾಂತಶಿವಯೋಗಿಗಳ ಜನ್ಮಶತಮಾನೋತ್ಸವ ನಿಮಿತ್ಯ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಅಸ್ತಿತ್ವಕ್ಕೆ ಬಂದ ಶ್ರೀ ಬಸವೇಶ್ವರಪೀಠಕ್ಕೆ ಅರಭಾವಿಮಠದ, ಮುರಗೋಡ ಮಠದ ನೂರಾರು ಹಸ್ತಪ್ರತಿಗಳು ರವಾನೆಯಾದದ್ದು ಕಂಡುಬರುತ್ತದೆ. ಇಷ್ಟೇ ಅಲ್ಲದೆ ಧಾರವಾಡ ಕನ್ನಡ ಸಂಶೋಧನ ಸಂಸ್ಥೆ, ಹಂಪಿ ಕನ್ನಡ ವಿಶ್ವವಿದ್ಯಾಲಯಗಳಿಗೂ ಈ ಜಿಲ್ಲೆಯ ಹಸ್ತಪ್ರತಿಗಳು ಹೋಗಿರುತ್ತವೆ.

ಇಷ್ಟಾಗಿಯೂ ಇನ್ನೂ ಕೆಲವು ಹಸ್ತಪ್ರತಿಗಳು ಹಳ್ಳಿಯ ಜನರ ಮನೆಗಳಲ್ಲಿ ಉಳಿದುಕೊಂಡಿವೆ. ಅವುಗಳನ್ನು ಇನ್ನಷ್ಟು ಕ್ಷೇತ್ರಕಾರ್ಯ ಮಾಡಿ, ಅವರ ಮನವೊಲಿಸಿ, ಸಂಗ್ರಹಿಸಬೇಕಾದ ಅಗತ್ಯತೆಯೂ ಬಹಳಷ್ಟಿದೆ. ಕೆಲವರು ತಮ್ಮ ಹಿರಿಯರು ತೀರಿಕೊಂಡ ನಂತರ, ಅವರು ಸಂಗ್ರಹಿಸಿದ ಈ ಹಸ್ತಪ್ರತಿ ಸಂಪತ್ತನ್ನು ಮಠಮಾನ್ಯಗಳಿಗೆ ತಂದು ಒಪ್ಪಿಸಿದ್ದಾರೆ. ಮಠದ ಸ್ವಾಮಿಗಳು ಈ ಹಸ್ತಪ್ರತಿಗಳನ್ನು ಜತನವಾಗಿ ಇಟ್ಟುಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ಪರಿಸರದ ಸುಮಾರು ೨೦ಕ್ಕೂ ಹೆಚ್ಚು ಮಠಗಳು ಹಸ್ತಪ್ರತಿಗಳನ್ನು ಅತ್ಯಂತ ಜೋಪಾನವಾಗಿ ಸಂಗ್ರಹಿಸಿವೆ. ಅವುಗಳಲ್ಲಿ ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿ ೨೫೦ಕ್ಕೂ ಹೆಚ್ಚು ಹಸ್ತಪ್ರತಿ ಕಟ್ಟುಗಳಿವೆ. ಅವುಗಳಲ್ಲಿ ೨೦೦ ಕಟ್ಟುಗಳಲ್ಲಿ ಅಡಕವಾಗಿರುವ ೬೦೦ ಕೃತಿಗಳ ವಿವರಣಾತ್ಮಕ ಸೂಚಿಯೊಂದು ಪ್ರಕಟವಾಗಿದೆ.

ಅಥಣಿಯ ಮೋಟಗಿಮಠ, ಗಚ್ಚಿನಮಠ, ಚಿಂಚಣಿಯ ಅಲ್ಲಮಪ್ರಭು ಸಿದ್ಧಸಂಸ್ಥಾನಮಠ, ನಿಡಸೋಸಿ ದುರದುಂಡೀಶ್ವರ ಸಿದ್ಧಸಂಸ್ಥಾನಮಠ, ಮೂಡಲಗಿಯ ಶಿವಬೋಧರಂಗಮಠ, ಅರಭಾವಿಮಠ, ಮುರಗೋಡ ದುರದುಂಡೀಶ್ವರಮಠ ಮೊದಲಾದ ಮಠಗಳ ಸಂಗ್ರಹದಲ್ಲಿರುವ ಹಸ್ತಪ್ರತಿಗಳನ್ನು ವಿವರವಾಗಿ ಪರಿಶೀಲಿಸಿ, ಅಧ್ಯಯನಕ್ಕೆ ಒಳಪಡಿಸಲಾಗಿದೆ. ಬೆಳಗಾವಿ ಜಿಲ್ಲೆಗೆ ಬಹುದೊಡ್ಡ ವಿದ್ವತ್ ಪರಂಪರೆ ಇದೆ. ಕೆ.ಬಿ. ಪಾಠಕ, ಆ.ನೇ.ಉಪಾಧ್ಯೆ, ಶಂಬಾ ಜೋಶಿ, ಗಂಗಾಧರ ಮಡಿವಾಳೇಶ್ವರ ತುರಮರಿ, ಶಾಂತವೀರ ರಾಚಿದೇವ ಕಿತ್ತೂರ, ಕೆ.ಜಿ. ಕುಂದಣಗಾರ, ಶಿ. ಚೆ. ನಂದೀಮಠ, ಬೆಟಗೇರಿ ಕೃಷ್ಣಶರ್ಮ, ಭುಜೇಂದ್ರ ಮಹಿಷವಾಡಿ ಮೊದಲಾದ ವಿದ್ವಾಂಸರು ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಹಸ್ತಪ್ರತಿಗಳನ್ನು ಸಂಪಾದಿಸಿ ಪ್ರಕಟಿಸುವ ಮೂಲಕ ಕನ್ನಡ ಪ್ರಾಚೀನ ವಿದ್ವತ್‌ಲೋಕವನ್ನು ಪುನರುಜ್ಜೀವನಗೊಳಿಸಿದ್ದಾರೆ. ಈ ಮಹಾನುಭಾವರ ಕೊಡುಗೆಯನ್ನು ಕುರಿತು ಇಲ್ಲಿ ವಿವರಿಸಿದ್ದೇನೆ.

**ಮೂರನೆಯ ಅಧ್ಯಾಯ : ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಚಾರಿತ್ರಿಕ ಆಯಾಮ**

ಬೆಳಗಾವಿ ಪರಿಸರದಲ್ಲಿ ದೊರಕುವ ಹಸ್ತಪ್ರತಿಗಳಲ್ಲಿ ಚಾರಿತ್ರಿಕ ಕೃತಿಗಳ ವಿವರಗಳನ್ನು ಇಲ್ಲಿ ಅವಲೋಕಿಸುವ ಪ್ರಯತ್ನಮಾಡಲಾಗಿದೆ. ಅದರಲ್ಲೂ ಮುಖ್ಯವಾಗಿ ಲಾವಣಿ ಸಾಹಿತ್ಯ ಈ ಜಿಲ್ಲೆಯ ಸಮೃದ್ಧ ಸಾಹಿತ್ಯ ಪರಂಪರೆಯಾಗಿ ಬೆಳೆದಿದೆ. ಲಾವಣಿಗಳಲ್ಲಿ ಅಡಗಿರುವ ಚಾರಿತ್ರಿಕ ಅಂಶಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ. ಕಿತ್ತೂರು ಸಂಸ್ಥಾನ–ವಂಟಮುರಿ ಸಂಸ್ಥಾನ ಕುರಿತು

ಮೂಡಿಬಂದ ಚಾರಿತ್ರಿಕ ಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕರ್ನಾಟಕ ಚರಿತ್ರೆಯ ನಿರ್ಮಾಣದಲ್ಲಿ ಬೆಳಗಾವಿ ಜಿಲ್ಲೆಯ ಚಾರಿತ್ರಿಕ ಕೃತಿಗಳ ಮಹತ್ವ ಏನು ಎಂಬುದನ್ನು ವಿಷದಪಡಿಸಲಾಗಿದೆ. ಮುಖ್ಯವಾಗಿ ಅರಟಾಳ ರುದ್ರಗೌಡರಿಗೆ ಸಂಬಂಧಪಟ್ಟ ಮಹತ್ವದ ಕೃತಿಗಳನ್ನು ಇಲ್ಲಿ ಮೊದಲ ಬಾರಿಗೆ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಅರಟಾಳ ರುದ್ರಗೌಡರ ಇಂಗ್ಲಿಷ್ ಭಾಷೆಯ ಆತ್ಮಚರಿತ್ರೆ ಮತ್ತು ಅವರನ್ನು ಕುರಿತು ವಾರ್ಧಕ ಷಟ್ಪದಿಯಲ್ಲಿ ಬರೆದ 'ಶ್ರೀ ಮದ್ವೀರಶೈವಾಭಿಷ್ಟಕಲ್ಪದ್ರುಮಂ' ಎಂಬ ಪುರಾಣ ಕಾವ್ಯ ನನ್ನ ಅಧ್ಯಯನದ ಸಂದರ್ಭದಲ್ಲಿ ದೊರೆತ ಅಮೂಲ್ಯ ಚಾರಿತ್ರಿಕ ಕೃತಿಗಳಾಗಿವೆ.

**ನಾಲ್ಕನೆಯ ಅಧ್ಯಾಯ : ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಮಾಜಿಕ ಆಯಾಮ**

ಪ್ರಸ್ತುತ ಅಧ್ಯಾಯದಲ್ಲಿ ಬೆಳಗಾವಿ ಪರಿಸರದ ೧೮-೧೯ ಮತ್ತು ೨೦ನೇ ಶತಮಾನದ ಕಾಲಘಟ್ಟದ ಸಾಮಾಜಿಕ ಜೀವನವನ್ನು ಇಲ್ಲಿನ ಹಸ್ತಪ್ರತಿಗಳ ಮುಖೇನ ಅರಿತುಕೊಳ್ಳುವ ಪ್ರಯತ್ನಮಾಡಲಾಗಿದೆ. ಹಸ್ತಪ್ರತಿ ಲಿಪಿಕಾರರ ಅಂತ್ಯಪ್ರಶಸ್ತಿಗಳ ಸಹಾಯದಿಂದ ಈ ಅಂಶಗಳನ್ನು ಗುರುತಿಸುವ ಕಾರ್ಯ ಮಾಡಲಾಗಿದೆ. ಈ ಅಧ್ಯಾಯದಿಂದ ಬೆಳಗಾವಿ ಪರಿಸರದಲ್ಲಿ ನೂರು-ನೂರೈವತ್ತು ವರ್ಷಗಳ ಹಿಂದೆ ಇದ್ದ ಮಠಗಳ ವಿವರ ತಿಳಿಯುತ್ತದೆ. ಇಂದು ಆ ಮಠಗಳೆಲ್ಲ ನಾಮಾವಶೇಷವಾಗಿಹೋಗಿರುವುದನ್ನು ಗಮನಿಸಬಹುದು. ನೂರಾರು ಮಠಗಳು ಸ್ವಾಮಿಗಳ ಸ್ವ-ವ್ಯಾಮೋಹಕ್ಕೆ ಬಲಿಯಾಗಿ ಹಾಳಾಗಿ ಹೋಗಿರಬಹುದು. ಆದರೆ ಆ ಮಠಗಳಲ್ಲಿ ಇದ್ದ ಹಸ್ತಪ್ರತಿಗಳು ಕೂಡ ಈ ದಿಸೆಯಲ್ಲಿ ಅವಜ್ಞೆಗೆ ಒಳಗಾಗಿ ಹಾಳಾಗಿಹೋದದ್ದು ವಿಪರ್ಯಾಸವೇ ಸರಿ. ಒಟ್ಟಾರೆ ಆ ಕಾಲದ ಸಾಮಾಜಿಕ ಜನಜೀವನವನ್ನು ಅರಿಯುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

**ಐದನೆಯ ಅಧ್ಯಾಯ : ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಹಿತ್ಯಿಕ ಆಯಾಮ**

ಬೆಳಗಾವಿ ಪರಿಸರದ ಹಸ್ತಪ್ರತಿಗಳ ಸಾಹಿತ್ಯಿಕ ದೃಷ್ಟಿಯ ಅಧ್ಯಯನ ಈ ಅಧ್ಯಾಯದಲ್ಲಿದೆ. ಹಸ್ತಪ್ರತಿಗಳ ವಿಷಯ ವೈವಿಧ್ಯ, ಅವುಗಳ ಸಾಹಿತ್ಯಿಕ ಪ್ರಕಾರ, ಆಯಾ ಪ್ರಕಾರಗಳಲ್ಲಿ ಮೂಡಿಬಂದ ಸಾಹಿತ್ಯದ ಪ್ರಮಾಣವನ್ನು ಗುರುತಿಸಲಾಗಿದೆ. ಕವಿಗಳ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕುರಿತು ಚರ್ಚಿಸಲಾಗಿದೆ. ವಚನ, ಚಂಪೂ, ರಗಳೆ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಈವರೆಗೆ ಮೂಡಿಬಂದ ಸಾಹಿತ್ಯಿಕ ಹಸ್ತಪ್ರತಿಗಳ ವಿಶೇಷಗಳನ್ನು ಕುರಿತು ಇಲ್ಲಿ ವಸ್ತುನಿಷ್ಠವಾಗಿ ವಿವೇಚಿಸಲಾಗಿದೆ.

**ಆರನೆಯ ಆಧ್ಯಾಯ : ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಧಾರ್ಮಿಕ ಆಯಾಮ**

ಈ ಅಧ್ಯಾಯದಲ್ಲಿ ಬೆಳಗಾವಿ ಪರಿಸರದ ಧಾರ್ಮಿಕ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲಾಗಿದೆ. ಹಸ್ತಪ್ರತಿ ಲಿಪಿಕಾರರಲ್ಲಿ ಬಹುತೇಕರು ಮಠಾಧೀಶರಾಗಿದ್ದುದು ಗಮನಿಸುವ ಅಂಶ. ಮಠದಲ್ಲಿ ಜಪತಪಗಳೊಂದಿಗೆ ಭಕ್ತರಿಗೆ ಬೇಕಾದ ಅಧ್ಯಾತ್ಮಿಕ ಕೃತಿಯನ್ನು ಲಿಪಿಮಾಡಿಕೊಡುವ ಕಾರ್ಯವನ್ನು ಪೂರೈಸಿದ ಮಠಾಧೀಶರ ವಿವರಗಳನ್ನು ಇಲ್ಲಿ ನೀಡಲಾಗಿದೆ. ಹಾಗೆಯೇ ಭಕ್ತರಾದವರು ತಮ್ಮ

ಭಕ್ತಿ ಮತ್ತು ಶ್ರದ್ಧೆ ಕಾರಣದಿಂದ, ಅಪರೂಪದ ಕೃತಿಯೊಂದನ್ನು ವೃತ್ತಿಲಿಪಿಕಾರರಿಂದ ಬರೆಯಿಸಿ, ಸ್ವಾಮಿಗಳ–ಗುರುಗಳ ಸನ್ನಿಧಿಗೆ ಸಮರ್ಪಿಸಿದ ಸಂಗತಿಗಳನ್ನು ಇಲ್ಲಿ ವಿವರಿಸಲಾಗಿದೆ. ಹಾಗೆಯೇ ಒಂದು ಮಹತ್ವದ ವಿಷಯವೆಂದರೆ, ಧಾರ್ಮಿಕ ಹಸ್ತಪ್ರತಿಗಳನ್ನು ತಿರುಚಿ, ಮೂಲ ಪಠ್ಯದಲ್ಲಿ ಕೃತಕ ಪದ್ಯಗಳನ್ನು ಸೇರಿಸಿ, ಧಾರ್ಮಿಕ ವ್ಯವಸ್ಥೆಯಲ್ಲಿ ಅಲ್ಲೋಲ–ಕಲ್ಲೋಲವನ್ನುಂಟುಮಾಡಿದ ಎರಡು ಘಟನೆಗಳನ್ನು ಇಲ್ಲಿ ಸುದೀರ್ಘವಾಗಿ ಚರ್ಚಿಸಿದ್ದೇನೆ. ಒಂದು ಬೆಳಗಾವಿ ಜಿಲ್ಲೆಯ ಹೂಲಿಮಠದಲ್ಲಿ ರಾಘವಾಂಕನ ಮೂಲ ಸಿದ್ಧರಾಮ ಚಾರಿತ್ರವನ್ನು ತಿದ್ದಿ, ತಮಗೆ ಬೇಕಾದ ಪದಗಳನ್ನು ಸೇರಿಸಿ, ಕೃತಕ ಹಸ್ತಪ್ರತಿಯೊಂದನ್ನು ಸೃಷ್ಟಿಸಿದ ವಿಷಯವನ್ನು ಆಧಾರ ಸಮೇತ ವಿವರಿಸಿ ಖಂಡಿಸುವ ಕಾರ್ಯಮಾಡಲಾಗಿದೆ. ಹಾಗೆಯೇ ಸಿದ್ಧಾಂತ ಶಿಖಾಮಣಿ ಎಂಬ ವೀರಶೈವರ ಧಾರ್ಮಿಕ ಪ್ರಾಚೀನ ಗ್ರಂಥವನ್ನು ನಾಗನೂರು ಬೃಹನ್ಮಠದ ಕಾಶೀನಾಥ ಶಾಸ್ತ್ರಿ ತಿರುಚಿ, ೬೩ ಖೊಟ್ಟಿ ಕೃತಕ ಶ್ಲೋಕಗಳನ್ನು ಸೃಷ್ಟಿಮಾಡಿ ಸೇರಿಸಿದ, ಅದೇ ಕೃತಿಯನ್ನು ಸಾಮಾನ್ಯ ಜನ ಅಧ್ಯಯನ ಮಾಡುತ್ತಿದ್ದರು. ಆಗ ಸಂ. ಶಿ. ಭೂಸನೂರಮಠ ಮತ್ತು ಬೆಳಗಾವಿಯ ಹಿರಿಯ ವಿದ್ವಾಂಸ ಎಸ್.ಜಿ. ಘಿವಾರಿ ಅವರು ಕೂಡಿ ಮೂಲ ಸಿದ್ಧಾಂತ ಶಿಖಾಮಣಿಯನ್ನು ಕನ್ನಡ ತಾತ್ಪರ್ಯ ದೀಪಿಕೆಯೊಂದಿಗೆ ಪ್ರಕಟಿಸಿದರು. ಹೀಗೆ ಒಂದು ಹಸ್ತಪ್ರತಿಯನ್ನು ತಿರುಚಿ, ಸೃಷ್ಟಿಸಿದ್ದು, ಇನ್ನೊಂದು ಕೃತಿಗೆ ನಿಜದ ಸ್ಪರ್ಶ ನೀಡುವ ಎರಡೂ ಬಗೆಯ ಕಾರ್ಯ ಇಲ್ಲಿ ನಡೆದಿದೆ. ಈ ಮಹತ್ವದ ಘಟನೆಯನ್ನು ಇಲ್ಲಿ ತಲಸ್ಪರ್ಶಿಯಾಗಿ ಅಧ್ಯಯನ ಮಾಡಲಾಗಿದೆ.

**ಏಳನೆಯ ಅಧ್ಯಾಯ : ಬೆಳಗಾವಿ ಪರಿಸರದ ಹಸ್ತಪ್ರತಿಗಳ ಪರಿಚಲನೆ**

ಬೆಳಗಾವಿ ಪರಿಸರದ ಹಸ್ತಪ್ರತಿಗಳ ಕ್ರಿಯಾಶೀಲತೆಯ ಲಕ್ಷಣವೆಂದರೆ ಅವುಗಳ ಚಲನಶೀಲತೆ. ಈ ಹಸ್ತಪ್ರತಿಗಳ ಸಂಗ್ರಹಕಾರರು, ಕವಿಗಳು, ಮತ್ತು ಲಿಪಿಕಾರರ ಕುರಿತು ಸುದೀರ್ಘವಾಗಿ ವಿವರಿಸಲಾಗಿದೆ. ರಾಜಾಶ್ರಯದಲ್ಲಿ ಬೆಳೆದು ಬಂದ ಸಾಹಿತ್ಯ ಕಾಲಾನಂತರದಲ್ಲಿ ಅರಮನೆಯಿಂದ ಗುರುಮನೆಗೆ ಸಾಗಿಬಂದಿತು. ಅಂತೆಯೇ ಹಸ್ತಪ್ರತಿಗಳು ಗುರುಮನೆಯಿಂದ ಆಂಗ್ಲರ ಆಡಳಿತ ಕಾಲದಲ್ಲಿ ಸಂಘ ಸಂಸ್ಥೆಗಳ ಒಡೆತನದಲ್ಲಿ ಸಂರಕ್ಷಣೆಗೊಂಡವು. ಹಸ್ತಪ್ರತಿಗಳನ್ನು ಸಂಗ್ರಹಿಸಿದವರ ವಿವರ, ಅವುಗಳ ಮಹತ್ವವನ್ನು ಕುರಿತು ಇಲ್ಲಿ ವಿವರಿಸಲಾಗಿದೆ. ಸ್ವತಃ ಕವಿಗಳು ಬರೆದ ಅನೇಕ ಬಯಲಾಟಗಳ ಹಸ್ತಪ್ರತಿಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ.

**ಎಂಟನೆಯ ಅಧ್ಯಾಯ : ಅನ್ಯಭಾಷಾ ಹಸ್ತಪ್ರತಿಗಳು**

ಬೆಳಗಾವಿ ಪರಿಸರ ಸಹಜವಾಗಿಯೇ ಕನ್ನಡ ಮರಾಠಿ ಭಾಷೆಗಳ ಸಾಂಸ್ಕೃತಿಕ ಸಂಬಂಧವನ್ನು ಹೊಂದಿದೆ. ಕನ್ನಡಿಗರ ಚರಿತ್ರೆಗಳು ಮರಾಠಿ ಭಾಷೆಯಲ್ಲಿ ರೂಪಗೊಂಡಿರುವುದು ಗಮನಾರ್ಹವಾದ ಸಂಗತಿಯಾಗಿದೆ. ಚಿದಂಬರ ದೀಕ್ಷಿತ ಚರಿತ್ರೆ, ಮೂಡಲಗಿ ಪರಂಪರೆಯ ಸ್ವಾಮಿಗಳ 'ಶ್ರೀಮಚ್ಚರಿತ್ರೆ' ಮೊದಲಾದ ಕೃತಿಗಳ ವಿವರಗಳನ್ನು ಸುದಿರ್ಘವಾಗಿ ಚರ್ಚಿಸಲಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಅರಟಾಳ ರುದ್ರಗೌಡರು ಸಂಗ್ರಹಿಸಿದ ಬಹುತೇಕ ಹಸ್ತಪ್ರತಿಗಳ ಸಂಗ್ರಹ ನಾಗನೂರುಮಠವನ್ನು

ಸೇರಿದೆ. ಅವುಗಳಲ್ಲಿ ಅರಟಾಳ ರುದ್ರಗೌಡರು ಸಂಗ್ರಹಿಸಿದ ೬೦ಕ್ಕೂ ಮಿಕ್ಕ ಸಂಸ್ಕೃತ ಹಸ್ತಪ್ರತಿಗಳ ವಿವರ ನೀಡಲಾಗಿದೆ. ಅಲ್ಲದೆ ಎಲ್ಲಕ್ಕೂ ಮಿಗಿಲಾಗಿ ಅರಟಾಳ ರುದ್ರಗೌಡರು ಬರೆದ ಹತ್ತು ಇಂಗ್ಲಿಷ್ ಲೇಖನಗಳು ಅಂತ್ರಾಪೊಲೊಜಿಕಲ್ ಸೊಸೈಟಿ ಪತ್ರಿಕೆಯಲ್ಲಿ ಪ್ರಕಟಗೊಂಡಿದ್ದವು. ಈ ಪತ್ರಿಕೆಯ ಏಕಮಾತ್ರ ಸಂಗ್ರಹವಿದದ್ದು ಪುಣೆಯ ಭಂಡಾರಕರ ಸಂಶೋಧನ ಸಂಸ್ಥೆಯಲ್ಲಿ. ಕೆಲವು ಕಿಡಿಗೇಡಿಗಳು ಈ ಸಂಶೋಧನ ಕೇಂದ್ರಕ್ಕೆ ಬೆಂಕಿಹಚ್ಚಿದ ಪರಿಣಾಮವಾಗಿ ಆ ಹಳೆಯ ಪತ್ರಿಕೆಗಳೆಲ್ಲವೂ ನಾಶವಾಗಿಹೋದವು. ಆದರೆ ಅವುಗಳನ್ನು ಜೆರಾಕ್ಸ್ ಮಾಡಿಸಿ, ಅವುಗಳಿಗೆ ಜೀವಂತಿಕೆಯನ್ನು ತಂದುಕೊಟ್ಟ ರೋಚಕತೆ ಕುರಿತು ಇಲ್ಲಿ ಹೇಳಲಾಗಿದೆ.

**ಒಂಬತ್ತನೆಯ ಅಧ್ಯಾಯ : ಸಮಾರೋಪ**

ಕೊನೆಯಲ್ಲಿ ನನ್ನ ಒಟ್ಟು ಮಹಾಪ್ರಬಂಧದ ಫಲಿತಗಳನ್ನು ಕುರಿತು ವಿಶ್ಲೇಷಣೆಯಾಗಿದೆ. ಬೆಳಗಾವಿ ಪರಿಸರದ ಹಸ್ತಪ್ರತಿಗಳ ವೈವಿಧ್ಯತೆ ಹಾಗೂ ವಿಶೇಷತೆಗಳನ್ನು ಸೂತ್ರರೂಪದಲ್ಲಿ ವಿವರಿಸಲಾಗಿದೆ. ಈ ಮಹಾಪ್ರಬಂಧದ ಮೂಲಕ ಅನೇಕ ಹೊಸ ವಿಷಯಗಳು ಮೊದಲ ಬಾರಿಗೆ ಇಲ್ಲಿ ಬೆಳಕು ಕಂಡಿವೆ.

# ಅಧ್ಯಾಯ – ೨

# ಬೆಳಗಾವಿ ಪರಿಸರದ ಹಸ್ತಪ್ರತಿ ನೆಲೆಗಳು

# ಅಧ್ಯಾಯ – ಎರಡು

# ಬೆಳಗಾವಿ ಪರಿಸರದ ಹಸ್ತಪ್ರತಿ ನೆಲೆಗಳು

ಕರ್ನಾಟಕ ರಾಜಕೀಯ ಚರಿತ್ರೆಯಲ್ಲಿ ಬೆಳಗಾವಿ ಜಿಲ್ಲೆಯದ್ದು ವಿಶಿಷ್ಟ ಕೊಡುಗೆಯಿದೆ. ಇಡೀ ಕರ್ನಾಟಕ ರಾಜ್ಯದಲ್ಲಿಯೇ ದೊಡ್ಡ ಜಿಲ್ಲೆ ಎಂಬ ಹೆಗ್ಗಳಿಕೆಯನ್ನು ಪಡೆದುಕೊಂಡಿದೆ. ಆದರೆ ಇದು ಗಡಿಭಾಗವಾಗಿರುವ ಕಾರಣ ರಾಜಕೀಯ, ಸಾಂಸ್ಕೃತಿಕ, ಭಾಷಿಕ ಅನೇಕ ಬಿಕ್ಕಟ್ಟುಗಳನ್ನು ಎದುರಿಸುತ್ತಲಿದೆ. ಪ್ರಸ್ತುತ ಜಿಲ್ಲೆಯು ತನ್ನದೆಯಾದ ಐತಿಹಾಸಿಕ ಭವ್ಯ ಪರಂಪರೆಯನ್ನು ಉಳಿಸಿ, ಬೆಳೆಸಿಕೊಂಡು ಮುನ್ನಡೆಯುತ್ತಿರುವುದು ಹೆಮ್ಮೆಯ ಸಂಗತಿಯಾಗಿದೆ. ನೂರುವರ್ಷಗಳಿಗಿಂತ ಮೊದಲು ಬೆಳಗಾವಿಯಲ್ಲಿ ಕನ್ನಡಿಗರ ಪ್ರಾಬಲ್ಯವಿತ್ತು. ಮಧ್ಯಕಾಲದಲ್ಲಿ ಅನ್ಯಭಾಷಿಕರ ಅಂದರೆ ಮರಾಠಿ ಭಾಷಿಕರ ಪ್ರಾಬಲ್ಯ ಹೆಚ್ಚಾಗಿದ್ದು, ಉದ್ಯೋಗವನ್ನು ಹುಡುಕಿಕೊಂಡು ಹೊಟ್ಟೆಪಾಡಿಗೆ ದೂರದ ಗೋವಾ, ರತ್ನಾಗಿರಿ, ಸಾವಂತವಾಡಿ, ಕುರಂದವಾಡಿ ಸಂಸ್ಥಾನಗಳಿಂದ ಬೆಳಗಾವಿ ನಗರ ಮತ್ತು ಇಲ್ಲಿನ ಸುತ್ತಮುತ್ತಲಿನ ಪರಿಸರ ಯೋಗ್ಯವಾದ ಸ್ಥಳವೆಂದು ಇಲ್ಲಿಗೆ ಬಂದು ನೆಲೆಸಿದ್ದಾರೆ. ಈಗ ಬೆಳಗಾವಿಯಲ್ಲಿ ಕನ್ನಡಿಗರ ಸಂಖ್ಯಾಬಲ ಹೆಚ್ಚಾಗಿದ್ದು ಕಂಡುಬರುತ್ತದೆ. ಈ ಒಂದು ವಿಸ್ತಾರತೆ ಬೆಳೆಯುವುದಕ್ಕೆ ವಿದ್ಯಾಸಂಸ್ಥೆಗಳು, ಕೈಗಾರಿಕೆ, ವಿಶ್ವವಿದ್ಯಾಲಯಗಳು ಸರಕಾರದ ಹಿತಾಸಕ್ತಿಗಳು ಕಾರಣವಾಗಿವೆ.

"ಬೆಳಗಾವಿ ನಗರ ಸುಮಾರು ೨೦೦೦ ವರ್ಷಗಳಿಂದಲೂ ನಡೆದ ಘಟನೆಗಳಿಗೆ ಸಾಕ್ಷಿಯಾಗಿದೆ. ಕ್ರಿ.ಶ. ಪೂರ್ವ ೧೨೧ ರಿಂದ ಕ್ರಿ. ಶ. ೧೭೪ ರವರೆಗೆ ವೈಭವದಿಂದ ಕರ್ನಾಟಕದಲ್ಲಿ ರಾಜ್ಯಭಾರ ಮಾಡಿದ ಶಾತವಾಹನರ ಆಳ್ವಿಕೆಯ."[೧] ಕುರುಹುಗಳು ಪತ್ತೆಯಾಗಿದ್ದೇ ಬೆಳಗಾವಿಯಲ್ಲಿ. ಬೆಳಗಾವಿಯ ಹೊರವಲಯದ ವಡಗಾಂವ–ಮಾಧವಪೂರದಲ್ಲಿ ಖ್ಯಾತ ಇತಿಹಾಸ ತಜ್ಞ ಅ. ಸುಂದರ ಅವರು ನಡೆಸಿದ ಉತ್ಖನನ (೧೯೭೨–೭೮) ಅನೇಕ ಅದ್ಬುತ ಸಂಗತಿಗಳ ಮೇಲೆ ಬೆಳಕನ್ನು ಚೆಲ್ಲಿತು. ಅಲ್ಲಿಯವರೆಗೆ ಶಾತವಾಹನರು ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ್ದರೇ ಇಲ್ಲವೇ ಎಂಬ ಪ್ರಶ್ನೆಯು ಇತಿಹಾಸಕಾರರನ್ನು ಕಾಡಿಸುತ್ತಿತ್ತು. ಆದರೆ ಸುಂದರ ನಡೆಸಿದ ಉತ್ಖನನ ಅಪೂರ್ವ ಅರಸು

ಪೀಳಿಗೆಯೊಂದು ಕರ್ನಾಟಕವನ್ನು ಆಳುತ್ತಿತ್ತೆಂದು ಸಿದ್ಧಮಾಡಿ ತೋರಿಸಿತು. ಶಾತವಾಹನರ ಸಾಮ್ರಾಜ್ಯದ ನೆಲೆ ಹೇಗೆ ವ್ಯಾಪಿಸಿತ್ತೆಂಬ ಅಂಶಗಳು ಮೊದಲು ಬೆಳಕಿಗೆ ಬಂದದ್ದೇ ಬೆಳಗಾವಿಯಲ್ಲಿ ಎಂಬುದು ಬೆಳಗಾವಿಯವರಿಗೆ ಹೆಮ್ಮೆಯ ವಿಷಯ.

ಉತ್ಖನನದಲ್ಲಿ ದೊರೆತ ಅನೇಕ ವಸ್ತುಗಳು ಆ ಕಾಲದಲ್ಲಿಯೇ ಬೆಳಗಾವಿ ನಗರವು ಸಂಪದ್ಭರಿತ ನಗರವಾಗಿತ್ತೆಂಬುದನ್ನು ಸಿದ್ಧಮಾಡಿ ತೋರಿಸಿತು. ವಿವಿಧ ಬಗೆಯ ಇಟ್ಟಿಗೆ ಕಟ್ಟಡಗಳ ಅವಶೇಷಗಳು, ಬಾವಿಗಳು, ಇಟ್ಟಿಗೆಯಿಂದ ಕಟ್ಟಿದ ಧಾನ್ಯದ ಕಣಜಗಳು, ಬೆಳ್ಳಿಯ ನಾಣ್ಯಗಳು, ಕಬ್ಬಿಣ, ತಾಮ್ರದ ವಿವಿಧ ಬಗೆಯ ಭಾಂಡೆ ಸಾಮಾನುಗಳು, ಮಣಿಗಳು, ಮಣ್ಣಿನ ಬೊಂಬೆಗಳು ಹೀಗೆ ಉತ್ಖನನದಲ್ಲಿ ದೊರೆತ ಅವಶೇಷಗಳು ಬೆಳಗಾವಿಯ ಸಾಂಸ್ಕೃತಿಕ ಮತ್ತು ಸಿರಿವಂತ ಸಂಸ್ಕೃತಿಯ ಬಗ್ಗೆ ಮಾತಾಡಿದವು. ಇತಿಹಾಸಕಾರರಿಗೇ ಅಚ್ಚರಿಯಾಗುವಂತೆ ೭೦x೧೫೦ ಅಡಿ ಉದ್ದಗಲದ ಉತ್ತಮ ದರ್ಜೆಯ ರಸ್ತೆಯೂ ಉತ್ಖನನದಲ್ಲಿ ದೊರೆಯಿತು. ಅ. ಸುಂದರರು ಹೇಳುವಂತೆ ದಕ್ಷಿಣ ಭಾರತದ ಇತಿಹಾಸದಲ್ಲಿ ಇಂತಹದ್ದೊಂದು ಪ್ರಾಚೀನ ಬೀದಿ ಸಿಕ್ಕಿರುವುದು ಇದೇ ಮೊದಲು. ಈ ಪ್ರಾಂತ್ಯ (ಬೆಳಗಾವಿ) ಪ್ರಾಚ್ಯದಲ್ಲಿ ಪ್ರಮುಖ ವಾಣಿಜ್ಯ ಕೇಂದ್ರವಾಗಿತ್ತು. ಉತ್ಖನನದಲ್ಲಿ ಪಾಶ್ಚಾತ್ಯ ರೋಮ್ ನಾಣ್ಯಗಳೂ ಸಿಕ್ಕಿರುವುದರಿಂದ ಈ ಊರು ರೋಮ್‌ದೊಂದಿಗೆ ವ್ಯಾಪಾರ ವ್ಯವಹಾರವನ್ನು ನಡೆಸುತ್ತಿತ್ತು ಎಂದು ಅಭಿಪ್ರಾಯಪಡುತ್ತಾರೆ.

ಕ್ರಿ.ಶ.ಪೂ. ಮೂರನೆಯ ಶತಮಾನದಲ್ಲಿ ಬೆಳಗಾವಿ (ವಡಗಾಂವ್ ಸುತ್ತಮುತ್ತಲಿನ ಪ್ರದೇಶ) 'ಯದುಗ್ರಾಮ'ವಾಗಿತ್ತು. ಜೈನ ಧರ್ಮೀಯ ಜಕ್ಕದೇವ ೮೦೦ ಹಳ್ಳಿಗಳ ರಾಜ್ಯಭಾರ ಮಾಡುತ್ತಿದ್ದ. ಈ ಕಾಲದಲ್ಲಿ ಉತ್ತರದಿಂದ ಜೈನಮತ ಪ್ರಚಾರಕ್ಕೆಂದು ೧೦೮ ಜೈನಮುನಿಗಳು ಬೆಳಗಾವಿಗೆ ಬಂದಿದ್ದರು. ಆಗ ನಡೆದ ಆಕಸ್ಮಿಕ ಅಗ್ನಿದುರಂತದಲ್ಲಿ ಈ ಎಲ್ಲ ಜೈನ ಮುನಿಗಳು ಸತ್ತು ಹೋದರು. ಈ ದುರಂತಕ್ಕೆ ತಾನೇ ಹೊಣೆಯೆಂದು ಮನನೊಂದ ಅರಸ ಪ್ರಾಯಶ್ಚಿತ ರೂಪದಲ್ಲಿ ೧೦೮ ಬಸದಿಗಳನ್ನು, ೧೦೮ ಕೆರೆ ಬಾವಿ ಕಟ್ಟಿಸಿದ; ಒಂದು ಕಲ್ಲಿನ ಕೋಟೆಯನ್ನು ಕಟ್ಟಿಸಿದ. ಈ ಕೋಟೆ ೧೦೦ ಎಕರೆ, ಒಂದುಮೈಲು ಐದು ಫರ್ಲಾಂಗುಗಳಲ್ಲಿ ಕಟ್ಟಲಾಗಿತ್ತೆಂದು ಇತಿಹಾಸ ಹೇಳುತ್ತದೆ. ನಂತರ ಬಂದ ರಟ್ಟರು, ಅನಂತರ ಬಂದ ಆದಿಲ್‌ಶಾಹಿಗಳು ಕೋಟೆಯನ್ನು ನವೀಕರಿಸಿದರು. ಕೋಟೆಯ ಹೊರವಲಯದಲ್ಲಿ ೩೦ ಅಡಿ ಆಳ, ೭೫x೨೦೦ ಅಡಿ ಉದ್ದಗಲದ ನೀರಿನ ಕಂದಕ ಇದೆ. ಕಂದಕದ ನೀರಿನಲ್ಲಿ, ಮೊಸಳೆ, ಹಾವು ಮುಂತಾದ ವಿಷಜಂತುಗಳನ್ನು ಬಿಟ್ಟು ಶತ್ರು ಒಳಗೆ ಬರದಂತೆ ತಡೆಯುತ್ತಿದ್ದರಂತೆ. ಶತ್ರುವಿನ ಬರುವನ್ನು ದೂರದಿಂದಲೇ ಗುರುತಿಸುವ ಕಿಂಡಿಗಳು ಕೋಟೆಯ ಮೇಲಂತಸ್ತಿನಲ್ಲಿವೆ. ಉತ್ತರದ ಪ್ರವೇಶದ್ವಾರದಲ್ಲಿ ದುರ್ಗಾದೇವಿಯ ಗುಡಿ ಇದೆ. ಈ ಕೋಟೆಯಿಂದ ಹತ್ತು ಕಿಲೋಮೀಟರ ದೂರವಿರುವ ಎಳ್ಳೂರು ಕೋಟೆಗೆ ರಹಸ್ಯ ನೆಲಮಾರ್ಗವಿದೆಯೆಂದು ಹೇಳುತ್ತಾರೆ. ಕೋಟೆಯಲ್ಲಿ ೧೨ನೆಯ ಶತಮಾನಕ್ಕೆ ಸೇರಿದ ಆಕರ್ಷಕವಾದ ಕಮಲ ಬಸದಿ ಇದೆ. ಸಭಾಮಂಟಪದಲ್ಲಿ ಅರ್ಧಗೋಲದ ಕಮಲಾಕೃತಿಯ

ವಿನ್ಯಾಸವಿದೆ. ಒಳಮೈ ತೊಲೆಗಳಲ್ಲಿ ೭೨ ಜಿನ ಮೂರ್ತಿಗಳಿವೆ. ಇಲ್ಲಿದ್ದ ಹಲವು ಮೂರ್ತಿಗಳು ಕಳ್ಳಮಾರ್ಗದಿಂದ ಹೊರಹೋಗಿರುವ ಸಾಧ್ಯತೆಗಳು ಇವೆ.

ಕುಂತಳ ನಾಡಿನ ಅಂಗವೆನ್ನಿಸಿರುವ ಕುಂಹುಣ (೩೦೦೦) ಮೂರು ಸಾವಿರ (ಕುವಂಡಿ) ಈ ಪ್ರದೇಶವನ್ನು ರಟ್ಟದೊರೆಗಳು ಕ್ರಿ.ಶ. ೯೩೦ರ ವರೆಗೆ ಆಳಿದರೆಂದು ಇತಿಹಾಸದ ದಾಖಲೆಗಳು ಹೇಳುತ್ತವೆ. ಈ ಕಾಲದಲ್ಲಿಯೇ ಗೋಕಾಕ ತಾಲೂಕಿನ ಕಲ್ಲೋಳಿ ಗ್ರಾಮದಲ್ಲಿ ಪಾರ್ಶ್ವಪಂಡಿತನೆಂಬ ಮಹಾಕವಿ ಇದ್ದ. ಇತ 'ಪಾರ್ಶ್ವನಾಥ ಪುರಾಣ' ಎಂಬ ಅದ್ಭುತ ಮಹಾಕಾವ್ಯವನ್ನು ರಚಿಸಿದ್ದಾನೆ. ಕಲ್ಲೋಳಿ ಶಾಸನವೊಂದರಲ್ಲಿ ಪಾರ್ಶ್ವಪಂಡಿತನ ಉಲ್ಲೇಖವಿದೆ. ಜೈನಧರ್ಮದ ೨೩ನೇ ಮಹಾತೀರ್ಥಂಕರ ಪಾರ್ಶ್ವನಾಥರ ಜೀವನಕಥನವನ್ನು ಈ ಮಹಾಕಾವ್ಯದಲ್ಲಿ ನಿರೂಪಿಸಿದ್ದಾನೆ. ರಾಜಶೇಖರ ಇಚ್ಚಂಗಿ ಅವರು 'ಪಾರ್ಶ್ವನಾಥ ಪುರಾಣ : ಒಂದು ತೌಲನಿಕ ಅಧ್ಯಯನ' ಎಂಬ ಮಹಾಪ್ರಬಂಧ ರಚಿಸಿ, ಪಾರ್ಶ್ವಪಂಡಿತ ಜೀವನ ಮತ್ತು ಅವನ ಕಾವ್ಯ ಕುರಿತು ತಲಸ್ಪರ್ಶಿಯಾದ ಅಧ್ಯಯನ ಮಾಡಿದ್ದಾರೆ. ನಾಲ್ಕನೆಯ ಕಾರ್ತವೀರ್ಯನೆಂಬ ರಟ್ಟದೊರೆಯು ಬೆಳಗಾವಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದ. ೧೨೩೦ರಲ್ಲಿ ಬೆಳಗಾವಿಯನ್ನು ದೇವಗಿರಿ ಯಾದವರು ಗೆದ್ದುಕೊಂಡರು. ಕ್ರಿ.ಶ. ೧೩೭೫ ರಿಂದ ೧೪೭೨ರ ವರೆಗೆ ನಗರವು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತು. ಆನಂತರ ಅದು ಬಹುಮನಿ ರಾಜರ ಕೈ ಸೇರಿತು. ಬಹುಮನಿಯ ಸರದಾರ ಮುಸ್ತಾಫ ಇಲ್ಲಿ ತನ್ನ ಆಳ್ವಿಕೆಯನ್ನು ಆರಂಭಿಸಿ ಊರನ್ನು 'ಮುಸ್ತಾಫಾಬಾದ್' ಎಂದು ಕರೆದ. ಅನಂತರ ಆಳ್ವಿಕೆ ವಿಜಾಪುರದ ಆದಿಲ್‌ಶಾಹಿಗಳ ಕೈಗೆ ಬಂದಿತು. ಆದಿಲ್‌ಶಾಹನ ಸರದಾರನಾಗಿದ್ದ ಅಸದಖಾನ್ ಬೆಳಗಾವಿಯನ್ನು ೧೫೧೧ ರಿಂದ ೧೫೪೯ರ ವರೆಗೆ ಆಳಿದ. ಇಲ್ಲಿದ್ದ ಶಿಥಿಲಕೋಟೆಯನ್ನು ಸುಭದ್ರಗೊಳಿಸಿದ. ವಿಜಾಪುರದ ಅರಸರಿಂದ ಬೆಳಗಾವಿಯು ಔರಂಗಜೇಬನ ಎರಡನೆ ಮಗನಾದ ಆಝುಂನ ಕೈಗೆ ಬಂದಿತು. ಆಗ ಊರಿನ ಹೆಸರನ್ನು 'ಆಝುಂನಗರ'ವೆಂದು ಬದಲಿಸಲಾಯಿತು. ಆತನ ನಂತರ ಊರು ಮರಾಠರ ಕೈ ಸೇರಿತು. ಮುಂದೆ ಪೇಶ್ವೆಗಳು ತಮ್ಮ ಸಾಮ್ರಾಜ್ಯಕ್ಕೆ ಇದನ್ನು ಸೇರಿಸಿಕೊಂಡರು. ೧೮೧೮ ಮಾರ್ಚ ೧೫ ರಂದು ಜನರಲ್ ಮನ್ರೋ ಪೇಶ್ವೆಗಳಿಂದ ಬೆಳಗಾವಿಯನ್ನು ಗೆದ್ದು ತನ್ನ ವಶಕ್ಕೆ ತೆಗೆದುಕೊಂಡು ಅದನ್ನು ಬ್ರಿಟಿಷರ ಅಧಿಪತ್ಯಕ್ಕೆ ಸೇರಿಸಿದ.

ಇತಿಹಾಸವನ್ನು ಕೆದಕುತ್ತ ಹೋದಂತೆ ಈಗ 'ಬೆಳಗಾವಿ' ಎಂಬ ಹೆಸರಿನ ಈ ಸುಂದರ ನಗರವು ಕಾಲಕಾಲಕ್ಕೆ ವಿವಿಧ ಹೆಸರುಗಳಿಂದ ಕರೆಯಿಸಿಕೊಳ್ಳುತ್ತಿತ್ತೆಂದು ಕಂಡುಬರುತ್ತದೆ. ಇಲ್ಲಿ ಬಿದಿರು (ವೇಣು) ಜಾಸ್ತಿ ಬೆಳೆಯುತ್ತಿದ್ದುದರಿಂದ ಇದಕ್ಕೆ 'ವೇಣುಗ್ರಾಮ'ವೆಂದು ಕರೆದರು. ಕಬ್ಬಿನ ಬೆಳೆ ಜಾಸ್ತಿಯಾಗಿ ಬೆಳೆಯುವದರಿಂದ ಇದು 'ಇಕ್ಷುಗ್ರಾಮ'ವೆಂದು ಕರೆಸಿಕೊಂಡಿತು. ಬೆಳಗಾವಿಯ ಕೋಟೆಗೆ ಲಗ್ಗೆ ಹಾಕಿ ಗೆದ್ದ ಮುಸ್ಲಿಂ ಸರದಾರ ಮುಸ್ತಾಫಾ ಇದನ್ನು 'ಮುಸ್ತಾಫಾಬಾದ್'ವನ್ನಾಗಿಸಿದ. ಮುಂದೆ ಊರು ಮೊಗಲ ಚಕ್ರವರ್ತಿ ಔರಂಗಜೇಬನ ವಶವಾಯಿತು. ಆತನ ಮಗ 'ಆಝುಂ'ನ

ನೆನಪಿಗೆ ಇದನ್ನು 'ಆಝುಂನಗರ'ವೆಂದು ಕರೆಯಲಾಯಿತು. ಆದರೆ ಇತಿಹಾಸದ ಆ ಪುಟಗಳು ಕ್ಷಣಿಕ ಪ್ರಭಾವವನ್ನು ಮಾತ್ರ ಬೀರಲು ಸಾಧ್ಯವಾದವು. ಜನಮಾನಸದಲ್ಲಿ 'ವೇಣುಗ್ರಾಮ'ವೇ ಅಪಭ್ರಂಶವಾಗಿ 'ಬೇಳುಗ್ರಾಮ'–'ಬೆಳಗಾವ'–'ಬೆಳಗಾವಿ' ಆಯಿತೆನ್ನುವದು ಭಾಷಾಶಾಸ್ತ್ರಜ್ಞರ ಅಭಿಪ್ರಾಯ. ಮರಾಠಿ ಜನರ ನಾಲಿಗೆಯ ಮೇಲೆ ಈ ಹೆಸರು 'ಬೆಳಗಾಂವ್' ಎಂದಾಗಿದೆ.

ಬೆಳಗಾವಿಯ ಉಪನಗರವಾದ ಶಹಾಪುರವು ಬೆಳ್ಳಿ, ಬಂಗಾರದ ಮಾರಾಟದ ಕೇಂದ್ರವಾಗಿತ್ತು. ಇಲ್ಲಿದ್ದ ಅಕ್ಕಸಾಲಿಗರು ಜಗತ್ಪ್ರಸಿದ್ಧರಾಗಿದ್ದರು. ಶಹಾಪುರವು ಮುತ್ತು, ರತ್ನ, ವಜ್ರ, ವೈಢೂರ್ಯಗಳ ಕೊಡು–ಕೊಳ್ಳುವ ತಾಣವಾಗಿತ್ತು. ಈ ಚಿನಿವಾಲರ ರಕ್ಷಣೆಗಾಗಿ ಶೇರಖಾನನೆಂಬ ಸರದಾರನು ೧೫೫೦ರಲ್ಲಿ ಶಹಾಪುರದ ಸುತ್ತ ಒಂದು ಕೋಟೆಯನ್ನು ಕಟ್ಟಿಸಿದ್ದ. ಈಗ ಆ ಕೋಟೆಯ ಯಾವ ಕುರುಹು ಇಲ್ಲ. ಆಗ ಬೆಳಗಾವಿ, ಗೋವೆ ಮತ್ತು ಬಿಜಾಪುರ ನಡುವಿನ ಅತೀ ಮುಖ್ಯ ವ್ಯಾಪಾರಿ ಕೇಂದ್ರವಾಗಿತ್ತು.

೧೬೭೬–೭೮ ರಲ್ಲಿ ಛತ್ರಪತಿ ಶಿವಾಜಿಯ ಸೈನಿಕರು ಬೆಳಗಾವಿ ಸಮೀಪದ ಬೆಳವಡಿಗೆ ಮುತ್ತಿಗೆ ಹಾಕಿದರು. ಈ ಯುದ್ಧದಲ್ಲಿ ರಾಣಿ ಮಲ್ಲಮ್ಮ ಶಿವಾಜಿಯ ವಿರುದ್ಧ ಶೌರ್ಯದಿಂದ ಕಾದಾಡಿದಳು. ಅವಳ ಶೌರ್ಯಕ್ಕೆ ಶಿವಾಜಿಯೇ ಬೆರಗುಗೊಂಡ. ನಂತರ ಶಿವಾಜಿ ಈ ಭಾಗದಲ್ಲಿ ತಾನು ಗೆದ್ದ ೩೬೦ ಕೋಟೆಗಳನ್ನು ಮತ್ತಷ್ಟು ಬಲಪಡಿಸಿಕೊಂಡ. ಪರಸಗಡ, ಕಠಾರಿಗಡ, ಹೂಲಿಯ ಕೋಟೆಗಳು ಆಗ ಶಿವಾಜಿಯ ಕೈ ಸೇರಿದ್ದವು. ಅವುಗಳ ರಕ್ಷಣೆಗಾಗಿ ಆತ 'ಗಡಕರಿ'ಗಳನ್ನು ಕರೆತಂದ. ಅವರು ಈ ಕೋಟೆಗಳಿಗೆ 'ಗಡಕರಿ' ಅಥವಾ 'ಕಿಲ್ಲೇದಾರ'ರಾದರು. ಅನಂತರ ಸಾತಾರಾ, ಸಾಂಗ್ಲಿಗಳ ಕಡೆಯಿಂದ ಅನೇಕ ಮರಾಠಿ ಕುಟುಂಬಗಳು ಬೆಳಗಾವಿಗೆ ವಲಸೆಗಾರರಾಗಿ ಬಂದು ಇಲ್ಲೇ ನೆಲೆಸಿದರು. ಚಂದಗಡ, ಕಾರ್ಲೆ, ಕಾನೂರುಗಳ ಕಡೆಯಿಂದ ಪೇಶ್ವೆಗಳ ಕಾಲದಲ್ಲಿ ಮರಾಠಿ ಸಂಸಾರಗಳು ಬಂದು ಇಲ್ಲಿ ನೆಲೆನಿಂತವು.

ಬೆಳಗಾವಿ ಜಿಲ್ಲೆ ರೂಪುಗೊಳ್ಳಲು ಪ್ರಾರಂಭಿಸಿದ್ದು ಬ್ರಿಟಿಷರ ಆಳ್ವಿಕೆಯಲ್ಲಿ. ೧೮೧೮ ರಲ್ಲಿ ಬ್ರಿಟಿಷರು ಮರಾಠರಿಂದ ಈ ಪ್ರದೇಶವನ್ನು ಗೆದ್ದ ನಂತರ ಅದನ್ನು ಮೊದಲಿಗೆ ಮದ್ರಾಸ ಅಧಿಪತ್ಯಕ್ಕೆ ಸೇರಿಸಿದರು. ೧೮೨೨ ರಲ್ಲಿ ಈ ಪ್ರದೇಶದ ಕೆಲವು ತಾಲೂಕುಗಳನ್ನು ಬೇರ್ಪಡಿಸಿ ಸೊಲ್ಲಾಪುರ ಜಿಲ್ಲೆಯನ್ನಾಗಿಸಿ ಅದನ್ನು ಮುಂಬೈ ಅಧಿಪತ್ಯಕ್ಕೆ ಒಳಪಡಿಸಲಾಯಿತು. ೧೮೩೦ ರಲ್ಲಿ ಧಾರವಾಡ ಜಿಲ್ಲೆಯೆಂದು ಹೆಸರಿಸಿ ಮುಂಬೈ ಅಧಿಪತ್ಯಕ್ಕೆ ಜೋಡಿಸಲಾಯಿತು. ೧೮೩೮ರಲ್ಲಿ ಇದರಲ್ಲಿ ಎರಡು ಭಾಗಗಳನ್ನು ಮಾಡಿ ಒಂದನ್ನು ಧಾರವಾಡ ಜಿಲ್ಲೆಯೆಂದೂ ಇನ್ನೊಂದನ್ನು ಬೆಳಗಾವಿ ಜಿಲ್ಲೆಯೆಂದೂ ಕರೆಯಲಾಯಿತು. ಬೆಳಗಾವಿ ಜಿಲ್ಲೆಯಲ್ಲಿ ಆಗ ಪಾಶ್ಚಾಪುರ, ಸಂಪಗಾವಿ, ಬೀಡಿ, ಚಿಕ್ಕೋಡಿ, ಪರಸಗಡ, ಬಾಗಲಕೋಟೆ, ಬಾದಾಮಿ, ಹುನಗುಂದ, ಇಂಡಿ ಮತ್ತು ಮುದ್ದೇಬಿಹಾಳ ಎಂಬ ಹತ್ತು ತಾಲೂಕುಗಳಿದ್ದವು. ಮುಂದೆ ಇಂಡಿ ಮತ್ತು ಮುದ್ದೇಬಿಹಾಳ ತಾಲೂಕುಗಳನ್ನು ಸೊಲ್ಲಾಪುರ ಜಿಲ್ಲೆಗೆ ಸೇರಿಸಿ ಅಥಣಿ ಮತ್ತು ಗೋಕಾಕ ತಾಲೂಕುಗಳನ್ನು

ಬೆಳಗಾವಿ ಜಿಲ್ಲೆಗೆ ಸೇರಿಸಲಾಯಿತು. ೧೮೬೪ ರಲ್ಲಿ ಸೊಲ್ಲಾಪುರ ಜಿಲ್ಲೆಗೆ ಸೇರಿದ ಇಂಡಿ, ಹಿಪ್ಪರಗಿ, ವಿಜಾಪುರ, ಮನಗೂಳಿ, ಮುದ್ದೇಬಿಹಾಳ ತಾಲೂಕುಗಳನ್ನು, ಬೆಳಗಾವಿ ಜಿಲ್ಲೆಗೆ ಸೇರಿದ ಬಾಗಲಕೋಟೆ, ಬಾದಾಮಿ, ಹುನಗುಂದ ತಾಲೂಕುಗಳನ್ನು ಕೂಡಿಸಿ ಕಲಾದಗಿ ಜಿಲ್ಲೆಯನ್ನು ನಿರ್ಮಿಸಲಾಯಿತು. ಹೀಗೆ ಈ ಪ್ರದೇಶವು ಧಾರವಾಡ, ಬೆಳಗಾವಿ, ಕಲಾದಗಿ ಎಂದು ಮೂರು ಜಿಲ್ಲೆಗಳಾದವು. ೧೮೮೪ರಲ್ಲಿ ಕಲಾದಗಿಗೆ ಬದಲು ವಿಜಾಪುರವನ್ನು ಜಿಲ್ಲೆಯ ಸ್ಥಳವನ್ನಾಗಿ ಮಾಡಲಾಯಿತು. ೧೮೬೪ ರಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಏಳು ತಾಲೂಕುಗಳಿದ್ದವು. ಪಾಶ್ಚಾಪುರ, ಸಂಪಗಾವಿ, ಬೀಡಿ, ಚಿಕ್ಕೋಡಿ, ಪರಸಗಡ, ಗೋಕಾಕ ಮತ್ತು ಅಥಣಿ. ಅನಂತರ ಹುಕ್ಕೇರಿ, ಚಂದಗಡ ಮತ್ತು ಮುರಗೋಡ ಎಂಬ ಭಾಗಗಳು ಹುಟ್ಟಿಕೊಂಡವು.

ಬೆಳಗಾವಿಯು ಪ್ರಥಮತಃ ಜಿಲ್ಲೆಯಾಗಿ ಅಸ್ತಿತ್ವಕ್ಕೆ ಬಂದಿದ್ದು, ೨೮ ಏಪ್ರಿಲ್ ೧೮೩೬ ರಂದು. ಜಿಲ್ಲೆಗೆ ಮೊಟ್ಟಮೊದಲು ಅಸಿಸ್ಟಂಟ್ ಕಲೆಕ್ಟರ್‌ರಾಗಿ ಅಧಿಕಾರ ವಹಿಸಿಕೊಂಡವರು ಎ. ರೆವೆನ್ಸ್‌ಕ್ರಾಫ್ಟ್; ೩–೫–೧೮೩೬ ರಂದು. ಆರಂಭದಲ್ಲಿ ಗೋಕಾಕನ್ನು ಜಿಲ್ಲೆಯ ಸ್ಥಳವಾಗಬೇಕೆಂದು ನಿರ್ಧರಿಸಲಾಗಿತ್ತು. ಆದರೆ ಆಗಿನ ಕಲೆಕ್ಟರ್ ಡನಲಪ್‌ನ ಆಸಕ್ತಿಯ ಫಲವಾಗಿ ಬೆಳಗಾವಿ ಜಿಲ್ಲಾ ಕೇಂದ್ರವಾಯಿತು. ೧೮೩೮, ಮಾರ್ಚ ೯ ರಂದು ಬೆಳಗಾವಿ, ಜಿಲ್ಲೆಯ ಆಡಳಿತದ ಮುಖ್ಯ ಕಚೇರಿಯೆಂದು ಕಾರ್ಯಾರಂಭ ಮಾಡಿತು. ಆರಂಭದಲ್ಲಿ ಬೆಳಗಾವಿ ಜಿಲ್ಲೆಗೆ (ಮೇ, ೧ ೧೮೬೪ರ ವರೆಗೆ) ಏಳು ತಾಲೂಕುಗಳಿದ್ದವು. ಪಾಶ್ಚಾಪುರ, ಬೀಡಿ, ಸಂಪಗಾಂವ, ಪರಸಗಡ, ಗೋಕಾಕ, ಚಿಕ್ಕೋಡಿ ಮತ್ತು ಅಥಣಿ. ಈಗ ಬೆಳಗಾವಿ ಜಿಲ್ಲೆಯಲ್ಲಿ ಒಟ್ಟು ಹತ್ತು ತಾಲೂಕುಗಳಿವೆ. ಬೆಳಗಾವಿ, ಖಾನಾಪುರ, ಬೈಲಹೊಂಗಲ, ಸವದತ್ತಿ, ರಾಮದುರ್ಗ, ಗೋಕಾಕ, ಚಿಕ್ಕೋಡಿ, ಹುಕ್ಕೇರಿ, ಅಥಣಿ ಮತ್ತು ರಾಯಬಾಗ. ಇತ್ತೀಚೆಗೆ ನಿಪ್ಪಾಣಿ ಮತ್ತು ಕಿತ್ತೂರು ಎರಡು ಹೊಸ ತಾಲೂಕುಗಳಾಗಿ ಒಟ್ಟು ೧೨ ತಾಲೂಕುಗಳನ್ನು ಬೆಳಗಾವಿ ಜಿಲ್ಲೆ ಒಳಗೊಂಡಿದೆ.

**ಬೆಳಗಾವಿ ಜಿಲ್ಲೆಯ ಪ್ರಾಚೀನ ಸಾಹಿತ್ಯ ಪರಂಪರೆ :**

೯ನೆಯ ಶತಕದ ಕವಿರಾಜಮಾರ್ಗವು ಕನ್ನಡ ನಾಡಿನ ವಿಸ್ತಾರವನ್ನು

"ಕಾವೇರಿಯಿಂದ ಗೋದಾವರಿವರಮಿರ್ದುದೆಂಬಲ್ಲಿ
ಅದರೊಳಗಂ ಕಿಸುವೊಳಲಾ
ವಿದಿತ ಮಹಾ ಕೊಪಣ ನಗರದಾ ಪುಲಿಗೆರೆಯಾ
ಸದಭಿಸ್ತುತಮಪ್ಪೊಂಕುಂ
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್"[೨]

ಎಂದಿದೆ. ಇಲ್ಲಿ ತಿರುಳ್ಗನ್ನಡದ ಸೀಮೆಯನ್ನು ಸೂಚಿಸುವ ಒಕ್ಕುಂದದ ಮೂಲೆ ಬೆಳಗಾವಿ ಜಿಲ್ಲೆಯದ್ದೇ ಈ ಗ್ರಂಥ ಮುಂದೆ 'ಆ ನಾಡವರ್ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್' ಎಂದೂ ಬಣ್ಣಿಸಿದೆ. ಸಂಸ್ಕೃತಿಯ ಇಂಥ ಪರಿಪಾಕ ಸಾವಿರಾರು ವರ್ಷಗಳ

ಪರಿಶ್ರಮದಿಂದ ಮಾತ್ರ ಸಾಧ್ಯ. ಕವಿರಾಜಮಾರ್ಗ ಲಕ್ಷಣಗ್ರಂಥವಾಗಿ ತನ್ನ ಹಿಂದಿನ ಸಾಹಿತ್ಯಕ್ಕೆ ತೋರಬೆರಳಾಗಿರುವುದೂ, ಕ್ರಿ.ಶ. ೪೫೦ ರಷ್ಟು ಹಿಂದೆ ಹಲ್ಮಿಡಿ ಶಾಸನದಂಥ ಪ್ರೌಢಬರಹವಿರುವುದೂ, ಜಾನಪದ ಸಾಹಿತ್ಯ ಸದಾಕಾಲ ಸೃಷ್ಟಿಯಾಗುತ್ತಿರುವುದೂ ಪೂರ್ವಕಾಲದ ಸಾಹಿತ್ಯಪರಂಪರೆಗೆ ಸೂಚಕವಾಗಿವೆ. ಬೆಳಗಾವಿ ಜಿಲ್ಲೆಯ ಹಲಸಿಗೆಯ ತಾಮ್ರ ಶಾಸನಗಳಿಂದ ೫ನೇಯ ಶತಮಾನದಲ್ಲಿ ಕದಂಬರಾಳಿದ ನಾಡೆಂಬುದು ಸ್ಪಷ್ಟ. ೭ನೇಯ ಶತಕದ ಶಾಸನ ಇದನ್ನು 'ವೇಣು ಗ್ರಾಮ ಎಳ್ಪತ್ತರ ನಾಡು' ಎಂದಿವೆ. ಕೊಳಲ ಬಿದಿರು ಬೆಳೆಯುತ್ತಿದ್ದ ವೇಣು (ಳು) ಗ್ರಾಮವನ್ನು ೧೧೯೯ರ ಶಾಸನ 'ಇಕ್ಷುಗ್ರಾಮ'ವೆಂಬಲ್ಲಿ (ಇಕ್ಷು=ಕಬ್ಬು) ತುಂಬ ಕಾವ್ಯಮಯ ದೃಷ್ಟಿಯಿದೆ. ಈ ಬೆಳಗಾವಿ ಜಿಲ್ಲೆಯ ಬಹುಭಾಗ ಆಗಿನ ಕುಂತಳ ನಾಡಿನಲ್ಲಿ 'ಕಾಹುಣ್ಣ ೩೦೦೦' ಮಂಡಲವೆನಿಸಿತ್ತು. ೧೦ರಿಂದ ೧೩ನೆಂಯ ಶತಮಾನದತನಕ ರಾಷ್ಟ್ರಕೂಟ-ಚಾಲುಕ್ಯ-ಕಳಚುರ್ಯರ ಮಹಾಮಾಂಡಲಿಕರಾಗಿಯೂ ಸ್ವತಂತ್ರರಾಗಿಯೂ ಈ ಕುಹುಂಡಿಮಂಡಲವನ್ನಾಳಿದ ರಟ್ಟಅರಸರು ಸಾಹಿತ್ಯ ರಸಿಕರಾಗಿದ್ದರು. ಆ ರಾಜಾಶ್ರಯದಲ್ಲಿ ಅನೇಕ ಶಾಸನ ಕವಿಗಳೂ ಆಸ್ಥಾನ ಕವಿಗಳೂ ಈ ಭಾಗದಲ್ಲಿದ್ದು ಸಾಹಿತ್ಯ ಸೃಷ್ಟಿ ಮಾಡಿದರು.

೯೨೮ರ ಸೊಗಲ ಶಾಸನ ರಚಿಸಿದವನು ಕಮಳಾದಿತ್ಯ; ಇದು ಚಾಲುಕ್ಯರ ಇಮ್ಮಡಿ ತೈಲನ ಕಾಲಕ್ಕೆ ಕತ್ತಮನೆಂಬ ರಟ್ಟರಸನು ಈ ಪ್ರದೇಶದ ಪ್ರತಿನಿಧಿಯಾಗಿರುತ್ತ ಕಂಚಿಯಬ್ಬೆ ಸುವರ್ಣಾಕ್ಷಿ (ಸೋಮೇಶ್ವರ) ದೇವಾಲಯಕ್ಕೆ ದತ್ತಿ ಬಿಟ್ಟುದನ್ನು ತಿಳಿಸಿದೆ; ಇದರಲ್ಲಿನ ಸೊಗಲ – ಕಂಚಿಯಬ್ಬೆಯ ವರ್ಣನಾವೃತ್ತಗಳು ಆಕರ್ಷಕವಾಗಿವೆ (ಕವಿಚರಿತೆ ೧). ೧೦೫೦ರ ಕೊಕಟನೂರ ಶಾಸನದ ಕರ್ತೃ ಜಿವರ್ಮ ಪಂಡಿತ; ತ್ರೈ ಪುರುಷ ದೇವಾಲಯ ಕಟ್ಟಿಸಿ ಬಿಟ್ಟ ದತ್ತಿಯನ್ನು ಗದ್ಯಪದ್ಯಗಳಲ್ಲಿ ವಿವರಿಸಿದೆ (ಕರ್ನಾಟಕ ಭಾರತಿ ೩-೨, ಪು. ೪೫). "ಬಸದಿಯ ಜೀರ್ಣೋದ್ಧಾರವನ್ನು ಉಲ್ಲೇಖಿಸುವ ೧೧೦೭ರ ಹೊಸೂರ ಶಾಸನದ ಲಕ್ಷ್ಮಣನೂ ಪ್ರೌಢಕವಿ ಎನಿಸುತ್ತದೆ."[೩] ೧೧೪೮ರ ಸಿರಸಂಗಿ (ರಿಸಿಶೃಂಗಪುರ) "ಶಾಸನದಲ್ಲಿ ಕಲಿದೇವ ಪಂಡಿತನು ಗಾವುಂಡ ಮನೆತನದವರು ಕಾಮೇಶ್ವರ ದೇಗುಲಕ್ಕೆ ದತ್ತಿ ಬಿಟ್ಟುದನ್ನೂ ಬೆಳ್ವಲನಾಡಿನ ಈ ಊರಲ್ಲಿ ಸುಕವೀಶ್ವರ ತಂಡವಿದ್ದುದನ್ನೂ ಬಣ್ಣಿಸಿದ್ದಾನೆ."[೪]

"ರಾಜಾದಿತ್ಯನೆಂಬ ಜೈನ ಕವಿ (ಸು. ೧೨೦೦) ಕೂಂಡಿಮಂಡಲಕ್ಕನುಪಮರತ್ನ ಮಂಡನವೆನಿಪ್ಪ ಪೂವಿನ ಬಾಗೆಯವನೆಂದೂ, ಕುಂತಣಬಾಗೆಯ ಪರಿಭಾಷೆಯಲ್ಲಿ ಗಣಿತಗ್ರಂಥ ಬರೆದನೆಂದೂ ಹೇಳುತ್ತಾನೆ; ಪೂವಿನಬಾಗೆ ಇಂದಿನ ರಾಯಬಾಗ ಎನಿಸಿದ್ದು, ವ್ಯವಹಾರಗಣಿತ-ಕ್ಷೇತ್ರಗಣಿತ-ವ್ಯವಹಾರರತ್ನ-ಜೈನಗಣಿತಸೂ ತ್ರೋದಾಹರಣ-ಚಿತ್ರಹಸುಗೆ-ಲೀಲಾವತಿ ಅವನ ಕೃತಿಯಾಗಿವೆ."[೫] ೧೨ನೆಯ ಶತಕದ ಮಧ್ಯದಲ್ಲಿದ್ದ ಕರ್ಣಪಾರ್ಯ ಕೊಲ್ಲಾಪುರದ ಶಿಲಾಹಾರ ವಿಜಯಾದಿತ್ಯನ ಮಂತ್ರಿ ಲಕ್ಷ್ಮಣನ ಪ್ರೇರಣೆಯಿಂದ ನೇಮಿನಾಥ ಪುರಾಣವನ್ನೊರೆದ; ಇದು ೯ನೆಯ ಬಲದೇವ ವಾಸುದೇವರ ಹಾಗೂ ೨೨ನೆಯ ತೀರ್ಥಂಕರರ ಕಥೆಯನ್ನೊಳಗೊಂಡ ೧೪ ಆಶ್ವಾಸಗಳ

ಚಂಪೂಕಾವ್ಯ (ಈತನೇ ವೀರೇಶಚರಿತದಲ್ಲಿ ವರ್ಧಮಾನನ ಕಥೆ ಬರೆದಂತೆ ೩ನೆಯ ಮಂಗರಸ ತಿಳಿಸುತ್ತಾನೆ.) ಸುಗಂಧವರ್ತಿ (ಸೌದತ್ತಿ)ಯಿಂದ ರಾಜ್ಯವಾಳುತ್ತಿದ್ದ ರಟ್ಟರ ೧ನೆಯ ಲಕ್ಷ್ಮೀದೇವ ಗೋವೆಯ ಕದಂಬರಿಂದ ವೇಣುಗ್ರಾಮವನ್ನು ಗೆದ್ದು ರಾಜಧಾನಿ ಮಾಡಿಕೊಂಡನೆಂದಿದೆ. ಹಣ್ಣಿಕೇರಿಯ ಶಾಸನ (೧೨೦೯). ಇವನ ಆಶ್ರಯದಲ್ಲೇ ಸಾರಸ್ವತಪಾರನಾದ ನೇಮಿಚಂದ್ರ ೧೪ ಆಶ್ವಾಸಗಳ 'ಲೀಲಾವತಿ ಪ್ರಬಂಧ' ರಚಿಸಿದ್ದು; ಶೃಂಗಾರ ಕಾರಾಗೃಹನೆನಿಸಿದ ಇವನಲ್ಲಿ 'ಸ್ತ್ರೀ ರೂಪಮೆ ರೂಪಂ ಶೃಂಗಾರ ಕಾರಾಗೃಹನೆನಿಸಿದ ಇವನಲ್ಲಿ 'ಸ್ತ್ರೀ ರೂಪಮೆ ರೂಪಂ ಶೃಂಗಾರಮೆ ರಸಂ' ಎಂಬ ನುಡಿ ನಿಜವೆನ್ನಲು ಉದಾಹರಣೆ ಲೀಲಾವತಿಯ ಈ ವಿರಹ ವರ್ಣನೆ–

"ಇಷುಪ್ರಾಯಂ ಗೇಯಂ ಮುಷಿತಕಿರಣಂ ಶೀತಕಿರಣಂ
ವಿಷಾಹಾರಂ ಹಾರಂ ಹೃದಯಾದಹನಂ ಗಂಧವಹನಂ
ದ್ವಿಷಜ್ಜಾತಂ ಚೂತಂ ಪರಿಭವನಮಾಯ್ತಂಬುಜವನಂ
ವಿಷಾದಾಯಂ ಕಾಯಂ ವನಿತೆಗವನಿಂ ಚಿತ್ತಭವನಿಂ."[೬]

(ಕಾಮನಿಂದಾಗಿ ಅವಳಿಗೆ ಸಂಗೀತವು ಬಾಣದಂತೆಯೂ, ಚಂದ್ರನು ಕಿರಣರಹಿತನ್ನೂ, ಹಾರವು ವಿಷಪ್ರಾಯವೂ, ಗಾಳಿಯು ಎದೆಯನ್ನುರಿಸುವಂಥದೂ, ಮಾಮರವು ಶತ್ರುಸಮವೂ, ಕಮಲದ ತೋಟ ದುಃಖಕಾರಣವೂ, ಶರೀರ ವಿಷಮಯವೂ ಆಯಿತು.)

ರಟ್ಟರ ನಂತರದ ಇತಿಹಾಸದ ಪುಟಗಳಲ್ಲಿ ದೇವಗಿರಿಯ ಯಾದವರು–ವಿಜಯನಗರದ ರಾಯರು–ವಿಜಾಪುರದ ಆದಿಲ್‌ಶಾಹಿಗಳು– ಮಹಾರಾಷ್ಟ್ರದ ಪೇಶ್ವೆಯರು–ಆಂಗ್ಲರು ಮೊದಲಾದವರನ್ನಾಕರ್ಷಿಸಿದ್ದು ಸಹಜ. ಆದರೆ ಇವರ ರಣಕೇಳಿಯ ಆಡುಂಬೊಲವಾಗಿ, ಮಹಮ್ಮದೀಯ–ಮರಾಠಾ ಸಂಸ್ಕೃತಿಗಳ ಪ್ರಾಬಲ್ಯಕ್ಕೆ ಸಿಲುಕಿದ ಜನ, ಸ್ವಭಾಷಾ ಸಂಸ್ಕೃತಿಯನ್ನೇ ಮರೆಯುವಂತಾಯಿತು ಕೆಲವು ಕಾಲ. ಜನಜೀವನವೇ ಅರಾಜಕವಾದಾಗ ಭಾಷೆ–ಸಾಹಿತ್ಯಗಳ ಪಾಡೇನು? ಅಂತೆಯೇ ಆಂಗ್ಲರಿಗೆ ಇದು ಕನ್ನಡದ ನೆಲವೆಂಬರಿವೂ ಬರಲಿಲ್ಲ. ಕಳೆದ ಶತಕದ ಪೂರ್ವಾರ್ಧದಲ್ಲಿ, ೧೮೩೬ರಲ್ಲಿ ಬಳ್ಳಾರಿ ಭಾಗದಿಂದ ಬೇರ್ಪಟ್ಟು ಬೆಳಗಾವಿ ಸ್ವತಂತ್ರ ಜಿಲ್ಲೆಯಾದರೂ, ೧೮೬೪ರಲ್ಲಿ ವಿಲಿಯಂ ರಸೆಲ್ ವಿದ್ಯಾಧಿಕಾರಿಯಾಗಿ ಬರುವತನಕ ದಕ್ಷಿಣ ಮಹಾರಾಷ್ಟ್ರವೆನಿಸಿದ ಇಲ್ಲಿ ಮರಾಠಿ ಶಿಕ್ಷಣ ಮುಖ್ಯವಾಗಿತ್ತು. ಕನ್ನಡದ ಶಿಕ್ಷಣವೇ ಇಲ್ಲದಲ್ಲಿ ಕನ್ನಡ ಸಾಹಿತ್ಯ ಹೇಗೆ ಹೊಮ್ಮೀತು? ಆದರೂ ಆಂಗ್ಲರ ಸಂಪರ್ಕದಿಂದ ಕನ್ನಡ ಶಿಕ್ಷಣ–ಕಾಗದದ ಮುದ್ರಣ ಬಂದು, ರಾಜಾಶ್ರಯ ಸಾಹಿತ್ಯ ಪರಂಪರೆಯನ್ನು ಪುನರುತ್ಥಾನಗೊಳಿಸಿ ಭರದಿಂದ ಮುನ್ನಡೆಸಿಕೊಂಡು ಬಂದಿತು.

"ಇಂದು ಬೆಳಗಾವಿ ಜಿಲ್ಲೆಗೆ ಸಕ್ಕರೆ ನಾಡು ಎಂದು ಕರೆಯುವ ವಾಡಿಕೆಯಿದೆ. ೧೧೯೯ರ ನಂತರದ ಕುರುಹುಗಳ ಪ್ರಕಾರ ಬೆಳಗಾವಿಗೆ 'ಇಕ್ಷುಗ್ರಾಮ' ಎಂದು ಹಲವಾರು ಜನ ಕವಿಗಳು ಸಾಹಿತಿಗಳು ನಮೂದಿಸಿದ್ದಾರೆ. 'ಇಕ್ಷು' ಎಂದರೆ ಕಬ್ಬು ಅದಕ್ಕೆ ಇಂದಿನ ದಿನಮಾನದಲ್ಲಿ ಅದು

ಅಕ್ಷರಶಃ ನಿಜ. ಎಂದರೆ ಇಂದು ಬೆಳಗಾವಿ ಜಿಲ್ಲೆಯು ಸಕ್ಕರೆ ಜಿಲ್ಲೆಯಾಗಿ ಪರಿಣಮಿಸಿ ಅತಿ ಹೆಚ್ಚು ಸಕ್ಕರೆ ಇಲ್ಲಿಂದಲೇ ಉತ್ಪಾದನೆ ಆಗುತ್ತದೆ."[೭] ಹೀಗಾಗಿ ಮೊದಲಿನಿಂದಲೂ ಬೆಳಗಾವಿಯಲ್ಲಿ ಕನ್ನಡದ ರಾಜ್ಯಮನೆತನಗಳು ಆಳ್ವಿಕೆ ಮಾಡಿವೆ. ಕನ್ನಡ ಭಾಷೆ ಮತ್ತು ಸಂಸ್ಕೃತಿ ನೆಲೆಯೂರಲು ಶ್ರಮಿಸಿದ್ದಾರೆ. ಅನೇಕಾನೇಕ ಕಲ್ಲಿನ ಗುಡಿಗಳು, ಜೈನರ ಬಸದಿಗಳು, ಮುಸ್ಲಿಂರ ಮಸೀದಿಗಳು, ಶಿಲಾಶಾಸನಗಳು, ತಾಮ್ರಪಟಗಳು ಅಸಂಖ್ಯಾತ ಆಧಾರ ಗ್ರಂಥಗಳು ಸಿಗುತ್ತವೆ. ಬೆಳಗಾವಿಯಿಂದ ಹಿಡಿದುಕೊಂಡು ಪಶ್ಚಿಮ ದಿಕ್ಕಿನಲ್ಲಿರುವ ಕೊಲ್ಲಾಪುರದವರೆಗೆ ಅಚ್ಚಕನ್ನಡ ಮಾತನಾಡುವ ಜನ ಸಿಗುತ್ತಿದ್ದರು. ಅಷ್ಟಲ್ಲದೆ ಅವರು ನಡೆಸಿದ ಪತ್ರವ್ಯವಹಾರಗಳ ಹಸ್ತಪ್ರತಿಗಳು ಕನ್ನಡದಲ್ಲಿಯೇ ಇರುವುದನ್ನು ಕಾಣುತ್ತೇವೆ. ಬೆಳಗಾವಿ ಜಿಲ್ಲೆ ಖಾನಾಪೂರ ತಾಲೂಕಿನ ಹಲಸಿ ಗ್ರಾಮವು ಕದಂಬರ ಉಪರಾಜಧಾನಿಯಾಗಿತ್ತು.

ಚಾಲುಕ್ಯರು, ರಾಷ್ಟ್ರಕೂಟರು ಬೆಳಗಾವಿ ಭಾಗವನ್ನು ಆಳಿದ ಕುರಿತು ದಾಖಲೆಗಳು ದೊರೆಯುತ್ತವೆ. ಕ್ರಿ.ಶ. ೧೨೫೦ರಿಂದ ೧೩೨೦ರ ವರೆಗೆ ಮುಸ್ಲಿಂರು ಕೂಡ ಬೆಳಗಾವಿ ಭಾಗದ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದ್ದಾರೆ. ದೇವಗಿರಿ ಯಾದವರು ಆಳಿದ ವಿಚಾರವು ತಾಮ್ರಪಟದಿಂದ ತಿಳಿದು ಬರುತ್ತದೆ. ಹೀಗಾಗಿ "ಅಂದಿನ ಕಾಲದಲ್ಲಿ ಈ ಭಾಗಕ್ಕೆ 'ಕುಹುಂಡಿ ೩೦೦೦' ಎಂದು ಕರೆಯಲಾಗುತ್ತಿತ್ತು. ಹಾಗೂ ಈ ಕುಹುಂಡಿ ೩೦೦೦ರನ್ನು ರಟ್ಟರೂ ಆಳಿದ್ದರು. ಆಗ ರಟ್ಟರ ರಾಜಧಾನಿ 'ಸುಗಂಧವತಿ' ಅಂದರೆ ಈಗಿನ ಸವದತ್ತಿಯಾಗಿತ್ತು. ತದನಂತರ ರಟ್ಟರು ತಮ್ಮ ರಾಜಧಾನಿಯನ್ನು ಆಗಿನ ವೇಣುಗ್ರಾಮ ಈಗಿನ ಬೆಳಗಾವಿಗೆ ಸ್ಥಳಾಂತರಿಸಿದರು ಎನ್ನುವ ಸಂಗತಿ ಆಧಾರ ಗ್ರಂಥಗಳಿಂದ ತಿಳಿದುಬರುತ್ತದೆ."[೮]

ಹೀಗೆ ರಾಜಕೀಯವಾಗಿ ಜಿಲ್ಲೆ ತನ್ನದೆಯಾದ ಒಂದು ವೈವಿಧ್ಯತೆಯ ಅಸ್ತಿತ್ವವನ್ನು ಉಳಿಸಿಕೊಂಡಿದೆ. ಬಹುಮನಿ ಸುಲ್ತಾನರು ವಿಜಾಪುರ ಆದಿಲ್‌ಶಾಹಿಗಳು ತಮ್ಮ ಆಡಳಿತ ನಡೆಸಿಕೊಂಡು ಜಿಲ್ಲೆಯ ಮೇಲೆ ಹಿಡಿತ ಸಾಧಿಸಿದ್ದಾರೆ. ಆದುದರಿಂದ ಪ್ರಾಚೀನ ಕರ್ನಾಟಕದ ವ್ಯಾಪ್ತಿ ತುಂಬ ವಿಸ್ತಾರವಾದದ್ದು. ಅತ್ತ ಮಹಾರಾಷ್ಟ್ರ ಇತ್ತ ಆಂಧ್ರ ಪ್ರದೇಶಗಳಲ್ಲಿ ಕನ್ನಡ ಪ್ರಾಂತಗಳು ಹಂಚಿಹೋಗಿವೆ. ಹಂಚಿಹೋದ ಪ್ರದೇಶಗಳೆಷ್ಟುಂಬುದನ್ನು ಊಹಿಸುವುದಾದರೆ ಈಗ ಮಹಾರಾಷ್ಟ್ರಕ್ಕೆ ಸೇರಬೇಕೆನ್ನುವ ಬೆಳಗಾವಿ ಜಿಲ್ಲೆ ಕರ್ನಾಟಕದ ಕೇಂದ್ರ ಸ್ಥಾನವಾಗಿರುತ್ತಿತ್ತು. ಸಾಂಸ್ಕೃತಿಕ, ಭಾಷಿಕ ಸಂದಿಗ್ಧತೆಗಳನ್ನು ಎದುರಿಸುತ್ತಲಿದೆ. ಈ ಎಲ್ಲ ಸಮಸ್ಯೆಗಳ ನಡುವೆಯೂ ಈ ಜಿಲ್ಲೆ ಭವ್ಯ ಪರಂಪರೆ ಹೊಂದಿದೆ. ನಮ್ಮ ಭಾರತೀಯ ಪರಂಪರೆಯಲ್ಲಿ ಹಸ್ತಪ್ರತಿಗಳು ತಮ್ಮದೆಯಾದ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕವಾದ ಅನನ್ಯತೆಯನ್ನು ಹೊಂದಿದೆ. ಪ್ರಮುಖವಾಗಿ ಹಸ್ತಪ್ರತಿಗಳ ಪೋಷಣೆ, ರಕ್ಷಣೆ, ಲಿಪಿಕರಣ ಹಾಗೂ ಪ್ರಸರಣ ಕಾರ್ಯ ನಡೆದಿದ್ದು ಧಾರ್ಮಿಕ ಆವರಣದಲ್ಲಿಯೇ ಎನ್ನಬೇಕು. ಎಷ್ಟೋ ಸಾರಿ ಹಸ್ತಪ್ರತಿಗಳು ಪಠ್ಯಗಳಿಗೂ ಸಂಬಂಧಿಸಿದ ಧರ್ಮ ಹಾಗೂ ಆಚರಣೆಗಳಿಗೂ ಒಂದಕ್ಕೊಂದು ಸಂಬಂಧವೆ ಕಾಣಿಸದಿದ್ದರೂ ಇವು ಧಾರ್ಮಿಕ ಹಿನ್ನೆಲೆಯಲ್ಲಿ ಸಾಗಿ ಬಂದಿರುವುದು ಕುತೂಹಲದ ಸಂಗತಿಯಾಗಿದೆ.

ಹಸ್ತಪ್ರತಿಗಳು ಆಗಮಿಕ ಮತ್ತು ಲೌಕಿಕ ಜೀವನದ ಎರಡು ಘಟ್ಟಗಳಾಗಿ ಕಾಣಿಸಿಕೊಳ್ಳುತ್ತವೆ. ಪ್ರಾಚೀನ ಕಾಲವನ್ನು ಗಮನಿಸಿದರೆ ನಿಸರ್ಗಪೂಜೆ ಮತ್ತು ಮೂರ್ತಿಪೂಜೆಗಳನ್ನು ಬೇರೆ ಬೇರೆ ಸಮುದಾಯಗಳಲ್ಲಿ ಮಾಡುತ್ತ ಬಂದಿವೆ. ಮೂಲಭೂತವಾಗಿ ದಾರ್ಶನಿಕ ನೆಲೆಯಲ್ಲಿ ಕಾಣುವ ಮನೋಧರ್ಮ ಭಾರತೀಯ ಸಂಸ್ಕೃತಿಯಲ್ಲಿ ಕಂಡುಬರುತ್ತದೆ. ಹೀಗಾಗಿ ಹಸ್ತಪ್ರತಿಗಳು ನಮ್ಮ ಸಂಸ್ಕೃತಿಯು ಹೌದು ಪ್ರತಿನಿಧಿಯೂ ಹೌದು ನಮ್ಮ ನಾಡಿನಲ್ಲಿ ಅನೇಕ ಮಠ ಮಂದಿರಗಳಲ್ಲಿ ಮತ್ತು ಅಭ್ಯಾಸಪ್ರಿಯ ವ್ಯಕ್ತಿಗಳ ವಶದಲ್ಲಿರುವ ಇವು ಇಂದು ಓದಲು ಬರೆಯಲು ಬಳಕೆಯಾಗದೆ ದೂರವಾಗಿ ಅಜ್ಞಾತವಾಸ ಅನುಭವಿಸುತ್ತವೆ. ಅಂಧಶ್ರದ್ಧೆಯಿಂದ ಕೆಲವಡೆ ದೇವರ ಜಗುಲಿಯ ಮೇಲೆ ಪೂಜೆಯ ವಸ್ತುಗಳಾಗಿ ನೀರಿನಿಂದ ಗಂಧ ಲೇಪನಗಳಿಂದ ಕೊಳೆಯಾಗಿ ಹೋಗಿವೆ. ಇವುಗಳ ರಕ್ಷಣಾತ್ಮಕ ಜವಾಬ್ದಾರಿ ನಮ್ಮ ಮೇಲಿದೆ. ಹಸ್ತಪ್ರತಿಗಳು ಗುಪ್ತನಿಧಿ ಇದ್ದಂತೆ ಶೋಧಿಸಿ ಹೆಕ್ಕಿ ತೆಗೆದಷ್ಟು ಹೊಸ ಹೊಸ ವಿಧಾನಗಳು, ಸಂಗತಿಗಳು ನಮಗೆ ದೊರೆಯುತ್ತವೆ.

ಈ ದಿಶೆಯಲ್ಲಿ ಯೋಚನೆಗೆ ತೊಡಗಿದಾಗ ಈ ಜಿಲ್ಲೆಯಲ್ಲಿ ಹಸ್ತಪ್ರತಿ ಸಂಪತ್ತು ಸಮೃದ್ಧವಾಗಿರುವ ಬಗ್ಗೆ ಕಂಡುಬರುತ್ತದೆ. ಪ್ರಸ್ತುತ ಜಿಲ್ಲೆಯ ಹಸ್ತಪ್ರತಿಗಳ ಸ್ಥೂಲನೋಟವನ್ನು ಈ ಕೆಳಗಿನಂತೆ ನೋಡಬಹುದು.

೨.೧. ಸಾಂಸ್ಥಿಕ ಒಡೆತನದ ನೆಲೆ

೨.೨. ವ್ಯಕ್ತಿ ಒಡೆತನದ ನೆಲೆ

೨.೩. ಸರಕಾರಿ ಒಡೆತನದ ನೆಲೆ

**೨.೧. ಸಾಂಸ್ಥಿಕ ಒಡೆತನದ ನೆಲೆ :**

ಕರ್ನಾಟಕ ಭೂಪಟದಲ್ಲಿ ಬೆಳಗಾವಿ ಜಿಲ್ಲೆ ಬಹುವಿಶಿಷ್ಟವಾದುದು. ಒಟ್ಟು ಹತ್ತು ತಾಲೂಕುಗಳಲ್ಲಿ (ಈಗ ನಿಪ್ಪಾಣಿ ಮತ್ತು ಕಿತ್ತೂರು ಹೊಸ ತಾಲೂಕಗಳಾಗಿವೆ) ಅನೇಕ ಲಿಂಗಾಯತ ಮಠಗಳಿವೆ. ಜೈನ ಬಸದಿಗಳಿವೆ. ಸವದತ್ತಿ ಎಲ್ಲಮ್ಮ, ಚಿಂಚಣಿ ಮಾಯಮ್ಮ, ಉದಗಟ್ಟಿ ಉದ್ದವ್ವ ಮೊದಲಾದ ಸರ್ವಧರ್ಮೀಯರ ಧಾರ್ಮಿಕ ಶ್ರದ್ಧಾಕೇಂದ್ರಗಳಿವೆ. ಕ್ರೈಸ್ತ ಮುಸ್ಲಿಂರ ಧಾರ್ಮಿಕ ಕೇಂದ್ರಗಳು ಸಾಕಷ್ಟಿವೆ.

ಜಿಲ್ಲೆಯ ಧರ್ಮ, ರಾಜಕೀಯ, ಸಾಹಿತ್ಯ, ಕಲೆ ಸಂಸ್ಕೃತಿಗಳಿಗೆ ಲಿಂಗಾಯತಮಠಗಳ ಕೊಡುಗೆ ಅಪೂರ್ವವಾದುದು. ಈ ಜಿಲ್ಲೆಯಲ್ಲಿ ಲಿಂಗಾಯತರು ಗಮನಾರ್ಹ ಸಂಖ್ಯೆಯಲ್ಲಿದ್ದಾರೆ. ಇಂದು ಈ ಲಿಂಗಾಯತರು ಧಾರ್ಮಿಕ ಸಾಮಾಜಿಕ ಶೈಕ್ಷಣಿಕ ಜಾಗೃತಿ ಕಾರ್ಯಗಳನ್ನು ಮಾಡುತ್ತ ಬಂದಿರುವುದು ಗಮನಿಸಬೇಕಾದ ಸಂಗತಿಯಾಗಿದೆ. "ಒಂದು ಸ್ಥೂಲ ಸಮೀಕ್ಷೆಯ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೬೮ ವಿರಕ್ತಮಠ ಪರಂಪರೆಗೆ ಸೇರಿದ ೪೦ ಗುರು ವರ್ಗಕ್ಕೆ ಸೇರಿದ ಲಿಂಗಾಯತ-ವೀರಶೈವಮಠಗಳು ಅಸ್ತಿತ್ವದಲ್ಲಿರುವುದು ಕಂಡುಬರುತ್ತದೆ. ಈ ಎಲ್ಲ ಮಠಗಳು

ಆಧ್ಯಾತ್ಮಿಕ, ನೈತಿಕ ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ರಕ್ಷಿಸುತ್ತ ಧರ್ಮ, ಶಿಕ್ಷಣ ಹಾಗೂ ಸಂಸ್ಕೃತಿಯ ಪ್ರಸಾರದಲ್ಲಿ ತೊಡಗಿಕೊಂಡಿರುವುದು ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಿ ರೂಪುಗೊಂಡಿರುವುದು ತುಂಬಾ ಅಭಿಮಾನದ ಸಂಗತಿಯಾಗಿದೆ."[೯] ಧಾರ್ಮಿಕ ಕ್ಷೇತ್ರದಲ್ಲಿ ಬೆಳಗಾವಿ ಜಿಲ್ಲೆಯ ಲಿಂಗಾಯತ ಮಠಗಳ ಪಾತ್ರ ಗಮನಾರ್ಹವಾದುದು. ಅಲ್ಲಿನ ಪೀಠಾಧಿಪತಿಗಳು ತಮ್ಮ ತಮ್ಮ ಮಠಗಳಲ್ಲಿ ಜಾತ್ರೆ, ರಥೋತ್ಸವ, ಶಿವಾನುಭವ, ಪುರಾಣ, ಪ್ರವಚನಗಳನ್ನು ನಡೆಸುತ್ತ ಧಾರ್ಮಿಕ ಜಾಗೃತಿಗೆ ಕಾರಣರಾಗಿದ್ದಾರೆ.

ಈ ಎಲ್ಲ ಮಠಗಳು ಸಾಹಿತ್ಯ ಸೇವೆಯ ಭಾಗವಾಗಿ ಹಸ್ತಪ್ರತಿಗಳ ಸೃಷ್ಟಿ, ಸಂರಕ್ಷಣೆ ಕಾರ್ಯದಲ್ಲಿ ನಿರಂತರವಾಗಿ ತೊಡಗಿಕೊಂಡಿರುವುದು ತಿಳಿದು ಬರುತ್ತದೆ. ಸಾಹಿತ್ಯ, ಸಾಮಾಜಿಕ ಕಾರ್ಯ ಮತ್ತು ಸಂಸ್ಕೃತಿಯ ಪುರೋಭಿವೃದ್ಧಿಯಲ್ಲಿ ಮಠಗಳ ಪಾತ್ರ ದಾಖಲಾರ್ಹವಾದುದು. ಆಧ್ಯಾತ್ಮಿಕ ಶೈಕ್ಷಣಿಕ ಕಾರ್ಯವನ್ನು ಮಾಡುವುದರ ಜೊತೆಗೆ ಕಾವ್ಯ, ಪುರಾಣ, ಶಾಸ್ತ್ರ ಕೃತಿಗಳನ್ನು ಬರೆಸುವ, ಪ್ರಕಟಿಸುವ, ಟೀಕಿಸುವ, ಪ್ರಸಾರ ಮಾಡುವ ಕಾರ್ಯದಲ್ಲಿ ಮಠಗಳು ಅನನ್ಯವಾದ ಕಾರ್ಯ ಮಾಡಿವೆ. ಮುದ್ರಣ ಸೌಲಭ್ಯಗಳಿಲ್ಲದ ದಿನಮಾನದಲ್ಲಿ ಹಸ್ತಪ್ರತಿಗಳನ್ನು ಉತ್ಪಾದಿಸುವ ಸಂರಕ್ಷಿಸುವ ಜವಾಬ್ದಾರಿಯನ್ನು ತುಂಬಾ ಸಮರ್ಥವಾಗಿ ನಿರ್ವಹಿಸಿದವು. ಅಂಥ ಕೆಲವು ನಿದರ್ಶನಗಳು ಹಸ್ತಪ್ರತಿಗಳ ಆಧಾರದಿಂದ ಮಾಹಿತಿ ದೊರೆಯುತ್ತದೆ.

**೧. ನಾಗನೂರು ರುದ್ರಾಕ್ಷಿಮಠ** : ಇಡೀ ಜಿಲ್ಲೆಯಲ್ಲಿಯೇ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂರಕ್ಷಣೆ ಮಾಡಿದ ಬಹುಮುಖ್ಯವಾದ ಮಠವೆಂದರೆ ಬೆಳಗಾವಿಯ ನಾಗನೂರು ಶ್ರೀ ರುದ್ರಾಕ್ಷಿಮಠ. ೧೯೯೫ರಲ್ಲಿ ಶ್ರೀಮಠದಲ್ಲಿ ಪ್ರಾರಂಭಗೊಂಡ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯವು ಹೆಸರೇ ಸೂಚಿಸುವಂತೆ ಲಿಂಗಾಯತ ಧರ್ಮ ಸಾಹಿತ್ಯಗಳಿಗೆ ಸಂಬಂಧಿಸಿದ ಒಂದು ವಿಶಿಷ್ಟ ಗ್ರಂಥಾಲಯವಾಗಿದೆ. ಶರಣ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಿಸಿದಂತೆ ಸಮಗ್ರ ಕೃತಿಗಳನ್ನು, ಪತ್ರಿಕೆಗಳನ್ನು ಮತ್ತು ಹಸ್ತಪ್ರತಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

ಬೆಳಗಾವಿ ರುದ್ರಾಕ್ಷಿಮಠದ ಈ ಸಂಶೋಧನ ಕೇಂದ್ರದಲ್ಲಿ ಸಾವಿರಾರು ಹಸ್ತಪ್ರತಿಗಳ ಸಂಗ್ರಹವಿದೆ. "೧೯೯೫ರಿಂದ ಇಲ್ಲಿಯವರೆಗೆ ಲಿಂಗಾಯತ ಧರ್ಮಕ್ಕೆ ಸಂಬಂಧಪಟ್ಟ ಸುಮಾರು ೧೦,೦೦೦ ಗ್ರಂಥಗಳ ಸಂಗ್ರಹ ಮಾಡಲಾಗಿದೆ. ಗುಂಜಾಳ ಅವರು ಸಿದ್ಧಪಡಿಸಿದ ಹೊಸ ನಮೂನೆಯ ವರ್ಗೀಕರಣ ಸಿದ್ಧಾಂತದ ಮೇಲೆ ಅವುಗಳನ್ನು ಜೋಡಿಸಲಾಗಿದೆ. ಲಿಂಗಾಯತ ಧರ್ಮಕ್ಕೆ ಸಂಬಂಧಪಟ್ಟ ವಿವಿಧ ಭಾಷೆಯ ಸುಮಾರು ೩೦ ಪತ್ರಿಕೆಗಳನ್ನು ಸಂಗ್ರಹಿಸಲಾಗುತ್ತಿದೆ. ಅವುಗಳ ಎಲ್ಲ ಹಿಂದಿನ ಸಂಚಿಕೆಗಳನ್ನು ಅತ್ಯಂತ ವ್ಯವಸ್ಥಿತವಾಗಿ ಸಂಗ್ರಹಿಸಲಾಗಿದೆ."[೧೦]

ಈ ಕೇಂದ್ರವು ಲಿಂಗಾಯತಧರ್ಮಕ್ಷೇತ್ರದ ವಿಕಾಸದ ಹಾದಿಯಲ್ಲಿ ಒಂದು ಮೈಲುಗಲ್ಲು. ಸಂಶೋಧಕರಿಗೆ ಸಮಗ್ರ ಮಾಹಿತಿ ನೀಡುವ ಏಕೈಕ ಸಂಶೋಧನ ಗ್ರಂಥಾಲಯ ಇದಾಗಿದೆ. ಯಾವುದೇ ಸಾಹಿತ್ಯಿಕ ಸಂಶೋಧನಾತ್ಮಕ ಮಾಹಿತಿ ಹುಡುಕಿಕೊಂಡು ಬಂದವರಿಗೆ ತೆರೆದು

ತೋರಿಸುವ ಮುಕ್ತ ಕೇಂದ್ರವಾಗಿದೆ. ಈ ಗ್ರಂಥಾಲಯದಲ್ಲಿ ೨೨೫ಕ್ಕೂ ಹೆಚ್ಚು ಹಸ್ತಪ್ರತಿಗಳ ಸಂಗ್ರಹವಿದೆ. ಇವುಗಳಲ್ಲಿ ೫೮೭ ಗ್ರಂಥಗಳು ಅಡಕವಾಗಿವೆ. ಗ್ರಂಥಾಲಯ ವಿಜ್ಞಾನದಲ್ಲಿ ಅಪಾರವಾದ ಜ್ಞಾನ ಮತ್ತು ಅನುಭವವುಳ್ಳ ಖ್ಯಾತ ಸಾಹಿತಿಗಳಾಗಿರುವ ಎಸ್. ಆರ್. ಗುಂಜಾಳ ಅವರು ಈ ಸಂಸ್ಥೆಯ ಪ್ರಥಮ ನಿರ್ದೇಶಕರಾಗಿ ಅದ್ಭುತವಾದ ಸೇವೆ ಸಲ್ಲಿಸಿದ್ದಾರೆ.

ಇಲ್ಲಿಯ ಹಸ್ತಪ್ರತಿಗಳ ವಿವರಣಾತ್ಮಕವಾದ ಸೂಚಿ ಸಂಪುಟ ೧೯೯೮ರಲ್ಲಿ ಪಂಡಿತ ಕೆ. ರಾಠೋಡ ಅವರು ಸಂಪಾದಿಸಿದ್ದಾರೆ. ಅದು ಸಂಶೋಧನ ಕೇಂದ್ರದಿಂದಲೇ ಪ್ರಕಟಗೊಂಡಿದೆ. ೫೮೭ ಕೃತಿಗಳನ್ನು ಇದು ಒಳಗೊಂಡಿದೆ. ಗ್ರಂಥಾಲಯದ ಮೊದಲನೆಯ ಸೂಚಿಸಂಪುಟ ಇದಾಗಿದೆ. ಅಕ್ಕಗಳ ಕಾಲಜ್ಞಾನ ವಚನ, ಅಕ್ಕಗಳ ಸೃಷ್ಟಿಯ ವಚನ, ಷಟ್‌ಸ್ಥಲದ ವಚನಗಳ, ಅನುಭವ ಶಿಖಾಮಣಿ, ಅನುಭವಸಾರ, ಕರ್ನಾಟಕ ಶಬ್ದಮಂಜರಿ, ಗುರುರಗಳೆ, ಚೋರಬಸವ ಚಾರಿತ್ರ, ಬಸವಶಿಖಾಮಣಿ, ಪ್ರಭುಲಿಂಗಲೀಲೆ, ಪ್ರೌಢದೇವರಾಯನ ಕಾವ್ಯ, ಶಬ್ದಮಣಿದರ್ಪಣ, ಶೀಲವಂತನ ತ್ರಿವಿಧಿ, ಜ್ಯೋತಿಷ್ಯ ಶಾಸ್ತ್ರಗಳಂಥ ೬೦೦ ಲಿಂಗಾಯತ ಕೃತಿಗಳ ಸಂಗ್ರಹವನ್ನು ಒಳಗೊಂಡಿದೆ. ಈ ಭಂಡಾರದಲ್ಲಿ ಹೆಚ್ಚು ಸಂಖ್ಯೆಯ ತಾಳೆ ಪ್ರತಿಗಳಿವೆ. ಜೊತೆಗೆ ಕೋರಿಕಾಗದ, ಆಧುನಿಕ ಕಾಗದ ಕಡತಗಳು ಇಲ್ಲಿರುವುದನ್ನು ಕಾಣುತ್ತೇವೆ.

ಇಲ್ಲಿಯ ಹಸ್ತಪ್ರತಿಗಳನ್ನು ಗಮನಿಸಿದರೆ ನಮಗೆ ೬೦ ಜನ ಹಸ್ತಪ್ರತಿ ಲಿಪಿಕಾರರು ಕಂಡುಬರುತ್ತಾರೆ. ಇಡೀ ಬೆಳಗಾವಿ ಜಿಲ್ಲೆಯಲ್ಲಿಯೇ ಈ ಹಸ್ತಪ್ರತಿ ಭಂಡಾರಕ್ಕೆ ಒಂದು ವೈವಿಧ್ಯತೆಯಿದೆ. ಸುಸಜ್ಜಿತವಾದ ಹಸ್ತಪ್ರತಿ ಭಂಡಾರ ಅಸ್ತಿತ್ವಗೊಂಡಿರುವುದು ಹೆಮ್ಮೆಯ ಸಂಗತಿ. ಅಷ್ಟಲ್ಲದೇ ಒಳ್ಳೆಯ ಅತ್ಯಾಧುನಿಕ ಸಂರಕ್ಷಣಾ ವಿಧಾನವನ್ನು ರೂಪಿಸಿಕೊಂಡಿದೆ. ಈಗಾಗಲೇ ದೇಶ–ವಿದೇಶದ ಸಂಶೋಧಕರಿಗೆ ಅಧ್ಯಯನಪ್ರಿಯರಿಗೆ ಈ ಭಂಡಾರವು ತುಂಬಾ ಸಹಾಯಕವಾಗಿದೆ. ಇಲ್ಲಿಗೆ ಬಂದು ತಮಗೆ ಬೇಕಾದ ಮಾಹಿತಿಯನ್ನು ಸಂಪಾದಿಸಿಕೊಂಡು ಹೋಗುತ್ತಿದ್ದಾರೆ. ಇಟಲಿ, ಜಪಾನ, ಅಮೇರಿಕಾ ಬೇರೆ ಬೇರೆ ದೇಶದ ಸಂಶೋಧಕರು ಇಲ್ಲಿಗೆ ಆಗಮಿಸಿ ಮಾಹಿತಿ ಪಡೆದದ್ದು ಒಂದು ವಿಶೇಷವಾಗಿದೆ. ಇದಲ್ಲದೆ ನೆರೆಯ ರಾಜ್ಯಗಳಾದ ಮಹಾರಾಷ್ಟ್ರ, ತಮಿಳುನಾಡು ಆಂಧ್ರಪ್ರದೇಶದ ಖ್ಯಾತ ವಿದ್ವನ್ಮಣಿಗಳು ಈ ಕೇಂದ್ರದ ಸಹಾಯ ಪಡೆದಿದ್ದಾರೆ.

**೨. ಅಥಣಿಯ ಗಚ್ಚಿನಮಠ** : ಅಥಣಿ ಸ್ಥಳೀಯ ನಗರದಲ್ಲಿರುವ ಬಹಳಷ್ಟು ಹಳೆಯದಾದ ಲಿಂಗಾಯತಮಠವಿದೆ. ಮುರುಘೇಂದ್ರ ಶಿವಯೋಗಿಗಳಿಂದ ಈ ಮಠ ನಾಡಿನ ತುಂಬ ಚಿರಪರಿಚಿತವಾಗಿದೆ. ಈ ಮಠದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗಿದೆ. ಇದು ಜಿಲ್ಲೆಯ ಪ್ರಮುಖ ಹಸ್ತಪ್ರತಿಭಂಡಾರವನ್ನು ಹೊಂದಿದೆ. "ಅಥಣಿಯ ಗಚ್ಚಿನಮಠವು ಜಿಲ್ಲೆಯ ಮೂರನೆಯ ಅತಿದೊಡ್ಡ ಸುಸಜ್ಜಿತ ಹಸ್ತಪ್ರತಿ ಭಂಡಾರವನ್ನು ಹೊಂದಿದ್ದು. ಇಲ್ಲಿ ೧೨೫ಕ್ಕೂ ಹೆಚ್ಚು ಹಸ್ತಪ್ರತಿಗಳನ್ನು ಅಥಣಿಯ ಸರ್ವೇಕ್ಷಕರಾದ ಅಪ್ಪಾಸಾಹೇಬ ಎಂ. ಅಲಿಬಾದಿ ಶೋಧಿಸಿದ್ದಾರೆ."[೧೦] ಇಲ್ಲಿನ ಭಂಡಾರದಲ್ಲಿ ತಾಳೆಗರಿ, ಕೋರಿಕಾಗದದ ಮೇಲೆ ಬರೆಯಲ್ಪಟ್ಟುವುಗಳಾಗಿವೆ.

೧. ಕರಣ ಹಸಿಗೆ

೨. ಗಣಭಾಷಿತ ರತ್ನಮಾಲೆ

೩. ಚನ್ನಬಸವಣ್ಣನವರ ವಚನ

೪. ಪ್ರಭುಲಿಂಗಲೀಲೆ

೫. ಷಟ್‌ಸ್ಥಲದ ವಚನ

೬. ಅಷ್ಟಾವರಣ ಸ್ತೋತ್ರದ ತ್ರಿವಿಧಿ

ಇವುಗಳೆಲ್ಲವು ಲಿಂಗಾಯತ ತತ್ವಕ್ಕೆ ಸಂಬಂಧಿಸಿದ ಹಸ್ತಪ್ರತಿಗಳಾಗಿರುವುದರಿಂದ ಶ್ರೀಮಠದಲ್ಲಿ ಜೋಪಾನವಾಗಿ ಸಂಗ್ರಹಿಸಿದ್ದನ್ನು ಕಾಣುತ್ತೇವೆ.

೩. **ಅಥಣಿಯ ಮೋಟಗಿಮಠ** : ಅಥಣಿಯ ಮೋಟಗಿಮಠ ಗಚ್ಚಿನಮಠಕ್ಕಿಂತಲೂ ಪ್ರಾಚೀನವಾದುದು. ಈ ಮಠದಲ್ಲಿ ಕೂಡ ಕೆಲವು ಹಸ್ತಪ್ರತಿಗಳ ಸಂಗ್ರಹವಿದೆ. ಈಗ ೧೩ ಕಟ್ಟುಗಳನ್ನೊಳಗೊಂಡ ಪ್ರಾಚೀನವಾದ ತಾಮ್ರಪಟ, ಹಿತ್ತಾಳೆ ಪಾತ್ರೆಗಳನ್ನು ಒಂದು ಚಿಕ್ಕಪೆಟ್ಟಿಗೆಯಲ್ಲಿ ಸಂಗ್ರಹಿಸಿಟ್ಟಿದ್ದಾರೆ. ಅಥಣಿಯ ಮೋಟಗಿಮಠವು ಸಾಂಸ್ಕೃತಿಕ, ಸಾಮಾಜಿಕ ಕಾರ್ಯವನ್ನು ನಿರಂತರವಾಗಿ ನಡೆಸಿಕೊಂಡು ಬಂದಿದೆ. ವಚನ ಪಿತಾಮಹ ಫ.ಗು.ಹಳಕಟ್ಟಿ ಅವರಂಥ ವಿದ್ವಾಂಸರು ಮೋಟಗಿಮಠದ ಹಸ್ತಪ್ರತಿಗಳ ಸಹಾಯ ಪಡೆದಿರುವುದು ಹೆಮ್ಮೆಯ ವಿಷಯವಾಗಿದೆ. ಅವರು ಪ್ರಕಟಿಸಿದ 'ವರದಾನಿ ಗುಡ್ಡಮ್ಮೆಯ ಚರಿತೆ'ಯ ಹಸ್ತಪ್ರತಿಯನ್ನು ಮೋಟಗಿಮಠದ ಹಸ್ತಪ್ರತಿ ಭಂಡಾರದಿಂದಲೇ ಪಡೆದಿರುವುದನ್ನು ಮೊದಲ ಮಾತಿನಲ್ಲಿ ದಾಖಲಿಸಿದ್ದಾರೆ. "ಇಲ್ಲಿಯ ೩೬ ಹಸ್ತಪ್ರತಿಗಳನ್ನು ಈಗಿನ ಪೀಠಾಧ್ಯಕ್ಷರಾದ ಪ್ರಭುಚನ್ನಬಸವ ಸ್ವಾಮಿಗಳು ಶೋಧಿಸಿರುವರು. ಅವುಗಳಲ್ಲಿ ಶ್ರೀಗುರುಬಸವ ಮಹಾಸ್ವಾಮಿಗಳು ತಮ್ಮ ಹಸ್ತಪ್ರತಿಯಲ್ಲಿ ಬರೆದಿಟ್ಟ ಮಹತ್ವದ ಗ್ರಂಥಗಳಾದ ಅನಾಮಯಸ್ತೋತ್ರಂ, ಶ್ರೀ ಉಳವಿ ಚನ್ನಬಸವೇಶ್ವರ ಮಹಿಮೆ, ಅನುಭವ ಸಾರ ಪ್ರಮುಖವೆನಿಸಿವೆ."[೨] ಪೂಜ್ಯರು ಒಂದು ಸಣ್ಣ ಹಸ್ತಪ್ರತಿ ಭಂಡಾರವನ್ನು ನಿರ್ಮಿಸಿದ್ದಾರೆ. ಸಂರಕ್ಷಣಾ ಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿದ್ದಾರೆ.

೧. ಚೆನ್ನಬಸವ ಪುರಾಣ

೨. ಬಸವ ಪುರಾಣ

೩. ಮಿಶ್ರಾರ್ಪಣ

೪. ವಚನ

೫. ಷಡಕ್ಷರ ರಗಳೆ

೬. ಅಕ್ಕನ ವಚನ

೭. ನೀತಿ ಗ್ರಂಥ

ಇಲ್ಲಿನ ಹಸ್ತಪ್ರತಿ ಭಂಡಾರವನ್ನು ಪರಿಶೀಲಿಸಿ ಕೆಲವು ಮಹತ್ವದ ಹಸ್ತಪ್ರತಿಗಳ ೧೦ ಪುಟಗಳ ಪಟ್ಟಿಯನ್ನು ಖ್ಯಾತ ಹಸ್ತಪ್ರತಿತಜ್ಞ ಎಸ್. ಶಿವಣ್ಣನವರು ಮಾಡಿಕೊಟ್ಟಿದ್ದಾರೆ. ಈಗ ಅದು ಶ್ರೀಮಠದಲ್ಲಿ ದೊರೆಯುತ್ತದೆ.

**೪. ದುರದುಂಡೀಶ್ವರಮಠ ಅರಭಾವಿ :** ಗೋಕಾಕ ತಾಲೂಕಿನ ಅರಭಾವಿಮಠವು ಸು. ೫೦೦ ವರ್ಷಗಳ ಹಿಂದೆ ನಿರ್ಮಾಣವಾದ ಒಂದು ಪ್ರಭಾವಿ ಮಠವಾಗಿದೆ. ಈ ಮಠದ ಇತಿಹಾಸವನ್ನು ಶೋಧಿಸಿ ಎಸ್.ಸಿ. ನಂದೀಮಠರು ಶಿವಾನುಭವ ಪತ್ರಿಕೆಯಲ್ಲಿ ಲೇಖನ ಬರೆದಿರುವುದು ಗಮನಿಸುವ ಅಂಶ. ಈ ಮಠದಲ್ಲಿ ನೂರಾರು ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿತ್ತು. ಶ್ರೀಮಠ ಕರ್ನಾಟಕದ ಮಠಗಳ ಇತಿಹಾಸದಲ್ಲಿಯೇ ಮೊದಲ ಬಾರಿಗೆ 'ಪುಣ್ಯಾರಣ್ಯ' ಎಂಬ ಪತ್ರಿಕೆಯನ್ನು ಪ್ರಕಟಿಸಿದ ಕೀರ್ತಿಗೆ ಭಾಜನವಾಗಿದೆ. ೧೯೨೦ರ ದಶಕದಲ್ಲಿ ೨೦ಕ್ಕೂ ಮೌಲಿಕ ಕೃತಿಗಳನ್ನು ಪ್ರಕಟಿಸಿ ಕನ್ನಡ ಸಾರಸ್ವತಪ್ರಪಂಚವನ್ನು ಶ್ರೀಮಂತಗೊಳಿಸಿದೆ. ಮಹಾಲಿಂಗರಂಗನ 'ಅನುಭವಾಮೃತ' ಕೃತಿ ಮತ್ತು ಕಿತ್ತೂರು ಸಂಸ್ಥಾನಕ್ಕೆ ಸಂಬಂಧಿಸಿದ 'ಕಿತ್ತೂರು ಗತವೈಭವ' ಎಂಬ ಐತಿಹಾಸಿಕ ಕೃತಿಯನ್ನು ಮೊಟ್ಟಮೊದಲು ಪ್ರಕಟಿಸಿದ ಶ್ರೇಯಸ್ಸು ಶ್ರೀಮಠದ್ದು. ಈ ಮಠದ ಹಸ್ತಪ್ರತಿ ಭಂಡಾರವನ್ನು ಗಮನಿಸಿದ ಖ್ಯಾತ ಸಂಶೋಧಕರಾದ ಎಂ.ಎಂ. ಕಲಬುರ್ಗಿ ಅವರು ಕರ್ನಾಟಕ ವಿಶ್ವವಿದ್ಯಾಲಯದ ಬಸವೇಶ್ವರಪೀಠಕ್ಕೆ ಎಲ್ಲ ಹಸ್ತಪ್ರತಿಗಳನ್ನು ತೆಗೆದುಕೊಂಡು ಹೋದರೆಂಬ ಮಾಹಿತಿ ದೊರೆಯುತ್ತದೆ. ಅರಭಾವಿ ಪುಣ್ಯಾರಣ್ಯ ಮಠದ ಪೂಜ್ಯ ಮಹಾಂತ ಶಿವಯೋಗಿಗಳ ಜನ್ಮಶತಮಾನೋತ್ಸವ ನಿಮಿತ್ಯ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಅಸ್ತಿತ್ವಕ್ಕೆ ಬಂದ ಶ್ರೀ ಬಸವೇಶ್ವರಪೀಠದ ಮೊದಲ ಮುಖ್ಯಸ್ಥರಾದ ಎಂ. ಎಂ. ಕಲಬುರ್ಗಿ, ಬಿ. ವಿ. ಶಿರೂರ ಮತ್ತು ಬಿ. ಆರ್. ಹಿರೇಮಠ ಅವರು ಈ ಹಸ್ತಪ್ರತಿಗಳನ್ನು ತೆಗೆದುಕೊಂಡು ಹೋದರೆಂಬ ವಿಷಯ ತಿಳಿಯುತ್ತದೆ.

**೫. ಮೂಡಲಗಿಯ ಶಿವಬೋಧರಂಗಮಠ :** ಮೂಡಲಗಿ ಪಟ್ಟಣವು ಗೋಕಾಕ ತಾಲೂಕಿನ ದೊಡ್ಡ ವ್ಯಾಪಾರ ಕೇಂದ್ರವಾಗಿದೆ. ಸ್ಥಳೀಯ ಶಿವಬೋಧರಂಗ ಮಠಕ್ಕೆ ಭವ್ಯಚರಿತ್ರೆಯಿದೆ. ಶ್ರೀಮಠದಲ್ಲಿ ಮೋಡಿ, ಮರಾಠಿ, ಸಂಸ್ಕೃತ, ಕನ್ನಡದ ಹಸ್ತಪ್ರತಿಗಳು ಹೇರಳವಾಗಿ ದೊರೆಯುತ್ತವೆ. ಈ ತಾಲೂಕನ್ನು ಸಮೀಕ್ಷೆ ಕಾರ್ಯ ಮಾಡಿದ ಮಹಾದೇವ ಜಿಡ್ಡಿಮನಿಯವರು ಕೆಲವು ಹಸ್ತಪ್ರತಿಗಳ ಹೆಸರನ್ನು ನಮೂದಿಸಿದ್ದಾರೆ.

೧. ಶ್ರೀ ದೇಶಿಕ ಚರಿತೆ

೨. ಶ್ರೀ ಗುರು ಚರಿತ್ರ

ಈ ಮೇಲಿನ ಎರಡು ಪ್ರಮುಖ ಗ್ರಂಥಗಳಲ್ಲದೆ ಇನ್ನೂ ನಾಲ್ಕು ಐತಿಹಾಸಿಕ ದಾಖಲೆಗಳು ಈ ಮಠದಲ್ಲಿ ದೊರೆಯುತ್ತವೆ. "ಶ್ರೀಮಠಕ್ಕೆ ದತ್ತಿಯಾಗಿ ಕೊಟ್ಟ ಆಸ್ತಿಪತ್ರಗಳಿವೆ. ಇವುಗಳಲ್ಲಿ ಮೊದಲನೆಯದು ಬಿಜಾಪುರದ ಸುಲ್ತಾನನಾದ ಇಬ್ರಾಹಿಂ ಆದಿಲ್‌ಶಾಹನ್ ಶ್ರೀ ಅದ್ವಯ ಬೋಧ

ಸ್ವಾಮಿಗಳಿಗೆ ಕ್ರಿ.ಶ. ೧೫೪೧ರಲ್ಲಿ ಕೊಟ್ಟ ಮೋಡಿಲಿಪಿಯಲ್ಲಿರುವ ಆಸ್ತಿಪತ್ರ, ಎರಡನೆಯದು ಬಿಜಾಪುರದ ಮಲಿಕ್‌ಕಂಬರನು (೧೫೪೬ರಿಂದ ೧೬೨೬) ಶ್ರೀ ಅದ್ವಯ ಬೋಧಶ್ರೀಗಳಿಗೆ ಕ್ರಿ.ಶ. ೧೫೪೯ರಲ್ಲಿ ನೀಡಿದ ಮೋಡಿಲಿಪಿಯ ಆಸ್ತಿಪತ್ರ ಪ್ರಮುಖವಾಗಿವೆ."[೧೩] ಇನ್ನು ಶ್ರೀಮಠದಲ್ಲಿ ಅನೇಕ ಮೋಡಿ, ಮರಾಠಿ ಲಿಪಿಯುಳ್ಳ ಹಸ್ತಪ್ರತಿಗಳಿವೆ.

**೬. ಗೋಕಾಕದ ಶೂನ್ಯಸಂಪಾದನಾಮಠ** : ಗೋಕಾಕ ನಗರದ ಹೃದಯ ಭಾಗದಲ್ಲಿರುವ ೩೦೦ ವರ್ಷಗಳ ಇತಿಹಾಸ ಹೊಂದಿದ ಶೂನ್ಯಸಂಪಾದನಾಮಠ ಪ್ರಮುಖವಾದದ್ದು. ೧೫ನೇ ಶತಮಾನದಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳ ನೇತೃತ್ವದಲ್ಲಿ ನೂರೊಂದು ವಿರಕ್ತರು ಹಳ್ಳಿಗೆ ಏಕರಾತ್ರಿ, ಪಟ್ಟಣಕ್ಕೆ ಪಂಚರಾತ್ರಿ ಎಂಬಂತೆ ಸಂಚರಿಸುತ್ತ ಧರ್ಮಪ್ರಸಾರ ಕಾರ್ಯವನ್ನು ಮಾಡಿದರು. ಸಿದ್ಧಲಿಂಗ ಯತಿಗಳ ಐವರು ಪ್ರಮುಖ ಶಿಷ್ಯರ ಮಠಗಳಾದವು. ಅವು ಸಮಯಭೇದ ಕಾರಣವಾಗಿ ಐದು ಪ್ರಕಾರವಾದವು. ಚೀಲಾಳ ಸಮಯ (ಗದುಗಿನ ತೋಂಟದಾರ್ಯಮಠ), ಮುರುಘಾ ಸಮಯ (ಚಿತ್ರದುರ್ಗ ಮರಘಾಮಠ), ಕೆಂಪಿನ ಸಮಯ (ಹುಬ್ಬಳ್ಳಿ ಮೂರುಸಾವಿರಮಠ), ಕುಮಾರ ಸಮಯ (ಹಾನಗಲ್ಲ ಕುಮಾರೇಶ್ವರಮಠ), ಸಂಪಾದನಾ ಸಮಯ (ಸಂಪಾದನಾ ಮಠ, ವಂಟಮುರಿ) ಹೀಗೆ ಐದು ಪ್ರಕಾರದ ಮಠಗಳಲ್ಲಿ ಸಂಪಾದನ ಮಠಗಳು ಬೆಳಗಾವಿ ಜಿಲ್ಲೆಯಲ್ಲಿ ಮೂರು ಮಠಗಳಿರುವುದು ವಿಶೇಷ. ಅವುಗಳಲ್ಲಿ ಗೋಕಾಕ ಶೂನ್ಯಸಂಪಾದನಾಮಠವು ಒಂದಾಗಿದೆ. ಶ್ರೀಮಠದಲ್ಲಿ ಅನೇಕ ಹಸ್ತಪ್ರತಿಗಳಿವೆ.

೧. ಬಸವ ಪುರಾಣ

೨. ಚನ್ನಬಸವ ಪುರಾಣ

೩. ತೋಂಟದ ಸಿದ್ಧಲಿಂಗೇಶ್ವರರ ಟೀಕಿನ ವಚನ

ಶ್ರೀಮಠದಲ್ಲಿ ೧೪೮ ಹಸ್ತಪ್ರತಿಗಳ ಸಂಗ್ರಹವಿತ್ತು. ಆದರೆ ಅವುಗಳು ಇಂದು ಎಲ್ಲವೂ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠವನ್ನು ಸೇರಿವೆ. ಈಗ ಪ್ರಸ್ತುತ ಮಠದಲ್ಲಿ ಮೂರು ಹಸ್ತಪ್ರತಿಗಳು ದೊರೆಯುತ್ತವೆ.

**೭. ಕಾಡಸಿದ್ಧೇಶ್ವರಮಠ, ಮರಡಿಮಠ** : ಮರಡಿಮಠವು ಗೋಕಾಕ ತಾಲೂಕಿನಲ್ಲಿ ಕೊಣ್ಣೂರು ಗ್ರಾಮದ ಸಮೀಪವಿರುವ ಒಂದು ಅತ್ಯಂತ ಸುಪ್ರಸಿದ್ಧ ಜನಪ್ರಿಯ ಪವಾಡದ ಮಠವಾಗಿದೆ. ಪ್ರತಿ ಅಮಾವಾಸ್ಯೆಗೆ ಸು. ೧೦,೦೦೦ ದಷ್ಟು ಭಕ್ತರು ಆಗಮಿಸಿ, ಕರ್ತೃಗದ್ದುಗೆಯ ದರ್ಶನ ಪಡೆಯುತ್ತಾರೆ. ಶ್ರೀಮಠದಲ್ಲಿ "ಶ್ರೀ ಕಾಡಸಿದ್ಧೇಶ್ವರರ ಕುರಿತಿರುವ ಅಖ್ಯಾಯಿಕೆಗಳನ್ನು ಸಂಗ್ರಹಿಸಿ ಚರಿತ್ರೆ ರೂಪದಲ್ಲಿ ಬರೆದಿರುವ ಹಸ್ತಪ್ರತಿಯನ್ನೊಮ್ಮೆ ಓದಿದೆ. ಅದರಲ್ಲಿರುವ ಭಾಷಿಕ ದೋಷಗಳನ್ನು ಸರಿಪಡಿಸಲು ಸಂಗ್ರಹಕಾರರಾದ ಶ್ರೀ ಮಲ್ಲಪ್ಪ ಕ. ಕೊಚ್ಚರಗಿಯವರಿಗೆ ತಿಳಿಸಿದ್ದೆ. ಆದರೆ ಆ ಒಂದು ಕೆಲಸವನ್ನು ಕೊನೆಗೆ ನಾನೇ ಮಾಡಬೇಕಾಗಿ ಬಂದಿತು. ಲೇಖಕರು ಸಂಗ್ರಹಿಸಿದ ಎಲ್ಲ

ವಿಷಯಗಳನ್ನು ಓದಿ ಅಲ್ಲಿಯ ವಿಷಯದ ಹಿಂದು ಮುಂದನ್ನು ನಿರೂಪಣೆಯನ್ನು ಭಾಷಾ ಶುದ್ಧಿಯನ್ನು ಗಮನಿಸಿ ಮತ್ತೊಮ್ಮೆ ಬರೆಯಬೇಕಾಯಿತು. ಆದರೆ ನಾನಿಲ್ಲಿ ಮಾಡಿದ ಕೆಲಸ ಕೇವಲ ಲಿಪಿಕಾರನದು."[೧೪] ಕಾಡಸಿದ್ಧೇಶ್ವರರ ಚರಿತ್ರೆ ನಿಗೂಢವಾಗಿದ್ದರು ಕೆಲವು ಗ್ರಂಥಗಳ ಉಲ್ಲೇಖದಿಂದ ಅಖ್ಯಾಯಿಕೆಗಳನ್ನು ಸಂಗ್ರಹಿಸಿ ಗ್ರಂಥ ಸಿದ್ಧಪಡಿಸಿದ ಬಗ್ಗೆ ಗ್ರಂಥಪರಿಷ್ಕರಣ ಮಾಡಿದ ಡಿ.ಡಿ. ಹಾದಿಮನಿಯವರು ಅಭಿಪ್ರಾಯಪಡುತ್ತಾರೆ.

ಶಿವಮೂರ್ತಿಸ್ವಾಮಿ ಕಣಬರಗಿಮಠರು ಈ ಮಠದ ಅಂಗಳದಲ್ಲಿ ಮೊಟ್ಟ ಮೊದಲ ಉತ್ತರ ಕರ್ನಾಟಕದ ವೃತ್ತಿರಂಗಭೂಮಿಯ ತಾಲೀಮು ಮಾಡಿದ್ದು ಇಂದು ಇತಿಹಾಸ. ಅನೇಕ ವೃತ್ತಿರಂಗಭೂಮಿ ನಾಟಕಗಳ ಹಸ್ತಪ್ರತಿಗಳು ಶ್ರೀಮಠದಲ್ಲಿದ್ದವು. ಆದರೆ ಕಾಲಕಾಲಕ್ಕೆ ನಾಟಕ ಮಾಡಲು ಒಯ್ದವರು ಆ ಹಸ್ತಪ್ರತಿಗಳನ್ನು ಮರಳಿ ಕೊಡಲಿಲ್ಲವೆಂಬ ಸಂಗತಿಯನ್ನು ಸಂದರ್ಶನದಲ್ಲಿ ಶ್ರೀಗಳು ತಿಳಿಸಿದರು.

**೮. ಶ್ರೀಕ್ಷೇತ್ರ ತವಗದಮಠ :** ಕರ್ನಾಟಕ ರಾಜ್ಯದ ಬೆಳಗಾವಿ ಜಿಲ್ಲೆಯ ಗೋಕಾಕ ಪ್ರಸಿದ್ಧ ಪಂಚಪೀಠಗಳಿಗೆ ಹೆಸರುವಾಸಿಯಾಗಿದೆ. ಆ ಐದು ಮಠಗಳಲ್ಲಿ ತವಗದ ಬಾಳಯ್ಯಸ್ವಾಮಿಗಳ ಮಠವು ಒಂದಾಗಿದೆ. ಪ್ರಸ್ತುತ ಮಠವು ಪ್ರಾಪಂಚಿಕ ವರ್ಗದ ಮಠವಾಗಿದೆ. ಈ ಮಠಕ್ಕೆ ಪ್ರಾಚೀನವಾದ ಇತಿಹಾಸವಿಲ್ಲದ ಕಾರಣ, ಮತ್ತು ಪ್ರಾಪಂಚಿಕಮಠವಾದ ಕಾರಣ ಇಲ್ಲಿ ಪ್ರಾಚೀನ ಹಸ್ತಪ್ರತಿಗಳಾವವು ದೊರೆಯುವುದಿಲ್ಲ. ಆದರೆ ಮಠದ ಆಸ್ತಿಗಳಿಗೆ ಸಂಬಂಧಿಸಿದ ಅನೇಕ ಮಹತ್ವದ ಕಾಗದ ಪತ್ರಗಳು ನೋಡಲು ದೊರೆಯುತ್ತವೆ.

**೯. ಸಾವಳಗಿ ಶಿವಲಿಂಗೇಶ್ವರಮಠ :** ಗೋಕಾಕ ತಾಲೂಕಿನ ಸಾವಳಗಿ ಶಿವಲಿಂಗೇಶ್ವರಮಠವು ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನು ಸಾರುವ ಏಕೈಕ ಮಠವಾಗಿದೆ. ಸಾವಿರಾರು ವರ್ಷಗಳ ಇತಿಹಾಸವನ್ನು ಹೊಂದಿದೆ. ಪೂಜ್ಯನೀಯ ಮಠದಲ್ಲಿ ೧೬ ಹಸ್ತಪ್ರತಿಗಳು ಇದ್ದವು ಎಂದು ಶ್ರೀಗಳು ಹೇಳುತ್ತಾರೆ. ಆದರೆ ಇಂದು ಅವು ನೋಡಲು ದೊರೆಯುವುದಿಲ್ಲ. ಎಲ್ಲವೂ ಅಭ್ಯಾಸಪ್ರಿಯರ ಮನೆಯನ್ನು ಸೇರಿಕೊಂಡಿವೆ. ಆದರೆ ಸಾವಳಗಿ ಶಿವಲಿಂಗೇಶ್ವರ ಪುರಾಣದ ಹಸ್ತಪ್ರತಿ ಮಾತ್ರ ದೊರೆತ ಮಾಹಿತಿ ಸಿಗುತ್ತದೆ. "ಸಾವಳಗಿ ಶಿವಲಿಂಗೇಶ್ವರ ಪುರಾಣದ ಕಾಗದದ ಪ್ರತಿ ದೊರೆಯಿತು. ಸಂತೋಷ ಭರಿತರಾಗಿ ಇದರ ಪೂರ್ವವೃತ್ತಾಂತವನ್ನು ಬಲ್ಲ ಹಿರಿಯರಿಂದ ಕೇಳಲಾಗಿ ಮಹಾ ಶಿವಾನುಭವಿಗಳೂ ಶ್ರೀ ಸಾವಳಗಿ ಶಿವಲಿಂಗೇಶ್ವರನ ಒಕ್ಕಲೂ ಶರಣರೂ ಆದ ಬಾಗಲಕೋಟೆ ಕಿಣಗಿ ಬಸವಲಿಂಗಪ್ಪನವರ ಕ್ರಿಯಾಮೂರ್ತಿಗಳಾದ ಚಿಕ್ಕೋಡಿಯ ಶಿವಮೂರ್ತಿ ಸಾವಳಿಗಯ್ಯ ಸಾವಳಗಿಮಠ ಅವರು ಕಲಬುರ್ಗಿ ಜಿಲ್ಲಾ ಹಿರಿಯ ಸಾವಳಗಿ ಹಿಂದಿನ ಶಿವಲಿಂಗ ಸ್ವಾಮಿಗಳ ಅಪ್ಪಣೆವಿಡಿದು ಹೋಗಿ ಅಲ್ಲಿದ್ದ ಒಂದೇ ಒಂದು ಪ್ರತಿಯಿಂದ ನಕಲು ಮಾಡಿಕೊಂಡು ಉದ್ಧರಿಸಿಕೊಂಡು ಬಂದು ಒಪ್ಪಿಸಿದ್ದು ಎಂದು ತಿಳಿದು ಬಂದಿತು."[೧೫]ಈ ಕೃತಿಯು ಸಿದ್ಧಗೊಂಡ ಮೇಲೆ ಶ್ರೀಮಠದಲ್ಲಿ ಶಿವಲಿಂಗೇಶ್ವರ ಮಹಿಮೆ ಎಲ್ಲ ಜನರಿಗೆ ತಿಳಿಯುವಂತಾಯಿತು. ಇಷ್ಟೊಂದು

ಉಜ್ವಲ ಇತಿಹಾಸ ಮಠಕ್ಕಿರುವುದು ಕಂಡು ಬಂದಿತು. ಈ ಮಠದ ಅಂಗಳದಲ್ಲಿ ಬೆಳೆದ ಚಂದ್ರಶೇಖರ ಕಂಬಾರ ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳಾದರು. ಭಾರತದ ಅತ್ಯುನ್ನತ ಪ್ರಶಸ್ತಿ 'ಜ್ಞಾನಪೀಠ ಪ್ರಶಸ್ತಿ'ಗೆ ಭಾಜನರಾದರು. ಇಷ್ಟು ಉನ್ನತ ಹುದ್ದೆಗೇರಲು ಸಾವಳಗಿಮಠವೇ ಕಾರಣವೆಂದು ಕಂಬಾರ ಅವರು ಅತ್ಯಂತ ಪ್ರಾಂಜಲ ಮನಸ್ಸಿನಿಂದ ಹೇಳಿಕೊಳ್ಳುತ್ತಾರೆ.

**೧೦. ಅವರಾದಿಯ ಶ್ರೀ ಫಲಹಾರೇಶ್ವರಮಠ** : ರಾಮದುರ್ಗ ತಾಲೂಕಿನ ಅವರಾದಿಯ ಶ್ರೀ ಫಲಹಾರೇಶ್ವರ ಮಠದಲ್ಲಿ ಅಪಾರವಾದ ಹಸ್ತಪ್ರತಿಗಳಿದ್ದ ಮಾಹಿತಿ ದೊರೆಯುತ್ತದೆ.

೧. ಬಸವ ಪುರಾಣ

೨. ಅಷ್ಟಾವರಣ

೩. ಚನ್ನಬಸವ ಪುರಾಣ

೪. ಅರವತ್ತೂಮ್ರು ಪುರಾತನರು

೫. ಮಹಾಕೂಟ ಮಹಾತ್ಮೆ

೬. ವೀರಶೈವ ಸಮಾಧಿಯೋಗ

**೧೧. ವಿರಕ್ತಮಠ ಕಡಕೋಳ** : ರಾಮದುರ್ಗ ತಾಲೂಕಿನ ಕಡಕೋಳದ ವಿರಕ್ತಮಠದಲ್ಲಿ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹವಿದೆ. ಅವುಗಳಲ್ಲಿ ಮುಖ್ಯವಾಗಿ–

೧. ವೀರಶೈವ ಧರ್ಮದ ತತ್ವಗಳು

೨. ಚನ್ನಬಸವಣ್ಣನವರ ಚರಿತ್ರೆ

೩. ವೀರಶೈವ ಸಿದ್ಧಾಂತ ಸೃಷ್ಟಿ ರಚನೆ

೪. ಅಶ್ವಮೇಧಯಾಗದ ಕಥೆ

೫. ವೀರಶೈವ ಲಿಂಗಪದದ ಟೀಕೆ

**೧೨. ಸವದತ್ತಿಯ ಕಲ್ಮಠ** : ಸವದತ್ತಿಯಲ್ಲಿ ಮೂರು ಮಠಗಳಿವೆ. ಅವುಗಳಲ್ಲಿ ಸ್ಥಳೀಯವಾಗಿ ಕಲ್ಲುಮಠವೆಂದು ಪ್ರಸಿದ್ಧಿಯನ್ನುಪಡೆದ ಕಲ್ಮಠ ವಿರಕ್ತ ಪರಂಪರೆಯ ಮಠವಾಗಿದೆ. ಶ್ರೀಮಠದಲ್ಲಿ ಸುಸಜ್ಜಿತವಾದ ಗ್ರಂಥಭಂಡಾರವಿದ್ದು ಅಭಿನವ ಕುಮಾರ ಸ್ವಾಮಿಗಳು ಈ ಮಠದ ಪೀಠಾಧಿಪತಿಗಳಾಗಿದ್ದರು. ಈಗ ನೂತನ ಶ್ರೀಗಳು ಬಂದಿದ್ದಾರೆ. ಈ ಮಠದಲ್ಲಿ ಕೆಲವು ಬೆರಳಣಿಕೆಯ ಹಸ್ತಪ್ರತಿಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ–

೧. ವೀರಶೈವಾಮೃತ ಮಹಾಪುರಾಣ

೨. ಪುರಾಣ ಚೂಡಾಮಣಿ

೧೩. **ಮುನವಳ್ಳಿ ಸೋಮಶೇಖರಮಠ** : ಸವದತ್ತಿ ತಾಲೂಕಿನ ಮುನವಳ್ಳಿ ಗ್ರಾಮದಲ್ಲಿ ಎರಡು ಪ್ರಮುಖ ಮಠಗಳಿದ್ದು, ಸೋಮಶೇಖರಮಠದಲ್ಲಿ ತಾಳೆಗರಿ ಕೋರಿಕಾಗದದ ೬೦ ಕಟ್ಟುಗಳು ಇರುವುದನ್ನು ನಾನು ಗಮನಿಸಿರುವೆ. ಈ ಹಸ್ತಪ್ರತಿಗಳನ್ನು ಈಗಿನ ಶ್ರೀಗಳು ತುಂಬಾ ಜತನವಾಗಿ ಇಟ್ಟುಕೊಂಡಿದ್ದಾರೆ.

೧. ಮರಾಠಿ

೨. ಸಂಸ್ಕೃತ

೩. ಕನ್ನಡ

೪. ತಮಿಳು ಮೊದಲಾದ ಭಾಷೆಯ ಕೃತಿಗಳು ಇಲ್ಲಿವೆ. ಅಲ್ಲದೆ ವಚನ-ಸ್ವರವಚನದಂತಹ ಹಸ್ತಪ್ರತಿ ಕಟ್ಟುಗಳು ಇಲ್ಲಿರುವವು.

೧೪. **ದುರದುಂಡೀಶ್ವರಮಠ ಮುರಗೋಡ** : ಮುರುಗೋಡದ ದುರದುಂಡೀಶ್ವರಮಠಕ್ಕೆ ಪ್ರಾಚೀನವಾದ ಇತಿಹಾಸವಿಲ್ಲ. ಐವತ್ತು ವರ್ಷಗಳ ಹಿಂದೆ ನಿರ್ಮಾಣಗೊಂಡ ಮಠ ಇದಾಗಿದೆ. ಅರಭಾವಿಮಠದ ಪೂಜ್ಯ ಮಹಾಂತ ಶಿವಯೋಗಿಗಳು ಮುರುಗೋಡ ಗ್ರಾಮದಲ್ಲಿ ನೆಲೆನಿಂತ ನಂತರ ಹುಟ್ಟಿಕೊಂಡ ಮಠವಿದು. ಇಲ್ಲಿ ಕನ್ನಡ ಸಂಸ್ಕೃತ ಮಿಶ್ರಿತ ಕೆಲವು ಹಸ್ತಪ್ರತಿಗಳಿರುವುದನ್ನು ನಾನು ಗಮನಿಸಿದ್ದೇನೆ. ಪೂಜ್ಯ ಮಹಾಂತ ಶಿವಯೋಗಿಗಳ ಜನ್ಮಶತಮಾನೋತ್ಸವ ನಿಮಿತ್ಯ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಶ್ರೀ ಬಸವೇಶ್ವರಪೀಠ ಅಸ್ತಿತ್ವಕ್ಕೆ ಬಂದ ನಂತರ, ಇಲ್ಲಿಯ ಅನೇಕ ಹಸ್ತಪ್ರತಿಗಳನ್ನು ಅಲ್ಲಿಗೆ ಕಳುಹಿಸಲಾಯಿತು.

ಬೆಳಗಾವಿ ಜಿಲ್ಲೆಯಲ್ಲಿ ಜೈನಬಸದಿಗಳ ಕಾರ್ಯ ಅಗಾಧವಾದದ್ದು. ಈ ಭಾಗದಲ್ಲಿ ಜೈನಮಠಗಳು ಅನೇಕ ಸಾಹಿತ್ಯಿಕ ಸಾಂಸ್ಕೃತಿಕ ಕೊಡುಗೆಯನ್ನು ನೀಡಿವೆ. ಗಡಿಜಿಲ್ಲೆಯ ಅಂಚಿನಲ್ಲಿರುವ ಒಂದು ಪ್ರಮುಖ ಜೈನಮಠ ಚಿಕ್ಕೋಡಿ ತಾಲೂಕಿನ ಕೋಥಳಿಯ ಶಾಂತಗಿರಿಮಠ.

೧೫. **ಕೋಥಳಿಯ ಶಾಂತಗಿರಿಮಠ** : ಇದು ಚಿಕ್ಕೋಡಿ ತಾಲೂಕಿನ ಜಿಲ್ಲೆಯ ಗಡಿಭಾಗದಲ್ಲಿರುವ ಮಠ. ಜಿಲ್ಲೆಯ ಎರಡನೆಯ ಅತಿದೊಡ್ಡ ಹಸ್ತಪ್ರತಿಭಂಡಾರವನ್ನು ಹೊಂದಿದೆ. ಸುಮಾರು ೭ ಕಪಾಟುಗಳಲ್ಲಿ ಹಸ್ತಪ್ರತಿಗಳ ಸಂಗ್ರಹವಾಗಿರುವುದನ್ನು ಕಾಣುತ್ತೇವೆ. "ಚಿಕ್ಕೋಡಿ ತಾಲೂಕಿನ ಕೋಥಳಿಯ ಶಾಂತಗಿರಿ ಜಿನಕ್ಷೇತ್ರದಲ್ಲಿ ಜಿಲ್ಲೆಯ ಎರಡನೆಯ ಅತಿದೊಡ್ಡ ಸುಸಜ್ಜಿತ ಹಸ್ತಪ್ರತಿ ಭಂಡಾರವಿದೆ. ಇದರಲ್ಲಿ ಕನ್ನಡ, ಮರಾಠಿ, ಸಂಸ್ಕೃತ, ಪ್ರಾಕೃತ, ಹಿಂದಿ ಭಾಷೆಗಳ ಜೈನಧರ್ಮಕ್ಕೆ ಸಂಬಂಧಿಸಿದ ೧೬೫ ಕೃತಿಗಳಿವೆ. ಇವುಗಳಲ್ಲಿ ೭೦ ತಾಳೆಗರಿ ಪ್ರತಿಗಳಿದ್ದು ೯೫ ಕಾಗದದ ಪ್ರಾಚೀನ ಹಸ್ತಪ್ರತಿಗಳಿವೆ. ಇಲ್ಲಿರುವ ಕೆಲವು ಹಸ್ತಪ್ರತಿಗಳನ್ನು ಕೊಲ್ಲಾಪುರದ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಮಹಾಸ್ವಾಮಿಗಳ ಮಠಕ್ಕೆ ಕೊಡಮಾಡಿದೆಯೆಂದು ಚಿಕ್ಕೋಡಿಯ ಹಸ್ತಪ್ರತಿ ಸರ್ವೇಕ್ಷಕರಾದ ಪಿ.ಜಿ. ಕೆಂಪಣ್ಣವರ ತಿಳಿಸಿದ್ದಾರೆ."[೧೬] ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾಗಿದ್ದ

ಬಿ. ಆರ್. ಹಿರೇಮಠ ಅವರು ಕೊಲ್ಲಾಪುರದಲ್ಲಿರುವ ಶ್ರೀ ಲಕ್ಷ್ಮೀಸೇನ ಭಟ್ಟಾರಕ ಸ್ವಾಮಿಗಳ ಮಠದಲ್ಲಿರುವ ಕನ್ನಡ ಹಸ್ತಪ್ರತಿಗಳ ಸೂಚಿಯನ್ನು ರಚಿಸಿರುವುದು ಅತ್ಯಂತ ಮಹತ್ವದ ಸಂಗತಿಯಾಗಿದೆ.

ಹೀಗೆ ಬೆಳಗಾವಿ ಜಿಲ್ಲೆಯ ಲಿಂಗಾಯತಮಠಗಳು ಸಾಹಿತ್ಯ ಸಂಸ್ಕೃತಿಯ ಭಾಗವಾಗಿ ತಮ್ಮದೆಯಾದ ಸೈದ್ಧಾಂತಿಕ ನೆಲೆಯ ಮೇಲೆ ಅಪೂರ್ವ ಸೇವೆ ಮಾಡುತ್ತ ಬಂದಿರುವದು ಗಮನಾರ್ಹ. ಬೆಳಗಾವಿ ಪರಿಸರ ಜೈನಸಿದ್ಧಾಂತ ಪ್ರತಿಪಾದನೆಯ ಮೂಲನೆಲೆ. ಈ ಭಾಗದ ಜೈನ ಸಾಹಿತ್ಯ ಸಂಸ್ಕೃತಿಗೆ ಅಪಾರ ಕೊಡುಗೆಯಿದೆ. ಗಡಿಭಾಗದಲ್ಲಿರುವ ನಿಪ್ಪಾಣಿ, ಕೊಲ್ಲಾಪುರ, ಸಾಂಗಲಿ, ಜತ್ತ, ಅಕ್ಕಲಕೋಟ ಮೊದಲಾದ ಊರುಗಳು ಜೈನ ಹಸ್ತಪ್ರತಿಗಳ ದೊಡ್ಡ ನಿಕ್ಷೇಪವೇ ಕಂಡುಬರುತ್ತದೆ.

**ಧಾರ್ಮಿಕ ಸಂಸ್ಥೆ ಒಡೆತನದ ಹಸ್ತಪ್ರತಿಗಳ ಅನನ್ಯತೆ :**

೧. ಲಿಂಗಾಯತ ಮಠಗಳಲ್ಲಿರುವ ಹಸ್ತಪ್ರತಿಗಳನ್ನು ವರ್ಷಕ್ಕೊಮ್ಮೆ ಜಾತ್ರೆ-ಉತ್ಸವಗಳಲ್ಲಿ ಹೊರತೆಗೆದು ಪಲ್ಲಕ್ಕಿಯಲ್ಲಿಟ್ಟು ಪೂಜಿಸುವುದು ಮತ್ತು ದಿನನಿತ್ಯ ಚಾರಿತ್ರಿಕ ಗ್ರಂಥವನ್ನು ಪಠಣ ಮಾಡುವುದು.

೨. ಕರ್ನಾಟಕ ಮಹಾರಾಷ್ಟ್ರ ಗಡಿಭಾಗವಾದ್ದರಿಂದ ಕನ್ನಡ-ಮರಾಠಿ ಮೋಡಿ, ಸಂಸ್ಕೃತ ಹಸ್ತಪ್ರತಿಗಳು ಹೆಚ್ಚಾಗಿ ದೊರೆಯುತ್ತವೆ.

೩. ಗದ್ಯಪದ್ಯ, ಚರಿತ್ರೆ, ಆಧ್ಯಾತ್ಮ, ತಂತ್ರ, ಸಾಹಿತ್ಯಕ್ಕೆ ಸಂಬಂಧಿಸಿದ ಹಸ್ತಪ್ರತಿಗಳ ವಿಷಯ ವೈವಿಧ್ಯತೆಯಿಂದ ಕೂಡಿದವುಗಳಾಗಿವೆ.

೪. ಲಿಂಗಾಯತ ತತ್ವ ಸಿದ್ಧಾಂತಕ್ಕೆ ಸಂಬಂಧಿಸಿದ ಹಸ್ತಪ್ರತಿಗಳ ಸಂಖ್ಯೆ ಅಪಾರ. ಅತೀ ಹೆಚ್ಚು ಷಟ್‌ಸ್ಥಲದ ವಚನ ತತ್ವವನ್ನು ನಿರೂಪಿಸುತ್ತವೆ.

೫. ವೈದ್ಯಶಾಸ್ತ್ರ ಟೀಕಿನ ವಚನ ಮೊದಲಾದ ಹೊಸ ಹಸ್ತಪ್ರತಿಗಳು ದೊರೆಯುತ್ತವೆ. ಅಂದರೆ ಟೀಕಿನ ಮನೆತನ ಅಥವಾ ಒಂದು ಪರಂಪರೆ ದೊರೆಯುತ್ತದೆ.

೬. ಜಿಲ್ಲೆಯಲ್ಲಿನ ಕೆಲವು ಮಠಗಳು ಹಸ್ತಪ್ರತಿ ಭಂಡಾರಗಳನ್ನು ಅತ್ಯಾಧುನಿಕವಾಗಿ ಸಂರಕ್ಷಣೆ ಮಾಡಿಕೊಂಡಿರುವುದು ವೈಶಿಷ್ಟ್ಯಪೂರ್ಣವಾಗಿದೆ.

೭. ಇಲ್ಲಿನ ಹೆಚ್ಚಿನ ಹಸ್ತಪ್ರತಿಗಳಲ್ಲಿ ವಂಶಾವಳಿ ಹಾಗು ಪ್ರತಿ ಮಾಡಿದವರ ಹೆಸರು ತಿಳಿದುಕೊಳ್ಳಲು ಸಹಾಯಕಾರಿಯಾಗಿವೆ.

೮. ಇಲ್ಲಿನ ಹಸ್ತಪ್ರತಿಗಳನ್ನು ಪ್ರತಿಮಾಡಿಸಿದವರು ಮಠಾಧಿಪತಿಗಳು ವಾರಸುದಾರರು ಹೀಗಾಗಿ ಈ ಪ್ರದೇಶದಲ್ಲಿ ಸಾಕಷ್ಟು ಮಠಗಳು ಅಸ್ತಿತ್ವದಲ್ಲಿದ್ದ ಬಗ್ಗೆ ಕಂಡುಬರುತ್ತವೆ.

**೨.೨. ವ್ಯಕ್ತಿ ಒಡೆತನದ ನೆಲೆ**

ಮಠ ಮಾನ್ಯಗಳಂಥ ಧಾರ್ಮಿಕ ನೆಲೆಯಲ್ಲಿ ಬೆಳಗಾವಿ ಜಿಲ್ಲೆಯ ಹಸ್ತಪ್ರತಿ ಸಂಪತ್ತು ಗಮನಿಸಿದಂತೆ ಈ ಭವ್ಯ ಸಂಪತ್ತು ವ್ಯಕ್ತಿ ಒಡೆತನದಲ್ಲಿಯು ಸಂಗ್ರಹಗೊಂಡಿರುವುದನ್ನು ಅವಲೋಕನ

ಮಾಡಬೇಕಾಗುತ್ತದೆ. ಲಿಪಿಕಾರರಾಗಿ, ಲೇಖಕರಾಗಿ ಹಾಗೂ ಸಂರಕ್ಷರಾಗಿ ಅನೇಕ ಜನ ವ್ಯಕ್ತಿಗಳು ಹಸ್ತಪ್ರತಿಗಳನ್ನು ಸಂಗ್ರಹಿಸಿಟ್ಟುಕೊಂಡು ಜೋಪಾನ ಮಾಡುತ್ತಿರುವ ಅನೇಕ ನಿದರ್ಶನಗಳು ದೊರೆಯುತ್ತವೆ. ಬಹಳಷ್ಟು ವ್ಯಕ್ತಿಗಳ ಮನೆಯಲ್ಲಿ ಸಿಕ್ಕಿರುವ ಹಸ್ತಪ್ರತಿಗಳು ಸ್ವಮತ, ಹಿತಾಸಕ್ತಿ ಮತ್ತು ಸ್ವವಿಷಯ ಆಸಕ್ತಿಯ ಸಂಗ್ರಹ ಪೋಷಣೆಗಳಾಗಿ ಕಂಡುಬರುತ್ತದೆ. ತಮ್ಮತಮ್ಮ ಸಮುದಾಯಗಳನುಸಾರವಾಗಿ ಶ್ರವಣ ಹಾಗೂ ಪಠಣ ಮಾಡುವ ಪರಂಪರೆಯನ್ನು ರೂಢಿಸಿಕೊಂಡು ಬಂದಿದ್ದಾರೆ. ಇಂಥ ಆಶೋತ್ತರಗಳ ಹಿನ್ನೆಲೆಯಲ್ಲಿ ಹಸ್ತಪ್ರತಿಗಳನ್ನು ನಾಶಗೊಳಿಸಬಾರದೆಂಬುದನ್ನು ಅರಿತುಕೊಂಡು ಪ್ರತೀಕರಣ ದಾಖಲೀಕರಣ, ಪ್ರಕ್ರಿಯೆಗಳು ನಿರಂತರವಾಗಿ ನಡೆದುಕೊಂಡು ಬಂದಿವೆ. ಆದುದರಿಂದಲೇ ಇವುಗಳು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿವೆ. ಹೀಗಾಗಿ ಎಷ್ಟೋ ಜನರು ಸಂರಕ್ಷಣೆ ಮಾಡುವ ಕಾರ್ಯ ನಿರ್ವಹಿಸುವುದಕ್ಕೆ ಆಗದಿರುವ ಕಾರಣಕ್ಕೆ ಮಠ–ಮಾನ್ಯಗಳಿಗೆ ಕೊಟ್ಟು ತಮ್ಮ ಜವಾಬ್ದಾರಿ ಕಡಿಮೆ ಮಾಡಿಕೊಂಡಿದ್ದಾರೆ. ಇವುಗಳನ್ನು ನಾವು ಹಲವಾರು ಸೂಚಿಸಂಪುಟ ಮತ್ತು ದಾಖಲೆಗಳ ಮೂಲಕ ಗಮನಿಸಿದರೆ ತಿಳಿಯುತ್ತದೆ.

ಇಂಥ ಸಂದರ್ಭವನ್ನು ಗಮನಿಸಿದರೆ ಲಿಪಿಕಾರನ ಸ್ಥಳೀಯ ಪ್ರಾದೇಶಿಕ ಅನನ್ಯತೆ ಹಾಗೂ ಮನೆತನದ ಪರಂಪರೆ ಅವನ ಕೀರ್ತಿ ಲಿಪಿಕಾರನಿಗಿರಬಹುದಾದ ಪ್ರಮುಖವಾದ ಕುತೂಹಲಗಳನ್ನು ಹಸ್ತಪ್ರತಿ ಪುಷ್ಪಿಕೆಗಳಿಂದ ಹಲವು ಸಂಗತಿಗಳನ್ನು ತಿಳಿಯಬಹುದು. ಎಷ್ಟೋ ಹಸ್ತಪ್ರತಿಗಳಿಂದ ಲಿಪಿಕಾರ ತನ್ನ ಬಡತನ ಬವಣೆಯನ್ನು ಕಳೆದುಕೊಂಡಿದ್ದ ನಿದರ್ಶನವು ಕೂಡ ದೊರೆಯುತ್ತದೆ. "ಬರಗಾಲ ಪರಿಸ್ಥಿತಿ ಊಟಕ್ಕೆ ತೊಂದರೆಯಾದಾಗ ೨ ರೂಪಾಯಿಗೆ ಹಸ್ತಪ್ರತಿಯನ್ನು ಮಾರಿ ಜೀವಿಸಿದ ಬಡತನದ ಬವಣೆ ಒಬ್ಬರದಾದರೆ, ಅದರ ಪರಿಹಾರ ನೆಪದಲ್ಲಿ ಹಸ್ತಪ್ರತಿಯನ್ನು ಮಾರಿ ಸಂರಕ್ಷಿಸಿಟ್ಟುಕೊಂಡು ಪುಣ್ಯದ ಕಾರ್ಯ ಇನ್ನೊಬರದಾಗಿದೆ. ಹೀಗೆ ಕ್ರಯಕ್ಕೆ ಮಾರಿದ ನೂರಾರು ಉದಾಹರಣೆಗಳು ಹಸ್ತಪ್ರತಿ ಪುಷ್ಪಿಕೆಗಳಿಂದ ನಮಗೆ ತಿಳಿದುಬರುತ್ತದೆ."[೧೭] ಅಷ್ಟೇ ಏಕೆ ಇತ್ತೀಚಿನ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನಗೆ ಒಂದು ವಿಚಾರ ತಿಳಿಯಿತು. ದ್ಯಾಂಪುರ ಚೆನ್ನಕವಿಗಳು ತಮ್ಮ ಸ್ವಹಸ್ತಾಕ್ಷರದಿಂದ ಬರೆದ 'ಹಾನಗಲ್ಲ ಕುಮಾರೇಶ್ವರ ಪುರಾಣ'ದ ಹಸ್ತಪ್ರತಿ ಧರ್ಮಸ್ಥಳದಲ್ಲಿದ್ದ ಜಿ. ಎಂ. ಉಮಾಪತಿ ಶಾಸ್ತ್ರಿಗಳ ಹತ್ತಿರ ಇತ್ತು. ಅವರಿಗೆ ಆರ್ಥಿಕ ಅನಾನೂಕಲತೆ ಕಾಡುತ್ತಿತ್ತು. ಈ ಹಸ್ತಪ್ರತಿಯನ್ನು ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಪೂಜ್ಯ ಸಿದ್ಧರಾಮ ಮಹಾಸ್ವಾಮಿಗಳವರಿಗೆ ಅವರು ಹತ್ತು ಸಾವಿರ ರೂಪಾಯಿಗಳಿಗೆ ಮಾರಿದರು. ನಾಗನೂರು ಶ್ರೀಗಳು ಕುವೆಂಪು ಅವರ 'ರಾಮಾಯಣ ದರ್ಶನಂ' ಹಸ್ತಪ್ರತಿಯನ್ನು ಕರ್ನಾಟಕ ಸರಕಾರ ಇದ್ದಕ್ಕಿದ್ದಂತೆ ಪ್ರಕಟಿಸಿದಂತೆ, ಈ ಕೃತಿಯನ್ನು ಮೂಲದಲ್ಲಿ ಇದ್ದಂತೆ ಸ್ಕ್ಯಾನ್ ಮಾಡಿಸಿ ಪ್ರಕಟಿಸಬೇಕೆಂಬ ಆಲೋಚನೆ ಹೊಂದಿದ್ದಾರೆ. ಇಂಥ ಒಂದು ಅಪರೂಪದ ಹಸ್ತಪ್ರತಿಯನ್ನು ಹತ್ತು ಸಾವಿರ ರೂ. ಕೊಟ್ಟು ಸಂರಕ್ಷಿಸಿದ ಕೀರ್ತಿಗೆ ಶ್ರೀಗಳು ಭಾಜನರಾಗಿದ್ದಾರೆ. ಪ್ರತಿಕಾರ ಮತ್ತು ಪ್ರತಿಮಾಡಿಸಿದವರ ಉಲ್ಲೇಖಗಳಲ್ಲದೆ ಸಂಗ್ರಹಕಾರರಾಗಿದ್ದುಕೊಂಡು ಹಸ್ತಪ್ರತಿ ಸಂರಕ್ಷಣೆ

ಮಾಡಿದ ಅನೇಕ ಜನರು ಪ್ರಸ್ತುತ ಜಿಲ್ಲೆಯಲ್ಲಿ ಕಂಡುಬರುತ್ತಾರೆ. ನಿಪ್ಪಾಣಿಯ ನಣದಿಮಠ ಎಂಬುವರ ಮನೆಯಲ್ಲಿ ಒಂದು ಹಸ್ತಪ್ರತಿ ಇತ್ತು. ಅದನ್ನು ಎಂ. ಎಂ. ಕಲಬುರ್ಗಿ ಅವರ ಗಮನಕ್ಕೆ ತಂದರು. ಅದು ಒಂದು ಅಪರೂಪದ ವಚನ ಸಂಕಲನವಾಗಿತ್ತು. 'ಪರಮಾನಂದಸುಧೆ' ಎಂಬ ಹೆಸರಿನಲ್ಲಿ ಈ ಕೃತಿಯನ್ನು ಗದುಗಿನ ತೋಂಟದಾರ್ಯಮಠದ ಲಿಂಗಾಯತ ಅಧ್ಯಯನ ಸಂಸ್ಥೆಯಿಂದ ೨೦೧೫ರಲ್ಲಿ ಪ್ರಕಟಿಸಿದ್ದಾರೆ. ಬೈಲಹೊಂಗಲ ಮಠದ ಪುರಾಣಿಕ ಸಿದ್ಧಯ್ಯ, ಖಾನಾಪೂರದ ಚನ್ನಬಸಪ್ಪ ಇದೇ ತಾಲೂಕಿನ ಇಟಗಿ ಗ್ರಾಮದ ಗುರುಸಿದ್ಧದೇವರು, ರಾಚಪ್ಪನವರ ಪುತ್ರ ಚನಮಲ್ಲಪ್ಪ ಮುರುಗೋಡು ಗ್ರಾಮದ ವಾಲಿ ಬಸಪ್ಪ, ಸತ್ತಿಗೇರಿಮಠದ ಶಿಷ್ಯ ರುದ್ರಪ್ಪ ಹೀಗೆ ಮೊದಲಾದ ವ್ಯಕ್ತಿಗಳ ಒಡೆತನದಲ್ಲಿ ಹಸ್ತಪ್ರತಿಗಳ ಸಂಗ್ರಹ ಇದ್ದುದ್ದು ಕಂಡುಬಂದರೆ ಈ ದಿಸೆಯಲ್ಲಿ ಇನ್ನು ಅನೇಕ ವ್ಯಕ್ತಿಗತ ಒಡೆತನದಲ್ಲಿ ಸಂರಕ್ಷಣೆಗೊಂಡಿರುವ ಹಸ್ತಪ್ರತಿಗಳ ನಿದರ್ಶನವನ್ನು ಬೆಳಗಾವಿ ಜಿಲ್ಲೆಯ ಪರಿಸರದಲ್ಲಿ ಗಮನಿಸಬಹುದು.

**ಅರಟಾಳ ರುದ್ರಗೌಡರು :**

ಕರ್ನಾಟಕ ಶೈಕ್ಷಣಿಕ ಚರಿತ್ರೆಯಲ್ಲಿ ಒಂದು ಅಚ್ಚಳಿಯದ ಹೆಸರು ಅರಟಾಳ ರುದ್ರಗೌಡರದು. ಉತ್ತರ ಕರ್ನಾಟಕದಲ್ಲಿ ಶೈಕ್ಷಣಿಕ ಕ್ರಾಂತಿಗೆ ನಾಂದಿ ಹಾಡಿದ ಪುಣ್ಯಪುರುಷ ಅವರು. ೧೯೧೬ರಲ್ಲಿ ಬೆಳಗಾವಿಯಲ್ಲಿ ಕೆ.ಎಲ್.ಇ. ಸಂಸ್ಥೆಯನ್ನು ಸ್ಥಾಪಿಸಲು ಮಾರ್ಗದರ್ಶನ ಮಾಡಿದ ಅರಟಾಳ ರುದ್ರಗೌಡರು ಧಾರವಾಡದಲ್ಲಿ ೧೯೧೭ರಲ್ಲಿ ಕರ್ನಾಟಕ ಕಾಲೇಜು ಸ್ಥಾಪನೆ ಮಾಡಿದರು. ಅಂತೆಯೇ ಕಾಲೇಜಿನ ಆವರಣದಲ್ಲಿ ಅವರ ಮೂರ್ತಿಪ್ರತಿಷ್ಠಾಪನೆ ಮಾಡಲಾಗಿದೆ. ಅಂದಿನ ಬ್ರಿಟಿಷ್ ಸರ್ಕಾರದಲ್ಲಿ ಡಿಸ್ಟ್ರಿಕ್ಟ್ ಕಲೆಕ್ಟರ್ ಆಗಿದ್ದ ಅರಟಾಳರು ಸಾಹಿತ್ಯ ಸಂಸ್ಕೃತಿ ಪ್ರೇಮಿಗಳಾಗಿದ್ದರು. ಬೆಳಗಾವಿಯ ಕ್ಯಾಂಪ್ ಪ್ರದೇಶದ ಅವರ ಭವ್ಯ ಬಂಗಲೆಯಲ್ಲಿ ಒಂದು ಬೃಹತ್ ಗ್ರಂಥಾಲಯವಿತ್ತು. ಅಲ್ಲಿ ಸಾವಿರಾರು ಗ್ರಂಥಗಳು, ನೂರಾರು ಹಸ್ತಪ್ರತಿಗಳು ಇದ್ದವು. ಮರಾಠಿ ಮತ್ತು ಸಂಸ್ಕೃತ ಭಾಷೆಯ ಪ್ರಾಚೀನ ಪುರಾಣ ಕಾವ್ಯಗಳೆಲ್ಲವೂ ಅವರ ಸಂಗ್ರಹದಲ್ಲಿದ್ದವು.

೧. ೧೮ ಶಿವಪುರಾಣಗಳು

೨. ವಿಷ್ಣು ಪುರಾಣಗಳು

೩. ವೇದಸಂಪುಟಗಳು

ಈ ಮೊದಲಾದ ನೂರಕ್ಕೂ ಹೆಚ್ಚು ಅಮೂಲ್ಯ ಹಸ್ತಪ್ರತಿಗಳು ಅವರ ಸಂಗ್ರಹದಲ್ಲಿದ್ದವು. ಅವು ಇಂದಿಗೂ ಅತ್ಯಂತ ಸುವ್ಯವಸ್ಥಿತ ಸ್ಥಿತಿಯಲ್ಲಿವೆ. ಇವುಗಳನ್ನು ನಾಗನೂರು ಮಠದ ಲಿಂಗಾಯತ ಸಂಶೋಧನ ಕೇಂದ್ರಗ್ರಂಥಾಲಯದಲ್ಲಿ ಅವಲೋಕಿಸಬಹುದು. ಅಲ್ಲದೆ ಅರಟಾಳ ರುದ್ರಗೌಡರು ಬರೆದ ಹತ್ತು ಅಮೂಲ್ಯ ಇಂಗ್ಲಿಷ್ ಲೇಖನಗಳು ಈ ಗ್ರಂಥಾಲಯದಲ್ಲಿವೆ. ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಬೇಕಾದ ಅನಿವಾರ್ಯತೆ ಇದೆ.

ಅರಟಾಳ ರುದ್ರಗೌಡರ ಒಂದು ಬೃಹತ್ ಚರಿತ್ರೆಯನ್ನು ಕಿತ್ತೂರಿನ ಕಂಬಿ ಬಸವಾರ್ಯ ಮಾಸ್ತರರು ಬರೆದಿರುವರು. ಈ ಚರಿತ್ರೆಯ ಮೂಲ ಹಸ್ತಪ್ರತಿ ಈ ಕೇಂದ್ರದಲ್ಲಿದೆ. ಎಂ. ಎಂ. ಕಲಬುರ್ಗಿ ಅವರು ಈ ಚರಿತ್ರೆಯನ್ನು ಪರಿಷ್ಕರಿಸಿ ಕೆ.ಎಲ್.ಇ. ಸಂಸ್ಥೆಯಿಂದ ಪ್ರಕಟಿಸಿದ್ದಾರೆ. ಆದರೆ ಮೂಲದಲ್ಲಿದ್ದ ಅನೇಕ ವಿಷಯಗಳು ಈ ಕೃತಿಯಲ್ಲಿ ಇನ್ನೂ ಬಂದಿಲ್ಲ. ಇದರ ಸಮಗ್ರ ಕೃತಿ ಇನ್ನೂ ಪ್ರಕಟವಾಗಬೇಕಾಗಿದೆ.

ಇನ್ನೂ ಒಂದು ವಿಶೇಷವೆಂದರೆ ಅರಟಾಳ ರುದ್ರಗೌಡರ ಇಂಗ್ಲಿಷ್ ಆತ್ಮಚರಿತ್ರೆ ಹಸ್ತಪ್ರತಿಯೊಂದು ನನ್ನ ಅವಲೋಕನಕ್ಕೆ ಲಭ್ಯವಾಗಿದೆ. ಇದು ನನ್ನ ಸೌಭಾಗ್ಯವೆಂದು ನಾನು ಭಾವಿಸಿರುವೆ. ಕಂಬಿ ಬಸವಾರ್ಯರ ಕನ್ನಡ ಕೃತಿಗಿಂತಲೂ ಗಾತ್ರದಲ್ಲಿ ಕಿರಿದಾದರೂ ಈ ಕೃತಿ ಅನನ್ಯವಾಗಿದೆ. ಕರ್ನಾಟಕದ ಶೈಕ್ಷಣಿಕ–ಧಾರ್ಮಿಕ–ಸಾಮಾಜಿಕ ಚರಿತ್ರೆಯನ್ನು ಪುನರಾವಲೋಕನ ಮಾಡಲು ಈ ಕೃತಿ ಸಹಾಯಕವಾಗಿದೆ. ಈ ಕೃತಿಯನ್ನು ಪ್ರಕಟಿಸಬೇಕಾದ ಅಗತ್ಯತೆ ಬಹಳಷ್ಟಿದೆ ಎಂದು ನಾನು ಭಾವಿಸಿದ್ದೇನೆ. ಮತ್ತೊಂದು ವಿಶೇಷವೆಂದರೆ ಅರಟಾಳ ರುದ್ರಗೌಡರು ಜೀವಂತವಿದ್ದಾಗಲೇ ಅವರ ಮೇಲೊಂದು ಪುರಾಣ ಕಾವ್ಯ ಹುಟ್ಟಿಕೊಂಡಿದೆ. ಈ ಕೃತಿಯನ್ನು ಬರೆದವನು ರೇವಣಸಿದ್ಧಕವಿ. ಅರಟಾಳರ ಜೀವನ ಸಾಧನೆಯನ್ನು ಷಟ್ಪದಿಯಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಮಾಡಿದ್ದಾನೆ. ಈ ಕೃತಿಯ ವಿಶೇಷತೆ ಕುರಿತು ಇದೇ ಮಹಾಪ್ರಬಂಧದ ಹಸ್ತಪ್ರತಿಗಳ ಚಾರಿತ್ರಿಕ ಅನನ್ಯತೆ ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಅರಟಾಳ ರುದ್ರಗೌಡರಿಗೂ ನಾಗನೂರು ರುದ್ರಾಕ್ಷಿಮಠದ ಪೂಜ್ಯ ಶಿವಬಸವ ಮಹಾಸ್ವಾಮಿಗಳವರಿಗೂ ಅತ್ಯಂತ ಆತ್ಮೀಯ ಸಂಬಂಧವಿತ್ತು. ಈ ಕಾರಣಕ್ಕಾಗಿ ತಮ್ಮ ಜೀವನದ ಕೊನೆಯ ಘಟ್ಟದಲ್ಲಿ ಅರಟಾಳ ರುದ್ರಗೌಡರು ತಮ್ಮ ಅಮೂಲ್ಯ ಗ್ರಂಥ–ಹಸ್ತಪ್ರತಿ ಸಂಪತ್ತನ್ನು ನಾಗನೂರು ರುದ್ರಾಕ್ಷಿಮಠಕ್ಕೆ ಕೊಡಮಾಡಿದರು. ಒಂಬತ್ತು ದಶಕಗಳಿಂದ ಈ ಸಾಹಿತ್ಯವನ್ನು ಅತ್ಯಂತ ವ್ಯವಸ್ಥಿತವಾಗಿ ಸಂಗ್ರಹಿಸಿಕೊಂಡು ಬಂದಿರುವುದು ಅಭಿಮಾನ ಪಡುವ ಸಂಗತಿಯಾಗಿದೆ. ೧೯೧೦ರ ದಶಕದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಒಂದು ಧಾರ್ಮಿಕ ಕೋಲಾಹಲವೇ ಜರುಗಿತು. ಅದನ್ನು ವ್ಯಾಸನತೋಳು ಪ್ರಕರಣವೆಂದು ಕರೆಯುತ್ತಾರೆ. ಲಿಂಗಾಯತರಿಗೂ ಮತ್ತು ಬ್ರಾಹ್ಮಣರಿಗೂ ನಡೆದ ಈ ಮತೀಯ ಗಲಭೆಯನ್ನು ಶಾಂತಗೊಳಿಸಿದವರು ಅರಟಾಳ ರುದ್ರಗೌಡರು. ಅರಟಾಳ ರುದ್ರಗೌಡರು ಮೈಸೂರು ಮಹಾರಾಜರೊಂದಿಗೆ, ಶೃಂಗೇರಿ ಮತ್ತು ಚಿತ್ರದುರ್ಗದ ಜಗದ್ಗುರುಗಳೊಂದಿಗೆ ನಡೆಸಿದ ಪತ್ರ ವ್ಯವಹಾರಗಳ ಒಂದು ಅಪರೂಪದ ಸಂಗ್ರಹ ಈ ಕೇಂದ್ರ ಗ್ರಂಥಾಲಯದಲ್ಲಿದೆ. ಈ ಪತ್ರವ್ಯವಹಾರವನ್ನು ಅಧ್ಯಯನ ಮಾಡಿದರೆ, ಅದೊಂದು ಪಿಎಚ್.ಡಿ. ಮಹಾಪ್ರಬಂಧಕ್ಕೆ ವಿಷಯ ವಸ್ತುವಾಗಬಹುದು. ಅಷ್ಟು ವಿಪುಲ ಮಾಹಿತಿ ಅಲ್ಲಿದೆ.

ಒಟ್ಟಾರೆ ಬೆಳಗಾವಿ ಜಿಲ್ಲೆಯಲ್ಲಿ ಆಧುನಿಕ ಕಾಲಮಾನದಲ್ಲಿ ಮೊಟ್ಟ ಮೊದಲು ವ್ಯಕ್ತಿಗತವಾಗಿ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಂರಕ್ಷಿಸಿದ ಕೀರ್ತಿ ಅರಟಾಳ ರುದ್ರಗೌಡರದು. ಅವರ ಈ ಪ್ರಯತ್ನ

ಅತ್ಯಂತ ಮಾದರಿ ಮತ್ತು ಅನುಕರಣೀಯವಾದುದು. ಒಬ್ಬ ದಕ್ಷಅಧಿಕಾರಿಯಾಗಿ ಸಾಹಿತ್ಯ ಸಂಸ್ಕೃತಿಗಳ ಕುರಿತು ಗಾಢವಾದ ಪ್ರೀತಿಯಿಟ್ಟುಕೊಂಡು ಅರಟಾಳರು ಸದಾ ಸ್ಮರಣೀಯರಾಗಿದ್ದಾರೆ.

**ಕೆ.ಜಿ. ಕುಂದಣಗಾರ :**

ನಮ್ಮ ಜಿಲ್ಲೆಯ ಮತ್ತೊಬ್ಬ ಶ್ರೇಷ್ಠ ವಿದ್ವಾಂಸರಾದ ಕೆ.ಜಿ. ಕುಂದಣಗಾರರು ಗೋಕಾಕ ತಾಲೂಕಿನ ಕೌಜಲಗಿ ಗ್ರಾಮದವರು. ಅವರು ಕೊಲ್ಲಾಪುರ ರಾಜಾರಾಮ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಅವರು ಉತ್ಖನನ ಕಾರ್ಯಕೈಕೊಂಡು ಅನೇಕ ಪ್ರಾಚೀನ ವಸ್ತುಗಳನ್ನು ಸಂಗ್ರಹಿಸಿದ್ದರು. ಶಿಲಾಶಾಸನಗಳನ್ನು, ಹಸ್ತಪ್ರತಿಗಳನ್ನು ಅಪಾರ ಪ್ರಮಾಣದಲ್ಲಿ ಸಂಗ್ರಹಿಸಿದ್ದರು. ಅವರು ನಿವೃತ್ತಿಯ ನಂತರ ಬೆಳಗಾವಿಯಲ್ಲಿ ಬಂದು ನೆಲೆಸಿದ್ದರು. ಅವರ ಗ್ರಂಥ ರಾಶಿ ಮತ್ತು ಹಸ್ತಪ್ರತಿ ಸಂಪತ್ತು ಅಪಾರವಾಗಿತ್ತು. ಈ ವಿಷಯವಾಗಿ ಅವರ ಪರಮ ಶಿಷ್ಯ ಮ.ಗು. ಬಿರಾದಾರ ಅವರು ಒಂದು ಹೃದಯಸ್ಪರ್ಶಿ ಸಂಗತಿಯನ್ನು ಪ್ರಸ್ತಾಪಿಸುತ್ತಾರೆ:

"ಪುಸ್ತಕವನ್ನು ಪ್ರೀತಿಸದವ ಪ್ರಾಧ್ಯಾಪಕನೇ ಅಲ್ಲ. ಕುಂದಣಗಾರರ ಗಳಿಕೆ ಎಂದರೆ ಅವರು ಕೊಂಡು ಸಂಗ್ರಹಿಸಿದ ಪುಸ್ತಕಗಳು. ಅವರ ಮನೆಯ ಗ್ರಂಥಾಲಯವೇ ಅವರ ಆಸ್ತಿ. ಎಲ್ಲೇ ಹೋದರೂ ಪುಸ್ತಕವಿಲ್ಲದೆ ಬರಿಗೈಯಿಂದ ಬಂದವರೇ ಅಲ್ಲ. ೧೯೬೦ರ ವರೆಗೆ ಪ್ರಕಟವಾದ ಕನ್ನಡದ ಬಹುತೇಕ ಪುಸ್ತಕಗಳು ಅವರ ಸಂಗ್ರಹದಲ್ಲಿದ್ದವು. ಅಲ್ಲದೆ ಸಂಸ್ಕೃತ, ಇಂಗ್ಲಿಷ್, ಪ್ರಾಕೃತ ಮತ್ತು ಮರಾಠಿ ಕ್ಲಾಸಿಕ್‌ಗಳು ಅಲ್ಲಿ ಉಪಲಬ್ಧ. ಅನೇಕ ಹಸ್ತಪ್ರತಿಗಳು ಅವರ ಈ ಸಂಗ್ರಹದಲ್ಲಿದ್ದವು. ತಮಗೆ ಕೂಡ್ರಲು ಒಂದು ಚೆನ್ನಾದ ಕುರ್ಚಿ ಇರಲಿಲ್ಲ. ಆದರೆ ಪುಸ್ತಕಗಳಿಗೆ ಸಾಗವಾನಿಯ ಮನೆ ಎತ್ತರದ ಸೆಲ್ಫುಗಳನ್ನು ಮಾಡಿಸಿ ವ್ಯವಸ್ಥಿತವಾಗಿಟ್ಟಿದ್ದರು. ಯಾವ ಪುಸ್ತಕ ಬೇಕಾದರೂ ತಟ್ಟನೆ ಮೇಲೇರಿ ತಾವೇ ತೆಗೆದುಕೊಡುತ್ತಿದ್ದರು. ಇಲ್ಲದ ಪಾಂಡಿತ್ಯಪ್ರದರ್ಶನಕ್ಕೆ ಪುಸ್ತಕಗಳನ್ನು ಸಂಗ್ರಹಿಸುವ ಕಾಲವೊಂದಿತ್ತು. ಆದರೆ ಕುಂದಣಗಾರರು, ಅವರ ಸಂಗ್ರಹದ ಯಾವ ಪುಸ್ತಕ ತೆಗೆದುಕೊಂಡರೂ, ಅದನ್ನು ಓದಿ ಪುಟಪುಟಕ್ಕೂ ಗುರುತು ಹಾಕಿದ್ದನ್ನು ಕಾಣಬಹುದಿತ್ತು. ಕ್ಲಾಸಿಕ್ಸಗಳನ್ನಂತೂ ಎರಡು ಪುಟಗಳ ಮಧ್ಯೆ ಒಂದು ಬಾಂಡ್ ಪೇಪರ್ ಹಾಕಿ ರಿಬೈಂಡ್ ಮಾಡಿಸಿದ್ದರು. ಆ ಪೇಪರ ಮೇಲೆ, ಮಗ್ಗಲು ಪುಟದ ಸಮಸ್ಯೆ, ಸಂದಿಗ್ಧತೆಗಳನ್ನು ಬರೆದಿಸಿರಿದ್ದರು. ಅವರಿಗೆ ಅನ್ನ ಔಷಧಕ್ಕೂ ಗತಿ ಇಲ್ಲದಿದ್ದಾಗ, ಅವರಿಗೆ ನೆರವು ನೀಡುವ ಉದ್ದೇಶದಿಂದ, ಕರ್ನಾಟಕ ವಿಶ್ವವಿದ್ಯಾಲಯ ಇಪ್ಪತ್ತು ಸಾವಿರದ ಚೆಕ್ಕು ಹಿಡಿದು, ಅವರ ಪಶ್ಚಾತ್ ಆ ಪುಸ್ತಕಗಳನ್ನು ತನ್ನದಾಗಿಸುವ ವಿಚಾರ ವ್ಯಕ್ತಪಡಿಸಿದಾಗ, ಕಣ್ಣೀರಿಟ್ಟು 'ಈ ಸರಸ್ವತಿಯನ್ನು ಮಾರಿಕೊಂಡು ಬದುಕಲಾರೆ'! ಎಂದು ಮರಳಿ ಕಳಿಸಿದರು. ಪ್ರಾಣಕ್ಕಿಂತ ಪುಸ್ತಕ ಪ್ರೀತಿಸಿದವರು ಕುಂದಣಗಾರ."[೧೮]

ಕೆ.ಜಿ. ಕುಂದಣಗಾರರು ತಮ್ಮ ಸಂಗ್ರಹದಲ್ಲಿದ್ದ ಅನೇಕ ಹಸ್ತಪ್ರತಿಗಳನ್ನು ಶಾಸ್ತ್ರಶುದ್ಧವಾಗಿ ಸಂಪಾದಿಸಿ ಪ್ರಕಟಿಸಿ ಕನ್ನಡ ಪ್ರಾಚೀನ ಸಾಹಿತ್ಯ ಪರಂಪರೆಯನ್ನು ಶ್ರೀಮಂತಗೊಳಿಸಿದರು.

ಹಸ್ತಿಮಲ್ಲಿಷೇಣಾಚಾರ್ಯನ ಪೂರ್ವಪುರಾಣಂ (೧೯೪೩), ಪಂಪನ ಆದಿಪುರಾಣ (೧೯೫೩), ಕುಮುದೇಂದು ಕವಿಯ ಕುಮುದೇಂದು ರಾಮಾಯಣ (೧೯೩೬), ನೇಮಿಚಂದ್ರನ 'ಲೀಲಾವತಿ ಪ್ರಬಂಧಂ'(೧೯೪೬), ಜ್ಞಾನಭಾಸ್ಕರ ಚರಿತೆ (೧೯೩೧), ಚಿನ್ಮಯ ಚಿಂತಾಮಣಿ (೧೯೩೦) ಈ ಕೃತಿಗಳನ್ನು ಅವರು ಸಂಪಾದಿಸಿ ಪ್ರಕಟಿಸಿದರು. ಕುಂದಣಗಾರರು ನಿರಂಜನ ಸ್ತೋತ್ರ ಮತ್ತು ನಿಂಬಸಾಮಂತ ಚರಿತೆ ಎರಡು ಹಸ್ತಪ್ರತಿಗಳನ್ನು ಸಂಪಾದಿಸಿ ಪ್ರಕಟಣೆಗೆ ಸಿದ್ಧಗೊಳಿಸಿದ್ದರು. ಆದರೆ ಅವು ಪ್ರಕಟವಾಗಲಿಲ್ಲ. ಕುಂದಣಗಾರರ ನಿಂಬಸಾಮಂತ ಚರಿತೆಯ ಹಸ್ತಪ್ರತಿಯನ್ನು ಗಮನಿಸಿ ಎಂ. ಎಂ. ಕಲಬುರ್ಗಿ ಅವರು ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದರು. ಇಂಥ ಮಹಾನ್ ವಿದ್ವಾಂಸ ಕುಂದಣಗಾರರು ಬಾಲಗೋಪಾಲನ ಲಾವಣಿಗಳನ್ನು ಮೊದಲಬಾರಿಗೆ ಬೆಳಕಿಗೆ ತಂದ ಶ್ರೇಯಸ್ಸಿಗೆ ಪಾತ್ರರಾದರು. ಕುಂದಣಗಾರರು ಸಂಪಾದಿಸಿದ 'ವಡ್ಡಾರಾಧನೆ' ಕೃತಿಯ ಹಸ್ತಪ್ರತಿಯೊಂದು ಕೌಜಲಗಿ ಗ್ರಾಮದ ಪ್ರಕಾಶ ಕೋಟಿನತೋಟ ಅವರ ಹತ್ತಿರವಿದೆ. ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಅದರ ಸಂಕ್ಷಿಪ್ತ ವಿವರಣೆಯನ್ನು ಪ್ರಕಾಶ ಕೋಟಿನತೋಟ ಅವರು ಮಾಡಿದ್ದಾರೆ.

"೧. ನೇಮಿಚಂದ್ರನ ಲೀಲಾವತಿ ಮಹಾಪ್ರಬಂಧಂ (೯-೧೦ ಅಶ್ವಾಸಗಳು)

೨. ಸೂರಿಸಿಂಹ ಮಹಾರಾಜ (ಸಮ್ಯಕ್ತ್ವ ದರ್ಶನ, ಮರಾಠಿಯಿಂದ ಅನುವಾದ)

೩. ಇಂದ್ರಿಯ ವಿಜ್ಞಾನವೂ, ಆರೋಗ್ಯಶಾಸ್ತ್ರವೂ

೪. ಕರ್ನಾಟಕ ವಿಷಯಜಾತಿ

೫. ಭರತೇಶ ವೈಭವ (ಮರಾಠಿಗೆ ಮಾಡಿದ ಅನುವಾದ)"[೧೯]

ಇವು ಕುಂದಣಗಾರ ಅವರು ಪ್ರಕಟಿಸಬೇಕೆಂದು ಬಯಸಿ, ಸಿದ್ಧಪಡಿಸಿದ ಹಸ್ತಪ್ರತಿಗಳು. ಆದರೆ ಕಳೆದು ಹೋಗಿವೆ. ಇವುಗಳನ್ನು ಹುಡುಕುವ ಕಾರ್ಯ ನಡೆಯಬೇಕಾಗಿದೆ.

**ಶಿ. ಚೆ. ನಂದೀಮಠ :**

ಬೆಳಗಾವಿ ಜಿಲ್ಲೆಯ ವಿದ್ವತ್‌ಪರಂಪರೆಯಲ್ಲಿ ಬಹುಮುಖ್ಯವಾದ ಹೆಸರು ಎಸ್. ಸಿ. ನಂದೀಮಠ ಅವರದು. ಗೋಕಾಕ ತಾಲೂಕಿನ ನಂದಿ ಗ್ರಾಮದಲ್ಲಿ ಜನಿಸಿದ ಅವರು ೧೯೨೮ರಲ್ಲಿಯೇ ಇಂಗ್ಲೆಂಡಿನಿಂದ ಇಂಗ್ಲಿಷ್ ಭಾಷೆಯಲ್ಲಿ ಸಂಶೋಧನೆ ಮಾಡಿ ಪಿಎಚ್.ಡಿ. ಪದವಿ ಪಡೆದ ಉತ್ತರ ಕರ್ನಾಟಕದ ಏಕೈಕ ವಿದ್ವಾಂಸರು. ನಂದೀಮಠರು ಇಂಗ್ಲೆಂಡಿನಿಂದ ಬಂದ ನಂತರ ವಚನ ಪಿತಾಮಹ ಫ.ಗು.ಹಳಕಟ್ಟಿ ಅವರನ್ನು ಭೇಟಿಯಾದರು. ವಚನ ಸಾಹಿತ್ಯದ ಉಳಿವಿಗಾಗಿ ಹಗಲಿರುಳು ಪರಿತಪಿಸುತ್ತಿದ್ದ ಹಳಕಟ್ಟಿ ಅವರಿಗೆ ನಂದೀಮಠರಂಥ ಪ್ರತಿಭಾವಂತ ವಿದ್ವಾಂಸರು ದೊರೆತದ್ದು ಸಂತೋಷವನ್ನುಂಟು ಮಾಡಿತು. ಹಳಕಟ್ಟಿ, ನಂದೀಮಠ ಮತ್ತು ಮಧುರಚೆನ್ನರು ಮೂರು ಮಹಾನುಭಾವರು ಕೂಡಿ ಅರ್ಜುನವಾಡ ಶಾಸನದ ಅರ್ಥವನ್ನು ಲೋಕದ ಮುಂದೆ

ತೆರೆದಿಟ್ಟರು. ಅರ್ಜುನವಾಡದ ಶಾಸನ ಬೆಳಕಿಗೆ ಬರುವ ಮೂಲಕ ಪೌರಾಣಿಕ ವ್ಯಕ್ತಿಯೆನಿಸಿದ್ದ ಬಸವಣ್ಣನವರು ಐತಿಹಾಸಿಕ ಮತ್ತು ಚಾರಿತ್ರಿಕ ವ್ಯಕ್ತಿ ಎಂದು ತಿಳಿಯಲು ಸಹಾಯವಾಯಿತು. ಹಳಕಟ್ಟಿಯವರು ೧೯೨೬ರಿಂದ ಶಿವಾನುಭವ ಎಂಬ ಪತ್ರಿಕೆಯನ್ನು ಪ್ರಾರಂಭ ಮಾಡಿದರು. ಸಂಪಾದಕ ಮಂಡಳಿಯಲ್ಲಿ ನಂದೀಮಠರು ಇದ್ದರು. ಶಿವಾನುಭವ ಪತ್ರಿಕೆಯಲ್ಲಿ ಅನೇಕ ಸಂಶೋಧನಾತ್ಮಕ ಲೇಖನಗಳನ್ನು ನಂದೀಮಠರು ಬರೆದರು. ವಿಶೇಷವಾಗಿ ಬೆಳಗಾವಿ ಪರಿಸರದ ಇತಿಹಾಸದ ಮೇಲೆ ಬೆಳಕು ಚೆಲ್ಲುವಂಥ ಮೌಲಿಕ ಲೇಖನಗಳನ್ನು ಬರೆದರು. ಉದಾ: "ನಂದೀಮಠರು ಮೊದಲ ಬಾರಿಗೆ ಅರಭಾವಿ ದುರದುಂಡೀಶ್ವರಮಠದ ಇತಿಹಾಸವನ್ನು ಬರೆದು ಪ್ರಕಟಿಸಿದರು. ತಮ್ಮ ಮಠದ ಇತಿಹಾಸವನ್ನು ಪ್ರಕಟಿಸಿದ ಹಳಕಟ್ಟಿಯವರ ಸೇವಾಭಾವವನ್ನು ಅರಿತ ಅರಭಾವಿಮಠದ ಅಂದಿನ ಪೂಜ್ಯ ಶಿವಾನಂದ ಸ್ವಾಮಿಗಳು ಸಿದ್ಧಸಂಸ್ಥಾನಮಠ ಅರಭಾವಿ ಗೋಕಾಕ ಇವರು ತಮ್ಮ ಸಂಗ್ರಹದಲ್ಲಿದ್ದ ಪಾಶುಪತಾಗಮವನ್ನು ಬರೆದು ಕಳಿಸಿದ್ದರು. ಇವರಲ್ಲಿ ೧೨೮೧ ಶ್ಲೋಕಗಳ ವೀರಾಗಮದ ಹಸ್ತಪ್ರತಿಯೂ ಇತ್ತು. ಅಲ್ಲದೆ ತಮ್ಮ ಸಂಗ್ರಹದಲ್ಲಿದ್ದ ಇನ್ನೂ ಕೆಲವು ಹಸ್ತಪ್ರತಿಗಳನ್ನು ಹಳಕಟ್ಟಿಯವರಿಗೆ ಕಳುಹಿಸಿಕೊಟ್ಟರು."[೨೦] ಹಸ್ತಪ್ರತಿ ಸಂಗ್ರಹದಲ್ಲಿ ಆಸಕ್ತಿ ತಾಳಿದ್ದ ಅವರು ಹಳಕಟ್ಟಿಯವರಿಗೆ ಅನೇಕ ವಚನ ಸಾಹಿತ್ಯದ ಕಟ್ಟುಗಳನ್ನು ಹುಡುಕಿಕೊಟ್ಟು ಸಹಾಯ ಮಾಡಿದ್ದಾರೆ. ಪ್ರಭುದೇವರ ವಚನಗಳು ಹಸ್ತಪ್ರತಿ ಕಟ್ಟು ಹುಡುಕಿ ಕೊಡುವುದಲ್ಲದೆ ವಿಜಯಪುರದಲ್ಲಿ ಕೆಲವು ದಿವಸ ನಿಂತು ಗ್ರಂಥದ ಬಹುಭಾಗವನ್ನು ಬರೆಯಿಸಿ ತಿದ್ದಿ ಅಚ್ಚಿಗೆ ಸಿದ್ಧಗೊಳಿಸಿದರು. ಅಲ್ಲದೆ ೧೯೩೨ರಲ್ಲಿ ಹಳಕಟ್ಟಿವರಿಂದ ಸಂಪಾದಿತವಾಗಿ "ಶಿವಾನುಭವ ಗ್ರಂಥಮಾಲೆಯ ೩೨ನೆಯ ಪುಷ್ಪವಾಗಿ ಪ್ರಕಟವಾದ ಚನ್ನಬಸವೇಶ್ವರ ಷಟ್‌ಸ್ಥಲ ವಚನಗಳು ಎಂಬ ಕೃತಿ ಪ್ರಕಟಿಸಲು ಗೋಕಾವಿಯಿಂದ ಹಸ್ತಪ್ರತಿಯೊಂದನ್ನು ಕಳುಹಿಸಿಕೊಟ್ಟಿದ್ದಾರೆ."[೨೧] ಅದೇ ರೀತಿ ದೇವರ ದಾಸಿಮಯ್ಯನ ವಚನಗಳು, ಅಕ್ಕಮಹಾದೇವಿ ವಚನಗಳು, ಗಣದಾಸಿ ವೀರಣ್ಣನ ವಚನಗಳು ಮೊದಲಾದ ಕೃತಿಗಳ ವಚನ ಕಟ್ಟುಗಳನ್ನು ನಂದೀಮಠರೇ ಕಳಿಸಿಕೊಟ್ಟಿದ್ದರು ಎಂಬುದನ್ನು ಹಳಕಟ್ಟಿ ಅವರು ಕೃತಜ್ಞತಾಪೂರ್ವಕ ಸ್ಮರಿಸಿಕೊಂಡಿದ್ದಾರೆ.

೧೯೩೨ರಲ್ಲಿ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿಯವರು ಹಸ್ತಪ್ರತಿಗಳನ್ನು ಸರ್ವೇ ಮಾಡುವ ಕಾರ್ಯ ಕೈಕೊಂಡರು. "ಆಗ ಬೆಳಗಾವಿ ಜಿಲ್ಲೆಯ ಹಸ್ತಪ್ರತಿಗಳನ್ನು ಪರೀಕ್ಷಣೆ ಮಾಡಿ ವರದಿ ನೀಡಿದವರು ನಂದೀಮಠರು. ಈ ವರದಿಯನ್ನು ಹಳಕಟ್ಟಿಯವರು ಶಿವಾನುಭವ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ."[೨೨]

ನಂದೀಮಠರು ಬೆಳಗಾವಿ ಜಿಲ್ಲೆಯನ್ನು ಮೂರು ತಿಂಗಳು ಸುತ್ತಾಡಿ ೮೨೬ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಅವುಗಳಲ್ಲಿ ಗೋಕಾಕ–೧೮೯, ಅರಭಾವಿ ೧೬೩, ವಂಟಮುರಿ ೩೦, ಯಮಕನಮರಡಿ ೨೭, ಬನಹಟ್ಟಿ ೧೬, ರಬಕವಿ ೩, ಮಹಾಲಿಂಗಪೂರ ೨೫೮, ಯಾದವಾಡ ೧೪೦ ಹೀಗೆ ಒಟ್ಟು ೪೯೨ ತಾಡೋಲೆ ಮತ್ತು ೩೩೪ ಕಾಗದ ಪ್ರತಿಗಳನ್ನು ಸಂಗ್ರಹಿಸಿದರು. ನನಗೆ ತಿಳಿದ

ಮಟ್ಟಿಗೆ ಉತ್ತರ ಕರ್ನಾಟಕದಲ್ಲಿ ಕ್ಷೇತ್ರಕಾರ್ಯ ಮಾಡಿ, ಹೀಗೆ ಕೃತಿಗಳ ವಿವರ ನೀಡಿದ ಮೊದಲ ಕನ್ನಡಿಗರೆಂದರೆ ನಂದೀಮಠರು. ಮುಂದಿನ ಸೂಚಿ ರಚನೆಗಳಿಗೆ ಈ ಲೇಖನ ದಾರಿದೀಪವೂ ತೋರುಬೆರಳೂ ಆಯಿತು. ನಂದೀಮಠರು ಸಂಗ್ರಹಿಸಿದ ಬಹುತೇಕ ಕೃತಿಗಳಲ್ಲಿ ಲಿಂಗಾಯತ ಸಾಹಿತ್ಯಕ್ಕೆ ಸಂಬಂಧಪಟ್ಟಿವೆ. ಈ ಎಲ್ಲ ಹಸ್ತಪ್ರತಿಗಳನ್ನು ವಿಷಯಗಳ ಪ್ರಕಾರ ವಿಂಡಿಸಿದ್ದಾರೆ. ಆಗಮಗಳು (ತಂತ್ರಗಳು) ೪, ಆಚಾರ ಸಂಬಂಧ ಗ್ರಂಥಗಳು ೧೬, ಉಪನಿಷತ್ತುಗಳು ೯, ಕಥೆಗಳು ೧೨, ಕಂದಗಳು ೯, ಕಾವ್ಯಗಳು ೨೬, ಕೋಶ ಮತ್ತು ವ್ಯಾಕರಣ ೬, ಲಿಂಗಾಯತ ತತ್ವಜ್ಞಾನ ೪೫, ತ್ರಿಪದಗಳು ೯, ಪುರಾಣಗಳು ೧೬, ಮಹಾತ್ಮೆಗಳು ೨, ರಗಳೆಗಳು ೧೧, ವಚನಗಳು ೨೮, ಶತಕಗಳು ೬, ಸ್ತೋತ್ರ ಗ್ರಂಥಗಳು ೨೨, ಹಾಡುಗಳು ೮, ಇತರ ಗ್ರಂಥಗಳು ೬, ಒಟ್ಟು ೨೩೫ ಮೂಲ ಗ್ರಂಥಗಳಾಗಿವೆ. ಉಳಿದವು ಇವುಗಳ ಪ್ರತಿಗಳಾಗಿವೆ ಎಂಬುದನ್ನು ನಂದೀಮಠರು ವಿವರಿಸಿದ್ದಾರೆ.

ಪಾರಮೇಶ್ವರ ತಂತ್ರವೆಂಬ ಹೆಸರಿನ ಗ್ರಂಥಗಳು ಶೈವ, ವೈಷ್ಣ, ಶಾಸಕ್ತರ ಆಗಮಗಳಲ್ಲಿ ದೊರೆಯುತ್ತವೆ. ಪಾಮೇಶ್ವರ ತಂತ್ರವೆಂಬ ಹೆಸರಿನ ಗ್ರಂಥವೊಂದನ್ನು ಮೂರುಸಾವಿರಮಠದವರು ಪ್ರಕಟಿಸಿದ್ದರು. ಪಾರಮೇಶ್ವರ ಆಗಮದ ಒಂದು ಹಸ್ತಪ್ರತಿ ಕೆಂಬ್ರಿಜ್ ವಿಶ್ವವಿದ್ಯಾಲಯದ ಗ್ರಂಥಾಲಯದಲ್ಲಿದೆ. ಅದನ್ನು ಪ್ರತಿ ಮಾಡಿಕೊಂಡ ಕಾಲ ಕ್ರಿ. ಶ. ೮೫೯ ಎಂದು ಹೇಳಲಾಗುತ್ತದೆ. ಈ ಕೃತಿಯ ಇನ್ನೊಂದು ಹಸ್ತಪ್ರತಿ ನೇಪಾಳದ ದರ್ಬಾರ್ ಲಾಯಬ್ರರಿಯಲ್ಲಿದೆ. ಆದರೆ ನಂದೀಮಠರಿಗೆ ಸಿಕ್ಕ ಈ ಪಾರಮೇಶ್ವರಾಗಮದ ವಿಷಯಕ್ಕೂ ಕೆಂಬ್ರಿಜ್, ನೇಪಾಳದಲ್ಲಿರುವ ಹಸ್ತಪ್ರತಿಗಳ ವಿಷಯ ಒಂದೇ ಆಗಿದೆಯೋ ಅಥವಾ ಬೇರೆಯಾಗಿದೆಯೋ ಎನ್ನುವುದನ್ನು ವಿದ್ವಾಂಸರು ಇನ್ನೂ ಪತ್ತೆಹಚ್ಚಬೇಕಾಗಿದೆ. ಇತ್ತೀಚಿಗೆ ಕಾಶಿ ಜಂಗಮವಾಡಿ ಮಠದಿಂದ ಕೆಲವು ಆಗಮಗಳು ಪ್ರಕಟವಾಗಿವೆ. ಆದರೆ ಅವುಗಳ ಮೂಲದ ಬಗ್ಗೆ ಇನ್ನೂ ಸಂಶಯವಿದೆ.

ನಂದೀಮಠರು ಶೋಧಿಸಿದ 'ಯೋಗಜಾಗಮ' ಕೃತಿಯ ಹಸ್ತಪ್ರತಿಯ ಒಂದೇ ಪ್ರತಿ ಸಿಕ್ಕಿದ್ದು, ಇಲ್ಲಿಯವರೆಗೆ ಅದು ಪ್ರಕಟವಾಗಿಲ್ಲ. ವಚನಕಾರರು ಈ ಕೃತಿಯನ್ನು ಉಲ್ಲೇಖ ಮಡುವುದರಿಂದ ಯೋಗಜಾಗಮ ೧೨ನೇ ಶತಮಾನದ ಪೂರ್ವದ ಕೃತಿಯೆಂದು ಹೇಳಬಹುದಾಗಿದೆ. ಅಲ್ಲದೆ ನಂದೀಮಠರು ಸಂಗ್ರಹಿಸಿದ ಇನ್ನೊಂದು ಮಹತ್ವದ ಕೃತಿ 'ವಾತುಲಾಗಮ' ಹಸ್ತಪ್ರತಿ. ಹುಬ್ಬಳ್ಳಿ ಮೂರುಸಾವಿರಮಠದಿಂದ ಪ್ರಕಟವಾದ 'ವಾತುಲಾಗಮ'ದ ವಿಷಯಕ್ಕೂ ನಂದೀಮಠರು ಸಂಗ್ರಹಿಸಿದ 'ವಾತುಲಾಗಮ'ದ ವಿಷಯಕ್ಕೂ ತುಂಬ ವ್ಯತ್ಯಾಸವಿದೆ. ಹೀಗಾಗಿ ಬೆಳಗಾವಿ ಜಿಲ್ಲೆಯ ಅಪರೂಪದ ಹಸ್ತಪ್ರತಿ ಸಾಹಿತ್ಯ ಎಂಟು ದಶಕಗಳ ಹಿಂದೆ ಲಭ್ಯವಾಗಿತ್ತು ಎನ್ನುವುದು ಸಂತೋಷದ ಸಂಗತಿಯಾಗಿದೆ.

ನಂದೀಮಠರು ಸಂಗ್ರಹಿಸಿದ ಲಿಂಗಾಯತ ಆಚಾರ ಸಂಬಂಧಿ ಕೃತಿಗಳಾದ ೧. ವಿಭೂತಿ ಪಟ್ಟ, ೨. ದೀಕ್ಷಾ ವಿಧಾನ, ೩. ಕ್ರಿಯಾದೀಕ್ಷೆ, ೪. ರುದ್ರ, ೫. ಅರವತ್ತು ನಾಲ್ಕು ಶೀಲಗಳು,

೬. ದಶವಿಧ ಪಾದೋದಕ, ೭. ಸಮಾಧಿಕ್ರಿಯಾ, ೮. ಕ್ರಿಯಾ ಮಹತ್ವ, ೯. ಪಾದಪೂಜಾ ವಿಧಿ, ೧೦. ಉದ್ಧರಣೆ, ೧೧. ಪಂಚಾಕ್ಷರ ಬೊಧೆ, ೧೨. ಅಷ್ಟಾವರಣದ ಗ್ರಂಥ, ೧೩. ಆಚರಣೆ ಷಟ್ಪದಿ, ೧೪. ಜ್ಯೋತಿರ್ಮಯ ಶಾಂಭವೀ ದೀಕ್ಷಾ ಬೋಧೆ, ೧೫. ಶಿವಪೂಜಾ ವಿಧಾನ, ೧೬. ಮೂವತ್ತರ ಉದ್ಧರಣೆ. ಈ ಕೃತಿಗಳಲ್ಲಿ ಇನ್ನೂ ನಾಲ್ಕಾರು ಕೃತಿಗಳಾದರೂ ಹಸ್ತಪ್ರತಿಗಳ ರೂಪದಲ್ಲಿಯೇ ಉಳಿದಿರಬಹುದಾದ ಸಾಧ್ಯತೆ ಇದೆ.

ನಂದೀಮಠರು ಉಪನಿಷತ್ತುಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದರು. ಅವುಗಳಲ್ಲಿ 'ಸಿದ್ಧಾಂತ ಶಿಖೋಪನಿಷತ್, ಯಜುರ್ವೇದೋಪನಿಷತ್ ಮತ್ತು ಪೈಪ್ಪಲಾಮೋನಿಷತ್' ಈ ಮೂರು ಕೃತಿಗಳು ನಿರ್ಣಯಸಾಗರದ ೧೦೮ ಉಪನಿಷತ್ತುಗಳ ಸಂಗ್ರಹದಲ್ಲಿ ಇಲ್ಲ. ಹೀಗಾಗಿ ಈ ಮೂರು ಉಪನಿಷತ್ತುಗಳು ಹೊಸ ಕೃತಿಗಳಾಗಿವೆ ಎಂಬ ನಿರ್ಣಯಕ್ಕೆ ಅವರು ಬಂದಿದ್ದಾರೆ.

೨. ಪಂಚತಂತ್ರ, ೨. ವೇತಾಳ ಪಂಚವಿಂಶತಿ, ೩. ಸತ್ಯೇಂದ್ರ ಚೋಳನ ಕಥೆ, ೪. ಶಿಬಿ ಚಕ್ರವರ್ತಿಯ ಕಥೆ, ೫. ಬಸವೇಶ್ವರ ಪುರಾಣದ ಕಥೆಗಳು, ೬. ಶರಣರ ಚರಿತ್ರೆ, ೭. ಬಸವ ಶಿಖಾಮಣಿ, ೮. ಬಿಜ್ಜಮಹಾದೇವಿ ಕಥೆ, ೯. ಸಾನಂದಗಣೇಶ್ವರನ ಕಥೆ, ೧೦. ಮಡಿವಾಳಯ್ಯನ ಚರಿತ್ರೆ, ೧೧. ಬಸವೇಶ್ವರನ ಪವಾಡ, ೧೨. ಹರಳಯ್ಯನ ಚರಿತ್ರೆ ಈ ಕಥೆಗಳ ಹಸ್ತಪ್ರತಿಗಳನ್ನು ಡಾ. ನಂದೀಮಠರು ಸಂಗ್ರಹಿಸಿದ್ದರು. ಇವುಗಳಲ್ಲಿ ಬಸವ ಶಿಖಾಮಣಿ ಹಸ್ತಪ್ರತಿಯನ್ನು ಆಧರಿಸಿ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದೆ ಎಂಬ ಸಂಗತಿ ತಿಳಿದುಬರುತ್ತದೆ. ಅಲ್ಲದೆ ಸತ್ಯೇಂದ್ರ ಚೋಳನ ಕಥೆಯನ್ನು ಪರ್ವತ ಶಿವಯೋಗಿಗಳು ನಿರೂಪಿಸಿದ್ದಾರೆ. ಈ ವಿಷಯ ನಮ್ಮ ಹಸ್ತಪ್ರತಿ ತಜ್ಞರಿಗೆ ತಿಳಿದಿಲ್ಲವೆಂದು ನಾನು ಭಾವಿಸಿದ್ದೇನೆ. "ಏಕೆಂದರೆ ಪರ್ವತ ಶಿವಯೋಗಿಗಳ ಕೃತಿಗಳ ಸಂಖ್ಯಾ ನಿರ್ಣಯ ಮಾಡಿದ ಹಸ್ತಪ್ರತಿ ತಜ್ಞರಾದ ಎಸ್. ಶಿವಣ್ಣ, ಪಿ.ಎಂ. ಗಿರಿರಾಜ, ಎಸ್. ಉಮಾಪತಿ, ಬಿ. ನಂಜುಂಡಸ್ವಾಮಿ ಅವರು ಈ ಕೃತಿಯ ಹೆಸರನ್ನೇ ಉಲ್ಲೇಖಿಸಿಲ್ಲವೆಂಬುದು ಗಮನಾರ್ಹ."[೨೩] ಹೀಗಾಗಿ ನಂದೀಮಠರು ಸಂಗ್ರಹಿಸಿದ ಈ ಹಸ್ತಪ್ರತಿ ತುಂಬಾ ಅಪರೂಪದ್ದಾಗಿದೆ ಎಂಬುದು ನನ್ನ ಅನಿಸಿಕೆ.

'ಕಂದ' ಸಾಹಿತ್ಯ ಪ್ರಕಾರದ ೯ ಹಸ್ತಪ್ರತಿಗಳನ್ನು ನಂದೀಮಠರು ಬೆಳಗಾವಿ ಭಾಗದಲ್ಲಿ ಸಂಗ್ರಹಿಸಿದ್ದಾರೆ. ೧. ಶಂಕರದೇವರ ಕಂದ, ೨. ಕೇಶಿರಾಜನ ಕಂದ, ೩. ಮರುಳದೇವರ ಕಂದ, ೪. ಪ್ರಭುಲಿಂಗದ ಕಂದ, ೫. ಮಂತ್ರಮಾಲೆಯ ಕಂದ, ೬. ಮಂತ್ರ ಮಹತ್ವದ ಕಂದ, ೭. ಮುರಿಗಾಸಾಮಿಗಳು ನಿರೂಪಿಸಿದ ಕಂದ, ೮. ಷಡಕ್ಷರಿಯ ಮಹಲ್ಪಾದಕಂದ, ೯. ಬಸವ ಕಂದ. ಈ ಕಂದಪದ್ಯಗಳನ್ನು ಲಿಂಗಾಯತ ಮಠಾಧೀಶರು ನಿತ್ಯ ಪಠಣ ಮಾಡುತ್ತಿರುವ ಕಾರಣ, ಈ ಹಸ್ತಪ್ರತಿಗಳು ಬಹಳಷ್ಟು ಸಿಕ್ಕಿವೆ ಎಂದು ನಂದೀಮಠ ಅವರು ಅಭಿಪ್ರಾಯಪಡುತ್ತಾರೆ.

ನಂದೀಮಠರು ಕಾವ್ಯ ಕೃತಿಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿದ ವಿವರ ಹೀಗಿದೆ: ೧. ಶತಕತ್ರಯ, ೨. ಪ್ರೌಢದೇವರಾಯನ ಕಾವ್ಯ, ೩. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ, ೪.

ರಾಘವಾಂಕನ ಕಾವ್ಯ, ೫. ಭೈರವೇಶ್ವರ ಕಾವ್ಯ, ೬. ಶಬರ ಶಂಕರವಿಳಾಸ, ೭. ಪ್ರಭುಲಿಂಗಲೀಲೆ, ೮. ಮಾಘಕಾವ್ಯ, ೯. ಹಮ್ಮೀರ ಕಾವ್ಯ, ೧೦. ದೀಪದ ಕಲಿಯಾರ ಕಾವ್ಯ, ೧೧. ಜೈಮಿನಿ ಭಾರತ, ೧೨. ಭಿಕ್ಷಾಟನ ಕಾವ್ಯ, ೧೩. ಉದ್ಭಟ ಕಾವ್ಯ, ೧೪. ಭಾವಚಿಂತಾರತ್ನ, ೧೫. ಗುರುಭಕ್ತಯ್ಯಗಳ ಕಾವ್ಯ, ೧೬. ಕುಮಾರಸಂಭವ, ೧೭. ರಾಜೇಂದ್ರ ವಿಜಯ, ೧೮. ಗಿರಿಜಾಕಲ್ಯಾಣ, ೧೦. ರಾಜಶೇಖರ ವಿಳಾಸ, ೨೦. ಗುರುಬಸವನ ಆರು ಕಾವ್ಯಗಳು (ಗುರುಬಸವ ಸಪ್ತ ಕಾವ್ಯಗಳನ್ನು ಬರೆದಿದ್ದಾನೆ), ೨೨. ಬಸವ ಪುರಾಣ, ೨೨. ಶಾಂತನಾಥಲಿಂಗ ಕಾವ್ಯ, ೨೩. ಸಿದ್ಧರಾಮನ ಕಾವ್ಯ, ೨೪. ಚನ್ನಬಸವ ಪುರಾಣ, ೨೫. ಹರಿಶ್ಚಂದ್ರ ಕಾವ್ಯ, ೨೬. ಮೋಹನ ತರಂಗಿಣಿ.

ಈ ಮೇಲಿನ ಕೃತಿಗಳಲ್ಲಿ ಶತಕತ್ರಯದ ೯ ಪ್ರತಿಗಳು, ಭೈರವೇಶ್ವರ ಕಾವ್ಯದ ೯ ಪ್ರತಿಗಳು, ಶಬರ ಶಂಕರ ವಿಳಾಸದ ೫ ಪ್ರತಿಗಳು, ಪ್ರಭುಲಿಂಗಲೀಲೆಯ ೭ ಪ್ರತಿಗಳು, ಭಿಕ್ಷಾಟನ ಕಾವ್ಯದ ೫ ಪ್ರತಿಗಳು, ಭಾವಚಿಂತಾರತ್ನದ ೫ ಪ್ರತಿಗಳು, ಬಸವಪುರಾಣದ ೪ ಪ್ರತಿಗಳು, ಪ್ರೌಢದೇವರಾಯನ ಕಾವ್ಯದ ೪ ಪ್ರತಿಗಳು ದೊರೆತಿವೆ. ಪ್ರಾಯಶಃ ಲಿಂಗಾಯತಮಠಾಧೀಶರು ಈ ಕೃತಿಗಳ ಅಧ್ಯಯನ–ಬೋಧನೆ–ಪ್ರಚಾರ ಮಾಧ್ಯಮಕ್ಕಾಗಿ ಹೆಚ್ಚು ಹೆಚ್ಚು ಬಳಸಿದ ಪರಿಣಾಮವಾಗಿ ಇವುಗಳ ಬಹಳಷ್ಟು ಹಸ್ತಪ್ರತಿಗಳು ನಮಗಿಂದು ಲಭ್ಯವಾಗಿವೆ. ನಂದೀಮಠರು ಸಂಗ್ರಹಿಸಿದ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಕೃತಿ ಸಮಗ್ರವಾಗಿ ಇನ್ನೂ ಪ್ರಕಟವಾಗಿಲ್ಲ. ಒಂದು ಭಾಗ ಕರ್ನಾಟಕ ವಿಶ್ವವಿದ್ಯಾಲಯದಿಂದ ಆರ್. ಸಿ. ಹಿರೇಮಠ ಅವರು ಸಂಪಾದಿಸಿದ್ದರೆ, ಇನ್ನೊಂದು ಭಾಗವನ್ನು ಬಿ. ಶಿವಮೂರ್ತಿ ಶಾಸ್ತ್ರಿಗಳು ಸಂಪಾದಿಸಿದ್ದಾರೆ. ಇದು ಸಮಗ್ರ ರೂಪದಲ್ಲಿ ಪ್ರಕಟವಾಗಬೇಕಾದ ಅನಿವಾರ್ಯತೆ ಇದೆ. ಈ ಕೃತಿಯನ್ನು ಆಧಾರವಾಗಿಟ್ಟುಕೊಂಡೆ ಆರ್. ನರಸಿಂಹಾಚಾರ್ಯ ಅವರು ತಮ್ಮ ಕವಿಚರಿತೆಯ ಕವಿಗಳ ಕಾಲ ನಿರ್ಣಯವನ್ನು ಮಾಡಿರುವುದು ಕಂಡುಬರುತ್ತದೆ. ಆದ್ದರಿಂದ ಇದು ಬಹಳ ಅಮೂಲ್ಯ ಕೃತಿಯಾಗಿದೆ.

ಕೋಶ ಮತ್ತು ವ್ಯಾಕರಣಕ್ಕೆ ಸಂಬಂಧಿಸಿದಂತೆ ೧. ಕರ್ನಾಟಕ ಧಾತು, ೨. ಅಮರಕೋಶ, ೩. ಧನಂಜಯ ನಿಘಂಟು, ೪. ನಾಮಲಿಂಗಾನುಶಾಸನ, ೫. ಕರ್ನಾಟಕ ಶಬ್ದಮಂಜರಿ, ೬. ಚತುರಾಸ್ಯ ನಿಘಂಟು ಕೃತಿಯ ಹಸ್ತಪ್ರತಿಗಳನ್ನು ನಂದೀಮಠರು ಸಂಗ್ರಹಿಸಿದ್ದರು.

ಲಿಂಗಾಯತ ತತ್ವಜ್ಞಾನ ಕುರಿತು ನಂದೀಮಠರು ಸಂಗ್ರಹಿಸಿದ ಹಸ್ತಪ್ರತಿಗಳೆಂದರೆ– ೧. ತತ್ವಜ್ಞಾನ ತಾರಾವಳಿ, ೨ ಲಿಂಗಾಂಗ ಸಂಯೋಗ ನಿರ್ಣಯ, ೩. ಮಿಶ್ರಾರ್ಪಣ, ೪. ಕರಣ ಹಸಿಗೆ, ೫. ಮಗ್ಗೆಯ ಮಾಯಿದೇವನ ಏಕೋತ್ತರ ಶತಸ್ಥಲದ ನಾಂದ್ಯ, ೬. ಸೂಕ್ಷ್ಮ ಷಟ್‌ಸ್ಥಲ, ೭. ಕೈವಲ್ಯ ಪದ್ಧತಿ ಟೀಕಾ, ೮. ಮಂತ್ರಗೋಪ್ಯ, ೯. ತತ್ವಪದಗಳ ಗ್ರಂಥ, ೧೦. ತಾತ್ಪರ್ಯ ಸಂಗ್ರಹ, ೧೧. ಅನುಭವ ಸಾರ, ೧೨. ವೈರಾಗ್ಯ ಷಟ್ಪದಿ, ೧೩. ವೀರಶೈವ ತತ್ವೋಪದೇಶ, ೧೪. ಅನಾದಿ ವೀರಶೈವ ಸಾರ ಸಂಗ್ರಹ, ೧೫. ಅನುಭವ ಮುದ್ರೆ, ೧೬. ಅನುಭವ ಶಿಖಾಮಣಿ,

೧೭. ಪರಮಾನುಭವ ಬೋಧೆ, ೧೮. ಷಟ್‌ಸ್ಥಲ ತಿಲಕ, ೧೯. ಸಿದ್ಧಾಂತ ಶಿಖಾಮಣಿ, ೨೦. ಸಂಪಾದನೆಯ ಸಾರಾಮೃತ, ೨೧. ಲಿಂಗಷಟ್ಪದಿಯ ವ್ಯಾಖ್ಯಾನ, ೨೨. ಏಕೋತ್ತರ ಶತಸ್ಥಲ, ೨೩. ಲಿಂಗಲೀಲಾ ವಿಲಾಸ ಚಾರಿತ್ರ, ೨೪. ಷಟ್‌ಸ್ಥಲ ಜ್ಞಾನಸಾರಾಮೃತ, ೨೫. ಪ್ರಭುದೇವರ ಮಂತ್ರಗೋಪ್ಯ, ೨೬. ವೀರಶೈವ ಚಿಂತಾಮಣಿ, ೨೭. ವೀರಶೈವ ಸಿದ್ಧಾಂತ ಸಾರ, ೨೮. ಅನುಭವ ಚಿಂತಾಮಣಿ, ೨೯. ಆರ್ಕಸೂತ್ರ, ೩೦. ಷಟ್‌ಸ್ಥಲ ಸೂತ್ರ, ೩೧. ಶಿವತತ್ವಚಿಂತಾಮಣಿ, ೩೨. ಪ್ರಸಾದ ಚಿಂತಾಮಣಿ, ೩೩. ಪರಮಾನುಭವ ಬೋಧೆ, ೩೪. ವಿವೇಕ ಚಿಂತಾಮಣಿ, ೩೫. ಪರಮಾರ್ಥ ಗೀತೆ, ೩೬. ಸರ್ಪಭೂಷಣರ ಕೈವಲ್ಯ ಕಲ್ಪವಲ್ಲರಿ, ೩೭. ಸ್ವರ ಚಿಂತಾಮಣಿ, ೩೮. ಆತ್ಮಲಿಂಗ ಪ್ರಣವ ಸಂಯೋಗಸ್ಥಲ, ೩೯. ವರತಿ ಸೋಮಯ್ಯಗಳು ನಿರೂಪಿಸಿದ ಪಂಚೀಕರಣ, ೪೦. ಪ್ರಾಣಲಿಂಗ ಜ್ಞಾನದರ್ಪಣ ಚರಿತ್ರೆ, ೪೧. ಶೂನ್ಯಸಂಪಾದನೆ, ೪೨. ಪರಮಾರ್ಥ ಪ್ರಕಾಶಿಕೆ, ೪೩ ಇನ್ನೂರು ಹದಿನಾರು ಸಕೀಲ, ೪೪. ಲಿಂಗಾಂಗ ಸಾಮರಸ್ಯ, ೪೫. ಊರ್ಧ್ವ ಕುಂಡಲಿ. ಹೀಗೆ ಒಟ್ಟು ೪೫ ಹಸ್ತಪ್ರತಿಗಳನ್ನು ಅವರು ಸಂಗ್ರಹಿಸಿದ್ದರು. ಈ ಹಸ್ತಪ್ರತಿಗಳಲ್ಲಿ 'ವೈರಾಗ್ಯ ಷಟ್ಪದಿ', 'ವೀರಶೈವ ತತ್ವೋಪದೇಶ', 'ಅನುಭವ ಚಿಂತಾಮಣಿ', 'ಪ್ರಸಾದ ಚಿಂತಾಮಣಿ', 'ಆತ್ಮಲಿಂಗ ಪ್ರಣವ ಸಂಯೋಗಸ್ಥಲ', ವರತಿ ಸೋಮಯ್ಯಗಳು ನಿರೂಪಿಸಿದ 'ಪಂಚೀಕರಣ', 'ಇನನೂರು ಹದಿನಾರು ಸಕೀಲ', 'ಲಿಂಗಾಂಗ ಸಾಮರಸ್ಯ', 'ಊರ್ಧ್ವ ಕುಂಡಲಿ' ಈ ಹಸ್ತಪ್ರತಿಗಳು ಬೆಳಕಿಗೆ ಬಂದಂತೆ ಕಾಣುವುದಿಲ್ಲ. ನನ್ನ ಅಧ್ಯಯನ ಮಿತಿಯಲ್ಲಿ ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.

೧. ಬಸವ ಸ್ತೋತ್ರದ ತ್ರಿವಿಧಿ, ೨. ಮಿಶ್ರಸ್ತೋತ್ರದ ತ್ರಿವಿಧಿ, ೩. ಅಷ್ಟಾವರಣದ ತ್ರಿವಿಧಿ, ೪. ಶೀಲವಂತಯ್ಯನ ತ್ರಿವಿಧಿ, ೫. ಏಕೋದೇವ ಪ್ರತಿಷ್ಠಾ ತ್ರಿವಿಧಿ, ೬. ಸರ್ವಜ್ಞ ಮೂರ್ತಿಯ ತ್ರಿವಿಧಿ, ೭. ಸೋಬಾನಮೂರ್ತಿಯ ತ್ರಿವಿಧಿ, ೮. ಬಸವ ತ್ರಿವಿಧಿ, ೯. ಅರವತ್ತುಮೂರು ಪುರಾತನದ ತ್ರಿವಿಧಿ. ಈ ೯ ತ್ರಿವಿಧಿ ಹಸ್ತಪ್ರತಿಗಳಲ್ಲಿ 'ಏಕೋದೇವ ಪ್ರತಿಷ್ಠಾ ತ್ರಿವಿಧಿ' ಇನ್ನೂ ಪ್ರಕಟವಾಗಿಲ್ಲ.

೧. ಮಹಾಲಿಂಗೇಶ್ವರ ಪುರಾಣ, ೨. ಕಾಶೀಕಾಂಡ, ೩. ಶಂಕರ ಸಂಹಿತಾ, ೪. ಭಕ್ತಿರಸದ ಸೋನೆ, ೫. ರುದ್ರಭಾರತ, ೬. ಸಿದ್ಧೇಶ್ವರ ಪುರಾಣ, ೭. ಸೌಂದರಪುರಾಣ, ೮. ಶಿವದಾಸಿಮಾರ್ಯರ ಪುರಾಣ, ೯. ಶರಣ ಲೀಲಾಮೃತ, ೧೦. ನೀಲಕಂಠ ಪುರಾಣ, ೧೧. ಕುಮಾರೇಶ್ವರ ಪುರಾಣ, ೧೨. ಸ್ಕಂದ ಪುರಾಣ, ೧೩. ಬ್ರಹ್ಮೋತ್ತರ ಖಂಡ, ೧೪. ಚಂಪೂ ಭಾರತ, ೧೫. ವೀರಭದ್ರ ಪುರಾಣ, ೧೬. ಕೊಟ್ಟೂರು ಬಸವೇಶ್ವರ ಪುರಾಣ. ಹೀಗೆ ೧೬ ಪುರಾಣದ ಹಸ್ತಪ್ರತಿಗಳನ್ನು ನಂದೀಮಠರು ಶೋಧಿಸಿದ್ದಾರೆ. ಇವುಗಳಲ್ಲಿ 'ಶಿವದಾಸಿಮಾರ್ಯ ಪುರಾಣ' ಇನ್ನೂ ಮುದ್ರಣ ಭಾಗ್ಯ ಕಂಡಿಲ್ಲ. ರಾಮತೀರ್ಥ ಮಹಾತ್ಮೆ ಮತ್ತು ಮಹಾಕೂಟ ಮಹಾತ್ಮೆ ಎಂಬ ಎರಡು ಹಸ್ತಪ್ರತಿಗಳು ಅವರಿಗೆ ದೊರಕಿದ್ದವು. ರಾಮತೀರ್ಥ ಮಹಾತ್ಮೆ ಇನ್ನೂ ಅಪ್ರಕಟಿತವಾಗಿದೆ.

೧. ಗುರುರಗಳೆ, ೨. ಲಿಂಗರಗಳೆ, ೩. ಮಹಾದೇವ ರಗಳೆ, ೪. ಮನೋವಿಕಾರ ನಿರಸನ ರಗಳೆ, ೫. ಶರಣ ಬಸವ ರಗಳೆ, ೬. ಷಡಕ್ಷರ ರಗಳೆ, ೭. ಭಕ್ತಿ ಭಿನ್ನಹ ರಗಳೆ, ೮. ವೀರಶೈವ ರಗಳೆ, ೯. ಚನ್ನಬಸವ ರಗಳೆ, ೧೦. ಬಸವ ರಗಳೆ, ೧೧. ಲಿಂಗ ನಮಸ್ಕಾರ ರಗಳೆ. ೧೧ ರಗಳೆ ಸಾಹಿತ್ಯದ ಹಸ್ತಪ್ರತಿಗಳನ್ನು ಅವರು ಸಂಗ್ರಹಿಸಿದ್ದರು. 'ಚನ್ನಬಸವ ರಗಳೆ' ಈ ಕೃತಿಯನ್ನು ಯಾರು ರಚಿಸಿದ್ದಾರೆ ಎಂಬುದನು ಗುರುತಿಸಬೇಕಾಗಿದೆ. ಮತ್ತು ಅದು ಇನ್ನೂ ಪ್ರಕಟವಾಗಿಲ್ಲ. ಈ ನಿಟ್ಟಿನಲ್ಲಿ ನಾವು ಗಮನ ಹರಿಸಬೇಕಾಗಿದೆ.

**ವಚನ ಸಂಗ್ರಹ ಹಸ್ತಪ್ರತಿಗಳ ವಿವರ :** ೧. ಗಣಭಾಷಿತ ರತ್ನಮಾಲೆ, ೨. ಎಲ್ಲ ಪುರಾತನರ ವಚನಗಳು, ೩. ವಚನ ಶಾಸ್ತ್ರ, ೪. ಸಿದ್ಧೇಶ್ವರ ವಚನ, ೫. ಲಿಂಗವಿಕಳಾವಸ್ಥೆಯ ವಚನಗಳು, ೬.ಚನ್ನಬಸವೇಶ್ವರ ಷಟ್‌ಸ್ಥಲದ ವಚನ, ೭. ಸೋಮೇಶ್ವರ ವಚನ, ೮. ಪ್ರಭುದೇವರ ಟೀಕೆಯ ವಚನ, ೯. ಒಕ್ಕಲಿಗ ಮುದ್ದಯ್ಯನ ವಚನ, ೧೦. ಅಖಂಡೇಶ್ವರ ವಚನ, ೧೧. ಪ್ರಭುದೇವರ ಸೃಷ್ಟಿಯ ವಚನ, ೧೨. ಮುಪ್ಪಿನ ಷಡಕ್ಷರಿಯ ವಚನ, ೧೩. ಚೆನ್ನಂಜೆ ದೇವರು ನಿರೂಪಿಸಿದ ಬಸವ ಸ್ತೋತ್ರದ ವಚನ, ೧೪. ಕೋಲಶಾಂತಯ್ಯನ ವಚನ, ೧೫. ಪ್ರಭುದೇವರ ಶೂನ್ಯಸಂಪಾದನೆ, ೧೬. ಬಸವೇಶ್ವರ ವಚನ, ೧೭. ಎಲ್ಲ ಪುರಾತನರು ನಿರೂಪಿಸಿದ ಬೆಡಗಿನ ವಚನ, ೧೮. ಷಟ್‌ಸ್ಥಲ ಜ್ಞಾನಸಾರಾಮೃತ, ೧೯. ಆಚರಣೆಯ ಸಂಬಂಧದ ವಚನ, ೨೦. ಲಿಂಗಸ್ತೋತ್ರದ ವಚನ, ೨೧.ಅಷ್ಟಾವರಣದ ವಚನ, ೨೨. ಲಿಂಗಸೂತ್ರದ ವಚನ, ೨೩. ಚನ್ನಬಸವೇಶ್ವರ ಅನುಭವ ಸ್ಥಲದ ವಚನ, ೨೪. ಷಡಕ್ಷರ ಸ್ವರವಚನ, ೨೫. ಶಿವಲಿಂಗ ಮಹಾತ್ಮದ ವಚನ, ೨೬. ಸ್ವತಂತ್ರ ಸಿದ್ಧಲಿಂಗೇಶ್ವರ ವಚನ, ೨೭. ಗಣದಾಸಿ ವೀರಣ್ಣನವರ ವಚನ. ಈ ವಚನ ಕಟ್ಟುಗಳಲ್ಲಿ ಬಹುತೇಕ ಪ್ರಕಟವಾಗಿವೆ. ಷಡಕ್ಷರಸ್ವರವಚನ, ಶಿವಲಿಂಗಮಹಾತ್ಮ್ಯದ ವಚನ ಈ ಎರಡು ಕೃತಿಗಳು ಪ್ರಕಟವಾಗಿಲ್ಲ.

**ಶತಕಗಳ ವಿವರ :** ೧. ಗುರು ಶಂಕರೇಶ್ವರ ಶತಕ, ೨. ಶಿವಮಹಿಮಾ ಶತಕ, ೩. ವೃಷಭ ಶತಕ, ೪. ಅರ್ಧೇಂದುಮೌಳಿ ಶತಕ, ೫. ಕದಂಬ ಶತಕ, ೬. ಶಿವಲಿಂಗಾರ್ಚನ ಪೂಜನ ಶತಕ. ಈ ಶತಕಗಳಲ್ಲಿ ಅರ್ದೇಂದುಮೌಳಿ ಶತಕ ಮತ್ತು ಕದಂಬ ಶತಕಗಳು ಇನ್ನು ಬೆಳಕಿಗೆ ಬಂದಿಲ್ಲ.

**ಸ್ತೋತ್ರ ಸಾಹಿತ್ಯದ ವಿವರ :** ೧. ಭುಜಂಗ ಸ್ತೋತ್ರ, ೨. ಶಿವಸಹಸ್ರನಾಮ ಸ್ತೋತ್ರ, ೩. ಪಂಚಸ್ತೋತ್ರ, ೪. ಮಲಯರಾಜ ಸ್ತೋತ್ರ, ೫. ಅನಾಮಯ ಸ್ತೋತ್ರ, ೬. ಹಲಾಯುಧ ಸ್ತೋತ್ರ, ೭. ಮಹಿಮ್ನ ಸ್ತೋತ್ರ, ೮. ಅಪರಾಧ ಸ್ತೋತ್ರ, ೯. ಮಲುಹಣ ಸ್ತೋತ್ರ, ೧೦. ಭೃಂಗಿ ಸ್ತೋತ್ರ, ೧೧. ಮುರಿಗಾ ಗುರುಸಿದ್ಧ ಸ್ವಾಮಿಗಳ ಸ್ತೋತ್ರ, ೧೨. ಶಿವ ಕವಚ, ೧೩. ನೀಲಾಂಬಿಕಾ ಲಲಿತ ಸ್ತೋತ್ರ, ೧೪. ಶಂಕರ ಸಂಹಿತೆ ಲಿಂಗಸ್ತೋತ್ರ, ೧೫. ಶಿವಮಹಿಮಾ ಶತಕ, ೧೬. ಲಿಂಗಷಟ್ಪದಿ, ೧೭. ಬಸವ ಸ್ತೋತ್ರದ ಷಟ್ಪದಿ, ೧೮. ಮಿಶ್ರಸ್ತೋತ್ರದ ಷಟ್ಪದಿ, ೧೯. ಸ್ತೋತ್ರ

ಷಟ್ಪದಿ, ೨೦. ರುದ್ರಾಕ್ಷಿ ಮಹಿಮೆ, ೨೧. ಲಿಂಗಸ್ತೋತ್ರ, ೨೨. ಗಂಗಾಲಹರಿ. ಈ ಸ್ತೋತ್ರ ಸಾಹಿತ್ಯದಲ್ಲಿ ಶಂಕರ ಸಂಹಿತೆ ಲಿಂಗಸ್ತೋತ್ರ ಪ್ರಕಟವಾಗಿಲ್ಲ. ಗಂಗಾಲಹರಿ ಪ್ರಾಯಶಃ ಜಗನ್ನಾಥ ಪಂಡಿತನ ಸಂಸ್ಕೃತಿಯ ಅನುವಾದವಿರಬಹುದು.

ಗಿರಿಜಾ ಸಂವಾದ, ವೀರಸಂಗಯ್ಯನ ಸಾಂಗತ್ಯ, ಲಂಕಾದಹನ ಯಕ್ಷಗಾನ, ಸಾನಂದ ಗಣೇಶ್ವರನ ಸಾಂಗತ್ಯ, ಗಂಗೆ ಗೌರಿ ಸಂವಾದ, ರೇವಣಸಿದ್ಧೇಶ್ವರ ಸಾಂಗತ್ಯ, , ಗುರು ಬೋಧಾಮೃತ, ಇಷ್ಟಲಿಂಗ ಚರಿತ್ರ, ನವರತ್ನ ಚಿಂತಾಮಣಿ, ಕದಂಬಶಾಸ್ತ್ರ, ಚಿದಾನಂದರ ಹಠಯೋಗ, ಹಠಯೋಗ ಪ್ರದೀಪಿಕಾ ಮೊದಲಾದ ಹಸ್ತಪ್ರತಿಗಳನ್ನು ನಂದೀಮಠರು ಸಂಗ್ರಹಿಸಿ, ದೊಡ್ಡ ಸಾಹಸವನ್ನೇ ಮಾಡಿದ್ದರು. ಅವರು ಸಂಗ್ರಹಿಸಿದ ಹಸ್ತಪ್ರತಿಗಳು ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಗೆ ಸೇರ್ಪಡೆಗೊಂಡವು. ಆದರೆ ಈಗ ಅಲ್ಲಿ ಆ ಹಸ್ತಪ್ರತಿಗಳು ಇಲ್ಲ. ಆ ಎಲ್ಲ ಹಸ್ತಪ್ರತಿಗಳನ್ನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಕೊಡಮಾಡಿದ ವಿಷಯ ತಿಳಿದುಬರುತ್ತದೆ.

**ಬೆಟಗೇರಿ ಕೃಷ್ಣಶರ್ಮ :**

ಬೆಳಗಾವಿ ಜಿಲ್ಲೆಯ ವಿದ್ವತ್‌ಪರಂಪರೆಯಲ್ಲಿ ಅಚ್ಚಳಿಯದ ಹೆಸರು ಉಳಿಸಿದ ಬೆಟಗೇರಿ ಕೃಷ್ಣಶರ್ಮರು ಕಥೆ–ಕಾದಂಬರಿ ಮೊದಲಾದ ಸೃಜನಶೀಲ ಸಾಹಿತ್ಯದ ಜೊತೆಗೆ ಪ್ರಾಚೀನ ಗ್ರಂಥಸಂಪಾದನೆಯನ್ನು ಮಾಡಿರುವುದು ವಿಶೇಷ. ಪುರಂದರದಾಸರ ಕೀರ್ತನಗಳನ್ನು ಪೂಜಾ ತತ್ವ, ಆರ್ತಭಾವ, ಮಹಾತ್ಮ್ಯಜ್ಞಾನ, ಕೃಷ್ಣಲೀಲಾ, ಲೋಕನೀತಿ, ಸಂಕೀರ್ಣ ಸಂಗ್ರಹ ಎಂಬ ವಿಷಯಗಳಲ್ಲಿ ಆರು ಸಂಪುಟಗಳಲ್ಲಿ ಸಂಪಾದಿಸಿದ ಕೀರ್ತಿ ಆನಂದಕಂದರರದು. ಅಲ್ಲದೆ ಅಕ್ರೂರ ಚರಿತ್ರೆ, ಕನಕದಾಸರ ಗೀತೆಗಳು, ಪ್ರಸನ್ ವೆಂಕಟದಾಸರ ಭಾಗವತ, ಮೃಚ್ಛಕಟಿಕ ಮೊದಲಾದ ಕೃತಿಗಳನ್ನು ಸಂಪಾದಿಸಿದ್ದಾರೆ. ಅಕ್ರೂರ ಚರಿತ್ರೆಯನ್ನು ಸಂಪಾದಿಸುವ ಕಾಲಕ್ಕೆ ಬೆಳಗಾವಿ ಜಿಲ್ಲೆಯಲ್ಲಿ ದೊರೆತ ಹಸ್ತಪ್ರತಿಗಳನ್ನು ಆಧರಿಸಿದ್ದು ಇಲ್ಲಿ ಗಮನಿಸುವ ಅಂಶವಾಗಿದೆ.

**ಎಂ. ಆರ್. ಸಾಖರೆ :**

ಕೆ.ಎಲ್.ಇ. ಸಂಸ್ಥೆಯನ್ನು ಕಟ್ಟಿದ ಸಪ್ತರ್ಷಿಗಳಲ್ಲಿ ಒಬ್ಬರಾದ ಎಂ. ಆರ್. ಸಾಖರೆ ಅವರು ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದರು ಎಂದು ಅವರ ಮಗಳು ವಿಭಾವತಿ ಖಾನಾಪುರಿ ಅವರು ನನಗೆ ತಿಳಿಸಿದರು. ೧೯೨೯ರಲ್ಲಿ ಅವರು ತಮ್ಮ ಸಂಗ್ರಹದಲ್ಲಿದ್ದ ಕಳಲೆ ನಂಜರಾಜನ 'ಸಂಗೀತ ಗಂಗಾಧರಂ' ಅಪರೂಪದ ಹಸ್ತಪ್ರತಿಯನ್ನು ಶಾಸ್ತ್ರಶುದ್ಧವಾಗಿ ಪ್ರಕಟಿಸಿದ್ದರು. ಈ ಕೃತಿಯ ಇತರ ಪ್ರತಿಗಳು ಎಷ್ಟು ಹುಡುಕಿದರೂ ದೊರೆಯಲಿಲ್ಲ. ಈ ಮೊದಲು ಅದು ಎಲ್ಲಿಯೂ ಪ್ರಕಟವಾಗಿರಲಿಲ್ಲ. ಒಂದೇ ಒಂದು ಹಸ್ತಪ್ರತಿಯನ್ನು ಅವಲಂಬಿಸಿ ಕೃತಿಸಂಪಾದನೆ ಮಾಡುವದು ದುಸ್ತರ ಕಾರ್ಯ. ಪ್ರತಿಯಲ್ಲಿ ತಪ್ಪುಗಳಿರುವದು ಸ್ವಾಭಾವಿಕ. ಅವುಗಳನ್ನು ತಿದ್ದುವವರಲ್ಲಿ ಭಾಷೆಯ ಮೇಲೆ ಪ್ರಭುತ್ವಬೇಕು. ಸಂಪಾದಕನು ಬಹುಶ್ರುತನಾಗಿರಬೇಕು. ಅಂದಾಗಲೇ ಶುದ್ಧಪ್ರತಿ ಸಿದ್ಧವಾಗುವದು. ಆದರೂ ಎಷ್ಟೋ ತಪ್ಪುಗಳು ಉಳಿದುಕೊಳ್ಳುವದು ಸಹಜ. ಈ ಕೃತಿಯ ಆರಂಭದಲ್ಲಿ ಬರುವ

ಕವಿಯ ಇಷ್ಟದೇವತಾ ಸ್ತುತಿ ಮತ್ತು ಕವಿಪರಿಚಯದ ಪದ್ಯಗಳು ಕಠಿಣವಾಗಿರುವದರಿಂದ ಸಾಖರೆ ಅವರು ಅವುಗಳ ಭಾಷಾಂತರ ಕೊಟ್ಟಿದ್ದಾರೆ. ಮಿಕ್ಕ ಪದ್ಯಗಳಿಗೆ ಕಠಿಣ ಶಬ್ದಗಳ ಅರ್ಥವನ್ನು ಮಾತ್ರ ಒದಗಿಸಿದ್ದಾರೆ. ಸಾಮಾನ್ಯ ಓದುಗನಿಗೆ ಹೆಚ್ಚು ಅನುಕೂಲ ಮಾಡಿದ್ದಾರೆ. ಸಾಖರೆಯವರು– "ಅವು ಶೃಂಗಾರ ರಸದಿಂದ ತುಂಬಿವೆ; ಭಾಷಾಂತರ ಕೊಟ್ಟರೆ ಭಾವಪೂರ್ಣವಾದ ಶೃಂಗಾರ ವಾಚ್ಯಕ್ಕೆ ಇಳಿಯಬಹುದು ಎನ್ನುವ ಉದ್ದೇಶದಿಂದ ಭಾಷಾಂತರ ಕೊಟ್ಟಿಲ್ಲ"[೨೪] ಎಂದು ಸಮರ್ಥಿಸಿಕೊಂಡಿದ್ದಾರೆ.

ಜಯದೇವಿ ಕವಿಬರೆದ 'ಗೀತಗೋವಿಂದ' ರಾಧೆ ಮತ್ತು ಕೃಷ್ಣರ ಪ್ರೇಮಲೀಲೆಗಳ ಮನೋಹರ ಕೃತಿಯಾಗಿದ್ದು, ಅದರಲ್ಲಿಯ ಪದ್ಯಗಳು ಶೃಂಗಾರರಸದಿಂದ ತುಂಬಿವೆ. ರಾಧೆ–ಕೃಷ್ಣರ ನಡುವಿನ ಸಂಭಾಷಣೆಗಳು ಸಂಗೀತಮಯವಾಗಿದ್ದು ರಸಿಕರ ಮನಸ್ಸನ್ನು ಸೆರೆಹಿಡಿಯುತ್ತವೆ. ಈ ಕೃತಿಯ ಜನಪ್ರಿಯತೆಯನ್ನು ಗಮನಿಸಿದ ಕಳಲೆನಂಜರಾಜ ಕವಿ 'ಗೀತಗೋವಿಂದ'ವನ್ನು ಅನುಕರಿಸಿ ಈ 'ಸಂಗೀತ ಗಂಗಾಧರ'ವನ್ನು ಬರೆದಿದ್ದಾನೆ. ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಒಂದಾದ ಭಿಕ್ಷಾಟನ ಲೀಲೆ ಇದರ ವಸ್ತು. ಸಾಖರೆ ಅವರು ಚನ್ನಬಸವ ಪುರಾಣದಲ್ಲಿ ಬಂದ ಭಿಕ್ಷಾಟನ ಲೀಲೆಯ ಕಥಾಸಾರವನ್ನು ಕೊಟ್ಟು ಅದಕ್ಕೂ ಸಂಗೀತ ಗಂಗಾಧರದಲ್ಲಿ ಬರುವ ಕಥೆಗೂ ಇರುವ ಸಾಮ್ಯ ವೈಷಮ್ಯಗಳನ್ನು ವಿಮರ್ಶಕನ ದೃಷ್ಟಿಯಿಂದ ಇಲ್ಲಿ ತೂಗಿನೋಡಿರುವದು ಮಹತ್ವಪೂರ್ಣವಾಗಿದೆ. ಸಂಗೀತ ಗಂಗಾಧರದಲ್ಲಿ ಬಂದದೇವತೆಗಳ ವಿರಹತಾಪ ಪರಿಪೂರ್ಣಾವಸ್ಥೆಗೆ ಮುಟ್ಟಿದ್ದು. ಅವನನ್ನು ಬಹುಕಾಲ ಅಗಲಿದ ಪಾರ್ವತಿಯು ಅವನನ್ನು ಮತ್ತೆ ಕೂಡಿದ ಪ್ರಸಂಗದಲ್ಲಿ ವಿಪ್ರಲಂಭ ಶೃಂಗಾರಕ್ಕೆ ಹೆಚ್ಚು ಅವಕಾಶ ಪಡೆದಿದೆ.

'ಸಂಗೀತ ಗಂಗಾಧರ'ದ ಕಥೆ ಕಿರಿದು; ವರ್ಣನೆ ಹಿರಿದು. ತ್ರಿಮೂರ್ತಿಗಳಲ್ಲಿ ಒಬ್ಬನಾದ ಬ್ರಹ್ಮನಲ್ಲಿ ಮಿಕ್ಕವರಿಗಿಂತ ತಾನೇ ಮೇಲೆಂಬ ಅಹಂಕಾರ ಮೂಡುತ್ತದೆ. ಆಗ ಶಿವನು ಅವನ ಒಂದು ತಲೆಯನ್ನು ಚಿವುಟಿ ಅದನ್ನೇ ತನ್ನ ಕಪಾಲವನ್ನಾಗಿ ಮಾಡಿಕೊಂಡು ಭಿಕ್ಷೆಗೆ ಹೊರಡುವನು. ದೇವಾಧಿದೇವತೆಗಳು ಶಿವನಿಗೆ ಬೇಡಿದ್ದನ್ನೆಲ್ಲ ನೀಡುವರಲ್ಲದೆ ಅವನ ಸುಂದರ ವ್ಯಕ್ತಿತ್ವಕ್ಕೆ ಮರುಳಾಗಿ ಅವನ ಬೆನ್ನುಹತ್ತುವರು. ಇತ್ತ ಪಾರ್ವತಿ ತನ್ನ ಪತಿ ಬೇಗಬರಲಿಲ್ಲವೆಂದು ವಿರಹತಾಪದಿಂದ ಬೆಂದು ಬಳಲುವಳು. ಕೊನೆಗೆ ದಾಸಿಯೊಬ್ಬಳ ಪ್ರಯತ್ನ ಫಲಿಸಿ ಶಿವ–ಪಾರ್ವತಿಯ ಒಂದಾಗುತ್ತಾರೆ. ಕಥೆಯ ತುಂಬಾ ವಿಪ್ರಲಂಭ ಶೃಂಗಾರ, ಕೊನೆಯಲ್ಲಿ ಸಂಭೋಗ ಶೃಂಗಾರ ಅವಕಾಶ ಪಡೆದಿದೆ.

ಮೈಸೂರು ರಾಜವಂಶಕ್ಕೆ ಸೇರಿದವನೂ, ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲಿ ವಿದ್ವಾಂಸನೂ ಆಗಿದ್ದ ಕವಿ ಕಳಲೆ ನಂಜರಾಜನ ಜೀವನ, ಕಾಲ, ದೇಶಗಳ ವಿಷಯವನ್ನು ಸಾಖರೆಯವರು ಸಂಗೀತ ಗಂಗಾಧರ ಪ್ರಸ್ತಾವನೆಯಲ್ಲಿ ಸುದೀರ್ಘವಾಗಿ ವಿವರಿಸಿದ್ದಾರೆ. ಅವರ ಸಂಶೋಧನಾ ಸಾಮರ್ಥ್ಯ ಮತ್ತು ಅಪಾರ ಪಾಂಡಿತ್ಯ ಈ ಸಂಪಾದನಾ ಕೃತಿಯಲ್ಲಿ ವ್ಯಕ್ತವಾಗಿದ್ದರೂ ಅಲ್ಲಲ್ಲಿ ದೋಷಗಳು ನುಸುಳಿವೆ. ಏನಿದ್ದರೂ ತಾಳೆಗರಿಯ ಕಟ್ಟಿನಲ್ಲಿ ಸಿಕ್ಕುನಶಿಸಿ ಹೋಗುತ್ತಿದ್ದ

ಸಂಗೀತ ಗಂಗಾಧರವನ್ನು ಸಾಖರೆಯವರು ಸಂಪಾದಿಸಿ ಪ್ರಕಟಿಸಿದ್ದು ಗಮನಾರ್ಹ. ಈ ಸಂಸ್ಕೃತ ಕೃತಿಯನ್ನು ತಮ್ಮ ತಂದೆ ರೇವಪ್ಪನವರ ಸ್ಮರಣೆಗೆ ಅರ್ಪಿಸಿದ್ದು ಇನ್ನೂ ಗಮನಾರ್ಹ. ಸಂಗೀತ ಗಂಗಾಧರಂ ಕೃತಿ ಈವರೆಗೆ ಮತ್ತೆ ಎಲ್ಲಿಯೂ ಪ್ರಕಟವಾಗಿಲ್ಲ, ಮತ್ತು ಸಾಖರೆ ಅವರ ಪ್ರಕಟಿತ ಕೃತಿಯೂ ದೊರೆಯುತ್ತಿಲ್ಲವೆಂಬುದು ವಿಷಾದದ ಸಂಗತಿಯಾಗಿದೆ.

**ನಂದೀಕೇಶ್ವರನ ಲಿಂಗಧಾರಣ ಚಂದ್ರಿಕೆ :**

ಎಂ. ಆರ್. ಸಾಖರೆ ಅವರ ಇನ್ನೊಂದು ಸಂಪಾದನೆ 'ಲಿಂಗಧಾರಣ ಚಂದ್ರಿಕೆ'. ಈ ಕೃತಿಗೆ ನಮ್ಮ ದೇಶದ ಶ್ರೇಷ್ಠ ದಾರ್ಶನಿಕ ವಿದ್ವಾಂಸರೂ ರಾಷ್ಟ್ರಪತಿಗಳೂ ಆಗಿದ್ದ ಎಸ್. ರಾಧಾಕೃಷ್ಣನ್ ಅವರು ಮುನ್ನುಡಿ ಬರೆದಿರುವುದು ಅಭಿಮಾನದ ಸಂಗತಿಯಾಗಿದೆ. ಈ ಕೃತಿಯನ್ನು ಆಳವಾಗಿ ಅಭ್ಯಾಸ ಮಾಡಿ ಸಂಪಾದಿಸುವದರ ಜೊತೆಗೆ ಅದಕ್ಕೆ ಸುದೀರ್ಘವಾದ ಮುನ್ನುಡಿಯನ್ನು ಬರೆದದ್ದು ಬಹುದೊಡ್ಡ ಸಾಧನೆ. 'ಲಿಂಗಧಾರಣ ಚಂದ್ರಿಕೆ'ಯನ್ನು ಸಂಸ್ಕೃತದಲ್ಲಿ ಬರೆದ ಕವಿ ನಂದಿಕೇಶ್ವರ. ಅದನ್ನು ಮೊಟ್ಟಮೊದಲು ಪ್ರಕಟಿಸಿದವರು ಕಾಶಿಯ ಜಂಗಮವಾಡಿ ಮಠದ ಮಹಾಸ್ವಾಮಿಗಳು. ಅದರಲ್ಲಿ ಮೂಲದ ಎಷ್ಟೋ ಭಾಗ ಬಿಟ್ಟುಹೋಗಿತ್ತು. ಅಲ್ಲದೆ ಪದ್ಯಗಳು ಗದ್ಯರೂಪದಲ್ಲಿ ಅಚ್ಚಾಗಿದ್ದವು. ಇದನ್ನು ಮನಗಂಡ ಸಾಖರೆ ಅವರು ಮತ್ತೆ ತಮ್ಮ ಸಂಗ್ರಹದಲ್ಲಿದ್ದ ಎರಡು ಹಸ್ತಪ್ರತಿಗಳನ್ನು ಗಮನಿಸಿ, ಮೂರು ಪ್ರತಿಗಳನ್ನು ತುಲನಾತ್ಮಕ ದೃಷ್ಟಿಯಿಂದ ತೂಗಿನೋಡಿ ಶುದ್ಧಪ್ರತಿಯನ್ನು ತಯಾರಿಸಿದ್ದಲ್ಲದೆ. ಪಾಠಾಂತರಗಳನ್ನು ಅಡಿಯಲ್ಲಿ ಕೊಟ್ಟಿರುವದು ಸಂಪಾದನೆಯ ದೃಷ್ಟಿಯಿಂದ ಸಮರ್ಪಕ ಕಾರ್ಯವಾಗಿದೆ. ಮತ್ತು ಗ್ರಂಥಸಂಪಾದನೆ ಪ್ರಕಟನೆಯ ನಿಯಮಗಳನ್ನು ಸಶಾಸ್ತ್ರೀಯವಾಗಿ ಪಾಲಿಸಿರುವದು ಈ ಕೃತಿಯ ವೈಶಿಷ್ಟ್ಯವಾಗಿದೆ.

ಲಿಂಗಧಾರಣ ಚಂದ್ರಿಕೆ ಲಿಂಗಾಯತಧರ್ಮದ ತಿರುಳನ್ನು ತಿಳಿಸುವ ಒಂದು ಮಹತ್ವಪೂರ್ಣ ಕೃತಿ. ಲಿಂಗಧಾರಣೆ, ಲಿಂಗಪೂಜೆ, ಲಿಂಗಪ್ರಕಾರ, ಇಷ್ಟಲಿಂಗದ ಅವಶ್ಯಕತೆ, ಇಷ್ಟಲಿಂಗ ಪ್ರಾಣ, ಲಿಂಗ–ಭಾವಲಿಂಗಗಳ ಸಂಬಂಧ. ಲಿಂಗಾಂಗ ಸಾಮರಸ್ಯ ಇವೆ ಮೊದಲಾದ ವಿಷಯಗಳನ್ನು ಶಾಸ್ತ್ರೋಕ್ತವಾಗಿ ಈ ಕೃತಿಯಲ್ಲಿ ವಿವರಿಸಲಾಗಿದೆ. ಈ ಕೃತಿಯ ಸಂಪಾದನೆ ವಿವೇಚನೆಗೆ ಪೂರ್ವದಲ್ಲಿ ಸಾಖರೆ ಅವರು ವಿಶ್ವ, ಲಿಂಗ, ಆತ್ಮ, ಪರಮಾತ್ಮ ಮುಂತಾದವುಗಳನ್ನು ಸಕಲಶಾಸ್ತ್ರಗಳ ಹಿನ್ನೆಲೆಯಲ್ಲಿ ಸಮರ್ಪಕವಾಗಿ ವಿವೇಚಿಸಿದ್ದು ಮೂಲಕೃತಿಗಿಂತ ಅವರು ಬರೆದ ಮುನ್ನುಡಿಯು ಬೃಹತ್ತು ಮತ್ತು ಮಹತ್ತು ಎರಡರಲ್ಲಿಯೂ ಮಿಗಿಲಾಗಿದೆ. ಯಾವ ವಿಷಯವನ್ನೇ ವಿವೇಚಿಸಲಿ, ಅದನ್ನು ಐತಿಹಾಸಿಕವಾಗಿ ವಿವರಿಸಿ ಭಿನ್ನ ಭಿನ್ನ ಅಭಿಪ್ರಾಯಗಳ ಆಧಾರವನ್ನು ಕೊಟ್ಟು ವಿಮರ್ಶಿಸುವದು ಸಾಖರೆ ಅವರ ಬರವಣಿಗೆಯ ವೈಶಿಷ್ಟ್ಯವಾಗಿದೆ. ವೇದ, ಉಪನಿಷತ್ತು, ಆಗಮಗಳ ಮೂಲವನ್ನೂ ಅವುಗಳ ಸಂಬಂಧವನ್ನೂ ವಿವರಿಸುವದರ ಜೊತೆಗೆ ಆಗಮಗಳ ರಹಸ್ಯವನ್ನು ಪ್ರತ್ಯೇಕವಾಗಿ ವಿವೇಚಿಸಲಾಗಿದೆ. ಶೈವಕ್ಕೂ ಲಿಂಗಾಯತಕ್ಕೂ ಯಾವ ಸಂಬಂಧವೂ ಇಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಈ ನೂತನ ಧರ್ಮಕ್ಕೆ ವೀರಶೈವ ಎಂದು ಕರೆಯದೆ

ಲಿಂಗಾಯತ ಎನ್ನುವದೇ ಹೆಚ್ಚು ಸೂಕ್ತ ಎಂದು ತೀರ್ಮಾನಿಸಿದ್ದಾರೆ. ಲಿಂಗಾಯತ ಧರ್ಮವು ಬೇರೊಂದು ಧರ್ಮದ ಶಾಖೆಯಾಗಿರದೆ ಸ್ವತಂತ್ರ ವೃಕ್ಷದಂತೆ ಪ್ರತ್ಯೇಕವಾಗಿ ಬೆಳೆದು ಬಂದುದನ್ನು ಸ್ಪಷ್ಟಗೊಳಿಸಿದ್ದಾರೆ. ಇದು ಪಂಚಾಚಾರ್ಯರಿಂದ ಹುಟ್ಟಿರದೆ ಬಸವನಿಂದಲೇ ಸ್ವತಂತ್ರವಾಗಿ ತಲೆಯೆತ್ತಿ ಬೆಳೆಯಿತೆಂದು ತಿಳಿಸಿದ್ದಾರೆ. ಸಾಖರೆ ಅವರ ಹರಿತವಾದ ಬುದ್ಧಿಮತ್ತೆ, ಬಹುಶ್ರುತ ಪಾಂಡಿತ್ಯ ಈ ಕೃತಿಯ ಮುನ್ನುಡಿಯಲ್ಲಿ ಮಡುಗಟ್ಟಿದೆಯೆಂದು ಹೇಳಬಹುದು.

ಎಂ. ಆರ್. ಸಾಖರೆಯವರು ಈ ಕೃತಿಯನ್ನು ಸಂಪಾದಿಸುವದಕ್ಕೆ ಮತ್ತು ಸುದೀರ್ಘವಾದ ಮುನ್ನುಡಿಯನ್ನು ಬರೆಯವದಕ್ಕೆ ಮುಖ್ಯ ಕಾರಣ ಅಂದು ಜನರಲ್ಲಿ ಲಿಂಗಾಯತದ ಬಗ್ಗೆ ಇದ್ದ ಅಜ್ಞಾನ ಮತ್ತು ಅನ್ಯಥಾಜ್ಞಾನವನ್ನು ನಿವಾರಿಸುವದು. ಲಿಂಗಾಯತರು ತಮ್ಮ ಧರ್ಮವನ್ನೇ ತಾವು ತಿಳಿಯದೆ ಇದ್ದ ಕಾಲವದು. ಇದನ್ನೆಲ್ಲ ಹೋಗಲಾಡಿಸಿ ಲಿಂಗಾಯತರಲ್ಲಿ ತಮ್ಮ ಧರ್ಮದ ಬಗ್ಗೆ ಸರಿಯಾದ ಸ್ಪಷ್ಟವಾದ ಕಲ್ಪನೆ ಮೂಡುವಂತೆ ಮಾಡಲೆಂದೇ ಈ ಕೃತಿ ಪ್ರಕಟವಾಯಿತು.

ಸಾಖರೆ ಅವರು ೧೯೫೫ರಲ್ಲಿ ನಿಧನರಾದರು. ನಂತರ ಅವರ ಹಸ್ತಪ್ರತಿ ಮತ್ತು ಗ್ರಂಥಗಳನ್ನು ಕೆ.ಎಲ್.ಇ. ಸಂಸ್ಥೆಗೆ ದೇಣಿಗೆ ನೀಡಲಾಯಿತು ಎಂದು ಅವರ ಇನ್ನೊಬ್ಬ ಮಗಳು ವಸುಮತಿ ಹುಲ್ಲೋಳಿ ಅವರು ನನಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹೇಳಿದರು. ಆದರೆ ಕೆ.ಎಲ್.ಇ. ಸಂಸ್ಥೆಯ ಯಾವ ಅಂಗಸಂಸ್ಥೆಯಲ್ಲಿ ಈ ಕೃತಿಗಳು ಮೂಲೆಗುಂಪಾದವು ಎಂದು ಹೇಳುವುದು ಕಷ್ಟವಾಗಿದೆ. ಇಷ್ಟಾಗಿಯೂ ಎರಡು ಅಮೂಲ್ಯ ಹಸ್ತಪ್ರತಿಗಳು ಬೆಳಕು ಕಂಡವು ಎಂಬುದು ಹೆಮ್ಮೆಯ ಸಂಗತಿಯಾಗಿದೆ.

**ಈಶ್ವರ ಸಣಕಲ್ಲ :**

'ಜಗವೆಲ್ಲ ನಗುತಿರಲಿ–ಜಗದಳವು ನನಗಿರಲಿ' ಎಂದು ಲೋಕಪ್ರಸಿದ್ಧ ಗೀತೆಯನ್ನು ಬರೆದ ಈಶ್ವರ ಸಣಕಲ್ಲ ಅವರು ಗೋಕಾಕ ತಾಲೂಕಿನ ಯಾದವಾಡ ಗ್ರಾಮದಲ್ಲಿ ಜನಿಸಿದವರು. ಕೆಲವು ಕಾಲ ಬೆಳಗಾವಿಯ ನಾಗನೂರು ರುದ್ರಾಕ್ಷಿಮಠದಲ್ಲಿ ವಾಸವಾಗಿದ್ದರು. ತಮ್ಮ ಸಂಗ್ರಹದಲ್ಲಿದ್ದ ಮೌಲಿಕ ಗ್ರಂಥಗಳನ್ನು ಮತ್ತು ತಾಡೋಲೆಗಳನ್ನು ನಾಗನೂರು ರುದ್ರಾಕ್ಷಿಮಠಕ್ಕೆ ದೇಣಿಗೆ ನೀಡಿದರು. ಅವರು ಅನುವಾದಿಸಿದ ಕೆಲವು ಕೃತಿಗಳು ಇನ್ನೂ ಹಸ್ತಪ್ರತಿ ರೂಪದಲ್ಲಿ ಶ್ರೀಮಠದ ಸಂಗ್ರಹದಲ್ಲಿವೆ. ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಒಂದು ಅನುವಾದಿತ ಅಪ್ರಕಟಿತ ಹಸ್ತಪ್ರತಿ ಇಲ್ಲಿದೆ. ಗರಗದ ಮಡಿವಾಳ ಶಿವಯೋಗಿಗಳ ಚರಿತ್ರೆಯನ್ನು ಬರೆಯುವ ಕಾಲಕ್ಕೆ ಅನೇಕ ಮಹತ್ವದ ಹಸ್ತಪ್ರತಿಗಳನ್ನು ಸಣಕಲ್ಲರು ಸಂಗ್ರಹಿಸಿದ್ದರು. ಆ ಸಂಗ್ರಹವನ್ನು ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿ ಗಮನಿಸಬಹುದು.

**ಸಿದ್ಧಲಿಂಗಯ್ಯ ಹೊಳಿಮಠ :**

ಸಿದ್ಧಲಿಂಗಯ್ಯ ಹೊಳಿಮಠ ಅವರು ಬೆಳಗಾವಿ ಜಿಲ್ಲೆ ಹುಕ್ಕೇರಿ ತಾಲೂಕಿನ ವಂಟಮುರಿ ಹೊಳಿಮಠದ ಪೀಠಾಧಿಪತಿಗಳಾಗಿದ್ದರು. ವಿರಕ್ತಮಠದ ಸ್ವಾಮಿಗಳ ಪೀಠಾರೋಹಣ ಕಾಲಕ್ಕೆ

ಗುರುಗಳಾದವರು ಶೂನ್ಯಸಂಪಾದನೆ, ಬಸವಣ್ಣನವರ ಷಟ್‌ಸ್ಥಲ ವಚನಗಳಕಟ್ಟು ಮತ್ತು ಕರಣ ಹಸಿಗೆ, ಮಂತ್ರಗೋಪ್ಯ ಕೃತಿಯ ತಾಡೋಲೆಗಳನ್ನು ಆಶೀರ್ವಾದ ರೂಪವಾಗಿ ನೀಡುತ್ತ ಬರುವ ಒಂದು ಸತ್‌ಸಂಪ್ರದಾಯವಿದೆ. ಎಲ್ಲಾ ವಿರಕ್ತಮಠಾಧೀಶರಿಗೂ ಈ ಪ್ರಾಚೀನ ವಚನಕಟ್ಟುಗಳನ್ನು ನೀಡಲಾಗುತ್ತದೆ. ಸಿದ್ಧಲಿಂಗ ಸ್ವಾಮಿಗಳು ಹೊಳಿಮಠ ಅವರು ಇವಲ್ಲದೆ ಇನ್ನೂ ನೂರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದರು. ೧೯೭೦ರಲ್ಲಿ ಹೊಳಿಮಠವು ಹಿಡಕಲ್ ಜಲಾಶಯದಲ್ಲಿ ಮುಳುಗಿ ಹೋಯಿತು. ಆ ಸಂದರ್ಭದಲ್ಲಿ ಅನೇಕ ಹಸ್ತಪ್ರತಿಗಳು ಕಣ್ಮರೆಯಾದವು. ಆದರೂ ಇಪ್ಪತ್ತಕ್ಕೂ ಹೆಚ್ಚು ತಾಡೋಲೆ ಕಟ್ಟುಗಳನ್ನು ಸಿದ್ಧಲಿಂಗಯ್ಯ ಹೊಳಿಮಠ ಅವರು ಜತನವಾಗಿ ಕಾಪಾಡಿಕೊಂಡು ಬಂದಿದ್ದರು. ವಂಟಮುರಿ ನೀರಿನಲ್ಲಿ ಮುಳುಗಿದ ನಂತರ ಉಳ್ಳಾಗಡ್ಡಿ ಖಾನಾಪುರ ಗ್ರಾಮದಲ್ಲಿ ಬಂದು ನೆಲೆಸಿದ್ದರು. ಅವರ ಹತ್ತಿರ ಕೆಲವು ಮೌಲಿಕವಾದ ಹಸ್ತಪ್ರತಿಗಳಿದ್ದವು.

೧. ಬೋಳಬಸವೇಶ್ವರ ದೇವರು ಸಂಕಲಿಸಿದ ೧೦೦೮ ವಚನಗಳ ಕಟ್ಟು

೨. ಮೋನಪ್ಪ ಪಂಡಿತನ ವೀರಶೈವಾಚಾರ ಕೌಸ್ತುಭದೊಳಗಿನ ಇಷ್ಟಲಿಂಗ ಪೂಜಾ ವಿಧಾನ

೩. ಏಳಂದೂರ ಪರ್ವತಶಿವಯೋಗಿ ಕೃತ ಏಕೋತ್ತರ ಶತಸ್ಥಲ

೪. ಪ್ರಭುಲಿಂಗದ ನಾಂದ್ಯ

೫. ಮಾಚಿದೇವನ ಮನೋಲ್ಲಾಸ

ಮುಂತಾದ ಹಸ್ತಪ್ರತಿಗಳಿದ್ದವು. ಈ ಎಲ್ಲ ಹಸ್ತಪ್ರತಿಗಳನ್ನು ನಾಗನೂರು ರುದ್ರಾಕ್ಷಿಮಠದ ಗ್ರಂಥಾಲಯಕ್ಕೆ ನೀಡಿದರು. ಸಂಸ್ಥೆಯ ನಿರ್ದೇಶಕರಾದ ಎಸ್. ಆರ್. ಗುಂಜಾಳ ಅವರು "ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ ಪ್ರಥಮ ವರ್ಷದ ಸಿಂಹಾವಲೋಕನ ಪುಸ್ತಕದಲ್ಲಿ ಸಿದ್ಧಲಿಂಗಯ್ಯ ಹೊಳಿಮಠ ಅವರ ಈ ಕೊಡುಗೆಯನ್ನು ಕೃತಜ್ಞತಾಪೂರ್ವಕ ಸ್ಮರಿಸಿಕೊಂಡಿದ್ದಾರೆ."[೨೫] ಈ ಹಸ್ತಪ್ರತಿಗಳು ಪಂಡಿತ ರಾಠೋಡ ಅವರು ಮಾಡಿದ ಹಸ್ತಪ್ರತಿ ಸೂಚಿಯಲ್ಲಿ ಸೇರಿಲ್ಲ. ವಿಶೇಷವೆಂದರೆ ಹಸ್ತಪ್ರತಿ ತಜ್ಞ ಎಸ್. ಶಿವಣ್ಣ ಅವರು ಬೋಳಬಸವೇಶ್ವರ ದೇವರು ಸಂಕಲಿಸಿದ ೧೦೦೮ ವಚನಗಳ ಕಟ್ಟು ಹೊಸ ಕಟ್ಟು ಎಂದು ಹೇಳಿದ್ದಾರೆ. ಇನ್ನೂ ವಿಶೇಷವೆಂದರೆ ಈ ಕಟ್ಟಿನಲ್ಲಿ ಅಜಗಣ್ಣ ಶರಣರ ಹತ್ತು ಹೊಸ ವಚನಗಳನ್ನು ಮೊದಲ ಬಾರಿಗೆ ಶೋಧಿಸಿ ಪ್ರಕಟಿಸಿದ್ದಾರೆ. ಸಮಗ್ರ ವಚನ ಸಂಪುಟದಲ್ಲಿ ಈ ವಚನಗಳು ಪ್ರಕಟವಾಗಿಲ್ಲವೆಂಬುದು ಗಮನಿಸುವ ಅಂಶ. "ಉಳ್ಳಾಗಡ್ಡಿ ಖಾನಾಪುರದಂಥ ಅನಾಮಧೇಯ ಹಳ್ಳಿಯಲ್ಲಿ ಹತ್ತು ಹೊಸ ವಚನಗಳು ದೊರೆತದ್ದು ಅಭಿಮಾನ ಪಡುವ ಸಂಗತಿ ಎಂದು ಎಸ್. ಶಿವಣ್ಣನವರು ಅಭಿಪ್ರಾಯ ಪಟ್ಟಿದ್ದಾರೆ."[೨೬] ಅಷ್ಟೇ ಅಲ್ಲದೇ ಕೊಳ್ಳೆಗಾಲ ತಾಲೂಕಿನ ಏಳಂದೂರು ಮಠದ ಪೀಠಾಧಿಪತಿಯಾಗಿದ್ದ ಪರ್ವತ ಶಿವಯೋಗಿಯೂ ಹತ್ತಾರು ಕೃತಿಗಳನ್ನು ಬರೆದಿದ್ದಾನೆ. ಆತ ಬರೆದ ಏಕೋತ್ತರ ಶತಸ್ಥಲ ಕೃತಿ ವಿದ್ವಾಂಸರ ಕಣ್ಣುತಪ್ಪಿಸಿ ಓಡಾಡುತ್ತಿತ್ತು. ಮೈಸೂರು ಪ್ರಾಂತದ ಪರ್ವತ ಶಿವಯೋಗಿಯ

ಈ ಏಕೋತ್ತರ ಶತಸ್ಥಲದ ಹಸ್ತಪ್ರತಿ ಸಿದ್ಧಲಿಂಗಯ್ಯ ಹೊಳಿಮಠ ಅವರ ಸಂಗ್ರಹದಲ್ಲಿತ್ತು. ಶಿವಣ್ಣನವರು ಈ ಹಸ್ತಪ್ರತಿಯನ್ನು ಪ್ರತಿ ಮಾಡಿಟ್ಟುಕೊಂಡಿದ್ದರು. ಆದರೆ ಅಷ್ಟರಲ್ಲಿ ಅವರು ಲಿಂಗೈಕ್ಯರಾದರು. ಈ ಹಸ್ತಪ್ರತಿಯನ್ನು ಬಿ. ನಂಜುಂಡಸ್ವಾಮಿ ಅವರು ಶೋಧಿಸಿ ಇತ್ತೀಚೆಗೆ ಪ್ರಕಟಿಸಿದ್ದಾರೆ.

**ವಿ.ಎಸ್. ಮಾಳಿ :**

ವಿ. ಎಸ್. ಮಾಳಿ ಅವರು ಮೂಲತಃ ಅಥಣಿ ತಾಲೂಕಿನ ಜಂಬಗಿಯಲ್ಲಿ ಹುಟ್ಟಿದವರು. ಅವರು ಹಾರೂಗೇರಿಯ ಎಸ್.ವ್ಹಿ. ಎಸ್. ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರು ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಂಶೋಧನಾ ಸಂಸ್ಥೆಯ ಅಧ್ಯಯನಾಂಗದ ನಿರ್ದೇಶಕರು. ವಿಮರ್ಶಕರಾಗಿ, ಸಂಶೋಧಕರಾಗಿ, ಒಳ್ಳೆಯ ಸಭಾಭೂಷಣರಾಗಿ ಈ ನಾಡಿಗೆ ಸುಪರಿಚಿತರು. ಇವರ ಹತ್ತಿರ ಅತ್ಯಂತ ಮಹತ್ವದ ೯ ಹಸ್ತಪ್ರತಿಗಳ ಸಂಗ್ರಹವಿದೆ.

೧. ಮುಪ್ಪಿನ ಷಡಕ್ಷರಿಯ ಸ್ವರವಚನ (ತಾಡೋಲೆ ಪ್ರತಿ)

೨. ಸೋಮಶೇಖರ ಚಿತ್ರಶೇಖರ ಯಕ್ಷಗಾನ (ತಾಡೋಲಿ ಪ್ರತಿ)

೩. ಲಾವಣಿ (ಆಧುನಿಕ ಕಾಗದಪ್ರತಿ)

೪. ಹರಿಶ್ಚಂದ್ರನ ಕಥೆ

೫. ಶಿವಸಹಸ್ರ ನಾಮಾವಳಿ

೬. ಕುದುರೆ ಜಾತಿ ಶ್ಲೋಕ

೭. ಅಪ್ಪಯ್ಯ ದೀಕ್ಷಿತರ ಕನ್ನಡ ಟೀಕೆ

೮. ಕನಕದಾಸರ ಕುರಿತು ಲಾವಣಿ (ಆಧುನಿಕ ಕಾಗದಪ್ರತಿ)

೯. ಒಂದು ಮರಾಠಿ ಹಸ್ತಪ್ರತಿ

**ರಮೇಶ ಕಮತಗಿ :**

ರಮೇಶ ಕಮತಗಿಯವರು ಮೂಲತಃ ಹಾರೂಗೇರಿಯ ಕೃಷಿಕ ಮನೆತನದಲ್ಲಿ ಹುಟ್ಟಿದವರು. ಪ್ರಸ್ತುತ ಸರಕಾರಿ ಪ್ರದ. ಮಹಾವಿದ್ಯಾಲಯ ತೇರದಾಳದಲ್ಲಿ ಕನ್ನಡ ಉಪನ್ಯಾಸಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಹಾರೂಗೇರಿಯ ಕವಿ ಅಲಭೈರಿಯ ಕುರಿತು ಸಂಪ್ರಬಂಧವನ್ನು ಬರೆದು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ್ದಾರೆ. ಇವರು ಅಲಭೈರಿ ಕವಿಯ ೨೦೦ಕ್ಕೂ ಹೆಚ್ಚು ಲಾವಣಿಗಳನ್ನು ಸಂಗ್ರಹಿಸಿದ್ದಾರೆ. ಇವರ ಹತ್ತಿರ ಆಧುನಿಕ ಕಾಗದ ಹಸ್ತಪ್ರತಿಗಳಿವೆ:

೧. ಡೊಳ್ಳಿನ ಹಾಡು

೨. ಗೀಗೀ ಪದ

೩. ರಿವಾಯತ

೪. ಸೋಬಾನ ಹಾಡು

೫. ಶಿವಪಾರಿಜಾತ

೬. ತತ್ವಪದ

ಈ ಕವಿಯು ರಚನೆ ಮಾಡಿರುವ ಪ್ರತಿಲಾವಣಿ, ಗೀಗೀ ಪದಗಳ ಕೊನೆಕೊನೆಗೆ ವಚನಕಾರರು ಬಳಸಿರುವ ವಚನಾಂಕಿತದಂತೆಯೆ ಹಾರೂಗೇರಿಯ ಅಲಭೈರಿ ಕವಿ ವಿರಚಿಸಿರುವನೆಂಬುದು ಉಲ್ಲೇಖಗೊಂಡಿದೆ. ಕವಿ ಅಲಭೈರಿ ಅಂಕಿತನಾಮವು ಗೀತರಚನೆಗೆ ಪುಷ್ಟಿಯನ್ನು ತುಷ್ಟಿಯನ್ನು ನೀಡಿದೆ. ಈತನು ಮೂರ್ನಾಲ್ಕು ಲಿಪಿಗಳಲ್ಲಿ ಹಾಡುಗಳನ್ನು ರಚಿಸಿದ್ದು ಗಮನಾರ್ಹ ಸಂಗತಿಯಾಗಿದೆ. ಅಲಭೈರಿಯ ಭಜನಾ ತತ್ವಪದವು ಗಣಸ್ತುತಿಯೊಂದಿಗೆ ಪ್ರಾರಂಭಗೊಳ್ಳುವುದನ್ನು ಕಾಣುತ್ತೇವೆ:

"ಗಣನಾಥನೆ ಪಾಲಿಸೆನ್ನನು
ಫಣಿ ಧರಿಸುತ ಸದ್ಗುಣಮಣಿ
ಶ್ರೀ ದಯಾನಿಧಿ
ಕರಿಮುಖ ನಿಮ್ಮ ಚರಣ ಪೂಜಿಸಿ ವರವ ಬೇಡುವೆ
ದುರಿತನಾಶನೆ ಪರಮತೋಷ ತೊರಿಯೊ ಬೇಗನೆ ॥೧॥
ಬುಜಗಭೂಷಣ ಭಜಿಪೆ ನಾನು ಸುಜನ ಭಕ್ತಪ್ರಜೆಗಳಾಶ್ರಮ
ಕುಜನ ಸುರವಿಜಯ ಗಾತ್ರನೆ ಅಜಹರಿಯಪ್ರಿಯ
ನಿಜಗಜಮುಖ ಶ್ರೀ ದಯಾನಿಧೆ ॥೨॥
ಚದುರಮತಿಯ ಸದನಸೌಖ್ಯದ ಹದವ ತೋರಿಸು
ಮದನ ವೈರಿಯೇ ಮುದಿದ ಹಾರೂಗೇರಿಯ ಹೃದಯಪುರದೊಳು
ಸದಮಲ ಸುಖವದಗಿಸು ತ್ವರ ಶ್ರೀ ದಯಾನಿಧೆ ॥೩॥"[೨೭]

ಗಣನಾಥನೆ ಪಾಲಿಸೆನ್ನನು ಎಂಬ ಶಿವಸ್ತುತಿ, ಗಣೇಶ ಮತ್ತು ಶಾರದಾದೇವಿಯರ ಸ್ತುತಿಯೊಂದಿಗೆ ಪ್ರಾರಂಭವಾಗುವ ಇವರ ಪದಗಳು ಮಾನವ ಪ್ರಪಂಚಕ್ಕೆ ದಾರಿದೀಪವಾಗಿವೆ. ಈ ಮಹಾಕವಿಯ ಆಧ್ಯಾತ್ಮದ ಅನುಭವಗಳನ್ನು ಆತ್ಮಬೋಧನೆಗಳನ್ನು ಸರಳವಾಗಿ ಸುಲಭವಾಗಿ ಸಹಜವಾಗಿ ನಿರೂಪಿಸಿ ಜ್ಞಾನಿಗಳಿಂದ ವರಕವಿ ಎಂಬ ಬಿರುದಾಂಕಿತ ಸಂಪಾದಿಸಿಕೊಂಡವನು. ಈ ಭಾಗದ ಕಲಾವಿದರು ಸುತ್ತಮುತ್ತಲಿನ ಹಳ್ಳಿಗೆ ತಂಡವನ್ನು ಕಟ್ಟಿಕೊಂಡು ಇವರ ಹಾಡುಗಳನ್ನು ಹೇಳಿಕೊಂಡು ಬರುತ್ತಿದ್ದಾರೆ. ಹೀಗಾಗಿ ಕವಿ ಅಲಭೈರಿಯು ಪ್ರಾತಃಸ್ಮರಣೀಯರಾಗಿದ್ದಾರೆ.

**ಪಿ.ಜಿ. ಕೆಂಪಣ್ಣವರ :**

ಪಿ.ಜಿ.ಕೆಂಪಣ್ಣವರು ಅವರು ಸ್ಥಳೀಯ ರಾಯಬಾಗದ ಹೈಸ್ಕೂಲಿನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಭುಜೇಂದ್ರ ಮಹಿಷವಾಡಿ ಅವರ ಸಾಹಿತ್ಯ ಕುರಿತು ಸಂಶೋಧನ ಮಹಾಪ್ರಬಂಧವನ್ನು

ಬರೆದು ಕರ್ನಾಟಕ ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ಪಡೆದಿದ್ದಾರೆ. ಶ್ರೀಯುತರು ನಿರಂತರ ಸಾಹಿತ್ಯದ ಭಾಗವಾಗಿ ಗಡಿನಾಡಿನಲ್ಲಿ ತಮ್ಮ ಅನುಪಮ ಸೇವೆ ಸಲ್ಲಿಸುತ್ತ ಬರುತ್ತಿದ್ದಾರೆ. ಇವರ ಒಡೆತನದಲ್ಲಿ ಒಂದು ಮಹತ್ವದ ಹಸ್ತಪ್ರತಿ ದೊರೆಯುತ್ತದೆ. ಶ್ರೀ ನಿಜಗುಣ ಶಿವಯೋಗೀಂದ್ರ ವಿರಚಿತಮಪ್ಪ ಪಾರಮಾರ್ಥಿಕ ಟೀಕು. ೧೦೦ ಪುಟದಷ್ಟು ಗಾತ್ರ ಹೊಂದಿದೆ. ಹಸ್ತಪ್ರತಿ ಆರಂಭದಲ್ಲಿ ಗುರುಸ್ತುತಿಯೊಂದಿಗೆ ಪ್ರಾರಂಭವಾಗುತ್ತದೆ. ಕವಿಯ ಕಾಲ, ಲಿಪಿಕಾರನ ಉಲ್ಲೇಖ ದೊರೆಯವುದಿಲ್ಲ. ಆಧ್ಯಾತ್ಮತತ್ವ ನಿರೂಪಣೆಯಿಂದ ಇಂಥ ಸಂಗತಿಯನ್ನು ತಿಳಿಸುವ ಮಹತ್ವಪೂರ್ಣವಾದ ಹಸ್ತಪ್ರತಿ ನಾಗನೂರು ರುದ್ರಾಕ್ಷಿಮಠದಲ್ಲಿ ದೊರೆಯುವುದನ್ನು ಕಾಣಬಹುದು. ಅದರಲ್ಲಿಯು ಆರಂಭದಲ್ಲಿ ಶ್ರೀಗುರುಬಸವಲಿಂಗಾಯ ನಮಃ ಎಂಬ ಶ್ಲೋಕದಿಂದ ಪ್ರಾರಂಭವಾಗುತ್ತದೆ. ಇವೆರಡು ಒಂದೇ ಕಾಲದಲ್ಲಿ ಒಬ್ಬನೇ ಲಿಪಿಕಾರ ಇದ್ದಿರಬೇಕು ಎಂಬ ಊಹೆಗೆ ಅವಕಾಶವಿದೆ.

**ಆದಿ :** "ಶ್ರೀಸರ್ಪಭೂಷಣ ಶಿವಯೋಗೀಶ್ವರಾಯ ನಮಃ ಶ್ರೀ ಗುರುಬಸವಲಿಂಗಾಯ ನಮಃ॥ ಅನುಭವ ಸಾರವೆಂಬ ಕಾವ್ಯವ ಬರೆಯುವುದಕ್ಕೆ ಶುಭಮಸ್ತು. ಪರತರಾನಂದ ಗುರು ಶಂಭು ಪದ್ದೆವೆನ್ನ ಶಿರದೊಳಿರುವತಿಕೆ ನಿಜಕರುಣದಿಂದ ॥ ತ್ರಿಪದಿ॥ ಶ್ರೀ ಗುರುವೆ ನಿಜಸುಖದ ಸಾರವೆ ತೆರೆಮಸಗೂ".[೨೮]

ನಿಜಗುಣ ಶಿವಯೋಗಿಗಳ ಟೀಕು ೧೯ನೇ ಶತಮಾನದ ಕಾಗದದ ಹಸ್ತಪ್ರತಿಗಳಾಗಿವೆ. ಕೆಲವು ಕಡೆ ಅಕ್ಷರಗಳು ಸ್ಪಷ್ಟವಾಗಿ ಕಾಣಿಸುವುದಿಲ್ಲ. ಅಸ್ಪಷ್ಟವಾಗಿರುವುದನ್ನು ನೋಡಬಹುದು.

**ಜ್ಯೋತಿ ಹೊಸೂರ :**

ಜ್ಯೋತಿ ಹೊಸೂರು ಮೂಲತಃ ರಾಯಬಾಗ ತಾಲೂಕಿನ ಮುಗಳಖೋಡದಲ್ಲಿ ಜನಿಸಿದರು. ರಾಯಬಾಗದ ಆರ್.ವ್ಹಿ. ಆರ್. ಪದವಿ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ಈಗ ನಿವೃತ್ತಿ ಜೀವನವನ್ನು ರಾಯಬಾಗದಲ್ಲಿ ಕಳೆಯುತ್ತಿದ್ದಾರೆ. ಇವರು ಒಳ್ಳೆಯ ಜಾನಪದ ವಿದ್ವಾಂಸರು. ಸಭಾಭೂಷಣರಾಗಿ ಈ ನಾಡಿನಲ್ಲಿ ಹೆಸರು ಮಾಡಿದ್ದಾರೆ. ಹೊಸೂರ ಅವರ ಹತ್ತಿರ ಶಂಬಾ ಜೋಶಿ ಅವರ ಕೈ ಬರೆಹದ ೧೮ ಹಸ್ತಪ್ರತಿಗಳು ದೊರೆಯುತ್ತವೆ. ಈ ಹಸ್ತಪ್ರತಿಗಳನ್ನು ನನ್ನ ಅವಲೋಕನಕ್ಕೆ ಕೊಟ್ಟ ಅವರಿಗೆ ಉಪಕೃತನಾಗಿರುವೆ.

೧. ಮನುಜ ಎಂದರೆ ಯಾರು

೨. ಸತ್ಯಾನ್ವೇಷಣೆಯ ವರದಿ

೩. ಪುರಾತನರ ನಿಷ್ಠೆಯ ಸ್ವರೂಪ

೪. ಅರ್ಧ ಸತ್ಯ ಇದು ಕಾಲ್ಪನಿಕವಲ್ಲ

೫. ಮನುವಿನ ವಿಚಾರ ಕುರಿತು

೬. ಸದೃಶಃ ಪ್ರಜ್ಞೆ; ಆಕೃತಿ ಮತ್ತು ಗುಣ

೭. ಭಾರತೀಯ ಸಂಸ್ಕೃತಿಯಲ್ಲಿ ತಿರುವು ಮುರುವು

೮. ನಿಜವಾದ ದೇವರು ಯಾರು?

೯. ಮಾನವಧರ್ಮ

೧೦. ಸಾಂಸ್ಕೃತಿಕ ಸ್ತರಗಳ ಭೂಮಿಕೆಯಿಂದ

೧೧. ಜ್ಞಾನಸಿದ್ಧಿಯ ಇಬ್ಬಗೆಗಳು

೧೨. ಭಗವಂತನು ವಿಶ್ವನಿಯಮವಲ್ಲ

೧೩. ಪ್ರಜ್ಞೆ (ಮನಸ್ಸು) ಮತ್ತು ಬುದ್ಧಿ

೧೪. ವಾಸ್ತವ ಸತ್ಯವನ್ನು ಬಚ್ಚಿಡುವ ಒಳಸಂಚು

೧೫. ಸ್ವಭಾವ ಇದು ಸ್ವಾಭಾವಿಕ

೧೬. ಕಲ್ಪದ ಸನಾತನ ಆಕೃತಿಗಳು

೧೭. ಭಾಷೆ ಸಂಸ್ಕೃತಿಯ ಬುದ್ಧಿಗೂ ಮುಂಚಿನದು

೧೮. ಬಿತ್ತಿದ್ದನ್ನು ಬೆಳಕೊ (ತಾರ್ಕಿಕ ಹಿನ್ನೆಲೆ)

ಜ್ಯೋತಿ ಹೊಸೂರ ಅವರ ಹತ್ತಿರ ಶಂಬಾ ಅವರ ಇನ್ನೂ ಅನೇಕ ಹಸ್ತಪ್ರತಿಗಳಿವೆ. ಅವರ ಅಪ್ರಕಟಿತ ಲೇಖನ ಸಂಪುಟವೊಂದನ್ನು ಇತ್ತೀಚೆಗೆ ಜ್ಯೋತಿ ಹೊಸೂರು ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. "ಶಂಬಾ ಜೋಶಿ ಅವರ ಸಂಶೋಧನೆಗಳನ್ನು ಅರ್ಥ ಮಾಡಿಕೊಳ್ಳುವುದೆಂದರೆ ಅವರು ರೂಪಿಸಿಕೊಂಡ ಈ ವಿಧಾನವನ್ನು ಅನುಸರಿಸಬೇಕಾದುದು ಅನಿವಾರ್ಯ. ಕಂನಾಡು, ಮಹಾರಾಷ್ಟ್ರ (ಮರಹಟ್ಟಿ) ಕಂದಮಿಳು, ಹಾಲುಮತ, ಹಿಂದೂಧರ್ಮ, ವೇದಪುರಾಣ, ಉಪನಿಷತ್ತುಗಳು ತೌಲನಿಕ ಧರ್ಮಶಾಸ್ತ್ರ ಸ್ಥಳನಾಮಗಳು ದೇವತೆಗಳ ಹೆಸರು ಮೊದಲಾದ ಎಲ್ಲ ವಿಷಯಗಳನ್ನು ಶಂಬಾ ಅವರು ಈ ವಿಧಾನದಿಂದಲೇ ಸಂಶೋಧನೆ ಮಾಡಿದ್ದಾರೆ." [೨೮]

ಶಂಬಾ ಅವರ ಇನ್ನೂ ಅಪ್ರಕಟಿತ ಸಾಹಿತ್ಯದ ಕೆಲವು ಹಸ್ತಪ್ರತಿಗಳನ್ನು ಹೊಸೂರ ಅವರ ಸಂರಕ್ಷಿಸಿ ಇಟ್ಟಿದ್ದಾರೆ. ಆದರೆ ಅವುಗಳನ್ನು ಪ್ರಕಟಿಸುವ ಅನಿವಾರ್ಯತೆ ಇದೆ. ಇಲ್ಲವಾದರೆ ಅವುಗಳು ಹಾಗೆಯೇ ಉಳಿಯುವ ಸಾಧ್ಯತೆಗಳಿವೆ.

**ಸಿದ್ರಾಮ ಜಗದಾಳೆ :**

ಗೋಕಾಕ ನಗರದ ನಿವಾಸಿಯಾದ ಶಿದ್ರಾಮ ಜಗದಾಳೆ ಅವರು ನ್ಯಾಯಬೆಲೆ ಅಂಗಡಿಯನ್ನಿಟ್ಟುಕೊಂಡು ಜೀವನ ಸಾಗಿಸುತ್ತಿದ್ದಾರೆ. ಸಾಹಿತ್ಯಾಸಕ್ತರು. ಶ್ರೀಯುತರ ಹತ್ತಿರ ಗಮನಿಸಿದಂತೆ ೮ ಹಸ್ತಪ್ರತಿಗಳು ದೊರೆಯುತ್ತವೆ.

೧. ಸಹಸ್ರನಾಮಾವಳಿ

೨. ಪ್ರಭುಲಿಂಗಲೀಲೆ (ಪ್ರಭುದೇವರ ಚರಿತೆ)

೩. ಪಂಚಾಕ್ಷರಿ ಮಂತ್ರ ಮತ್ತು ಕುಂಡಲಿ ನಕ್ಷೆ

೪. ನೂರೊಂದು ನಾಮಾವಳಿ

೫. ಜ್ಯೋತಿಷಶಾಸ್ತ್ರದ ಮೂರು ಹಸ್ತಪ್ರತಿಗಳು

೬. ಶಿವಯೋಗಿಗಳ ಕಥೆ

೭. ಷಡಕ್ಷರದೇವನ ಶಬರ ಶಂಕರ ವಿಳಾಸ (ಅಸಮಗ್ರ)

ಈ ಮೇಲಿನ ಹಸ್ತಪ್ರತಿಗಳಷ್ಟಲ್ಲದೇ ಇನ್ನೂ ಇವರ ಹತ್ತಿರ ಮಹತ್ವದ ಸಾಹಿತ್ಯ ಕೃತಿಗಳಿದ್ದ ಬಗ್ಗೆ ಪ್ರಸ್ತುತ ತಾಲೂಕಿನ ಹಸ್ತಪ್ರತಿ ಸಮೀಕ್ಷೆ ಮಾಡಿದ ಮಹಾದೇವ ಜಿಡ್ಡಿಮನಿಯವರು ಉಲ್ಲೇಖ ಮಾಡಿರುವುದನ್ನು ಗಮನಿಸಬೇಕಾಗುತ್ತದೆ.

"ಗೋಕಾವಿಯಲ್ಲಿಯೇ ಶ್ರೀಯುತ ಸಿದ್ರಾಮ ಬಿ. ಜಗದಾಳಿ ಹತ್ತಿರ ಕ್ರಿ.ಶ. ೧೭೪೫ರ ಆಸುಪಾಸಿನ ಅವಧಿಯ ಏಳು ಪತ್ರಗಳು ಇರುವ ಮಾಹಿತಿಯನ್ನು ಶ್ರೀ ಪ್ರಕಾಶ ಕೋಟಿನತೋಟ ಅವರು ನೀಡಿದರು. ಅರಭಾವಿ ದುರದುಂಡೀಶ್ವರರು ಹಾಗೂ ಮಹಾಲಿಂಗಪುರದ ಮಹಾಲಿಂಗೇಶ್ವರರು ಪರಸ್ಪರ ಬರೆದ ಪತ್ರಗಳಿವು ಐತಿಹಾಸಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ದೃಷ್ಟಿಯಿಂದಲೂ ವಿಶಿಷ್ಟ ಪ್ರಾಮುಖ್ಯತೆಯನ್ನು ಈ ಪತ್ರಗಳು ಪಡೆಯುತ್ತವೆ. ಇಷ್ಟೇ ಅಲ್ಲದೆ ಜಗದಾಳರ ಹತ್ತಿರ ಇನ್ನು ಏಳು ಮಹತ್ವದ ಸಾಹಿತ್ಯ ಕೃತಿಗಳೂ ಕೋರಿಕಾಗದದ ಕಟ್ಟುಗಳು ಇದ್ದು" [೫]. ಅವುಗಳಲ್ಲಿ ಮುಖ್ಯವಾಗಿರುವ ಕೆಲವು ಹೆಸರಿಸಿದ್ದಾರೆ.

**ಪ್ರಕಾಶ ಕೋಟಿನತೋಟ :**

ಗೋಕಾಕ ತಾಲೂಕಿನ ಕೌಜಲಗಿ ಗ್ರಾಮದವರಾದ ಪ್ರಕಾಶರವರು ಮೂಲತಃ ಕೃಷಿಕರಾದರೂ ಸಾಹಿತ್ಯದಲ್ಲಿ ತುಂಬಾ ಒಲವು ಹೊಂದಿದವರು. ಪತ್ರಕರ್ತರಾಗಿ ಸಮಾಜಮುಖಿ ಸೇವೆಮಾಡುತ್ತ ಕಾವ್ಯ, ಕಥೆ, ಗ್ರಾಮ ಚರಿತ್ರೆಗಳನ್ನು ಬರೆಯುತ್ತ ಸದಾ ಒಂದಿಲ್ಲೊಂದು ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಶ್ರೀಯುತರ ಹತ್ತಿರ ೨ ಹಸ್ತಪ್ರತಿಗಳಿವೆ. ಬಹಳಷ್ಟು ಮಹತ್ವಪೂರ್ಣವಾದ ಹಸ್ತಪ್ರತಿಗಳನ್ನು ಸಂರಕ್ಷಣೆ ಮಾಡಿದ್ದಾರೆ. ಕೌಜಲಗಿ ಸಮೀಪದ ಹುನಕುಪ್ಪಿಯ ಅಜ್ಞಾತಕವಿ ಕೃಷ್ಣದಾಸ ಪುಗಶೆಟ್ಟಿಯವರ ಲಾವಣಿ ಹಸ್ತಪ್ರತಿ ಆಧುನಿಕ ಕಾಗದದಲ್ಲಿ ಬರೆಯಲ್ಪಟ್ಟಿವೆ. ಕೃಷ್ಣದಾಸ ಕವಿಯು ದೇವತಾ ಸ್ತುತಿಯೊಂದಿಗೆ ಲಾವಣಿಯನ್ನು ಬರೆದಿರುವುದು ಅನನ್ಯವಾಗಿದೆ.

೧. ಮಂಗಳಾರತಿ ಪದ

೨. ಭಜನಾಪದ

೩. ಕರ್ಬಲ ಪದ

೪. ರಿವಾಯತ

೫. ಅಭಂಗಗಳು

೬. ಬಿಸುಕಲ್ಲಿನ ಪದ

೭. ಸ್ವಾತಂತ್ರ್ಯ ಸೇನಾನಿಗಳ ಹಾಡು

ಕೃಷ್ಣದಾಸರು ವಿದ್ಯಾರ್ಥಿ ದೆಸೆಯಿಂದಲೆ ಇಂಥ ಅಪರೂಪದ ಕಾವ್ಯಗಳನ್ನು ಬರೆದಿದ್ದಾರೆ. ಇವುಗಳ ಸಂಖ್ಯೆ ೮೦ಕ್ಕೂ ಮೀರಿದೆ. ಇವುಗಳೆಲ್ಲವೂ ಅಪ್ರಕಟಿತವಾಗಿವೆ. ೧೯೬೫ ಫೆಬ್ರುವರಿ ೨೧ರಂದು ಕೌಜಲಗಿಯ ಶಾಲೆಯೊಂದರಲ್ಲಿ ಮಕ್ಕಳ ಕೈಬರೆಹದ ಹಸ್ತಪ್ರತಿಯೊಂದು ಸಿದ್ಧವಾಗಿದೆ. ಅದು ರಾಷ್ಟ್ರಭಕ್ತಿ ಮತ್ತು ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರಸ್ಮರಣೀಯ ಕಾವ್ಯಗಳಾಗಿವೆ ಇವುಗಳ ಮಧ್ಯದಲ್ಲಿ ಚಿತ್ರಗಳನ್ನು ಬಿಡಿಸಿರುವುದನ್ನು ಕಾಣುತ್ತೇವೆ.

ತರುಣ ಸೇವಾ ಸಾಹಿತ್ಯ ಸದನ ಕೌಜಲಗಿಯವರು ಹೊರತಂದಿರುವ 'ಚಿಗುರು' ಹಸ್ತಪ್ರತಿ ಕೃತಿಯಲ್ಲಿ ಕೃಷ್ಣಮೂರ್ತಿ ಪುರಾಣಿಕರು ಮುನ್ನುಡಿ ಬರೆದಿರುವುದನ್ನು ಗಮನಿಸಬಹುದು. ಈ ತಾಲೂಕಿನ ಸರ್ವೇಕ್ಷಣೆ ಮಾಡಿದ ಮಹಾದೇವ ಜಿಡ್ಡಿಮನಿಯವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ: "ಶ್ರೀ ಕೋಟಿನತೋಟ ಅವರಲ್ಲಿಯೇ ಇನ್ನೊಂದು ಅಪರೂಪದ ಹಸ್ತಪ್ರತಿ ದೊರೆಯಿತು. ಪಿ. ಮೌಲಾ ಅಲಿ ಎಂಬ ಪ್ರಾಥಮಿಕ ಶಾಲಾ ಶಿಕ್ಷಕರೊಬ್ಬರು ಸ್ವಾತಂತ್ರ್ಯಪೂರ್ವದಲ್ಲಿ ಕೌಜಲಗಿಯಲ್ಲಿದ್ದರು. ಅವರು ಆರ್. ನರಸಿಂಹಾಚಾರ್ ಅವರು ಬರೆದ ನೀತಿ ಮಂಜರಿ ಎಂಬ ಗ್ರಂಥವು ಹಳಗನ್ನಡಮಯವಾಗಿದ್ದರಿಂದ ಅದನ್ನು ಹೊಸಗನ್ನಡದಲ್ಲಿ ಬರೆಯುವ ಪ್ರಯತ್ನ ಮಾಡಿದ್ದಾರೆ. ೧೧೫ ಪುಟಗಳ ಈ ಹಸ್ತಪ್ರತಿ ಅತ್ಯುತ್ತಮ ನೀತಿ ಬೋಧವನ್ನು ನಮಗೆ ಒದಗಿಸುತ್ತದೆ. ಪಿ. ಮೌಲಾಅಲಿ ಅವರು ಇದಕ್ಕೆ ಸಂಪುಟ-೧ ಎಂದು ಕರೆದಿದ್ದಾರೆ."[೩೧]

**ಸುರೇಶ ಹನಗಂಡಿ :**

ಸುರೇಶ ಹನಗಂಡಿಯವರು ಕಲ್ಲೋಳಿಯ ಪದವಿ ಮಹಾವಿದ್ಯಾಲಯದಲ್ಲಿ ಕನ್ನಡ ಉಪನ್ಯಾಸಕರಾಗಿ ಮತ್ತು ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರ ಹತ್ತಿರ ಸಾತು ಕ್ಯಾಮಣ್ಣನ ಐದು ಅಪ್ರಕಟಿತ ಲಾವಣಿಗಳಿವೆ. ಈ ಲಾವಣಿಗಳಿಗೆ ಮೂಲ ಒಡೆಯರು ಕಲ್ಲೋಳಿಯ ಅಲ್ಲಿಸಾಬ ನಧಾಪ ಅವರು. ಒಳ್ಳೆಯ ಕಲಾವಿದರು. ಸಾತು ಕ್ಯಾಮಣ್ಣ ೧೦೨ ವರ್ಷ ಬದುಕಿದ ಮಾಹಿತಿ ದೊರೆಯುತ್ತದೆ. ಜೀವನ ಪರ್ಯಂತರ ಲಾವಣಿಗಳನ್ನು ರಚಿಸಿದನು. ನಾಟಕಗಳನ್ನು ಬರೆದನು ಎಂಬ ಮಾತುಗಳು ಬಹುಜನ ಲಾವಣಿ ಹಾಡುಗಾರರಿಂದ ತಿಳಿದು ಬರುತ್ತದೆ. ಸಾತುಕ್ಯಾಮಣ್ಣ ತನ್ನ ಲಾವಣಿಯನ್ನು ಗಣೇಶನ ಸ್ತುತಿಯೊಂದಿಗೆ ಪ್ರಾರಂಭ ಮಾಡಿರುವುದನ್ನು ಗಮನಿಸಬಹುದು.

"ಗಣಪತಿ ಮಂಗಳಮೂರ್ತಿ
ಆಗ ನೀ ನಮಗ ಪ್ರಸನ್ನ
ವಿಘ್ನದಿಂದ ಬಂಧನ ಸಭಾಜನ
ರಂಜನ ಮಾಡ ಎನ್ನ ಪಾನಾ
ಕೊಡಮತಿ ವರದತಾ
ಸಭಾದೊಳು ಬೇಡಿಕೊಳ್ಳುವೆ ನಿಂತಾ
ನಮಃ ಶಿವಾಸುತಾ
ಮಂಗಲದಾಯಕ ನೀನಾ
ವ್ಯಾಸಮುನಿ ವಾಲ್ಮೀಕ ರಾ
ಪುರಾಣಗಳಲ್ಲಿ ನಿನ್ನ ಠೀಕಾ
ಬರದರಾ ಪೈಲೇಕಾ
ನೀನೆ ಹೆಚ್ಚಿನಾವಂತಾ
ವೇದಗಳು ಹೊಗಳತಾವ
ನೀನೇ ಆಸರಂತಾ
ಈ ಸಭಾದೊಳು ಕೂಡಿದಾರ
ದೊಡ್ಡ ದೊಡ್ಡ ಶಾಹೀದರಾ
ಆದವರು ಜಾಹೀರ
ಪಡದಾರ ಆಯೇರಾ
ಮಾಡೋ ಇವರನ್ನ ಶಾಂತಾ
ಸರ್ವರನ್ನು ಶಾಂತಾ."[೨]

ಕವಿ ಸಾತು ಕ್ಯಾಮಣ್ಣ ತಮ್ಮ ಲಾವಣಿಯ ಕೊನೆಗೆ ಅಂಕಿತನಾಮ ಬಳಸಿದ್ದು ಕಂಡುಬರುತ್ತದೆ. ಗೋಕಾವಿಶಾರಾ, ಗುರುಸಿದ್ಧೇಶಾ, ಗೋಕಾವಿ ಗುರುವರಾ ಶ್ರೀ ಸಾಂಬಾ ಹೀಗೆ ತನ್ನ ಲಾವಣಿಯ ಕೊನೆಯ ಸಾಲಿನಲ್ಲಿ ನಮೂದಿಸಿದ್ದಾನೆ.

**ಮುತ್ತೆಪ್ಪ ಭೀ ಪಾಟೀಲ :**

ಶ್ರೀಯುತರು ಗೋಕಾಕ ತಾಲೂಕಿನ ಸಂಗನಕೇರಿಯಲ್ಲಿ ವಾಸವಾಗಿದ್ದಾರೆ. ಇವರು ಪಾರಿಜಾತ, ಸಂಗ್ಯಾ ಬಾಳ್ಯಾ ನಾಟಕದ ಒಳ್ಳೆಯ ಕಲಾವಿದರು. ಸುಮಾರು ಎಂಟತ್ತು ಜನರ ಗುಂಪೊಂದನ್ನು ಕಟ್ಟಿಕೊಂಡು ಬೇರೆ ಬೇರೆ ಹಳ್ಳಿಗೆ ಹೋಗಿ ತಮ್ಮ ಅಭಿನಯ ಪ್ರದರ್ಶನ ಮಾಡುವುದು ಇವರ ಹವ್ಯಾಸವಾಗಿದೆ. ೧೯೨೯ರಲ್ಲಿ ಶಿವಾನಂದ ಕವಿ ಬರೆದ ಮಾಯಾಮಚ್ಚೇಂದ್ರ ನಾಟಕ ಹಸ್ತಪ್ರತಿಯ ಸಂಗ್ರಹ ಮಾಡಿದ್ದಾರೆ. ಇದರ ಮೂಲ ಹಸ್ತಪ್ರತಿ ಹುಕ್ಕೇರಿ ತಾಲೂಕಿನ ಕುರಣಿ ಗ್ರಾಮದಲ್ಲಿದೆ.

ಆ ಗ್ರಾಮದ ಬಸವಣ್ಣನ ಗುಡಿಯಲ್ಲಿಟ್ಟು ಇಂದಿಗೂ ಪೂಜೆ ಮಾಡುತ್ತಾರೆ. ಈ ಮೂಲ ಪ್ರತಿಯನ್ನಿಟ್ಟುಕೊಂಡು ೧೯೭೦ರ ಹೊತ್ತಿಗೆ ಮುತ್ತೆಪ್ಪನವರು ಪ್ರತಿಮಾಡಿಸಿಕೊಂಡ ವಿವರ ದೊರೆಯುತ್ತದೆ. ಅದು ೧೦೦ ಪುಟ ಗಾತ್ರವನ್ನು ಹೊಂದಿದೆ.

**ನಿರಂಜನ ಪಾಟೀಲ :**

ನಿರಂಜನರು ಕಲ್ಲೋಳಿಯ ಎಸ್. ಆರ್. ಇ.ಎಸ್. ಪದವಿ ಮಹಾವಿದ್ಯಾಲಯದಲ್ಲಿ ಪ್ರಥಮ ದರ್ಜೆ ಗುಮಾಸ್ತರು. ಇವರ ಹತ್ತಿರ ಎರಡು ಹಸ್ತಪ್ರತಿಗಳು ತುಂಬಾ ಮೌಲಿಕವಾದವುಗಳಾಗಿವೆ. ಗುರುಪಾದ ಹೊಂಗಲ ಅವರಿಂದ ೧೯೯೮ರಲ್ಲಿ ರಚಿತವಾದ ಲಾವಣಿಗಳಿವೆ. ಲಾವಣಿಕಾರರು ಮೂಲತಃ ಸವದತ್ತಿ ತಾಲೂಕಿನ ಯಕ್ಕುಂಡಿಯ ಗ್ರಾಮದವರು. ಶ್ರೀಯುತರ ಕೈಬರಹದ ಹಸ್ತಪ್ರತಿಗಳು ಇವರ ಕಡೆಗೆ ದೊರೆಯುತ್ತವೆ.

೧. ಗಿರಿಜಾ ಕಲ್ಯಾಣಖ್ಯಾನ

೨. ಬಿಜ್ಜ ಮಾದೇವಿಯ ಕಥೆ

೩. ವೇಮನಾರ್ಯರ ಕಥೆ

೪. ಗಣಪತಿ ಸ್ವಯಂವರ

೫. ಕೆಲವು ಮಹತ್ವದ ಪತ್ರಗಳು

೬. ಲಾವಣಿಗಳು

ಇದೇ ಲಾವಣಿಕಾರ ಇನ್ನೊಂದು ಮಹತ್ವದ ಕೈಬರಹದ ಹಸ್ತಪ್ರತಿ ಸಂಗ್ರಹಿಸಿದ್ದು ಕಂಡುಬರುತ್ತದೆ. ಸವದತ್ತಿ ತಾಲೂಕಿನ ಗುರ್ಲಹೊಸೂರ ಗ್ರಾಮದಲ್ಲಿ ೧೮೪೮ರಲ್ಲಿ ಜನಿಸಿದ ಬಾಬಾರವರ ಬ್ರಹ್ಮಸಿದ್ಧಾಂತ ಮಾಲೆ ಕೃತಿಯನ್ನು ಸಂಪಾದಿಸಿ ಪ್ರಕಟಮಾಡಿದ್ದಾರೆ. ಇದು ಆರಂಭದ ಮುನ್ನುಡಿಯ ಭಾಗದ ನಂತರ ಯಕ್ಕುಂಡಿಯವರ ಭಾವಚಿತ್ರವಿದೆ. ಈ ಕೃತಿಯ ಕೊನೆಯ ಅಧ್ಯಾಯದಲ್ಲಿ ಬ್ರಹ್ಮವಿಚಾರ ಕುರಿತು ಸಂಸ್ಕೃತ ಶ್ಲೋಕ ಪ್ರಸ್ತಾಪವಾಗಿರುವುದು ವೈಶಿಷ್ಟ್ಯಪೂರ್ಣವಾಗಿದೆ.

"ಅಭಾವಾದ್ಭಾರೂಪಸ್ಯ ಶಕ್ಯೋತ್ಪತ್ತಿರ್ನಕರ್ಹಿಚಿತ್
ವಿಶಿಷ್ಟ ಕಾರಣಾತ್ಕಾರ್ಯಂ ವಿಶಿಷ್ಟಂ ಜಾಯತೇ ಯತಃ
ಸದ್ರೂಪ ಕಾರಣಾದೇವ ಕಾರ್ಯಮತ್ಪದ್ಯತೇಭುವಿ
ಜಗತಃ ಕಾರಣಂ ಶೂನ್ಯನೋ ಸದಾಸೀದ ಶ್ರುತೇ
ಇತಿ ಚೆನ್ನ ವಿರೋಧಿತ್ವಾಚ್ಛೂನ್ನಮಾಸೀತ್ಕಾಥಂವದು
ಜಗತಃ ಕಾರಣಂ ನಸ್ಯುಃ ಕದಾಪಿ ಪರಮಾಣವಃ
ಅಸಂಭವಾದ ಸಂಯೋಗೇಕಾರ್ಯೋರ್ತ್ಪರ್ನ ಸಂಭವೇತ್."[೩೩]

ಈ ಕೃತಿಯ ಕೊನೆಯಲ್ಲಿ ಫಲ ವಿಚಾರ ಜೀವನ್ಮುಕ್ತವಿಚಾರ ಹೀಗೆ ಹಲವು ವೈವಿಧ್ಯಮಯವಾದ ಶ್ಲೋಕಗಳನ್ನು ನೋಡಬಹುದು.

**ಶಂಕರ ನಿಂಗನೂರ :**

ಅಥಣಿ ತಾಲೂಕಿನ ಐನಾಪೂರದವರು ಇತಿಹಾಸ ಉಪನ್ಯಾಸಕರಾಗಿ ಸೇವೆಗೈಯುತ್ತಿದ್ದಾರೆ. ಶ್ರೀಯುತರ ಹತ್ತಿರ ಕಲ್ಲೋಳಿ ಗ್ರಾಮದ ಕುರಿತು ಸಾಕಷ್ಟು ಹಸ್ತಪ್ರತಿಗಳಿರುವುನ್ನು ಗಮನಿಸಬಹುದು. ಗ್ರಾಮದ ಪೋಲೀಸ್ ಪಾಟೀಲ ಮನೆತನಕ್ಕೆ ಸೇರಿದ ದಾಖಲೆ ಪತ್ರಗಳಿವೆ. ೧೯ನೇ ಶತಮಾನಕ್ಕೆ ಸಂಬಂಧಿಸಿದಂತೆ ಪಾಟೀಲರ ಮನೆಯಲ್ಲಿ ಗ್ರಾಮದ ಆಡಳಿತ ನಡೆಯುತ್ತಿತ್ತು. ಆ ನಿಟ್ಟಿನಲ್ಲಿ ಈ ಮನೆತನದವರು ಬ್ರಿಟಿಷ್ ಸರಕಾರದ ಜೊತೆಗೆ ನಡೆಸಿದ ಪತ್ರವ್ಯವಹಾರ, ನೋಟೀಸು, ಪ್ರಕಟಣೆಗಳು, ಸೂಚನೆಗಳು ಇವರ ಕೈಕೆಳಗೆ ಕಾರ್ಯ ನಿರ್ವಹಿಸುವ ಅಧಿಕಾರಿಗಳ ದಾಖಲೆ ಪುಸ್ತಕ ಮತ್ತು ಊರಿನಲ್ಲಿ ಬೇನೆ ಬಂದಾಗ ಮೈಲಿಗೆ ಹಾಕಿಸಿದ ದಾಖಲೆಗಳು ಇನ್ನು ಆಡಳಿತಕ್ಕೆ ಸಂಬಂಧಿಸಿದ ಮಹತ್ವದ ಕಡತಗಳನ್ನು ಸಂಗ್ರಹಿಸಿದ್ದಾರೆ.



**ರವೀಂದ್ರ ತೋಟಿಗೇರ :**

ರವೀಂದ್ರ ತೋಟಿಗೇರ ಅವರು ಮೂಲತಃ ಗೋಕಾಕ ತಾಲೂಕಿನ ಯಾದವಾಡದವರು. ಈಗ ಬೆಳಗಾವಿಯ ಜಿಲ್ಲಾ ನ್ಯಾಯಾಲಯದಲ್ಲಿ ವಕೀಲ ವೃತ್ತಿ ಮಾಡುತ್ತಿದ್ದಾರೆ. ಬೆಳಗಾವಿ ಕರ್ನಾಟಕದ ಆಸ್ತಿ ಎಂದು ನಿರಂತರವಾಗಿ ಹೋರಾಟ ಮಾಡುತ್ತಿದ್ದಾರೆ. ಸಾಹಿತ್ಯಾಸಕ್ತರು ಒಳ್ಳೆಯ ಸಾತ್ವಿಕರು. ಕಳೆದ ಹತ್ತುವರ್ಷಗಳಿಂದ ಸಂಘಟನೆ ಮಾಡುವುದರ ಮೂಲಕ ಇದೀಗ ೧೦,೦೦೦ಕ್ಕೂ ಹೆಚ್ಚು ಬೆಳಗಾವಿ ಕರ್ನಾಟಕದ ಸ್ವತ್ತು ಎನ್ನುವುದಕ್ಕೆ ದಾಖಲೆಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಕೆಲವು ಹಸ್ತಪ್ರತಿಗಳ ಸಹಿತ ಒಂದು ಕೃತಿಯನ್ನು ಸಂಪಾದಿಸಿ ಅದಕ್ಕೆ 'ಬೆಳಗಾವಿ ಕರ್ನಾಟಕದ ಸ್ವತ್ತು' ಎಂದು ತಲೆಬರೆಹ ನೀಡಿದ್ದಾರೆ.

ಇವರ ಹತ್ತಿರ ಮಹತ್ವದ ಹಸ್ತಪ್ರತಿಗಳ ಸಂಗ್ರಹವಿರುವುದನ್ನು ಗಮನಿಸಬಹುದು.

೧. ಕನ್ನಡ ಮರಾಠಿ ಮಿಶ್ರಿತ ಹಸ್ತಪ್ರತಿಗಳಿವೆ.

೨. ಕೆಲವೊಂದು ಬ್ರಿಟಿಷರ ಆಡಳಿತದ ಮಹತ್ವದ ಕಾಗದಪತ್ರಗಳಿವೆ.

೩. ಸುಮಾರು ೨೫ಕ್ಕೂ ಹೆಚ್ಚು ಗಡಿವಿವಾದ ಕುರಿತು ಪ್ರಕಟವಾದ ಬರಹಗಳನ್ನು ಸಂಗ್ರಹಿಸಿದ್ದಾರೆ.

೪. ಬ್ರಿಟಿಷ್‌ರ ಆಡಳಿತದ ಕನ್ನಡ ಭಾಷೆಯ ಆದೇಶ ಪ್ರತಿಗಳು ಲಭ್ಯವಿರುವುದನ್ನು ಕಾಣಬಹುದು.

"ಬೆಳಗಾವಿ ಭೂಪ್ರದೇಶ ಆಯಾಕಾಲಮಾನದಲ್ಲಿ ಯಾವುದೇ ಅರಸ ಅಥವಾ ಬ್ರಿಟಿಷ್ ವ್ಯಾಪ್ತಿಗೆ ಒಳಪಟ್ಟಿದ್ದರೂ ಇಲ್ಲಿನ ಆಡಳಿತ ಭಾಷೆ ಕನ್ನಡವಾಗಿತ್ತು ಎಂಬುದಕ್ಕೆ ಈಗ ಮತ್ತಷ್ಟು ಮಹತ್ವದ ದಾಖಲೆ ಸಿಕ್ಕಿವೆ. ರಾಜ್ಯ ವಕೀಲರ ಸಾಹಿತ್ಯ ಪರಿಷತ್‌ನ ಬೆಳಗಾವಿ ಜಿಲ್ಲಾ ಘಟಕದ

ಅಧ್ಯಕ್ಷ ರವೀಂದ್ರ ತೋಟಿಗೇರ, ಉಪಾಧ್ಯಾಕ್ಷ ಸುಧೀರ ನಿರ್ವಾಣಿ, ಕಾರ್ಯದರ್ಶಿ ಶಿವಾನಂದ ಈರನಗೌಡ್ರು ಜಂಟಿಯಾಗಿ ದಾಖಲೆಗಳನ್ನು ಬಿಡುಗಡೆ ಮಾಡಿದ್ದು, ಕರ್ನಾಟಕ-ಮಹಾರಾಷ್ಟ್ರ ಗಡಿ ಕಾನೂನು ಸಲಹಾ ಸಮಿತಿಗೆ ಒದಗಿಸಿದ್ದಾರೆ."೩೪

ಅಷ್ಟೇ ಅಲ್ಲದೆ ಬೆಳಗಾವಿ ಐತಿಹಾಸಿಕ ದಾಖಲೆ, ನ್ಯಾಯಾಲಯದ ಆದೇಶದ ಪ್ರತಿಗಳು, ಬೆಳಗಾವಿಯ ಕ್ರಯ ಪತ್ರಗಳು ಜಿಲ್ಲೆಯ ಭೂದಾಖಲೆಗಳು, ಜಿಲ್ಲೆಯ ಅಪರೂಪದ ಛಾಯಾಚಿತ್ರಗಳು ಇಂಗ್ಲಂಡಿನ ೫ನೇ ಜಾರ್ಜ್ ಗ್ರೇಟ್ ಬ್ರಿಟನ್ ಐರ್ಲೆಂಡ್ ಎಂಬ ಸಂಯುಕ್ತ ರಾಜ್ಯದ ಸಮುದ್ರದಾಚೆಯ ರಾಷ್ಟ್ರಗಳ ಅರಸರಿಗೆ ಹಿಂದುಸ್ತಾನದೊಳಗಿನ ಸಂಸ್ಥಾನ ತೆರೆದು ಎಲ್ಲ ಜಾತಿಗಳ ಮತ್ತು ಪಂಥಗಳಿಗೆ ಭೇಟಿ ನೀಡಲು ತಮ್ಮ ಎಲ್ಲ ಪ್ರಜೆಗಳಿಗೆ ಹೊರಡಿಸಿದ ಬಾದಷಾಹ ಜಾಹೀರ್‌ನಾಮೆ ಅಥವಾ ಪ್ರಕಟಣೆಯ ಸುತ್ತೋಲೆ ಬೃಹತ್ ಗಾತ್ರದಲ್ಲಿದ್ದ ಬಗ್ಗೆ ಮಾಹಿತಿ ದೊರೆಯುತ್ತದೆ. ೧೯೧೧ರಂದು ಭಾರತಕ್ಕೆ ಭೇಟಿ ನೀಡಿದ ಇಂಗ್ಲಂಡಿನ ರಾಜ ೫ನೇ ಜಾರ್ಜ್ ತನ್ನ ಸಿಂಹಾಸನರೋಹಣದ ಕಾರ್ಯಕ್ರಮದಲ್ಲಿ ದಿಲ್ಲಿ ದರ್ಬಾರ ಸಮಾರಂಭದಲ್ಲಿ ಭಾಗಿಯಾಗಿದ್ದ ಬ್ರಿಟಿಷ್ ಭಾರತದ ಅಮಲ್ದಾರರಿಗೆ ಜಾಹೀರನಾಮೆ ಕನ್ನಡ ಆದೇಶಪ್ರತಿ ಇವರ ಹತ್ತಿರವಿದೆ.

ಹೀಗೆ ಪ್ರತಿಕಾರರ ಹಾಗೂ ಪ್ರತಿಮಾಡಿಸಿದವರ ಉಲ್ಲೇಖಗಳಲ್ಲದೆ ಸಂಗ್ರಹಕಾರರಾಗಿದ್ದುಕೊಂಡು ಹಸ್ತಪ್ರತಿ ಸಂರಕ್ಷಣೆ ಮಾಡಿದ ಬಹಳಷ್ಟು ಜನರು ಬೆಳಗಾವಿ ಜಿಲ್ಲೆಯಲ್ಲಿ ಕಂಡು ಬರುತ್ತಾರೆ. ಯಕ್ಸಂಬಾದ ಚನ್ನಬಸಪ್ಪ ಕರಾಳೆ ಎಂಬುವರು ಬ್ರಿಟಿಷರೊಂದಿಗೆ ನಡೆಸಿದ ಅನೇಕ ಪತ್ರವ್ಯವಹಾರಗಳು ಅವರ ಮನೆಯಲ್ಲಿವೆ. ಚನ್ನಬಸಪ್ಪ ಕರಾಳೆ ಅವರು 'ಲಿಂಗಾಯತ ರೆಜಿಮೆಂಟ್'ವೊಂದನ್ನು ಸ್ಥಾಪಿಸಲು ಪ್ರಯತ್ನಿಸಿದ ಕಾಗದ ಪತ್ರಗಳು ಐತಿಹಾಸಿಕ ದಾಖಲೆಗಳಾಗಿವೆ. ಇತ್ತೀಚೆಗೆ ಗದುಗಿನ ತೋಂಟದಾರ್ಯಮಠದ ಲಿಂಗಾಯತ ಪುಣ್ಯಪುರುಷ ಮಾಲೆಯಲ್ಲಿ ಎಂ. ಬಿ. ಹೂಗಾರ ಅವರು ಬರೆದ 'ಚೆನ್ನಬಸಪ್ಪ ಕರಾಳೆ' ಎಂಬ ಕೃತಿಯಿಂದ ಈ ಮಾಹಿತಿ ದೊರೆಯುತ್ತದೆ.

**ವ್ಯಕ್ತಿ ಒಡೆತನದ ಹಸ್ತಪ್ರತಿಗಳ ವೈಶಿಷ್ಟ್ಯತೆ :**

ಬೆಳಗಾವಿ ಜಿಲ್ಲೆಯ ಭವ್ಯ ಇತಿಹಾಸದಲ್ಲಿ ಹಸ್ತಪ್ರತಿಗಳಿಗೆ ತುಂಬ ಮಹತ್ವದ ಸ್ಥಾನವಿದೆ. ವೈಚಾರಿಕವಾಗಿ ಅವಲೋಕನ ಮಾಡಿದಾಗ ಆಯಾ ಪ್ರದೇಶಗಳಲ್ಲಿರುವ ಹಸ್ತಪ್ರತಿಗೂ ಮತ್ತೊಂದು ಪ್ರದೇಶಕ್ಕೂ ಭಿನ್ನತೆ ಕಂಡುಬರುತ್ತದೆ. ಒಂದು ಪ್ರದೇಶದ ಹಸ್ತಪ್ರತಿಗಳ ವಸ್ತು, ಭಾಷೆ, ಬರವಣಿಗೆಯ ರೂಪ, ಅವುಗಳ ಸೌಂದರ್ಯತೆ ಮತ್ತು ಸಂರಕ್ಷಣೆ ಸ್ವರೂಪದಲ್ಲಿ ವೈವಿಧ್ಯತೆ ಕಾಣಿಸುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿದರೆ, ಬೆಳಗಾವಿ ಜಿಲ್ಲೆಯ ಹಸ್ತಪ್ರತಿಗಳು ವಿಶೇಷವಾಗಿ ಕಂಡುಬರುತ್ತವೆ. ಗದ್ಯ, ಚರಿತ್ರೆ, ಆಧ್ಯಾತ್ಮ, ತಂತ್ರ ಸಾಹಿತ್ಯ ಮತ್ತು ಶಕುನ ಜ್ಯೋತಿಷ್ಯ, ನಿಘಂಟು, ವ್ಯಾಕರಣ, ಛಂದಸ್ಸು ಮುಂತಾದ ವಿಷಯಗಳಿಗೆ ಸಂಬಂಧಿಸಿದ ಹಸ್ತಪ್ರತಿಗಳು ನಾಡಿನ ತುಂಬೆಲ್ಲ ಗೋಚರಿಸುತ್ತವೆ.

ಸಾಹಿತ್ಯಪ್ರಿಯರ ಗಮನ ಸೆಳೆಯುವ ಮಹತ್ವದ ಪ್ರತಿಗಳನ್ನು ಕಾಣಬಹುದು. ಅನಂತಾದ್ರೀಶರ ವೆಂಕಟೇಶ ಪಾರಿಜಾತದ ಪ್ರತಿಯು ಬೆಂಗಳೂರಿನ ಅವರ ಮರಿಮೊಮ್ಮಗಳ ಹತ್ತಿರವಿದ್ದು ಅದು ವಿವಿಧ ಚಿತ್ರಕಲೆ, ಪಾತ್ರ, ಸನ್ನಿವೇಶಗಳ ಮೂಲಕ ನೋಡುಗರನ್ನು ಸೂಜಿಗಲ್ಲಿನಂತೆ ಸೆಳೆದುಕೊಳ್ಳುತ್ತದೆ.

## ೨.೩. ಸರಕಾರಿ ಒಡೆತನದ ನೆಲೆ :

ಕರ್ನಾಟಕದ ಹಸ್ತಪ್ರತಿಗಳ ಪರಿವೀಕ್ಷಣ ಮತ್ತು ಸಂಗ್ರಹ ಕಾರ್ಯಕ್ಕೆ ತಳಹದಿಯನ್ನು ಹಾಕಿದವರೆ ಕರ್ನಲ್ ಮೆಕೆಂಝಿ. ಲೆವಿಸ್ ದೀಪದಲ್ಲಿ ೧೭೫೩ರಲ್ಲಿ ಜನಿಸಿ ೧೭೮೨ರ ಹೊತ್ತಿಗೆ ಭಾರತಕ್ಕೆ ಬಂದು ಈಸ್ಟ್ ಇಂಡಿಯಾ ಕಂಪನಿಯ ಮದ್ರಾಸ್ (ಚೆನ್ನೈ)ದಲ್ಲಿ ನೌಕರಿಗೆ ಸೇರಿಕೊಂಡು ೧೮೯೬ರಿಂದ ಹವ್ಯಾಸ ಭರಿತನಾದ ಮೆಕೆಂಝಿಯವರು ಪ್ರಾಚ್ಯವಸ್ತುಗಳ ಸಂಗ್ರಹ ಕಾರ್ಯವನ್ನು ಕೈಕೊಂಡು ನಂತರದಲ್ಲಿ ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆಗೆ ಹೆಚ್ಚಿನ ಮಹತ್ವ ನೀಡಿದನು. ಅಂದಿನಿಂದ ಇಂದಿನವರೆಗೆ ೨೦೦ ವರ್ಷಗಳ ಅವಧಿಯಲ್ಲಿ ಈ ಕಾರ್ಯವನ್ನು ಪೂರೈಸಿದ ಆಧುನಿಕ ಹಸ್ತಪ್ರತಿ ಭಂಡಾರಗಳು ತಮ್ಮದೆಯಾದ ಅಸ್ತಿತ್ವವನ್ನು ಕಾಪಾಡಿಕೊಂಡು ಬಂದಿವೆ. ಬೆಳಗಾವಿ ಜಿಲ್ಲೆಯ ಹಸ್ತಪ್ರತಿಗಳನ್ನು ಸಂಗ್ರಹಿಸುವುದರಲ್ಲಿ ಮೂರು ಹಸ್ತಪ್ರತಿ ಭಂಡಾರಗಳು ಸಾಕಷ್ಟು ಮಹತ್ವದ ಪಾತ್ರವಹಿಸಿವೆ. ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠ ಮತ್ತು ಕನ್ನಡ ಸಂಶೋಧನಾ ಸಂಸ್ಥೆ, ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರ ಇವೆಲ್ಲವು ಸರಕಾರ ನೀಡುವ ಅನುದಾನ ಪಡೆದುಕೊಂಡು ಹಲವು ಯೋಜನೆಗಳ ಮೂಲಕ ಸುಸಜ್ಜಿತವಾದ ಹಸ್ತಪ್ರತಿ ಭಂಡಾರ ನಿರ್ಮಿಸಿಕೊಂಡು, ಸಂಗ್ರಹ, ಸಂಸ್ಕರಣೆ, ಪರಿಷ್ಕರಣೆ ಹಾಗೂ ಪ್ರಕಟಣೆ ಕಾರ್ಯವನ್ನು ಮಾಡಿದ್ದು, ನಿಜಕ್ಕೂ ಅಭಿಮಾನದ ಸಂಗತಿಯಾಗಿದೆ.

ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರ ವಿಸ್ತಾರೋನ್ನತವಾಗಿ ಬೆಳೆಯುವಲ್ಲಿ ಕಲಬುರ್ಗಿ ಅವರು ಮಾಡಿದ ಪ್ರಯತ್ನ ಸ್ಮರಣೀಯವಾದುದು. ಕಲಬುರ್ಗಿ ಅವರಿಗೆ ಗ್ರಂಥಸಂಪಾದನೆಯ ಜ್ಞಾನ ಅಪಾರವಾಗಿದ್ದ ಕಾರಣ ಈ ಕಾರ್ಯಕ್ಕೆ ಪವನವೇಗ ಪ್ರಾಪ್ತವಾಯಿತು. ಇಲ್ಲಿಯವರೆಗೆ ಸಂಗ್ರಹಗೊಂಡ ಹಸ್ತಪ್ರತಿಗಳ ವಿವರ ಹೀಗಿದೆ: ಕನ್ನಡ ೪೩೬೦ ಸಂಸ್ಕೃತ ೫೬೫ ಮರಾಠಿ ೩೫, ತೆಲಗು ೩೮, ತಮಿಳು ೬ ಇವುಗಳಲ್ಲಿ ಬಹಳಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡ ಹಸ್ತಪ್ರತಿಗಳೆಂದರೆ ಲಿಂಗಾಯತಕ್ಕೆ ಮತ್ತು ವಚನ ಸಾಹಿತ್ಯಕ್ಕೆ ಸಂಬಂಧಪಟ್ಟ ಕೃತಿಗಳ ಸಂಖ್ಯೆ ದೊಡ್ಡದು. ಜೈನ, ಬ್ರಾಹ್ಮಣ ಶಾಖೆಗಳ ಸಿಬ್ಬಂದಿಯವರ ಪ್ರಯತ್ನದಿಂದಾಗಿ ಆ ಮತದ ಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ಸಂಗ್ರಹಗೊಂಡಿವೆ. ಬೆಳಗಾವಿ ಜಿಲ್ಲೆಯ ಹಿರಿಯ ವಿದ್ವಾಂಸರಾಗಿದ್ದ ಭುಜೇಂದ್ರ ಮಹಿಷವಾಡಿಯವರು ಬ್ರಾಹ್ಮಣಶಾಖೆಯಲ್ಲಿದ್ದುಕೊಂಡು ಹನ್ನೊಂದು ಮಹತ್ವದ ಹಸ್ತಪ್ರತಿಗಳನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಫ.ಗು.ಹಳಕಟ್ಟಿಯವರ ಮಕ್ಕಳಿಂದ ಖರೀದಿಸಿದ ೧೦೦೦ ಕಟ್ಟುಗಳು ಈ ಸಂಗ್ರಹದಲ್ಲಿ ಸೇರಿಕೊಂಡಿವೆ. ೧೯೯೨ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಎಲ್ಲ ಕಟ್ಟುಗಳು (ಸು. ೩೦೦೦) ಈ ಅಧ್ಯಯನ ಪೀಠವನ್ನು ಸೇರಿವೆ. ಹೀಗಾಗಿ ಈಗ ಇಲ್ಲಿರುವ ಒಟ್ಟು ಕಟ್ಟುಗಳ ಸಂಖ್ಯೆ ಸುಮಾರು ೮೦೦೦ ಎಂದು ಹೇಳಬಹುದು. ಈ ಹಸ್ತಪ್ರತಿಗಳ ಸಂಖ್ಯೆಯನ್ನು ಹತ್ತುಸಾವಿರ ಮಾಡಬೇಕೆಂದು ಕಲಬುರ್ಗಿ ಅವರು ಕನಸು ಕಂಡಿದ್ದರು. ಅದರ ಮುಂದುವರಿದ ಭಾಗವೆಂಬಂತೆ ಅವರು ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ

ನಂತರ ಅಲ್ಲಿಯ ಹಸ್ತಪ್ರತಿಶಾಸ್ತ್ರ ವಿಭಾಗ ಸಾವಿರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ಅವರಿಗೆ ತೃಪ್ತಿಯನ್ನುಂಟು ಮಾಡಿತ್ತು.

ಹಸ್ತಪ್ರತಿಗಳ ವಿವರಣಾತ್ಮಕ ಸೂಚಿಗಳನ್ನು ಮಾಡಬೇಕೆಂಬ ಮಹದಾಸೆ ಹೊಂದಿದ ಎಂ. ಎಂ. ಕಲಬುರ್ಗಿ ಅವರು ಈ ವಿಭಾಗದಲ್ಲಿ ಕಾರ್ಯಗತಗೊಳಿಸಿದರು. ಇವರು ವಿಭಾಗದ ಮುಖ್ಯಸ್ಥರಾಗಿದ್ದ ಕಾಲದಲ್ಲಿಯೇ ಒಂದು ಸಾವಿರ ಕಟ್ಟುಗಳ ಹತ್ತು ವಿವರಣಾತ್ಮಕ ಹಸ್ತಪ್ರತಿ ಸೂಚಿಗಳು ಸಿದ್ಧಗೊಂಡವು. ೨, ೩, ೪, ೫ನೆಯ ಸಂಪುಟಗಳನ್ನು ಹೊರತು ಪಡಿಸಿ ಮಿಕ್ಕವು ೧೯೯೨ರಲ್ಲಿಯೇ ಪ್ರಕಟಗೊಂಡಿವೆ. ಇವುಗಳಲ್ಲಿ ಮೊದಲನೆಯ ಸಂಪುಟವನ್ನು ಸಂಪಾದಿಸಿದವರು ಬಿ. ಆರ್. ಹಿರೇಮಠ ಅವರು. ೬–೧೦ನೆಯ ಸಂಪುಟಗಳನ್ನು ವೀರಣ್ಣ ರಾಜೂರ ಅವರು ಸಂಪಾದಿಸಿದ್ದಾರೆ. ಮುಂದಿನ ಕೆಲವು ಕಟ್ಟುಗಳ ಸೂಚಿ ಕಾರ್ಯಕ್ಕೆ ಸಿದ್ಧಗೊಂಡಿವೆ. ಆದರೆ ಮತ್ತೊಮ್ಮೆ ಪರಿಶೀಲಿಸಿ ಮುದ್ರಣ ಕಾರ್ಯಕ್ಕೆ ಕಳುಹಿಸುವ ಸಿದ್ಧತೆ ನಡೆದಿದೆ. ಆದರೆ ಇವುಗಳಷ್ಟಲ್ಲದೆ ಇನ್ನು ಕೆಲವು ಹಸ್ತಪ್ರತಿಗಳು ಭಂಡಾರದಲ್ಲಿ ಲೆಕ್ಕವಿರದೆ ಉಳಿದುಕೊಂಡಿದ್ದು ನೋಡಬಹುದು.

ಪ್ರಸ್ತುತ ಜಿಲ್ಲೆಯ ಧಾರ್ಮಿಕ ಒಡೆತನ, ವ್ಯಕ್ತಿ ಒಡೆತನದ ಹಸ್ತಪ್ರತಿಗಳು ಈ ಭಂಡಾರದಲ್ಲಿ ಸಂರಕ್ಷಣೆಗೊಂಡಿದ್ದನ್ನು ಗಮನಿಸಬೇಕಾಗುತ್ತದೆ. ಬೆಳಗಾವಿ ಜಿಲ್ಲೆಯಿಂದ ೪೫೦೦ ಹಸ್ತಪ್ರತಿ ಕಟ್ಟುಗಳು ಈ ಭಂಡಾರದಲ್ಲಿ ಸೇರಿಕೊಂಡ ಬಗ್ಗೆ ಉಲ್ಲೇಖ ದೊರೆಯುತ್ತದೆ. ಎಲ್ಲ ಹಸ್ತಪ್ರತಿಗಳು ೧೦ ಸಂಪುಟಗಳಲ್ಲಿ ಸೇರ್ಪಡೆಗೊಂಡಿರುವುದು ಕಾಣುವುದಿಲ್ಲ. ೧ ಮತ್ತು ೧೦ನೇ ಸಂಪುಟದಲ್ಲಿ ಜಿಲ್ಲೆಯಿಂದ ಸಂಗ್ರಹಗೊಂಡ ಹಸ್ತಪ್ರತಿಗಳ ವಿವರ ದೊರೆಯುತ್ತದೆ. ಸಂಪುಟ ಒಂದರಲ್ಲಿಯೇ ೪೯ ಹಸ್ತಪ್ರತಿಗಳು ಸೇರಿವೆ. ಅಕ್ಕಗಳ ಸೃಷ್ಟಿಯ ವಚನ, ಅನುಭವ ಸಾರ, ಗಣಭಾಷಿತ ರತ್ನಮಾಲೆ, ನೀತಿಗ್ರಂಥ, ರಾಜಶೇಖರ ವಿಳಾಸ, ಮಿಶ್ರಾರ್ಪಣ, ವೃಷಭಗೀತೆ, ಶಬ್ದರತ್ನಾಕರ, ಶಿವಕವಚದ ಟೀಕೆ ಇಂಥ ಮಹತ್ವದ ಹಸ್ತಪ್ರತಿ ಕಟ್ಟುಗಳು ಗೋಕಾಕ ತಾಲೂಕಿನ ಅರಭಾವಿಯ ದುರದುಂಡೀಶ್ವರಮಠದಿಂದ ತೆಗೆದುಕೊಂಡು ಹೋಗಿರುವ ವಿಚಾರ ತಿಳಿಯುತ್ತದೆ. ಈ ಸಂಪುಟದಲ್ಲಿ ಕ್ರಮಸಂಖ್ಯೆ, ಕರ್ತೃ, ಅಳತೆ, ಕಾಲ, ಒಡೆತನ ಪ್ರತಿಕಾರನ ವಿಷಯ ಸ್ಪಷ್ಟವಾಗಿ ಹೇಳಿರುವುದರಿಂದ ತಕ್ಷಣವೆ ಗುರುತಿಸಲು ಸಾಧ್ಯವಾಗುವಂತೆ ಮಾಡಿದ್ದಾರೆ. ಹೀಗಾಗಿ ಸಂಪುಟ ೧ರಲ್ಲಿ ೬೧ ಕಟ್ಟುಗಳಲ್ಲಿ ೧೪೩೦ನೆಯ ಶತಮಾನಕ್ಕೆ ಸಂಬಂಧಿಸಿದ ಏಕೋತ್ತರ ಶತಸ್ಥಲದ ಟೀಕೆಯನ್ನು ಜಕ್ಕಣ್ಣ ರಚಿಸಿದ್ದು, ಇದರಲ್ಲಿ ನಮ್ಮ ಕನ್ನಡದ ಪ್ರಮುಖ ವಚನಕಾರರನ್ನು ಸ್ಮರಣೆ ಮಾಡಿಕೊಂಡಿದ್ದು ವೈಶಿಷ್ಟ್ಯವಾಗಿದೆ.

ಸಂಪುಟ ೧ರಲ್ಲಿಯೇ ೨೪೯ ಕಟ್ಟುಗಳಲ್ಲಿ ದುರದುಂಡೀಶ್ವರ ಮಠ ಅರಭಾವಿ ಮಠದಲ್ಲಿ ದೊರೆತಿರುವ ಪ್ರತಿಯಲ್ಲಿ ರಾಜಶೇಖರ ವಿಳಾಸ ಕೃತಿಯನ್ನು ದಾಬಳಿ ಮಹಾಂತಪ್ಪನು ಬರೆದ ಉಲ್ಲೇಖದೊಂದಿಗೆ ರಾಜಶೇಖರ ಚರಿತ್ರೆ ಮತ್ತು ಪಂಚಾಕ್ಷರಿ ಮಹಿಮೆಯನ್ನು ಹೇಳಿದ್ದಾನೆ.

**ಅಂತ್ಯ:** "ಶ್ರೀ ಷಡಕ್ಷರದೇವರಚಿತಮಪ್ಪ ರಾಜಶೇಖರ ವಿಳಾಸ ವಿಪುಳ ಪ್ರಬಂಧದೊಳ್ ಪರಮೇಶ್ವರ ಪ್ರಸಂಗ ತಾತದಾಸ್ಥಾನ ವರ್ಣನಂ ಚತುದರ್ಶಶ್ವಾಸಂಪೂರ್ಣ ಮಂಗಳ ಮಹಾಶ್ರೀ ಶ್ರೀ ಅಂತೂ ಆಶ್ವಾಸ ೧೪ಕ್ಕು ಪದ್ಯ ೧೮೬೮ಕ್ಕೆ ಮಂಗಳ ಮಹಾಶ್ರೀ ಶ್ರೀ ಯಿದು ಮುಗಿಸಿದ್ದು ದುರ್ಮುಖಿನಾಮ ಸಂವತ್ಸರ ಚೈತ್ರ ಮಾಸದ ಬನದ ಹುಂಣವಿ ತದಿಗೆ ೩ ದಿನದಲ್ಲಿ ಶನಿವಾರ ಪ್ರಾತಃಕಾಲ ಎರಡು ತಾಸಿನವೊಳಗೆ ಸಮಾಪ್ತಿಯಾಯಿತು. ಯಾರಿಗೆ ಬರಕೊಟ್ಟದ್ದುನವರಿಗೆ ಬರಕೊಟ್ಟದ್ದು ಯಾರು ಬರೆದರೆಂದರೆ ಮಹಾಂತಪ್ಪನು ಬರದಂತ ಪುಸ್ತಕವಯಿದು ಜ್ಞಾನಿಗಳಾದ ಗುರುಮೂರ್ತಿಗಳು ಬಡಮಗನ ಮೇಲೆ ದಯಮಾಡಿ ತಪ್ಪುನಪ್ಪು ತಿದ್ದಿವೊದಿ ಹಾಡಿ ಕೇಳಿ ಅರ್ಥ ಅನ್ವಯನ ಮಾಡಿ ರಕ್ಷಿಸುವುದು ಶ್ರೀ ಶ್ರೀ."[೩೫]

ಷಡಕ್ಷರದೇವ ಬರೆದ ಬಸವರಾಜ ವಿಜಯ ಪುರಾಣ ಕೃತಿ ೧೦ನೆಯ ಸಂಪುಟದ ೧೦೫ ಕಟ್ಟುಗಳ ಕ್ರಮಸಂಖ್ಯೆಯಲ್ಲಿ ಉಲ್ಲೇಖಗೊಂಡಿದ್ದು ಇದು ದುರದುಂಡೀಶ್ವರಮಠದ ಮುರಗೋಡದಲ್ಲಿ ದೊರೆತಿರುವ ಮಾಹಿತಿಯಿದೆ. ಹಸ್ತಪ್ರತಿಯ ಕೊನೆಯಲ್ಲಿ ಪ್ರತಿಮಾಡಿದ ಹೆಸರು ವೀರಭದ್ರಯ್ಯ ಎಂದು ನಮೂದಿಸಿರುವುದು ಕಂಡು ಬರುತ್ತದೆ.

**ಅಂತ್ಯಗದ್ಯ :** "ಇದು ವಿನಮದಖಿಳ ಸುರಾಸುರೇಂದ್ರ ಮುಕುಟ ತಟಘಟಿತ ಮಣಿಗಣಾಗಣಿತ ರುಚಿನಿಚಯ ತರುಣಾರುಣಾ ತಪಪರಿಲಸಿತ ಪರಮ ಶಿವಲಿಂಗ ಪಾದಾರವಿಂದ ಪರಾಗಭಸಿತ ಭಾಸುರ ಲಲಾಟಪಟ್ಟ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀ ಷಡಕ್ಷರದೇವ ಭಕ್ತಿ ವಿರಚಿತ ಶ್ರೀಮದ್ಭಸವರಾಜ ವಿಯ ಮಹಾಪುರಾಣದೊಳ್ ಬಸವರಾಜ ವಿಜಯ ವರ್ಣನಂದಿ ಚತ್ವಾರೀಂ ಶಾಶ್ವಸಂ ಮಂಗಳ ಮಸ್ತು। ಬಸವರಾಜ ವಿಜಯ ಪುರಾಣ ಸಂಪೂರ್ಣ ಮಹಾ ಶ್ರೀ ಶ್ರೀ

ಶ್ರೀ ಶಾರದಾ ಗುರುಭ್ಯೋ ನಮಃ । ಹೇವಳಂಬಿ ಸಂವತ್ಸರದ ಮಾರ್ಗಶಿರ ಶುದ್ಧ ಪಂಚಮಿ ದಿವಸ ಸಮಾಪ್ತಿಯಾಯಿತು. ಕೆಳದಿ ಶ್ರೀ ವೀರಭದ್ರದೇವರ ಸ್ತಾನಿಕ ವೀರಭದ್ರಯ್ಯ ಬರೆದ ಪುರಾಣ ಅಚಂದ್ರಾರ್ಕಮಸ್ತು. ಐಶ್ವರ್ಯಾಭಿವೃದ್ಧಿರಸ್ತು ಶ್ರೀ ಶ್ರೀ."[೩೬]

ಇದೇ ಸಂಪುಟದಲ್ಲಿ ಷಡಕ್ಷರದೇವರನು ವಿರಚಿತ ವೃಷಭೇಂದ್ರ ವಿಜಯ ಕೃತಿಯನ್ನು ರಚಿಸಿರುವುದು ಕಂಡುಬರುತ್ತದೆ. ಬೈಲಹೊಂಗಲದ ಪುರಾಣಿಕ ಮಠದ ದುರದುಂಡೆಪ್ಪ ಬರೆದುಕೊಟ್ಟದ್ದನ್ನು ಕೂಡಾ ಗಮನಿಸಬಹುದು.

**ಅಂತ್ಯ :** "ಮಂಗಲಮಸ್ತು ಅಂತೂ ಆಶ್ವಾಸ ೪೨ಕ್ಕೆ ಪದನುಗಣನ ೩೫೩೦ಕ್ಕಂ ಶುಭಮಸ್ತು. ಶಕ ೧೭೭೭ ರಾಕ್ಷಸ ನಾಮ ಸಂವತ್ಸರ ಆಷಾಢವದಿ ೬ ಶುಕ್ರವಾರ ರೇವತಿ ನಕ್ಷತ್ರ ಅಮೃತಸಿದ್ಧಿಯೋಗದಲ್ಲಿ ಶ್ರೀ ಷಡಕ್ಷರದೇವ ಕೃತ ವೃಷಭೇಂದ್ರ ವಿಜಯ ಮಹಾಪುರಾಣವನ್ನು ಹೊಂಗಲದ ಪುರಾಣಿಕ ಮಠದ ದುರದುಂಡೆಪ್ಪನೂ ಪಠಿಸಿ ಕೃತಾರ್ಥನಾಗುವಗೋಸ್ಕರವಾಗಿ ಬರೆದುಕೊಂಡಿರ್ಪುದೂ ಇಂತಿ ಮಂಗಳ ಮಸ್ತು ಶ್ರೀ ಶ್ರೀ ಗುರುಬಸವಲಿಂಗಾಯನಮಃ ಶ್ರೀ ಬಸವಾದ್ಯಮರಗಣ್ಯೋಭ್ಯ ನಮಃ ಶ್ರೀ ಗುರು ಪ್ರಸನ್ನ."[೩೭]

ಭಕ್ತಿ ಭಂಡಾರಿ ಬಸವೇಶ್ವರನ ಚರಿತ್ರೆ ಹಾಗೂ ಶರಣರ ಉಪಕಥೆಗಳ ವರ್ಣನೆಯು ಈ ಕಟ್ಟುಗಳಲ್ಲಿ ಅಡಕವಾಗಿದ್ದನ್ನು ಕೂಡಾ ನೋಡಬಹುದು. ಸಂಪುಟ ೧೦ ರಲ್ಲಿ ನಮ್ಮ ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ೮೦ ಹಸ್ತಪ್ರತಿಗಳು ದೊರೆಯುತ್ತವೆ. ಅನುಭವ ಮುದ್ರೆ, ಕರಣ ಹಸಿಗೆ, ಟೀಕೆ, ಜಂಗಮದ ಮಹತ್ವ, ಜೈಮಿನಿ ಭಾರತ, ಪಂಚತಂತ್ರ, ಬಬ್ರುವಾಹನನ ಕಥೆ, ಮಿಶ್ರಾರ್ಪಣ, ಬ್ರಹ್ಮಗೀತೆ, ಹಮ್ಮೀರಕಾವ್ಯ ಸ್ವರ ವಚನ, ವ್ಯಾಕರಣ ಗ್ರಂಥ, ವೀರಶೈವ ತತ್ವಗಳ ಗ್ರಂಥ ಮುಂತಾದ ಹಸ್ತಪ್ರತಿಗಳ ರಾಶಿಯೇ ಕಂಡು ಬರುತ್ತದೆ. ಗದ್ಯ, ಪದ್ಯ, ತಂತ್ರ ಬೇರೆ ಬೇರೆ ಚಿತ್ರಗಳನ್ನೊಳಗೊಂಡ ಪ್ರತಿಗಳು ದೊರೆಯುತ್ತವೆ.

ಮುಂಬೈ ಸರಕಾರ ತನ್ನ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ಪ್ರದೇಶದ ಸಂಶೋಧನೆಗಾಗಿ ೧೯೩೮ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯ ಸ್ಥಾಪನೆಗೆ ಸಂಬಂಧಪಟ್ಟ ನಿರ್ಣಯವನ್ನು ಸ್ವೀಕರಿಸಿತು. ೧೯೩೯ರಲ್ಲಿ ಆರ್. ಎಸ್. ಪಂಚಮುಖಿಯವರು ಪ್ರಥಮ ನಿರ್ದೇಶಕರಾಗಿ ಅಧಿಕಾರ ವಹಿಸಿಕೊಂಡು ಅಂದಿನಿಂದಲೇ ಹಸ್ತಪ್ರತಿಗಳನ್ನು ಸಂಗ್ರಹಿಸುವ ಕಾರ್ಯ ಪ್ರಾರಂಭವಾಯಿತು. ಈ ವೇಳೆಗಾಗಲೇ ಫ.ಗು.ಹಳಕಟ್ಟಿ ಅವರಿಂದ ಹಸ್ತಪ್ರತಿ ಸಂಗ್ರಹ–ಸಂಪಾದನೆ ಪ್ರಕಟನೆಯು ಒಂದು ಯೋಜನೆಯ ರೂಪದಲ್ಲಿ ಈ ಭಾಗದಲ್ಲಿ ಆಗಿದ್ದರಿಂದ ಅದನ್ನು ಮುಂದುವರೆಸುವಂಥ ಕಾರ್ಯ ಚಟುವಟಿಕೆಯು ಪ್ರಾರಂಭವಾಯಿತು. ೨೦೦ ಕ್ಕೂ ಅಧಿಕ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಲ್ಲದೇ ೧೪ ಸೂಚಿಗಳನ್ನು ಮತ್ತು ಕವಿ ಜಿಹ್ವಾಬಂಧನ (೧೯೫೦), ಸಮಯ ಪರೀಕ್ಷೆ (೧೯೫೮) ಇಂಥ ಹಲವಾರು ಪ್ರಮುಖ ಗ್ರಂಥಗಳನ್ನು ಪ್ರಕಟಿಸಿದ ಈ ಕೀರ್ತಿ ಸಂಸ್ಥೆಯದ್ದು.

"ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಪ್ರಾರಂಭವಾಗಿ ಅಲ್ಲಿಯ ಕನ್ನಡ ವಿಭಾಗದ ಕನ್ನಡ ಅಧ್ಯಯನ ಪೀಠದಲ್ಲಿ ವ್ಯವಸ್ಥಿತವಾದ ಹಸ್ತಪ್ರತಿ ವಿಭಾಗ ಚಟುವಟಿಕೆ ಆರಂಭಿಸಿದ ಮೇಲೆ ಇದರ ಚಟುವಟಿಕೆ ಕುಂಠಿತಗೊಂಡಿತು. ಕಲಬುರ್ಗಿ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ನಿರ್ದೇಶಕರಾಗಿದ್ದಾಗ ೧೯೯೨ರಲ್ಲಿ ಸಂಶೋಧನ ಸಂಸ್ಥೆಯ ಎಲ್ಲಾ ಹಸ್ತಪ್ರತಿಗಳನ್ನು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗಕ್ಕೆ ಸೇರಿಸಿದ ನಂತರ ಈ ಸಂಸ್ಥೆ ಸ್ಥಗಿತವಾಯಿತು."[೩೮]

೧೯೫೭ರಿಂದಲೇ ಕಾರ್ಯಾರಂಭ ಮಾಡಿದ ಸೂಚಿ ಸಂಪುಟ ೧೯೯೦ರವರೆಗೆ ೧೪ ಸಂಪುಟಗಳು ಶಿಲ್ಪರಚನೆಗೊಂಡಿವೆ. ಆದರೆ ಇವುಗಳಲ್ಲಿ ೮ ಸಂಪುಟಗಳಲ್ಲಿ ಬೆಳಗಾವಿ ಜಿಲ್ಲೆಯ ಹಸ್ತಪ್ರತಿಗಳ ವಿಷಯ ಸೇರ್ಪಡೆಗೊಂಡಿರುವುದು ಕಂಡುಬರುತ್ತದೆ. ಸಂಪುಟ ೩, ೪, ೫, ೮, ೯, ೧೦, ೧೧, ೧೩ರಲ್ಲಿರುವ ಹಸ್ತಪ್ರತಿಗಳಿಗಿಂತ ಪ್ರಥಮ ಸಂಪುಟದಲ್ಲಿಯೇ ೧೦ ಕಟ್ಟುಗಳ ವಿವರಣೆ ದೊರೆಯುತ್ತದೆ. ಇನ್ನುಳಿದ ೭ ಸಂಪುಟದಲ್ಲಿ ೪೨ ಕಟ್ಟುಗಳ ವಿವರ ನೋಡಬಹುದು.

ಒಟ್ಟು ಎಂಟು ಸೂಚಿಗಳಲ್ಲಿ ೧೬ನೆಯ ಶತಮಾನದ ೨೦ನೆಯ ಶತಮಾನದವರೆಗೆ ರಚನೆಗೊಂಡಿರುವ ಹಸ್ತಪ್ರತಿಗಳನ್ನು ನೋಡುತ್ತೇವೆ. ಕೆಲವೊಂದು ಹಳಗನ್ನಡ ನಡುಗನ್ನಡ

ಸಾಹಿತ್ಯಕ್ಕೆ ಸಂಬಂಧಪಟ್ಟ ಪ್ರಾಚೀನ ಕಾಲದವುಗಳಾಗಿವೆ. ಕಮ್ಮಟರಾಮನ ಕಥೆ, ಪಂಚತಂತ್ರದ ಟೀಕೆ, ಗಂಗೆ ಗಿರಿಜೆ ಸಂವಾದ, ಚಿತ್ರಶೇಖರ ಸೋಮಶೇಖರ ಚರಿತ್ರೆ, ಅಕ್ರೂರಾನುಭವ, ಗಜೇಂದ್ರ ಮೋಕ್ಷ ಬಿಜ್ಜಳನ ಚರಿತ್ರೆ, ಜೈಮಿನಿ ಭಾರತ, ಆಚರಣೆ ವಚನ, ಉದ್ಭಟ್ಟಯ್ಯನ ಕಾವ್ಯ ಶಾಂತಿನಾಥನ ಚರಿತ್ರೆ ಭಕ್ತಿಸಾರ, ಮಂಗಳಾರತಿ ಪದ ಹೆಳವನಕಟ್ಟಿ ಗಿರಿಯಮ್ಮನ ಹಾಡು, ಕುಮುದೇಂದು ರಾಮಾಯಣ ಹೀಗೆ ಜಿಲ್ಲೆಯ ಅನೇಕ ತಾಲೂಕು ಗ್ರಾಮ ಸ್ಥಳಗಳಿಂದ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ. ಅಷ್ಟಲ್ಲದೆ ವ್ಯಕ್ತಿ ಒಡೆತನದ ಸಂಪತ್ತನ್ನು ತೆಗೆದುಕೊಂಡು ಬಂದಿರುವುದು ಗಮನಾರ್ಹ. ನೆರೆಯ ರಾಜ್ಯಗಳಿಗೆ ಭೇಟಿ ನೀಡಿರುವ ಸ್ಥಳಗಳನ್ನು ನೋಡಬಹುದು. ಮಹಾರಾಷ್ಟ್ರದ ಸಾಂಗಲಿ, ಕೊಲ್ಲಾಪುರ, ಜತ್ತದಂಥ ಮರಾಠಿ ಪ್ರದೇಶದ ಜನರ ಹತ್ತಿರವಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ವಿಶಿಷ್ಟದಾಯಕ ಕಾರ್ಯವಾಗಿದೆ.

ಇಲ್ಲಿನ ಹಸ್ತಪ್ರತಿಗಳ ಅನನ್ಯತೆ ಗಮನಿಸಿದರೆ ಸಂಪುಟ ೪ ರಲ್ಲಿ ೧೮೭೩ನೆಯ ಶತಮಾನಕ್ಕೆ ಸಂಬಂಧಿಸಿದ  ಶಿವನ ಕುರಿತಾಗಿರುವ ಮಂಗಳಾರತಿ ಪದವಿದೆ. ಇದು ಆಧುನಿಕ ಕಾಗದದ ಮೇಲೆ ರಚನೆಗೊಂಡಿದೆ. ಆದರೆ ರಚನೆಕಾರನ ಹೆಸರು ನಮೂದಿಸಿರುವುದಿಲ್ಲ. ಇದು ಬೆಳಗಾವಿ ಜಿಲ್ಲೆ ಮುನವಳ್ಳಿಯ ಗ್ರಾಮದಲ್ಲಿ ಸಿಕ್ಕಿರುವ ಮಾಹಿತಿಯಿದೆ.  ಆದರೆ ಇದನ್ನು ಭಾಮೀನಿ ಷಟ್ಪದಿಯಲ್ಲಿ ಕವಿ ಬರೆದಿರುವುದನ್ನು ನಾವು ಗಮನಿಸಲೇಬೇಕಾಗುತ್ತದೆ.

"ಸುರನತ ಚರಣೆಗೆ ಸರಸಾಭರಣೆಗೆ
ವರಗುಣ ನಿಕರಿಗೆ ವಿತರಣ ಸುಕರಿಗೆ
ನಿರುಪಮ ಚರಿತೆಗೆ ನಿಜಸುಖ ಭರಿತೆಗೆ ಪರತರ ಪಾರ್ವತಿಗೆ
ಗೌರಿಗೆ ಗಾಂಭೀರಿಗೆ ಶೃಂಗಾರಿಗೆ
ಸಾರಸಗಂಧಿಗೆ ಶಿವತನು ಬಂಧಿಗೆ
ವಾರಿಜವದನಿಗೆ ವಿದ್ಯಾಸವನಿಗೆ ಧೀರಿಗೆ ಕಾರುಣ್ಯ
ಪಾರವಾಂಗೆ ಪುಣ್ಯಾಕಾರಿಗೆ
ಹಾರಧರೋಚಿಗೆ ತೀರದ ಪೂಜಿಗೆ
ಕಾರುಣರೂಪಿಗೆ ಕೀರ್ತಿಕಲಾಪಿಗೆ ಶಾರದಾದೇವತೆಗೆ." ೫

ಮಹಾರಾಷ್ಟ್ರದ ಸಾಂಗಲಿಯಲ್ಲಿ ಜೈನಧರ್ಮದ ೧೯ನೆಯ ಶತಮಾನದ ಹಸ್ತಪ್ರತಿಯೊಂದು ದೊರೆಯುತ್ತದೆ. ಪಟ್ಟಹಸ್ತನ ಚರಿತೆ ಎಂಬ ಕೃತಿಯನ್ನು ಅದಿಯಪ್ಪ ಬರೆದಿದ್ದಾನೆ. ಇದು ಜೈನಧರ್ಮದ ಸಮುದಾಯದವರು ಧರ್ಮವನ್ನು ಮಾಡದೆ ಮೋಕ್ಷ ದೊರೆಯುವುದಿಲ್ಲ. ಅದಕ್ಕಾಗಿ ಜೈನ ಧಾರ್ಮಿಕರು ಇದರ ಅಭ್ಯಾಸವನ್ನು ಮಾಡಿ ಅದನ್ನು ತಿಳಿದು ಆಚರಿಸುವುದರಿಂದ ಮುಕ್ತರಾಗುತ್ತಾರೆ ಎಂಬ ವಿಷಯ ಇಲ್ಲಿದೆ. ೯೭ ಚೌಪದಿಗಳು ಸಾಂಗತ್ಯ ಪದ್ಯಗಳಾಗಿವೆ.

"ಶ್ರೀ ವೀತರಾಗಾಯ ನಮಃ
ಪಟ್ಟಹಸ್ತನ ಚರಿತೆ ಬರೆಯುವುದಕ್ಕೆ ಶುಭಮಸ್ತು
ನಿರ್ವಿಘ್ನಮಸ್ತು
ಶ್ರೀ ಪರಮಾತ್ಮ ಪವಿತ್ರನೆ ಕಮನೀಯ
ರೂಪಾನೆ ಕರುಣಾಂಬುಧಿಯೇ
ಶ್ರೀ ಪುರುಷೋತ್ತಮರ್ಚ್ಚಿತ ಪಾದಕಮಲರ್ಜಿ
ಪಾಪಹರನೆ ಪಾಲಿಸೈನಾ
ಧರೆಗತಿ ಚಲುವನು ದುರಿತ ವಿದೂರನು
ಸುರನರಪತಿ ವಂದಿತನೂ
ಪುರು ಪರಮೇಶನ ಪಾದ ಪದ್ಮಕೆ ನಾನೂ
ಭರದಿಂದ ಬಂದು ವಂದಿಸುವೆ
ಜಿನರನಲ್ಲದೆ ಪಾಡೆ ಜಿನರನಲ್ಲದೆ ಬೇಡೆ
ಜಿನರನಲ್ಲದೆ ಕೊಂಡಾಡೆ
ಜಿನಮುನಿಗಳಿಗಲ್ಲದೆ ಕೈ ಮುಗಿಯೆನೂ
ಜಿನಧರ್ಮವೆ ಶರಣೆನಗೆ. [೪೦]

ಇಂಥ ಅಪರೂಪದ ಹಸ್ತಪ್ರತಿ ಸೂಚಿ ಸಂಪುಟ ಒಳಗೊಂಡಿವೆ. ಅಷ್ಟೆ ಅಲ್ಲದೆ ಈ ಸಂಪುಟಗಳು ಜೈನ, ವೈಷ್ಣವ, ವೀರಶೈವ ತತ್ವಮತಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಮತ್ತು ರಾಮಾಯಣ ಮಹಾಭಾರತ, ಭಾಗವತ ಪುರಾಣಗಳಲ್ಲಿಯ ಕಥಾಭಾಗಗಳನ್ನು ವಿವರಿಸುವ ಕೃತಿಗಳು ಇಲ್ಲಿರುವ ಎಲ್ಲ ಸೂಚಿಗಳಲ್ಲಿ ಕಾಣುತ್ತೇವೆ.

೧೯೯೧ ಅಕ್ಟೋಬರ್ ೨೩ ರಂದು ಕರ್ನಾಟಕದ ಶೈಕ್ಷಣಿಕ ಸಾಂಸ್ಕೃತಿಕ ಲೋಕದಲ್ಲಿ ಒಂದು ಅತ್ಯಂತ ಮಹತ್ವದ ದಿನ ಎನ್ನಬೇಕು. ಅಂದು ಕನ್ನಡ-ಕನ್ನಡಿಗ-ಕರ್ನಾಟಕಗಳ ಸಮಗ್ರ ಸಂಸ್ಕೃತಿಯ ಶೋಧ ಮತ್ತು ಪ್ರಸಾರಗಳಿಗಾಗಿ ಅಸ್ತಿತ್ವಕ್ಕೆ ಬಂದಿತು ಕನ್ನಡ ವಿಶ್ವವಿದ್ಯಾಲಯ. ತದನಂತರದಲ್ಲಿ ಹೊಸ ಹೊಸ ವಿಭಾಗ ಹುಟ್ಟಿಕೊಂಡವು. ಅವುಗಳಲ್ಲಿ ೧೯೯೬ರಲ್ಲಿ ಆರಂಭವಾದ ಹಸ್ತಪ್ರತಿ ವಿಭಾಗವು ಪ್ರಮುಖವೆನಿಸುತ್ತದೆ. ಇದರ ಒಂದು ಅಂಗವಾಗಿ ಬೆಳೆದಿರುವುದು ಹಸ್ತಪ್ರತಿ ಭಂಡಾರ.

ಈ ವಿಭಾಗ ಕಾರ್ಯವನ್ನು ಮೆಚ್ಚಿಕೊಳ್ಳುವಂತಹದ್ದು. ೫ ಜನ ಪ್ರಾಧ್ಯಾಪಕರ ವರ್ಗದೊಂದಿಗೆ ಹಸ್ತಪ್ರತಿ ಭಂಡಾರ ನಳನಳಿಸಿ ನಿಂತಿದೆ. ಯಾವ ಸೌಕರ್ಯವಿಲ್ಲದ ದಿನಮಾನದಲ್ಲಿ ಇಲ್ಲಿನ ಸಿಬ್ಬಂದಿಯವರು ಹಳ್ಳಿ, ನಗರ, ಪಟ್ಟಣವನ್ನೆಲ್ಲ ಸುತ್ತಾಡಿ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ಹೆಮ್ಮೆಯ ವಿಷಯವಾಗಿದೆ. ಈ ಒಂದು ಫಲಶ್ರುತಿಯಾಗಿ ೨೫೦೦ಕ್ಕೂ ಹೆಚ್ಚು ಹಸ್ತಪ್ರತಿಗಳು ಭಂಡಾರದಲ್ಲಿ

ಸಂಗ್ರಹಗೊಂಡಿವೆ. ಪ್ರಸ್ತುತ ಪ್ರಾಧ್ಯಾಪಕ ವರ್ಗವು ಕೇವಲ ಕನ್ನಡ ಹಸ್ತಪ್ರತಿ ಮಾತ್ರ ಸಂಗ್ರಹಿಸದೆ ಅನ್ಯಭಾಷೆಯವುಗಳನ್ನು ಸಂಗ್ರಹ ಮಾಡಿದ್ದು ಗಮನಾರ್ಹ ಸಂಗತಿ. ಸಂಸ್ಕೃತ, ತೆಲಗು, ತಮಿಳು ಲಿಪಿಯನ್ನೊಳಗೊಂಡಿದ್ದನ್ನು ನೋಡಬಹುದು. ಇವುಗಳೆಲ್ಲ ತುಂಬಾ ವೈವಿಧ್ಯಮಯವಾದ ವಿಷಯಗಳನ್ನು ಮತ್ತು ರಚನೆಗಳನ್ನು ಹೊಂದಿವೆ. ತಾಳೆಗರಿ, ಕೋರಿಕಾಗದ, ಪ್ರತಿಗಳನ್ನೊಳಗೊಂಡು ಒಂದೆರಡು ಪುಟಗಳಿಂದ ಹಿಡಿದು ಒಂದು ಸಾವಿರ ಪುಟಗಳನ್ನೊಳಗೊಂಡ ಬೃಹತ್ ಕೃತಿಗಳು ಇಲ್ಲಿವೆ. ಅಮರಕೋಶ, ಬಸವಪುರಾಣ, ಕುಮಾರವ್ಯಾಸ ಭಾರತ, ಜೈಮಿನಿ ಭಾರತ, ಕರಣ ಹಸಿಗೆ, ತತ್ವಪದಗಳು, ಕೀರ್ತನೆಗಳಂಥ ಉತ್ಕೃಷ್ಟ ಕೃತಿಗಳು ದೊರೆಯುತ್ತವೆ. ಇವು ಇಲ್ಲಿನ ಹಸ್ತಪ್ರತಿಗಳ ವೈಶಿಷ್ಟ್ಯತೆಯಾಗಿವೆ.

"ವೀರಶೈವ ಧರ್ಮ ತತ್ವವನ್ನು ಚಿತ್ರಗಳ ಮೂಲಕ ಜನಸಾಮಾನ್ಯರಿಗೆ ತಿಳಿಹೇಳುವ ಉದ್ದರಣೆ ಪಟಲಗಳು ಹಸ್ತಪ್ರತಿಗಳ ರಕ್ಷಾಫಲಕ ಒಳಪುಟ ಹಾಗೂ ಮುಖಪುಟಗಳಲ್ಲಿ ಬರೆದ ಚಿತ್ರಗಳೂ ಸುಳುಹು ನಕ್ಷೆಗಳೂ ವಿದ್ವಾಂಸರ, ಪ್ರವಾಸಿಗರ ಗಮನವನ್ನು ಸೆಳೆದಿವೆ."[೪೧] ಪ್ರಸ್ತುತ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಪ್ರಾಧ್ಯಾಪಕರು ಸೂಚಿ ಸಂಪುಟಗಳನ್ನು ಸಿದ್ಧಪಡಿಸುವಲ್ಲಿ ಅವಿರತ ಶ್ರಮ ದೊಡ್ಡದಾದದ್ದು. ಈಗಾಗಲೇ ಐದು ಸಂಪುಟಗಳಲ್ಲಿ ಬೆಳಕು ಕಂಡಿವೆ. ೬ನೇ ಸಂಪುಟದ ಕಾರ್ಯ ಪ್ರಗತಿಯಲ್ಲಿರುವುದು ಕಂಡು ಬರುತ್ತದೆ. ಈ ೫ ಸಂಪುಟಗಳು ಸಂಶೋಧಕರಿಗೆ ಅಧ್ಯಯನ ಮಾಡುವವರಿಗೆ ತುಂಬಾ ಸಹಕಾರಿಯಾಗಿವೆ. ವಿಭಾಗದ ಹಸ್ತಪ್ರತಿ ಭಂಡಾರವನ್ನು ವಿಕಾಸಗೊಳಿಸಲು ಬೇರೆ ಬೇರೆ ಜಿಲ್ಲೆಗಳಿಂದ ವ್ಯಕ್ತಿಗಳು ತಮ್ಮ ಹತ್ತಿರವಿದ್ದ ಹಸ್ತಪ್ರತಿಗಳನ್ನು ದಾನ ಮಾಡಿದ್ದಾರೆ. ಅದರಂತೆ ಬೆಳಗಾವಿ ಜಿಲ್ಲೆಯಿಂದ ಕೆಲವು ದಾನಿಗಳ ಹೆಸರು  ಸೂಚಿಗಳಲ್ಲಿ ಸೇರ್ಪಡೆಗೊಂಡಿರುವುದು ಗಮನಿಸಲೇಬೇಕಾಗುತ್ತದೆ. ದಾನಿಗಳು ತಮ್ಮ ಹತ್ತಿರವಿದ್ದ ಕಟ್ಟುಗಳನ್ನು ಸಂರಕ್ಷಣೆ ಮಾಡುವುದಕ್ಕೆ ಈ ಭಂಡಾರಕ್ಕೆ ನೀಡಿದ್ದಾರೆ. ರಾಯಬಾಗ ತಾಲೂಕಿನ ಕುಡಚಿ ಗ್ರಾಮದ ಬಾಳಪ್ಪ ಕಲ್ಲಪ್ಪ ಬಡಿಗೇರ ಇವರು ೬ ಹಸ್ತಪ್ರತಿಗಳನ್ನು ವಿಭಾಗಕ್ಕೆ ನೀಡಿದ್ದಾರೆ. ಕೃಷ್ಣಪಾರಿಜಾತ, ಬಾಳಗೋಪಾಲವ ಲಾವಣಿ ವಿಷಯಗಳನ್ನು ಒಳಗೊಂಡಿವೆ. ಅದರಂತೆ ಬೈಲಹೊಂಗಲ ತಾಲೂಕಿನಲ್ಲಿರುವ ಮಲ್ಲಮ್ಮನ ಚರಿತ್ರೆ, ವೀರಶೈವ ವೇದಾಂತ ನಿರೂಪಣೆಯಂಥ ಕೃತಿಗಳು ಸೇರಿಕೊಂಡಿವೆ. ಅಂಕಲಗಿ ಅಡಿವೆಪ್ಪನ ಚರಿತ್ರೆ, ಕಾಲಜ್ಞಾನ ವಚನ ಮುಂತಾದವು ಈ ವಿಭಾಗದಲ್ಲಿ ಸಂಗ್ರಹಗೊಂಡಿವೆ. ಜಿಲ್ಲೆಯಲ್ಲಿ ಲಾವಣಿಕಾರರ ಸಂಖ್ಯೆ ಅಪಾರ. ಹೀಗಾಗಿ ಹರದೇಶಿ–ನಾಗೇಶಿ ಲಾವಣಿ ಮತ್ತು ಡೊಳ್ಳಿನ ಹಾಡು ಹಾಡುತ್ತಾರೆ. ಈ ಕೆಳಗಿನ ಹಾಡಿನ ಮೂಲಕ ಕಲ್ಗಿ ಸಂಪ್ರದಾಯ ಲಾವಣಿಗಳನ್ನು ನೋಡಬಹುದು.

"ಹಮ್ಮ ಮಾಡಬ್ಯಾಡ ಕಮ್ಮ ಜಾತಿಯವನದಮ್ಮಿನ ಮಾತಾ
ಆಡಬ್ಯಾಡ ಹನಿ ಹನಿ ಕೂಡಿ ಹರಿಯೋದಕ ಏನ ಹತ್ಯೋದಿಲ್ಲ ಅವಗಡ
ನಗಾರಿ ಮುಂದ ನಿನ್ನ ಜುಂಜನಿಯಾತಕ ಧಾವಿಸಿ

ಎರಡು ತಿಳಿಯದ ಸಭಾದವಳಗ ಓಡಿ ಬಂದಿನಿ ಅಡರಾಶಿ ಹಿಂದ ಬಾಳ ಬಡಕೋತಿದಿ."[೪೨]

ಈ ಲಾವಣಿಯನ್ನು ಗಮನಿಸಿದರೆ ೧೯ನೇ ಶತಮಾನಕ್ಕೆ ಸಂಬಂಧಿಸಿದಾಗಿದೆ. ಜಿಲ್ಲೆಯಲ್ಲಿ ಲಾವಣಿಯ ಹಸ್ತಪ್ರತಿಗಿಂತಲೂ ನಾಟಕ ಹಸ್ತಪ್ರತಿಗಳ ಸಂಖ್ಯೆಯು ಅಪಾರ ಕಲಾವಿದರ ತವರುನೆಲ ಬೆಳಗಾವಿ ಜಿಲ್ಲೆ ಎನ್ನುವುದಕ್ಕೆ ಸಂಪುಟ ೪ ರಲ್ಲಿರುವ ಹಸ್ತಪ್ರತಿಯನ್ನು ನೋಡಬಹುದು.

**ಆದಿ :** "ಹೇಮರಡ್ಡಿ ಅಖ್ಯಾನವನ್ನು ಬರೆಯಲಿಕ್ಕೆ ಪ್ರಾರಂಭ ಪ್ರಥಮಾಂಕ, ಪ್ರಥಮ ಪ್ರವೇಶ ರಾಗಭೂಮ ನಾಂದಿ ತಾಳ ಅಡಾ ಚೌಪತಾಳ ಶುಭಕರ ಶಿವಮಲ್ಲಿಕಾರ್ಜುನ ಘನ ಶ್ರೀಶೈಲನಾಥ ಪೊರೆಯೋ ವರದಾತ ಶಾಂತಿ ಮನಾ

॥ಪಲ್ಲ॥ ಪರಮ ಕರುಣಿಗಿರಿವರಾ ಪಾವನಾ ಸುರವಾದಿತನೇ ॥೧॥

**ಅಂತ್ಯ :** ಮಂಗಲ । ರಾಗವಸಂತ । ತಾಳ ಏಕ। ಜಯಗಿರಿತನು ಜಾಪತೆ ಮಂಗಲ ಮಹಾದೇವ ॥ಪಲ್ಲ॥ ನಾಟ್ಯಾರಾಜನಜೋದ್ಧಾರ ಭಸ್ಮಾಂಕಿತ ನಿಜಶರೀರ ॥ ಶೈಲವಾಸ ॥ ವ್ಯಾಲಧಾರ ಅದರ ಮಹಾಕಾಲ ಸಂಹಾರ, ಪಹಿಕೃಪಾಕರಾ ಭಕ್ತಾನುವರ ದೇಸಾಂಬ ವಿಮಲ ಶ್ರೀಗೀಶಾ ಸಮಾಪ್ತಿ."[೪೩]ಪ್ರತಿಯು ಸಮಗ್ರವಾಗಿದೆ. ಹೇಮರಡ್ಡಿ ಮಲ್ಲಮ್ಮನ ಕಥೆಯನ್ನು ನಿರೂಪಿಸುತ್ತದೆ. ಇದು ಬಯಲಾಟದ ೧೯ನೇ ಶತಮಾನಕ್ಕೆ ಸೇರಿದ ಪ್ರತಿಯಾಗಿದೆ.

ಇನ್ನು ಈ ಜಿಲ್ಲೆಯಿಂದ ಹಸ್ತಪ್ರತಿಗಳು ಈ ಭಂಡಾರದಲ್ಲಿ ಸಂಗ್ರಹಗೊಂಡಿರಬಹುದು. ಮುಂದಿನ ಸೂಚಿ ಸಂಪುಟದಲ್ಲಿ ನಮೂದಿಸಬಹುದು. ಕ್ಷೇತ್ರಕಾರ್ಯ ಸಂದರ್ಭದಲ್ಲಿ ಪ್ರಾಧ್ಯಾಪಕರು ತೆಗೆದುಕೊಂಡು ಹೋಗಿದ್ದಾರೆ. ಮತ್ತು ಬೆಳಗಾವಿ ಜಿಲ್ಲೆಯಲ್ಲಿ ಸಾಕಷ್ಟು ಸಲ ಹಸ್ತಪ್ರತಿ ಸಮ್ಮೇಳನವನ್ನು ವಿಭಾಗ ಕೈಕೊಂಡಿದ್ದು ಅಭಿಮಾನದ ಸಂಗತಿಯಾಗಿದೆ.

ಜಿಲ್ಲೆಯ ಇನ್ನೆರಡು ಸರಕಾರಿ ಒಡೆತನದ ಹಸ್ತಪ್ರತಿ ಸಂಗ್ರಹಗಳು ಕಂಡುಬರುತ್ತವೆ. ೧. ಪ್ರಾಚ್ಯ ವಸ್ತುಸಂಗ್ರಹಾಲಯ ಕಿತ್ತೂರು ೨. ಪ್ರಾಚ್ಯವಸ್ತು ಸಂಗ್ರಹಾಲಯ ಅಥಣಿ. ಜಿಲ್ಲೆಯ ಪ್ರಮುಖ ಸ್ಥಳವಾದ ಕಿತ್ತೂರು ಸಂಸ್ಥಾನ ಹದಿನಾರನೆಯ ಶತಮಾನದ ಕೊನೆಗೆ ಆರಂಭವಾದ ಒಂದು ದೇಸಗತಿ. ಈ ಸಂಸ್ಥಾನದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯ ೧೬ನೇ ಶತಮಾನಕ್ಕೆ ಸೇರಿದ ದಾಖಲೆಗಳನ್ನು ಒಳಗೊಂಡಿದೆ. ಮಲ್ಲಸರ್ಜನ ಕಾಲದ ಸೈನ್ಯಕ್ಕೆ ಸಂಬಂಧಿಸಿದ ಪತ್ರ ವ್ಯವಹಾರದ ದಾಖಲೆಗಳು ಅಪ್ರಕಟಿತ ಮೋಡಿ ಲಿಪಿಯ ದಾಖಲೆಗಳಾಗಿವೆ. ೧೬ನೇ ಶತಮಾನದ ಕೊನೆಯ ಭಾಗದಲ್ಲಿ ಬಿಜಾಪುರದ ಬಾದಷಹನ ದಂಡಯಾತ್ರೆಯ ಕಾಲದಲ್ಲಿ ಹಿರೇಮಲ್ಲಪ್ಪಶೆಟ್ಟಿ ಮತ್ತು ಚಿಕ್ಕ ಮಲ್ಲಪ್ಪಶೆಟ್ಟಿ ಸಹೋದರರಿಬ್ಬರೂ ಸಂಪಗಾವಿ ಸೈನ್ಯದಲ್ಲಿ ಸೇರಿ ಧೈರ್ಯದಿಂದ ಹೋರಾಡಿ ವಿಜಾಪುರದ ಬಾದಷಹರಿಂದ ಮೆಚ್ಚುಗೆಯನ್ನು ಪಡೆದುಕೊಂಡು ಹಿರೇಮಲ್ಲ ಶೆಟ್ಟಿಗೆ ಶೇಮಶೇರಜಂಗ ಬಹದ್ದೂರ ಎಂಬ ಬಿರುದನ್ನು ನೀಡು ಹುಬ್ಬಳಿಯ ಸರದೇಶಮುಖಿ ದಾನವಾಗಿ ಕೆಲವು ಪ್ರಾಂತ್ಯಗಳನ್ನು ಪಡೆದ ದಾಖಲೆಯ ಹಸ್ತಪ್ರತಿ ಈ ವಸ್ತುಸಂಗ್ರಹಾಲಯದಲ್ಲಿರುವುದನ್ನು ನೋಡಬಹುದು.

ಕಿತ್ತೂರ ಸಂಸ್ಥಾನಕ್ಕೆ ಸಂಬಂಧಿಸಿದ ಮಲ್ಲಸರ್ಜನನ ಕಾಲದ ಸೈನಿಕ ವಿಷಯಕ್ಕೆ ಸಂಬಂಧಿಸಿದ ಕೆಲವು ಪತ್ರಗಳು ಗಮನ ಸೆಳೆಯುತ್ತವೆ. "ಬಾಪೂಜಿ ನಾರಾಯಣ ಪರಂಪರೆ ಪರಚುರೆ ಇವರ ವಿನಂತಿ ಪತ್ರವಾಗಿದೆ. ಈ ಪತ್ರದಲ್ಲಿ ಚ. ೧೬ (ಚಂದ್ರಮಾನ ಕಾಲ)ದಂದು ಹಲಸಿಯ ಸಮೀಪ ಸೈನಿಕರು ವಾಸವಾಗಿದ್ದರು. ಬೆಳಗಿನ ಜಾವದಲ್ಲಿ ದೇಸಾಯಿಯವರು (ಮಲ್ಲಸರ್ಜನ) ಇರುವ ಸುದ್ದಿಯನ್ನು ತಿಳಿದು ರಾಜಶ್ರೀ ದೊಂಡೀಪಂಥ ಗೋಖಲೆ ಇವರ ಸೈನಿಕರು ಹಲಸಿಯ ಸಮೀಪಕ್ಕೆ ಬಂದು ಬಾಗಿಲನ್ನು ತೆಗೆದರು. ಬಾಗಿಲನ್ನು ತೆಗೆದು ಗುಡ್ಡವನ್ನು ಶೋಧಿಸಿದಾಗ ಹಲಸಿ ಮತ್ತು ಹನುಮಂತ ಗಡದಿಂದ ಶೋಧಿಸಲು ಹೊರಟರೆಂದು ಈ ಪತ್ರದಲ್ಲಿ ಹೇಳಲಾಗಿದೆ. ಈ ಪತ್ರದಲ್ಲಿ ಕಿತ್ತೂರನ್ನು ತಾಲೂಕೆಂದು ಉಲ್ಲೇಖಿಸಿರುವುದೇ ಈ ಪತ್ರದ ಮಹತ್ವವಾಗಿದೆ."[೪೪]

ಈ ಪತ್ರದ ಬರವಣಿಗೆ ಅತ್ಯಂತ ಸೂಕ್ಷ್ಮವಾಗಿದೆ. ಇದರಲ್ಲಿ ಸುದ್ದಿಯನ್ನು ಗೌಪ್ಯವಾಗಿ ತಿಳಿಸುವಂತ ಪ್ರಯತ್ನ ನಡೆದಿದೆ. ದೇಸಾಯಿಯವರನ್ನು ಸಂರಕ್ಷಣೆ ಮಾಡುವ ಉದ್ದೇಶವಿದೆ. ಕಿತ್ತೂರು ಬ್ರಿಟಿಷರ ಆಡಳಿತದಲ್ಲಿ ತಾಲೂಕು ಕೇಂದ್ರವಾಗಿತ್ತು ಎಂಬುದನ್ನು ಸ್ಪಷ್ಟವಾಗಿ ನೋಡುತ್ತೇವೆ. ಕಿತ್ತೂರು ತಾಲೂಕು ಕೇಂದ್ರ ಎನ್ನುವುದಕ್ಕೆ ಇನ್ನೊಂದು ಪತ್ರದಲ್ಲಿ ದಾಖಲೆಗೊಂಡಿದೆ. "ಹಲಸಿಯ ಸಮೀಪ ವಾಸವಾಗಿದ್ದ ಬೆಹೆರೆಯವರ ಸೈನಿಕರು ಕಿತ್ತೂರಕರ್ ದೇಸಾಯಿಯವರ ಸೈನ್ಯವನ್ನು ಹುಡುಕಿಕೊಂಡು ಹಲಸಿ ಮತ್ತು ಹನಮಂತ ಗಡದತ್ತ ಶೋಧಿಸಲು ಹೊರಟ ವಿವರವಿದೆ. ಈ ಪತ್ರದಲ್ಲಿ ಕಿತ್ತೂರು ತಾಲೂಕು ಎಂದು ಉಲ್ಲೇಖಿಸಲಾಗಿದೆ"[೪೬].

ಇಲ್ಲಿನ ಪತ್ರಗಳು ವಿಶೇಷವಾಗಿ ಕಂಡಬರುತ್ತವೆ. ಕೆಲವೊಂದು ಪ್ರತಿಗಳು ಅಪೂರ್ಣಗೊಂಡಿರುವ ವಿಷಯವನ್ನು ಒಳಗೊಂಡಿವೆ. ತ್ರುಟಿತಗೊಂಡಿವೆ. ಇವುಗಳಿಗೆ ಅತ್ಯಾಧುನಿಕ ವ್ಯವಸ್ಥೆ ಕಲ್ಪಿಸಬೇಕಾಗಿದೆ. ಇನ್ನು ಅನೇಕ ಪತ್ರಗಳು ಜಿಲ್ಲೆಯ ಚಾರಿತ್ರಿಕ ಮಹತ್ವವನ್ನು ತಿಳಿಸುತ್ತವೆ. ಕಿತ್ತೂರು ಸಂಸ್ಥಾನದ ಕಾಲದ ಸೈನ್ಯದ ಆಡಳಿತಕ್ಕೆ ಸಂಬಂಧಿಸಿದ ಅಧಿಕೃತ ದಾಖಲೆಗಳಿದ್ದು ಇವುಗಳಿಂದ ಕಿತ್ತೂರು ಸಂಸ್ಥಾನದ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತವೆ. ಇಲ್ಲಿರುವ ಕೆಲವು ಹಸ್ತಪ್ರತಿಗಳು ದೇಶಭಕ್ತಿ ನಾಡಪ್ರೇಮ ಕುರಿತು ಕೆಲವು ಮಹತ್ವದ ಸಂಗತಿಗಳನ್ನು ತಿಳಿಸುತ್ತವೆ.

ಜಿಲ್ಲೆಯ ಗಡಿಭಾಗದಲ್ಲಿರುವ ಅಥಣಿಯಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯವಿದ್ದು, ಇದರಲ್ಲಿ ಶಾಸನ-ಮೂರ್ತಿ ಶಿಲ್ಪಗಳ ಸಂಗ್ರಹವಿದೆ. ಬೆಳಗಾವಿ ಜಿಲ್ಲೆಯಲ್ಲಿ ಈಗಾಗಲೇ ಸಮೀಕ್ಷಾ ಕಾರ್ಯ ಮಾಡಿರುವ ಲೇಖನಗಳನ್ನು ಮತ್ತು ನಾನು ಕ್ಷೇತ್ರಕಾರ್ಯ ಕೈಕೊಂಡು ಜಿಲ್ಲೆಯ ಎಲ್ಲ ತಾಲೂಕಗಳನ್ನು ಸುತ್ತಾಡಿ ದೊರೆತ ಹಸ್ತಪ್ರತಿಗಳ ಸಮೀಕ್ಷೆ ಕಾರ್ಯವನ್ನು ಅನುಸಂಧಾನ ಮಾಡಿದ್ದೇನೆ.

**ಸರಕಾರಿ ಸಂಸ್ಥೆ ಹಸ್ತಪ್ರತಿಗಳ ಅನನ್ಯತೆ :**

೧. ಸರಕಾರಿ ಸಂಸ್ಥೆಗಳು ಬೇರೆ ಬೇರೆ ಜಿಲ್ಲೆ, ಗ್ರಾಮ ಪಟ್ಟಣಗಳಿಂದ ಹಸ್ತಪ್ರತಿಗಳನ್ನು ಸಂಗ್ರಹಿಸುವಲ್ಲಿ ಪ್ರಮುಖವಾಗಿ ಕಾರ್ಯನಿರ್ವಹಿಸಿವೆ.

೨. ವೈಯಕ್ತಿಕ ಒಡೆತನದ ಹಸ್ತಪ್ರತಿಗಳನ್ನು ಸುಲಭವಾಗಿ ದೊರೆಯುವುದಿಲ್ಲ. ಒಡೆಯನ ಮನವೊಲಿಸಿ ಸಾಕಷ್ಟು ಸಲ ಭೇಟಿ ನೀಡಿದಾಗ ದೊರೆಯುತ್ತವೆ.

೩. ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗವು ಸಮ್ಮೇಳನಗಳನ್ನು ಮಾಡುವುದರ ಮೂಲಕ ಹಸ್ತಪ್ರತಿಗಳ ಮಹತ್ವವನ್ನು ಜನರಿಗೆ ತಿಳಿಸಿರುವುದು ಅನನ್ಯವಾಗಿದೆ.

೪. ಕನ್ನಡ ಅಧ್ಯಯನ ಪೀಠ ಧಾರವಾಡದಲ್ಲಿ ಕಲಬುರ್ಗಿ ಅವರು ಹಸ್ತಪ್ರತಿ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗೋಕಾಕ ತಾಲೂಕಿನ ಅರಭಾವಿಯ ದುರದುಂಡೀಶ್ವರಮಠಕ್ಕೆ ಭೇಟಿ ನೀಡಿ ಶ್ರೀಮಠದಲ್ಲಿರುವ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದಾರೆ.

೫. ಧಾರವಾಡ ಕೆ.ಆರ್.ಐ.ದಲ್ಲಿನ ಹಸ್ತಪ್ರತಿಗಳು ಕೆಲವು ಸೂಚಿ ಸಂಪುಟಗಳು ಇಂಗ್ಲಿಷಿನ ವಿವರಣೆಯನ್ನು ಒಳಗೊಂಡಿವೆ.

೬. ಸಾಂಸ್ಥಿಕ ಒಡೆತನಗಳ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸೂಚಿ ಸಂಪುಟ ಸಿದ್ಧಮಾಡಿ ಸೂಚಿ ಶಿಲ್ಪಗಳನ್ನು ನೀಡಿರುವುದರಿಂದ ಅಧ್ಯಯನಕಾರರಿಗೆ ಸಹಾಯವಾಗಿದೆ.

೭. ಪ್ರಾಚ್ಯವಸ್ತು ಸಂಗ್ರಹಾಲಯಗಳು ಸಾಧ್ಯವಾದಷ್ಟು ಹಸ್ತಪ್ರತಿ ಸಂಗ್ರಹಕಾರ್ಯ ಮಾಡಿವೆ. ಸರಕಾರದ ಅನುದಾನ ಪಡೆದುಕೊಂಡು ಬೆಳೆಯುತ್ತಿರುವುದು ಗಮನಾರ್ಹ ಸಂಗತಿ.

## ಕೊನೆ ಟಿಪ್ಪಣಿ


೧. ಕರ್ನಾಟಕ ಪರಂಪರೆ ಸಂ–೧, ಪು. ೧೨೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ೨೦೧೪

೨. ಶ್ರೀವಿಜಯನ ಕವಿರಾಜ ಮಾರ್ಗ ಪದ್ಯ ೧–೩೭ (ಸರಳಾನುವಾದ ಎಸ್. ಎಸ್. ಅಂಗಡಿ)

೩. ಕ. ಸಾ. ಪರಿಷತ್ ಪತ್ರಿಕೆ ೪೫–೧, ಪು.೩ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೬೦

೪. ಕರ್ನಾಟಕ ಶಾಸನಗಳು ೧, ಪು ೩೩ ಸಂ: ಪಿ. ಬಿ. ದೇಸಾಯಿ, ಧಾರವಾಡ, ೧೯೬೫

೫. ಆರ್. ನರಸಿಂಹಾಚಾರ್ ಕವಿಚರಿತೆ ಸಂ.೧, ಕನ್ನಡ ಸಾಹಿತ್ಯ ಪರಿಷತ್ತು, ೧೯೯೭

೬. ಕೆ. ಜಿ. ಕುಂದಣಗಾರ (ಸಂ) : ನೇಮಿಚಂದ್ರನ ಲೀಲಾವತಿ ಪ್ರಬಂಧಂ ಪು. ೪೩

೭. ಬೆಳಗಾವಿ ಕರ್ನಾಟಕದ ಸ್ವತ್ತು ಸಂ: ರವೀಂದ್ರ ತೋಟಗೇರ ಪು. ೧ ಭುವನ ಪ್ರಕಾಶನ, ಬೆಳಗಾವಿ ೨೦೧೪

೮. ಅದೇ ಪುಟ ೩

೯. ಬೆಳಗಾವಿ ಬೆಳಕು ಸಂ: ಎಸ್. ಆರ್. ಗುಂಜಾಳ ಪು. ೧೪೫ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩

೧೦. ದಕ್ಷಿಣ ಭಾರತದಲ್ಲಿಯ ಹಸ್ತಪ್ರತಿ ಗ್ರಂಥಾಲಯಗಳು ಲೇ: ಎಸ್. ಆರ್. ಗುಂಜಾಳ ಮತ್ತು ಶ್ರೀಶೈಲ ಪಾಟೀಲ, ಪು. ೮೪ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ, ಬೆಳಗಾವಿ, ೨೦೦೨

೧೧. ಹಸ್ತಪ್ರತಿ ಅಧ್ಯಯನ ಸಂಪುಟ–೭ ಸಂ: ಎಸ್. ಎಸ್ ಅಂಗಡಿ ಪು. ೧೪೧, ಕನ್ನಡ ವಿ.ವಿ. ಹಂಪಿ ೨೦೦೯

೧೨. ಅದೇ ಪು. ೧೪೧

೧೩. ಗೋಕಾವಿ ಸಿರಿಸಂಪದ (ಸ್ಮರಣ ಸಂಚಿಕೆ) ಸಂ: ಚಂದ್ರಶೇಖರ ಅಕ್ಕಿ ಮತ್ತು ಮಹಾಲಿಂಗ ಮಂಗಿ ಪು. ೨೬ ಕ್ರಿಯಾಶೀಲ ಸಾಹಿತ್ಯ ವೇದಿಕೆ, ಗೋಕಾಕ ೨೦೦೬

೧೪. ಶ್ರೀಮದ್‌ಘನಲಿಂಗ ಚಕ್ರವರ್ತಿ ಜಗದ್ಗುರು ಅದೃಶ್ಯ ಸ್ವಾಮಿಗಳು ಮರಡಿಮಠ ಸಂ: ಎಂ.ಕೆ. ಕೊಚ್ಚರಗಿ ಪು. ೧೩ ಕಾಡಸಿದ್ಧೇಶ್ವರಮಠ, ಕೊಣ್ಣೂರು ಮರಡಿಮಠ ೧೯೯೨

೧೫. ಸಾವಳಗಿ ಶ್ರೀ ಶಿವಲಿಂಗೇಶ್ವರ ಪುರಾಣ ಸಂ: ಸಿದ್ಧರಾಮ ಶಿವಯೋಗಿಗಳು ಪು. ೭ ಕನ್ನಡ ವಿ.ವಿ. ಹಂಪಿ ೨೦೦೬

೧೬ ಹಸ್ತಪ್ರತಿ ಅಧ್ಯಯನ ಸಂಪುಟ ೭ ಸಂ: ಎಸ್. ಎಸ್. ಅಂಗಡಿ ಪು. ೧೪೧, ಕನ್ನಡ ವಿ.ವಿ. ಹಂಪಿ ೨೦೦೯

೧೭. ಅದೇ ಪು. ೧೩೯

೧೮. ಕೆ.ಜಿ. ಕುಂದಣಗಾರ : ಮಹಾಮಾರ್ಗ– ಕಲಬುರ್ಗಿ ಅಭಿನಂದನ ಗ್ರಂಥ ಪು. ೬೨೫, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೯೮

೧೯. ಕೆ.ಜಿ. ಕುಂದಣಗಾರ ಅವರ ಲೇಖನ ಸಾಹಿತ್ಯ ಸಂ: ಎಂ.ಜಿ.ಬಿರಾದಾರ ಪು. ೮೦೨ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೩

೨೦. ಬಿ. ನಂಜುಂಡಸ್ವಾಮಿ– ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ ಸಮೀಕ್ಷೆ ಪು. ೨೬೧ ಪ್ರಭುದೇವರ ಸಂಸ್ಥಾನಮಠ, ಸೊಂಡೂರು, , ೨೦೦೯

೨೧. ಬಿ. ನಂಜುಂಡಸ್ವಾಮಿ– ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ ಸಮೀಕ್ಷೆ ಪು. ೭ ಪ್ರಭುದೇವರ ಸಂಸ್ಥಾನಮಠ, ಸೊಂಡೂರು, , ೨೦೦೯

೨೨. ಎಸ್. ಸಿ.ನಂದೀಮಠ– ಕೈಬರಹದ ಗ್ರಂಥಗಳ ಶೋಧನೆಯು–ಶಿವಾನುಭವ ಪತ್ರಿಕೆ ಸಂಪುಟ–೭, ಸಂಚಿಕೆ ೧, ಏಪ್ರಿಲ್ ೧೯೩೨

೨೩. ಬಿ. ನಂಜುಂಡಸ್ವಾಮಿ ಅವರ ಸಂದರ್ಶನದಲ್ಲಿ ಹೇಳಿದ್ದು

೨೪. ಸಂಗೀತ ಗಂಗಾಧರ ಸಂ: ಎಂ. ಆರ್. ಸಾಖರೆ ಪ್ರಸ್ತಾವನೆ ಪು. ೧ ಮದ್ರಾಸ್ ೧೯೩೫

೨೫. ಎಸ್. ಆರ್. ಗುಂಜಾಳ : ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ ಸಿಂಹಾವಲೋಕನ ಪು. ೩ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ, ಬೆಳಗಾವಿ ೧೯೯೬

೨೬. ಸ್ವಪ್ನಲೋಕ ಪತ್ರಿಕೆಯಲ್ಲಿ (ಸಂ. ೩–ಸಂಚಿಕೆ ೨) ಈ ವಚನಗಳನ್ನು ಪ್ರಕಟಿಸಿದ್ದಾರೆ.

೨೭. ಭಜನೆಯ ತತ್ವಪದಗಳು ಸಂ: ಆರ್. ಬಿ. ಚಿಲುಮಿ ಪು. ೧ ಪದ್ಮರಾಜ ಕರ್ಣವಾಡಿ ಹಾರೂಗೇರಿ ೨೦೦೭

೨೮. ಹಸ್ತಪ್ರತಿ ಸೂಚಿ ನಾಗನೂರು ರುದ್ರಾಕ್ಷಿಮಠ ಸಂ: ಪಿ. ಕೆ. ರಾಠೋಡ ಪು. ೧೭ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ, ಬೆಳಗಾವಿ ೧೯೯೮

೨೯. ಶಂಬಾ ಜೋಶಿಯವರ ಚಿಂತನೆಗಳು ಸಂ: ಪಿ. ಮಹಾದೇವಯ್ಯ ಪು. ೧೮ ಕನ್ನಡ ವಿ.ವಿ. ಹಂಪಿ ೨೦೧೫

೩೦. ಗೋಕಾವಿ ಸಿರಿಸಂಪದ ಸಂ: ಚಂದ್ರಶೇಖರ ಅಕ್ಕಿ, ಮಹಾಲಿಂಗ ಮಂಗಿ ಪು. ೨೯ ಕ್ರಿಯಾಶೀಲ ಸಾಹಿತ್ಯ ವೇದಿಕೆ, ಗೋಕಾಕ, ೨೦೦೬

೩೧. ಅದೇ ಪು. ೨೯

೩೨. ಸಾತು ಕ್ಯಾಮಣ್ಣನ ಲಾವಣಿಗಳು ಸಂ: ನಿಂಗಣ್ಣ ಸಣ್ಣಕ್ಕಿ ಪು. ೧ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೪

೩೩. ಬ್ರಹ್ಮಸಿದ್ಧಾಂತ ಮಾಲೆ ಸಂ: ಗುರುಪಾದ ಹೊಂಗಲ ಪು. ೩೬೮, ೧೯೫೫

೩೪. ಬೆಳಗಾವಿ ಕರ್ನಾಟಕದ ಸ್ವತ್ತು : ರವೀಂದ್ರ ತೋಟಿಗೇರ ಪು. ೧೦೨ ಭುವನ ಪ್ರಕಾಶನ, ಬೆಳಗಾವಿ ೨೦೦೪

೩೫. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂ. ೧ ಸಂ: ಎಂ. ಎಂ. ಕಲಬುರ್ಗಿ ಪು. ೨೨೦ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೩೬. ಅದೇ ಪು. ೯೭

೩೭. ಅದೇ ಪು. ೧೬೨

೩೮. ಹಸ್ತಪ್ರತಿ ವ್ಯಾಸಂಗ : ಕನ್ನಡ ಹಸ್ತಪ್ರತಿ ಭಂಡಾರಗಳು ಸಂ: ಎಫ್.ಟಿ. ಹಳ್ಳಿಕೇರಿ, ಕೆ. ರವೀಂದ್ರನಾಥ ಪು. ೬೪, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೨

೩೯. ವರ್ಣನಾತ್ಮಕ ಹಸ್ತಪ್ರತಿ ಸೂಚಿ ಸಂ. ೪ ಸಂ: ಎಂ. ಎಂ. ಅಣ್ಣಿಗೇರಿ, ಎಸ್. ಬಿ. ಪುರೋಹಿತ ಕನ್ನಡ ಸಂಶೋಧನ ಸಂಸ್ಥೆ ಧಾರವಾಡ ಪು. ೧೦೮, ೧೯೭೦

೪೦. ವರ್ಣನಾತ್ಮಕ ಹಸ್ತಪ್ರತಿ ಸೂಚಿ ಸಂ. ೪ ಕನ್ನಡ ಸಂಶೋಧನ ಸಂಸ್ಥೆ ಧಾರವಾಡ ಪು. ೧೩೬, ೧೯೭೦

೪೧. ಹಸ್ತಪ್ರತಿ ವ್ಯಾಸಂಗ : ಕನ್ನಡ ಹಸ್ತಪ್ರತಿ ಭಂಡಾರಗಳು ಸಂ: ಎಫ್.ಟಿ. ಹಳ್ಳಿಕೇರಿ, ಕೆ. ರವೀಂದ್ರನಾಥ ಪು. ೧೨೦ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪೨. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂ. ೪ ಸಂ: ವೀರೇಶ ಬಡಿಗೇರ ಎಸ್. ಆರ್. ಚನ್ನವೀರಪ್ಪ ಪು. ೨೬೮, ಕನ್ನಡ ವಿ.ವಿ. ಹಂಪಿ ೨೦೦೬

೪೩. ಅದೇ ಪು. ೪೩೨

೪೪. ಕಾಂಟ್ರಿಭೂಷನ್ಸ್ ಆಫ್ ದೇಸಗತಿ ಪ್ಯಾಮಿಲಿಯಜ್ ಸಂ: ಬಿ. ಎಂ. ಚಲವಾದಿ ಪು. ೨೧೦, ಮನೋ ಸಾಹಿತ್ಯ ಪ್ರಕಾಶನ, ಧಾರವಾಡ ೨೦೦೫

೪೫. ಅದೇ ಪು. ೨೧೨

## ಅಧ್ಯಾಯ – ಮೂರು

# ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಚಾರಿತ್ರಿಕ ಆಯಾಮ

ಹದಿನೈದುನೂರು ವರ್ಷಗಳ ಭವ್ಯ ಇತಿಹಾಸವನ್ನು ಹೊಂದಿದ ಕನ್ನಡ ಸಾಹಿತ್ಯ ಕಾಲದಿಂದ ಕಾಲಕ್ಕೆ ತನ್ನ ಚರಿತ್ರೆಯನ್ನು ಒಂದಿಲ್ಲೊಂದು ರೀತಿಯಲ್ಲಿ ದಾಖಲಿಸುತ್ತ ಬಂದಿದೆ. ಆಧುನಿಕಪೂರ್ವ ಕರ್ನಾಟಕದ ದೇಸಿ ಸಂಸ್ಕೃತಿಯ ಬೇರುಗಳನ್ನು ಗುರುತಿಸಲು ಹಸ್ತಪ್ರತಿಗಳು ತುಂಬಾ ನೆರವಾಗುತ್ತವೆ. ಹಸ್ತಪ್ರತಿಗಳು ಒಂದು ನಾಡಿನ ಸಾಂಸ್ಕೃತಿಕ ರಾಯಭಾರಿ ಎನಿಸಿವೆ. ಈ ಹಸ್ತಪ್ರತಿ ಅಧ್ಯಯನದಿಂದ ಸಂಸ್ಕೃತಿ, ಭಾಷೆ ಪ್ರತಿಕಾರರ ಕೌಟುಂಬಿಕ ಜೀವನ ತಿಳಿದು ಬರುವುದರ ಜೊತೆಗೆ ಒಂದು ಕಾಲಘಟ್ಟದ ಚಾರಿತ್ರಿಕ ಸ್ಥಿತಿಗತಿಗಳನ್ನು ತಿಳಿಯಲು ಸಹಾಯಕಾರಿಯಾಗಿವೆ. ಉದಾಹರಣೆಗೆ: ಪಾಳೆಗಾರರ ಕಾಲದ ಹಸ್ತಪ್ರತಿಗಳಿಂದ ಆ ಪಾಳೆಗಾರರ ಪ್ರಾದೇಶಿಕ ಮತ್ತು ಚಾರಿತ್ರಿಕ ಅಮೂಲ್ಯ ಸಂಗತಿ ತಿಳಿದು ಬರುತ್ತವೆ. ಅಷ್ಟೇಅಲ್ಲದೆ ಕವಿ, ಕಾಲ ಮತ್ತು ಲಿಪಿಕಾರರ ವಂಶಾವಳಿ ಪರಂಪರೆಗಳನ್ನು ಕುರಿತು ತಿಳಿದುಕೊಳ್ಳುವುದಕ್ಕೆ ಹಸ್ತಪ್ರತಿಗಳು ಚಾರಿತ್ರಿಕವಾಗಿ ಸಹಾಯಕಾರಿಯಾಗಿರುವುದನ್ನು ಗಮನಿಸಲೇಬೇಕು.

ಯಾವುದೇ ಭಾಷೆ ಸಾಹಿತ್ಯವನ್ನು ಅದರ ಸಾಹಿತ್ಯಿಕ ದೃಷ್ಟಿಯಿಂದ ಅಧ್ಯಯನ ಮಾಡುವುದು ಒಂದು ವಿಧವಾದರೆ ಅದರಲ್ಲಿ ಅಭಿವ್ಯಕ್ತಿಗೊಂಡಿರುವ ಸಾಹಿತ್ಯೇತರ ವಿಷಯಗಳನ್ನು ಕುರಿತು ಅಧ್ಯಯನ ಮಾಡುವುದು ಮತ್ತೊಂದು ವಿಧವಾಗಿರುತ್ತದೆ. ಕೆಲವೊಮ್ಮೆ ಐತಿಹಾಸಿಕ ಕಾವ್ಯದ ಹಸ್ತಪ್ರತಿಗಳು ಚಾರಿತ್ರಿಕ ಅಧ್ಯಯನದ ವಲಯದಲ್ಲಿ ನೋಡುವ ಅವಶಕ್ಯತೆ ಬರುತ್ತದೆ. ಒಂದು ದೇಶದ ಸಂಸ್ಕೃತಿ ಆ ದೇಶದ ಮೂಲಾಧಾರಗಳನ್ನು ಅವಲಂಬಿಸಿದೆ. ಆಧಾರಗಳಿಲ್ಲದೆ ಇತಿಹಾಸವಿಲ್ಲ. ಹೀಗಾಗಿ ಕರ್ನಾಟಕ ಇತಿಹಾಸವನ್ನು ರೂಪಿಸಲು ಶಾಸನಗಳು ಪ್ರಮುಖವಾದ ಮಾನದಂಡಗಳಾದರೆ ಇದೇ ದಿಶೆಯಲ್ಲಿಯೇ ಹಸ್ತಪ್ರತಿಗಳು ಒಂದಿಲ್ಲ ಒಂದು ಹಂತದಲ್ಲಿ ನೆರವಿಗೆ ಬರುತ್ತವೆ. ಕೆಲವೊಮ್ಮೆ ಶಾಸನಗಳಲ್ಲಿ ಉಕ್ತವಾಗದ ವಿಷಯಗಳು ಹಸ್ತಪ್ರತಿಗಳಿಂದ ದೊರೆಯಬಹುದು. ಇಲ್ಲವೆ ಶಾಸನೋಕ್ತ ವಿಚಾರಗಳಿಗೆ ಸಮರ್ಥನೆಯಾಗಿ ನಿಲ್ಲಬಹುದು. ಇಂಥ ಒಂದು ನಿದರ್ಶನ ಬೆಳಗಾವಿ ಜಿಲ್ಲೆಯ

ಹುಕ್ಕೇರಿ ತಾಲೂಕಿನ ಕ್ರಿ.ಶ. ೧೨೬೦ರ ಅರ್ಜುನವಾಡದ ಶಾಸನ ಬಸವಣ್ಣನವರ ಜೀವನ ಚರಿತ್ರೆಯನ್ನು ನಿರೂಪಿಸುತ್ತದೆ.

"ಬಸವಣ್ಣನವರ ಜೀವನ ಚರಿತ್ರೆ ವೈವಿಧ್ಯಮಯವಾಗಿದೆ. ಅವರ ವಚನಗಳು ಕೂಡಲಸಂಗಮದೇವರನ್ನು ಕುರಿತು ಆತ್ಮನಿವೇದನೆಯನ್ನು ಮಾಡಿಕೊಂಡ ಸೂಕ್ತಿಗಳು. ಅವುಗಳಲ್ಲಿ ಅವರ ಜೀವನ ಚರಿತ್ರೆಯ ಕೆಲವು ಅಸ್ಪಷ್ಟ ಗೆರೆಗಳನ್ನು ಕಾಣುತ್ತೇವೆ. ಅವರ ಕಾಲಾನಂತರ ಬದುಕಿದ್ದ ಹರಿಹರ ಕವಿಯೂ (೧೨೨೦) ಬಸವಣ್ಣನವರ ಜೀವನ ಚರಿತ್ರೆಯನ್ನು ರಗಳೆಯ ರೂಪದಲ್ಲಿ ಮೊಟ್ಟ ಮೊದಲು ಬರೆದಿರುವನು. ಆ ಕಾವ್ಯದಲ್ಲಿ ಸಹ ಬಸವಣ್ಣನವರ ಜೀವನದ ಬಗ್ಗೆ ಸಂಗತಿಗಳನ್ನು ಸೂಚ್ಯವಾಗಿ ಉಲ್ಲೇಖಿಸಿರುವನು. ಹರಿಹರನ ಸಮಕಾಲೀನ ಅಥವಾ ಅನಂತರ ಜೀವಿಸಿದ್ದ ಪಾಲ್ಕುರಿಕೆ ಸೋಮನಾಥ ಕವಿ (೧೨೬೦) ತೆಲುಗು ಭಾಷೆಯಲ್ಲಿ ದ್ವಿಪದಿ ಛಂದಸ್ಸಿನಲ್ಲಿ ಬಸವ ಪುರಾಣ ಕಾವ್ಯವನ್ನು ರಚಿಸಿರುವನು. ಇದನ್ನು ಭೀಮಕವಿಯು ೧೩೬೯ರಲ್ಲಿ ಭಾಮಿನಿ ಷಟ್ಪದಿಯಲ್ಲಿ ಅನುವಾದಿಸಿದನು. ಹೀಗೆ ಬಸವಣ್ಣನವರ ಸಮಗ್ರ ಚರಿತ್ರೆಯನ್ನು ರೂಪಿಸುವಲ್ಲಿ ವಚನಗಳು ಕಾವ್ಯ-ಪುರಾಣಗಳ ಜೊತೆಯಲ್ಲಿ ಕೆಲವು ಶಾಸನಗಳೂ ಸಹಾಯಕಾರಿಯಾಗಿವೆ. ಬಸವಣ್ಣನವರ ಚರಿತ್ರೆ ಮತ್ತು ವ್ಯಕ್ತಿತ್ವದ ಮೇಲೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಬೆಳಕು ಚೆಲ್ಲುವ ಸಂಶೋಧಕರಿಂದ ಮಾನ್ಯ ಮಾಡಲ್ಪಟ್ಟ ಹದಿಮೂರು ಶಾಸನಗಳು ಬೆಳಕಿಗೆ ಬಂದಿವೆ. ಬಸವಣ್ಣನವರ ಚರಿತ್ರೆಯನ್ನು ಬಸವರಾಜ ದೇವರ ರಗಳೆ ಕೃತಿ ರೂಪದಲ್ಲಿ ಬರೆದ ಹರಿಹರನಿಗಿಂತಲೂ ಪೂರ್ವದಲ್ಲಿಯೇ ಬಸವಣ್ಣನವರ ವೈಯಕ್ತಿಕ ಚರಿತ್ರೆ ಜನ್ಮಸ್ಥಳದ ಮೇಲೆ ಬೆಳಕು ಚೆಲ್ಲುವ ಹಾಗೂ ಬಸವರಾಜ ದೇವರ ರಗಳೆಯಲ್ಲಿನ ಬಸವಣ್ಣನವರ ತಂದೆ ಮತ್ತು ಊರುಗಳ ಬಗ್ಗೆ ಇದ್ದ ಸಂದೇಹಗಳನ್ನು ನಿವಾರಿಸುವಲ್ಲಿ (ಕ್ರಿ.ಶ. ೧೨೬೦) ಅರ್ಜುನವಾಡ ಶಾಸನ ಒಂದು ಮೈಲುಗಲ್ಲಾಗಿದೆ. ಈ ಶಾಸನದಲ್ಲಿ ನಿರೂಪಿತವಾಗಿರುವ ಬಸವಣ್ಣನವರು ಹಾಗೂ ಅವರ ವಂಶಾವಳಿಗೆ ಸಂಬಂಧಿಸಿದ ಸಂಗತಿಗಳು ಬಸವಣ್ಣನವರ ಚರಿತ್ರೆಯನ್ನು ಹೇಳುವ ಕಾವ್ಯಗಳಿಗಿಂತ ಪ್ರಾಚೀನವೂ ವಿಶ್ವಸನೀಯವೂ ಆಗಿರುವುದರಿಂದ ಪ್ರಸ್ತುತ ಶಾಸನಕ್ಕೆ ಐತಿಹಾಸಿಕ ಹಾಗೂ ಚಾರಿತ್ರಿಕ ಮಹತ್ವ ಪ್ರಾಪ್ತವಾಗಿದೆ."[೧]

ಕವಿ ಚಾರಿತ್ರಿಕ ಕಾವ್ಯಗಳಲ್ಲಿ ಚರಿತ್ರೆಗೆ ಸಂಬಂಧಪಟ್ಟ ಅಂಶಗಳನ್ನು ತನ್ನದೆಯಾದ ಒಂದು ರೀತಿಯಲ್ಲಿ ಹೇಳುತ್ತಾನೆ. ಕಾವ್ಯದಲ್ಲಿಯು ಶ್ರೇಷ್ಠವಾದ ಐತಿಹಾಸಿಕ ಅಂಶಗಳನ್ನು ಕಾಣುತ್ತೇವೆ. ಇತಿಹಾಸದ ಸತ್ಯವನ್ನು ಕವಿ ಸಹಜವಾದ ರೀತಿಯಲ್ಲಿ ವಿವರಿಸಿ ಹೇಳುತ್ತಾನೆ. ಕವಿ ವ್ಯಕ್ತಪಡಿಸಿದ ಚಾರಿತ್ರಿಕ ಸಂಗತಿಗಳನ್ನು ಅರ್ಥಮಾಡಿಕೊಂಡಾಗ ಶುದ್ಧ ಐತಿಹಾಸಿಕ ಅಂಶಗಳು ಸ್ಪಷ್ಟವಾಗುತ್ತವೆ. ಒಬ್ಬ ಅರಸನನ್ನು ಕುರಿತು ಇತಿಹಾಸದ ಸಂಗತಿಯನ್ನು ತಿಳಿಸುತ್ತಿದ್ದರೆ ಕಾವ್ಯದ ಇನ್ನೊಂದು ವಸ್ತು ವಿಧಾನವಾಗಿ ಅವನ ಸಾಮ್ರಾಜ್ಯದ ವಿಸ್ತಾರದ ಚರಿತ್ರೆಯನ್ನು ನಿರೂಪಿಸುತ್ತದೆ.

ಆದುದರಿಂದ ನಾಡಿನ ಸಾಂಸ್ಕೃತಿಕ ಚರಿತ್ರೆಯನ್ನು ರಚಿಸುವಲ್ಲಿ ಆಕರಗಳ ಅವಶ್ಯವಿದೆ. ಲಿಖಿತ ಮತ್ತು ಮೌಖಿಕ ರೂಪದಲ್ಲಿ ಸಿಗುವ ಭಾಷಾ ಉತ್ಪನ್ನಗಳಾಗಿ ಗುರುತಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ನೋಡಿದಾಗ ಹಸ್ತಪ್ರತಿಗಳು ಚಾರಿತ್ರಿಕ ಮಹತ್ವವಾದ ಪಾತ್ರವಹಿಸುತ್ತವೆ. ಹೀಗಾಗಿ ಎಂ. ಎಂ. ಕಲಬುರ್ಗಿಯವರ ಮಾತುಗಳ ಹಿನ್ನೆಲೆಯಲ್ಲಿ ಶುದ್ಧ ಚಾರಿತ್ರಿಕ ಹಸ್ತಪ್ರತಿಗಳ ವಿವೇಚನೆ ಮಾಡಬೇಕಾಗಿದೆ. ಕರ್ನಾಟಕದಲ್ಲಿ ದೊರೆಯುವ ಹಸ್ತಪ್ರತಿಗಳನ್ನು ಗಮನಿಸಿದರೆ ಚರಿತ್ರೆಯನ್ನೇ ಪ್ರಧಾನವಾಗಿಟ್ಟುಕೊಂಡು ನಿರ್ಮಾಣಗೊಂಡಿರುವ ಹಸ್ತಪ್ರತಿಗಳಿಂದ ಐತಿಹಾಸಿಕ ಸಾಮಾಜಿಕತೆಯ ಅನೇಕ ವಿಷಯಗಳು ಪ್ರಕಟವಾಗುವ ಸಾಧ್ಯತೆಗಳು ಕಂಡುಬರುತ್ತವೆ.

ಕನ್ನಡ ಸಾಹಿತ್ಯದ ಆರಂಭಕಾಲದ ಘಟ್ಟದಿಂದ ನೋಡಿದಾಗ ಚಾರಿತ್ರಿಕ ಹಸ್ತಪ್ರತಿಗಳ ಸಂಖ್ಯೆ ಕಡಿಮೆ. ಅಂದರೆ ಶುದ್ಧ ಚಾರಿತ್ರಿಕ ಹಸ್ತಪ್ರತಿಗಳು ವಾಸ್ತವವಾಗಿ ಧಾರ್ಮಿಕ ವಲಯದಲ್ಲಿಯೇ ಇರುವುದು ಗೋಚರಿಸುತ್ತದೆ. ಮೊಟ್ಟಮೊದಲ ಬಾರಿಗೆ ಚಾರಿತ್ರಿಕ ಕಾವ್ಯದ ವಿಷಯವನ್ನು ತಿಳಿಸುವ ಕೃತಿಯೆಂದರೆ ೧೩ನೇ ಶತಮಾನದಲ್ಲಿ ರಾಘವಾಂಕನಿಂದ ರಚನೆಯಾದ 'ಸಿದ್ಧರಾಮ ಚಾರಿತ್ರ'. ೧೨ನೇ ಶತಮಾನದಲ್ಲಿ ಆಗಿಹೋದ ಮಹಾಶಿವಯೋಗಿಯೊಬ್ಬನನ್ನು ಕೇಂದ್ರವಾಗಿಟ್ಟುಕೊಂಡು ಚಾರಿತ್ರಿಕ ಕಾವ್ಯವನ್ನು ಬರೆದ ಕೀರ್ತಿ ರಾಘವಾಂಕನದಾಗಿದೆ. ನಂತರ ೧೬ನೇ ಶತಮಾನದಲ್ಲಿ ರಚನೆಗೊಂಡ ನಂಜುಂಡಕವಿಯ 'ರಾಮನಾಥ ಚರಿತೆ' ತದನಂತರದಲ್ಲಿ ಸಾಂಗತ್ಯ ಛಂದಸ್ಸಿನಲ್ಲಿ ರಚನೆಗೊಂಡ ಕೃತಿಗಳು ಕಂಡುಬರುತ್ತವೆ.

ಬೆಳಗಾವಿ ಜಿಲ್ಲೆಯನ್ನಾಳಿದ ಅರಸರ ಚರಿತ್ರೆ, ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮಾಡಿ ಮಡಿದ ವೀರರ ಚರಿತ್ರೆ, ಜಿಲ್ಲೆಯಲ್ಲಿ ಅತೀ ಹೆಚ್ಚು ಲಿಂಗಾಯತಮಠಗಳು ಇರುವುದರಿಂದ ಮಹಾತ್ಮರ ಚರಿತ್ರೆ ಮತ್ತು ಪ್ರಾಚೀನ ಕವಿಗಳ ಕೃತಿಗಳು ಹಾಗು ಜಿಲ್ಲೆಯ ಆಡಳಿತಾತ್ಮಕ ಪ್ರಮುಖ ದಾಖಲೆಗಳು ದೊರೆಯುತ್ತವೆ. ಈ ಚಾರಿತ್ರಿಕ ಹಸ್ತಪ್ರತಿಗಳಿಂದ ರಾಜರ-ಗುರು ಪರಂಪರೆಯ, ಲಿಪಿಕಾರರ ವಂಶಾವಳಿ, ಐತಿಹಾಸಿಕ ಘಟನೆ, ಆರ್ಥಿಕ ಸಾಮಾಜಿಕ ಸಂಘಟನೆ, ರಾಜಕೀಯ ಹೋರಾಟದ ಸ್ಥಿತಿಗತಿಯಂಥ ಮಹತ್ವದ ಸಾಂಸ್ಕೃತಿಕ ದಾಖಲೆಗಳನ್ನು ಬೆಳಗಾವಿ ಜಿಲ್ಲೆಯು ಒಳಗೊಂಡಿದೆ.

**ಚರಿತ್ರೆಗೆ ಸಂಬಂಧಿಸಿದ ಹಸ್ತಪ್ರತಿಗಳು :**

ರಾಜಕೀಯವಾಗಿ ಬೆಳಗಾವಿ ಜಿಲ್ಲೆ ಭೋಜರು, ಆದಿಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಳಚೂರಿಯರು, ಹೊಯ್ಸಳರು ಹಾಗು ಸೇವಣರಂತಹ ಪ್ರಮುಖ ರಾಜಮನೆತನಗಳಲ್ಲದೆ ಸಾಮಂತರಾದ ಭೈಸರು, ರಟ್ಟರು, ಶಿಲಾಹಾರರ ಆಳ್ವಿಕೆಗೆ ಒಳಗಾಗಿದೆ. ಭಾರತ ಸ್ವಾತಂತ್ರ್ಯ ಹೋರಾಟ ಮತ್ತು ಕರ್ನಾಟಕ ಏಕೀಕರಣದಲ್ಲಿ ಈ ಜಿಲ್ಲೆ ಅಗ್ರಗಣ್ಯ ನಾಯಕರ ಸಾಧನೆಯನ್ನು ಇಡೀ ರಾಷ್ಟ್ರಕ್ಕೆ ಸಮರ್ಪಿಸಿದೆ.

ಬೆಳಗಾವಿ ಜಿಲ್ಲೆಯಲ್ಲಿ ಅನೇಕ ಚಿಕ್ಕ ದೊಡ್ಡ ಸಂಸ್ಥಾನಗಳಿದ್ದವು. ಕೆಲವು ಸಂಸ್ಥಾನಗಳ ಇತಿಹಾಸ ಇಂದು ಸಂಪೂರ್ಣ ಕಣ್ಮರೆಯಾಗಿ ಹೋಗಿವೆ. ಉದಾಹರಣೆಗೆ : ವಂಟಮುರಿ

ಸಂಸ್ಥಾನ ಭವ್ಯ ಇತಿಹಾಸವನ್ನು ಹೊಂದಿತ್ತು. ಈ ಸಂಸ್ಥಾನದ ಮಹತ್ವದ ಕಾಗದ ಪತ್ರಗಳು, ಇತಿಹಾಸದ ಆಕರಗಳು ಪುಣೆಯ ಭಂಡಾರಕರ್ ಸಂಶೋಧನ ಕೇಂದ್ರದಲ್ಲಿದ್ದವು. ಇತ್ತೀಚೆಗೆ ಆ ಸಂಸ್ಥೆಗೆ ಆಕಸ್ಮಿಕ ಬೆಂಕಿ ತಗುಲಿ ಅನೇಕ ಕಾಗದ ಪತ್ರಗಳು ನಾಶವಾದವು. ಕಿತ್ತೂರು, ಬೆಳವಡಿ, ಶಿರಸಂಗಿ ಸಂಸ್ಥಾನಗಳ ಕುರಿತು ಒಂದಿಷ್ಟು ಸಂಶೋಧನೆ ನಡೆದಿವೆ. ಆದರೆ ಇನ್ನೂ ಅನೇಕ ಸಂಸ್ಥಾನಗಳು ಕಾಲಗರ್ಭದಲ್ಲಿ ಮುಳುಗಿ ಹೋಗಿವೆ. ಈ ಸಂಸ್ಥಾನಗಳ ಇತಿಹಾಸವನ್ನು ರಚಿಸಬೇಕಾದರೆ ನಮಗೆ ಮುಖ್ಯವಾದ ಆಕರಗಳು ಇಂದು ದೊರೆಯುತ್ತಿಲ್ಲ. ಆದರೆ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನಾನೊಮ್ಮೆ ಹುಕ್ಕೇರಿ ತಾಲೂಕಿನ ಅಮ್ಮಣಗಿ ಗ್ರಾಮಕ್ಕೆ ಹೋಗಿದ್ದೆ. ಅಲ್ಲಿ ಬಾಬುರಾವ ದೇಸಾಯಿ ಎಂಬ ಹಿರಿಯ ವೃತ್ತಿರಂಗಭೂಮಿ ಕಲಾವಿದರಿದ್ದರು. ಅವರು ವಂಟಮುರಿ ಸಂಸ್ಥಾನದ ವಂಶಜರು. ಅವರ ಹತ್ತಿರ ಮೋಡಿ ಲಿಪಿಯ ಕೆಲವು ಕಾಗದ ಪತ್ರಗಳಿದ್ದವು. ಅವುಗಳನ್ನು ಓದುವ ಸಾಮರ್ಥ್ಯವೂ ಅವರಲ್ಲಿತ್ತು. ಅವುಗಳ ಆಧಾರದ ಮೇಲೆ ಒಂದುನೂರು ಪುಟದ ವಂಟಮುರಿ ಸಂಸ್ಥಾನದ ಇತಿಹಾಸವನ್ನು ಅವರು ಬರೆದಿದ್ದರು. ಅವರು ಬರೆದ ಹಸ್ತಪ್ರತಿಯನ್ನು ಕಣ್ಣಾರೆ ನೋಡುವ ಭಾಗ್ಯ ನನ್ನದಾಗಿತ್ತು. ಆದರೆ ದುರ್ದೈವದಿಂದ ಅವರು ಅಪಘಾತವೊಂದರಲ್ಲಿ ನಿಧನರಾದರು. ಆ ಹಸ್ತಪ್ರತಿ ಮುದ್ರಣವಾಗದೆ, ಹಾಗೆಯೇ ಉಳಿದಿರುವುದು ದುರ್ದೈವದ ಸಂಗತಿಯಾಗಿದೆ.

ಬೆಳಗಾವಿಯ ನ್ಯಾಯವಾದಿಗಳಾದ ರವೀಂದ್ರ ತೋಟಿಗೇರ ಅವರು ಬೆಳಗಾವಿ ಅಚ್ಚಗನ್ನಡದ ಪ್ರದೇಶವೆಂದು ಸಿದ್ಧಪಡಿಸಲು ಸಂಗ್ರಹಿಸಿದ ಹತ್ತುಸಾವಿರ ದಾಖಲೆಗಳ ಸಂಗ್ರಹ ಅತ್ಯಂತ ಮಹತ್ವದ್ದಾಗಿದೆ. ಗಡಿವಿವಾದ ಇಂದು ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲೇರಿದೆ. ಕೇಂದ್ರ ಸರಕಾರ ಈ ವಿಷಯದಲ್ಲಿ ಹಿಂದೆ ನೆಹರು ಕಮಿಶನ್, ಜೆ.ವಿ.ಪಿ. ವರದಿ, ಮಿಶ್ರಾ ವರದಿ, ಧರ ಆಯೋಗ, ಫಜಲ ಅಲಿ ಆಯೋಗ, ಏಕಸದಸ್ಯ ಆಯೋಗ ಮುಂತಾದ ಆಯೋಗಗಳನ್ನು ನೇಮಿಸಿತು. ಇದು ಮಹಾರಾಷ್ಟ್ರದ ಜನತೆಗೆ ಸರಿಬರಲಿಲ್ಲ. ಕೊನೆಗೆ ಮಹಾರಾಷ್ಟ್ರದ ವಾದಕ್ಕೆಮಣಿದು ಮೆಹರಚಂದ ಮಹಾಜನ ಅವರ ಏಕಸದಸ್ಯ ಆಯೋಗವೊಂದನ್ನು ನಿಯಮಿಸಿತು. ಮಹಾಜನರು ಬೆಳಗಾವಿ ಗಡಿಪ್ರದೇಶವನ್ನು ಸೂಕ್ಷ್ಮವಾಗಿ ಪರಿಶೀಲಿಸಿ 'ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ'ವೆಂದು ತಮ್ಮ ವರದಿಯಲ್ಲಿ ದಾಖಲಿಸಿದರು. ಆದರೆ, ಮಹಾಜನ ವರದಿ ಅಂಗೀಕಾರವಾಗಲೇ ಇಲ್ಲ. ಮಹಾರಾಷ್ಟ್ರದವರು ಗಡಿ ವಿವಾದವನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಒಯ್ದು ದಾವೆ ಹೂಡಿದ್ದಾರೆ. ಈ ಸಂದರ್ಭದಲ್ಲಿ ಮುಂಬೈ ಹೈಕೋರ್ಟಿನ ಮೂರು ಅಚ್ಚಕನ್ನಡದಲ್ಲಿರುವ ನೋಟಿಸ್ ಪ್ರತಿಗಳನ್ನು ಅಪ್ಪಾಸಾಹೇಬ ಸುಬೇದಾರ ಮತ್ತು ಶ್ರೀಶೈಲ ಕುಪಾಟಿ ಅವರಿಂದ ಸಂಗ್ರಹಿಸಿದ ರವೀಂದ್ರ ಅವರು ನ್ಯಾಯಾಲಯಕ್ಕೆ ಸಲ್ಲಿಸಿದ್ದಾರೆ. ಅವರು ಈ ವಿಷಯವಾಗಿ ತುಂಬಾ ಆಸಕ್ತಿ ವಹಿಸಿ ಸಾಕ್ಷಿಗಳನ್ನು ಸಂಗ್ರಹಿಸುವಾಗ ಅಪೂರ್ವ ದಾಖಲೆಗಳು ದೊರೆತವು.

ಇಂಗ್ಲೆಂಡ್ ರಾಣಿ ಕಳಿಸಿದ ಅಚ್ಚಕನ್ನಡದ ಆಹ್ವಾನ ಪತ್ರ ಮತ್ತು ಆಭಾರ ಮನ್ನಣೆ ಪತ್ರ, ಪೋಲಿಸ್ ನೇಮಕಾತಿ ಪತ್ರಗಳು, ವಿದ್ಯಾಖಾತೆಯ (ಶಿಕ್ಷಣ ಇಲಾಖೆ) ಮುಂಬೈ ನೀಡಿರುವ ಅಚ್ಚ ಕನ್ನಡದ ಪ್ರಮಾಣ ಪತ್ರಗಳು, ಕಂದಾಯ ಇಲಾಖೆಯ ಪಹಣಿ ಪತ್ರಿಕೆಗಳು, ಹಕ್ಕು ಪತ್ರಿಕೆಗಳು, ಉಪನೋಂದಣಾಧಿಕಾರಿಯ ಕಚೇರಿಯಲ್ಲಿಯ ಕ್ರಯಪತ್ರಗಳು, ಭಕ್ಷೀಸ ಪತ್ರಗಳು, ಲೀಲಾವ ಪತ್ರಗಳು ಹೀಗೆ ವೈವಿಧ್ಯಮಯವಾಗಿರುವ ಹತ್ತು ಸಾವಿರ ದಾಖಲೆಗಳನ್ನು ಸಂಗ್ರಹಿಸಿ ಸರ್ಕಾರದ ಗಮನ ಸೆಳೆದಿದ್ದಾರೆ. ರವೀಂದ್ರ ಅವರು ೧೮೩೭ರಿಂದ ೧೯೫೬ರ ವರೆಗಿನ ಸುಮಾರು ಹತ್ತುಸಾವಿರ ಇಂಥ ದಾಖಲೆಗಳನ್ನು ಸಂಗ್ರಹಿಸಿದ್ದು ಒಂದು ಅಪೂರ್ವ ಕಾರ್ಯವೆಂದೇ ಹೇಳಬೇಕು. ಸರಕಾರದ ಮತ್ತು ನ್ಯಾಯಾಲಯದಲ್ಲಿ ಇಲ್ಲದ ಸಾವಿರಾರು ಹೊಸ ದಾಖಲೆಗಳನ್ನು ಮೊದಲ ಬಾರಿಗೆ ನೀಡಿದ ಕೀರ್ತಿ ರವೀಂದ್ರ ಅವರದು. ಅವರ ಸಂಗ್ರಹ ಕಾರ್ಯದ ಸಂದರ್ಭದಲ್ಲಿ ನಾನು ಕ್ಷೇತ್ರಕಾರ್ಯ ಮಾಡುತ್ತಿದ್ದೆ. ನನಗೆ ಸಿಕ್ಕ ದಾಖಲೆಗಳನ್ನು ಅವರಿಗೆ, ಅವರಿಗೆ ಸಿಕ್ಕ ದಾಖಲೆಗಳನ್ನು ನನಗೆ ವಿನಿಮಯ ಮಾಡಿಕೊಳ್ಳುತ್ತಿದ್ದೆವು.

ಶಂಕರ ಹನಗಡಕರ ಎಂಬುವರು ಇತ್ತೀಚೆಗೆ ವಂಟಮುರಿ ಸಂಸ್ಥಾನ ಎಂಬ ಕಿರುಕೃತಿ ರಚಿಸಿದ್ದಾರೆ. ಅದರಲ್ಲಿ ರಾಜಾ ಲಖಮಗೌಡರು ಮುಂಬೈ ಹೈಕೋರ್ಟಿನೊಂದಿಗೆ ನಡೆಸಿದ ಕೆಲವು ಪತ್ರ ವ್ಯವಹಾರಗಳು ಕನ್ನಡದಲ್ಲಿರುವುದನ್ನು ದಾಖಲಿಸಿದ್ದಾರೆ. ನೂರಿಪ್ಪತ್ತು ವರ್ಷಗಳ ಹಿಂದೆ ಮುಂಬೈ ಹೈಕೋರ್ಟಿನಲ್ಲಿಯೂ ಕೂಡ ಕನ್ನಡ ಭಾಷೆಯ ವ್ಯವಹಾರ ನಡೆಯುತ್ತಿತ್ತು ಎಂಬುದಕ್ಕೆ ಇವು ಪ್ರಬಲ ಸಾಕ್ಷಿಯನ್ನು ಒದಗಿಸುತ್ತವೆ.

ರಾಜಮನೆತನಗಳ ಇತಿಹಾಸವನ್ನು ಅಧ್ಯಯನ ಮಾಡುವ ಕಾಲಕ್ಕೆ, ನಾವು ಗಮನಿಸಬೇಕಾದ ಒಂದು ಸಂಗತಿಯೆಂದರೆ ಬೆಳವಡಿ ಮಲ್ಲಮ್ಮಳಿಗೂ ಮತ್ತು ಶಿವಾಜಿ ಮಹಾರಾಜರಿಗೂ ಯುದ್ಧ ನಡೆಯಿತು. ಈ ಸಂದರ್ಭದಲ್ಲಿ ಶಿವಾಜಿ ಸೈನ್ಯ ಸೋತು ಶರಣಾಗುತ್ತದೆ. ಈ ಕುರಿತು ಒಂದು ಶಿಲ್ಪ ಕೂಡ ನಮಗೆ ನೋಡಲು ದೊರೆಯುತ್ತದೆ. ಈ ಇತಿಹಾಸವನ್ನು ಕನ್ನಡಿಗರು ರಚನೆ ಮಾಡಿದ್ದರೆ ಅಷ್ಟು ಪ್ರಾಮುಖ್ಯತೆ ಬರುತ್ತಿರಲಿಲ್ಲ. ಶಿವಾಜಿ ಮಹಾರಾಜರ ಸೊಸೆ ತಾರಾಬಾಯಿ ಒಬ್ಬ ಬ್ರಾಹ್ಮಣ ಪಂಡಿತನಿಂದ ಈ ವಿಷಯವನ್ನು ಬರೆಯಿಸಿ 'ಶಿವಾಜಿ–ಮಲ್ಲಮ್ಮಾಜಿ ಸಮರೋತ್ಸವ' ಎಂಬ ಕೃತಿ ರೂಪದಲ್ಲಿ ದಾಖಲಿಸಿದ್ದಳು. ಈ ಕೃತಿಯ ಹಸ್ತಪ್ರತಿ ಪುಣೆಯಲ್ಲಿತ್ತು. ಇದನ್ನು ಗಮನಿಸಿದ ಎಂ.ಎಂ. ಕಲಬುರ್ಗಿ ಅವರು ಕನ್ನಡಕ್ಕೆ ಚಟ್ನಿಸ್ ಅವರಿಂದ ಅನುವಾದಿಸಿ ಪ್ರಕಟಿಸಿದರು.

ಕಿತ್ತೂರು ಸಂಸ್ಥಾನ ಭಾರತದ ಇತಿಹಾಸದಲ್ಲಿ ಅಚ್ಚಳಿಯದ ಹೆಸರು ಉಳಿಸಿದೆ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮಕ್ಕೆ ನಾಂದಿಹಾಡಿದ ಮೊಟ್ಟಮೊದಲ ಸಂಸ್ಥಾನವಿದು. ೧೮೫೭ರ ಸಿಪಾಯಿ ದಂಗೆಯ ಪೂರ್ವದಲ್ಲಿ ೧೮೨೪ರಲ್ಲಿ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಎದುರಿಸಿದ ಒಂದು ಧೀಮಂತಿಕೆ ಕಿತ್ತೂರು ಸಂಸ್ಥಾನದ್ದು. ಇಂಥ ಅಪರೂಪದ ಸಂಸ್ಥಾನದ ಕುರಿತು ಸಾವಿರಾರು

ಪುಟಗಳ ದಾಖಲೆಗಳು ಇಂಗ್ಲೆಂಡಿನ ಗ್ರಂಥಾಲಯ ಸೇರಿವೆ. ಅವುಗಳನ್ನು ಹುಡುಕಿ ತಂದು ಶೋಧಿಸುವ ಕೆಲಸವನ್ನು ಇನ್ನೂ ಮಾಡಬೇಕಾಗಿದೆ. ೨೦೧೪ರಲ್ಲಿ "ಎಂ. ಎಂ. ಕಲಬುರ್ಗಿ ಅವರು ಎಲಿಯಟ್ಸ್ ನೋಟ್ಸ್ ಎಂಬ ಇಂಗ್ಲಿಷ್ ವರದಿಯೊಂದನ್ನು ಮೂಲ ಮತ್ತು ಅನುವಾದದೊಂದಿಗೆ ಪ್ರಕಟಿಸುವ ಕೆಲಸ ಮಾಡಿದರು."[೨]

"ಬ್ರಿಟಿಷರ ಕಾಲದಲ್ಲಿ ಹರಿದು ಹಂಚಿಹೋಗಿದ್ದ ಬೆಳಗಾವಿ ಜಿಲ್ಲೆಗೆ ಕರ್ನಾಟಕದಲ್ಲಿ ಪ್ರಮುಖ ಸ್ಥಾನವಿದೆ. ಭಾರತದ ಚರಿತ್ರೆಯಲ್ಲಿ ಕನ್ನಡ ವೀರರಮಣೀಯರಲ್ಲಿ ಕ್ರಿ.ಶ. ೧೬೭೨ರಿಂದ ೧೬೯೭ರ ವರೆಗೆ ಆಳಿದ ಕೆಳದಿ ರಾಣಿ ಚನ್ನಮ್ಮಾಜಿಯು ದೆಹಲಿಯ ಬಾದಷಹ ಔರಂಗಜೇಬನನ್ನು ಸೋಲಿಸಿ ಹಿಮ್ಮೆಟ್ಟಿಸಿದರೆ ೧೭೫೮ ರಿಂದ ೧೭೬೩ರ ವರೆಗೆ ರಾಜ್ಯಭಾರ ನಡೆಸಿದ ಕೆಳದಿ ರಾಣಿ ವೀರಮ್ಮಾಜಿಯು ಪ್ರಜಾಪ್ರಭುತ್ವದ ನೆಮ್ಮದಿಗಾಗಿ ನವಾಬ್ ಹೈದರಾಲಿಯನ್ನು ಎದುರಿಸಿ ಕೆಂಗಡಿಸಿದ್ದಾಳೆ. ಈ ನಿಟ್ಟಿನಲ್ಲಿ ೧೮೨೪-೧೮೨೯ರಲ್ಲಿ ಬ್ರಿಟಿಷರನ್ನು ಎದುರಿಸಿ ಕಂಗೆಡಿಸಿದ್ದಾಳೆ. ಈ ನಿಟ್ಟಿನಲ್ಲಿ ೧೮೨೪-೧೮೨೯ರಲ್ಲಿ ಬ್ರಿಟಿಷರನ್ನು ಎದುರಿಸಿದ ಕಿತ್ತೂರು ಚೆನ್ನಮ್ಮನ ಇತಿಹಾಸವೂ ಕನ್ನಡ ನಾಡಿನ ಹಿರಿಮೆಯನ್ನು ಜಾಜ್ವಲ್ಯಮಾನವನ್ನಾಗಿಸಿದೆ. ಕಿತ್ತೂರಿನ ಇತಿಹಾಸ ಆದಿಯಾಗಿ ಬೆಳಗಾವಿ ಜಿಲ್ಲೆಯ ಐತಿಹಾಸಿಕ ಮೂಲ ಸಾಮಗ್ರಿಗಳು ಕರ್ನಾಟಕ, ಪುಣಾ, ಮುಂಬೈ, ಚೆನ್ನೈ, ಆಂಧ್ರ ಮತ್ತು ಬ್ರಿಟಿಷ್ ಮ್ಯೂಜಿಯಂ ಇಂಡಿಯಾ ಆಫಿಸ್ ಲೈಬ್ರರಿ ದೆಹಲಿಯ ಪತ್ರಾಗಾರಗಳಲ್ಲಿ ಉಪಲಬ್ಧವಿದೆ. ಕನ್ನಡ ಮರಾಠಿ, ಪರ್ಷಿಯನ್ ಮತ್ತು ಇಂಗ್ಲಿಷ್ ಮೋಡಿ ಲಿಪಿಗಳಲ್ಲಿರುವ ಇಂತಹ ಆಕರಗಳು ಸಂಶೋಧಕರನ್ನು ಆಹ್ವಾನಿಸಿ ಬೆರಗುಂಟು ಮಾಡುವುದರಲ್ಲಿ ಎರಡು ಮಾತಿಲ್ಲ. ವಿದ್ವಾಂಸರ ಅವಲೋಕನಕ್ಕಾಗಿ ಶಿವಮೊಗ್ಗದಲ್ಲಿ ಜರುಗಿದ ೮ನೇ ಇತಿಹಾಸ ಕಾಂಗ್ರೆಸ್‌ನ ಅಧ್ಯಕ್ಷ ಭಾಷಣದಲ್ಲಿ ಪೂನಾ ವಿಶ್ವವಿದ್ಯಾಲಯದ ಖ್ಯಾತವಿದ್ವಾಂಸರಾದ ಚಿಟ್ನೀಸ್ ಅವರು ಕನ್ನಡ ನಾಡಿನ ಬೆಳಗಾವಿ ಇತಿಹಾಸ ಸಾಮಗ್ರಿಗಳು ಗಮನಾರ್ಹವಾಗಿದ್ದು ಪೇಶ್ವೆ ದಫ್ತರಗಳು ಸಮರ್ಥ ರಾಮದಾಸ ಸ್ವಾಮಿ ಹಸ್ತಾಕ್ಷರಗಳು ಕಿತ್ತೂರು ಇತಿಹಾಸದ ಫಾರಸೀ ಚಾರಿತ್ರಿಕ ದಾಖಲೆ ಬ್ರಿಟಿಷ್ ರೆಸಿಡೆಂಟರ್ ಫರ್ಮಾನ್‌ಗಳ ಮಾದರಿಗಳನ್ನು ಮುಂದಿನ ಸಂಶೋಧನೆಗಾಗಿ ನಿರೂಪಿಸಲಾಗಿದೆ."[೩]

"ಶೇಷ ಪಾರಿಶವಾಡರು ವಿದ್ವತ್‌ಪೂರ್ಣ ಲೇಖನಗಳ ಜೊತೆಗೆ ಬುಕ್ಕರಾಯ ಚರಿತೆ ಸಂಪಾದನೆಮಾಡಿ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ. ಈ ಚರಿತ್ರೆಯು ಮೈಸೂರಿನ ಓರಿಯಂಟಲ್ ಲೈಬ್ರರಿಯಲ್ಲಿರುವ ಕೆ.ಎ. ೧೨೭ ನಂಬರುಳ್ಳ ಕೈಬರಹದ ಕಾಗದದ ಪುಸ್ತಕ ಪ್ರತಿಯಾಗಿದೆ. ಇದನ್ನು ಯಾರು ಯಾವಾಗ ಯಾವ ಆಧಾರದ ಮೇಲೆ ಬರೆದರೆಂಬುದು ತಿಳಿಯದು. ಇದರಲ್ಲಿ ಪುಕ್ಕಟೆ ಪುರಾಣಗಳು ಕೆಲವಿದ್ದರೂ ಚಾರಿತ್ರಾಂಶವೂ ದೊರೆಯುವುದು. ಇದನ್ನು ಬರೆದಾತನು ಭಾಷಾ ಸ್ವರೂಪಕ್ಕೆ ಅಷ್ಟು ಗಮನ ಕೊಟ್ಟಿಲ್ಲ. ನಾವು ಅದರ ಭಾಷೆಯಲ್ಲಿ ಯಾವ ವ್ಯತ್ಯಾಸವನ್ನು ಮಾಡದೆ ಮಾತೃಕೆಯಲ್ಲಿದ್ದಂತೆಯೇ ಇಲ್ಲಿ ಪ್ರಕಟಿಸಿರುವೆವು"[೪] ಎಂದು ಅಡಿಟಿಪ್ಪಣಿಯಲ್ಲಿ ಪಾರಿಶ್ವಾಡರು ತಿಳಿಸಿರುವರು.

ರಾಮದುರ್ಗ ತಾಲೂಕಿನ ಕಡಕೋಳ ವಿರಕ್ತಮಠದ ಹಸ್ತಪ್ರತಿ ಕನ್ನಡ ಅಧ್ಯಯನ ಪೀಠ ಸಂಪುಟ ೧೦ರಲ್ಲಿ ಚನ್ನಬಸವಣ್ಣನವರ ಚರಿತ್ರೆಯನ್ನು ನಿರೂಪಿಸುತ್ತದೆ.

**ಆದಿ :** ... "ಬಳಿಕ ಮತ್ತೊಂದು ನಿಮಿತ್ಯದಿಂ ಶ್ರೀಮತ್ಪರಮೇಶ್ವರನು ಕೈಲಾಸಾದ್ರಿಯಲ್ಲಿ ಮೂರ್ತ ಮಾಡಿಕೊಂಡಿರ್ದ ನಂದೀಶ್ವರ ಭೃಂಗೀಶ್ವರ ಗಜಕರ್ಣ, ಘಂಟಾಕರ್ಣ ದಾರುಕ ರೇಣುಕಾದಿ ಶ್ರೇಷ್ಠ ಗಣ ಸಂಕೀರ್ಣತೆಯಿಂದೊಪ್ಪುವ ಶಾಂಭವೈರಪುರಿಯೊಳು ಚತುದರ್ಶ ಲೋಕೈಕ ವಿಭುವಾಗಿ ವಿರಾಜಿಸುತಿರ್ಪ ರಾಜತೇಜದೋಲಗದ ದಿನಕ್ಕೆ ಮೂರು ಲೋಕದ ಶುದ್ಧಿಯನ್ನು ಈಶ್ವರಂಗೆ ತಂದು ಮುಟ್ಟಿಸುವ ಮಣಿಹವುಂಗಿರ್ಪುದು ನಾರದ ಋಷೇಶ್ವರಂಗೆ ಅದು ನಿಮಿತ್ಯವಾಗಿ........ ನಿಮಗೆ ಶಿವಾನುಭವವ ಬೋಧಿಸುವುದಕೆ ಕುಮಾರ ಸ್ವಾಮಿಗಳೆ ಕಕ್ಕಯ್ಯಗಳ ಪ್ರಸಾದ ಸ್ವರೂಪಿನಿಂ ಭದ್ರಪ್ರಮುದಿಯೆಂಬ ರುದ್ರಕನ್ನಿಕೆ ಮುಂದೆಯ್ದಿ ನಾಗಲಾಂಬಿಕೆಯೆಂಬ ನಾಮಂ ತಳೆದು ಅಗ್ರಜೆಯಗೈದಾಳೆ । ಆಯ ಕಳ ಚಿದ್ಗರ್ಭದಿಂದ ಚಿಕ್ಕದಣ್ಣಾಯಕರಾಗಿ ಉದಯವಾದರು."[೫]

ಅಥಣಿ ತಾಲೂಕಿನ ತೆಲಸಂಗ ಗ್ರಾಮದಲ್ಲಿ ೧೮ನೇ ಶತಮಾನಕ್ಕೆ ಸೇರಿದ ಹಸ್ತಪ್ರತಿಯು ಚಿತ್ರಶೇಖರ ಸೋಮಶೇಖರ ಚರಿತ್ರೆ ಕುರಿತು ಮತ್ತು ಇದನ್ನು ಬರೆದ ಲಿಪಿಕಾರನ ಹೆಸರು ಕಂಡುಬರುತ್ತದೆ. ದೊಡ್ಡಮಲ್ಲಿಗೆರೆಯ ಕಂತ ಚೆನ್ನವೀರ ದೇವರು ಎಂದು ಕೊನೆಯಲ್ಲಿ ನಮೂದಿಸಿದ್ದಾನೆ.

"ಸೋಮಶೇಖರ ಚಿತ್ರಶೇಖರಗೆ ತನಯ ಕುಮಾರರಿಗೆ
ಪಿರಿದಾಗಿ ಗಣಪದವನಿತ್ತು ಸರಸಕೋವಿದ ಸಂ.....
ಭೀಮವಿಕ್ರಮರೂ ಸ್ಮರರೂಪರೆಂದೆನಿಪ ನೆರೆ
ಜಾಣರುಗಳು ಅರಿಗಳೆದೆದಲ್ಲಣರೂ ವೀರಬಲತಿಮಿರಕ್ಕ
ಉಪ್ಪಾಳಕನಂತೆ ಬಾಳಿದರ ಚರಿತ್ರೆ ಜಗದೊಳಗೇ
ಜಾಣರ ಕಥೆಯೆನಿಸಿ ಚರಿಸುತಿರಲೂ
ಬಲ್ಲ ಗಂಭೀರ ಪುರುಷರು ಯಕ್ಷಗಾನವಂದೆನ್ನೊಳು
ಹರುಷದಿಂ ಮಾಡೆನಲು–ವಿರೂಪಾಕ್ಷದೇವರ ಕರಜಾತ
ಕಸ್ತೂರಿಯ ನಾಗಂಣನೆನಿಪ ಅಲರಂಭಸಮರೂಪ
ಸಲೆಜಾಣ ಸಂಪನ್ನ ಗೆಲುಗೈಯ್ಯನಾತಂಗೆ ಲಲನೆಯೆಂದೆನಿಸುವಳು
ಪರಮಪತಿವ್ರತೆ ಅರುಂದ್ರತಿಗೆ ಸರಿಯೆಂದೆನಿಪ
ಗುಗರ್ಭವಾರುಧಿ ಚಂದ್ರನಾದ ಕಸ್ತೂರಿಯ ಸಿದ್ಧನಿದ
ಬೋಳೇಶನೆಂದೆಂಬು ಕರ್ತೃವಿನ ಕೃಪೆಯಿಂದಾ
ವಿಸ್ತಾರವಾಗಿ ಸೋಮಶೇಖರ ಯಕ್ಷಗಾನವೆಂದೀ ಕೃತಿಗೆ
ನಾಮವಿಟ್ಟನು ಬಹುಪ್ರೇಮದಿಂದ ಪೇಳ್ದೆ."[೬]

ಬೆಳಗಾವಿ ಜಿಲ್ಲೆಯಲ್ಲಿ ದೊಡ್ಡಾಟ ಮತ್ತು ಸಣ್ಣಾಟ ಪರಂಪರೆ ಇದೆ. ಆದರೆ ಯಕ್ಷಗಾನ ಮೇಳಗಳು ಇಲ್ಲಿದ್ದ ಬಗ್ಗೆ ನಮಗೆ ಯಾವುದೇ ದಾಖಲೆಗಳು ಸಿಗುವುದಿಲ್ಲ. ಆದರೆ ಇಂಥ ಅಪರೂಪದ ಯಕ್ಷಗಾನದ ಕೃತಿಗಳು ಈ ನೆಲದಲ್ಲಿ ಹುಟ್ಟಿದ್ದು ಸೋಜಿಗವೆನಿಸುತ್ತದೆ. ಇನ್ನು ಮುಂದುವರಿದು ಹೇಳುವುದಾದರೆ ಬೈಲಹೊಂಗಲದ ದುರದುಂಡೀಶ ಎಂಬ ಕವಿ ಸುಮಾರು ೧೮ ಯಕ್ಷಗಾನ ಕೃತಿಗಳನ್ನು ರಚಿಸಿದ್ದಾನೆ.

ಯಕ್ಷಗಾನ ಮೊದಲು ಒಂದು ಗಾನಪದ್ಧತಿಯಾಗಿತ್ತು. ಇಂದು ನಾವು ಕೇಳುವ ಹಿಂದುಸ್ಥಾನಿ ಮತ್ತು ಕರ್ನಾಟಕ ಸಂಗೀತ ಪ್ರಕಾರಗಳಂತೆ ಹಿಂದೊಮ್ಮೆ ಯಕ್ಷಗಾನ ಮತ್ತು ಗಂಧರ್ವಗಾನ ಪದ್ಧತಿಗಳಿದ್ದವು. 'ಯಕ್ಷ' ಪದಕ್ಕೆ ಪೂಜಿಸುವ ಎಂಬರ್ಥ ಹಚ್ಚಿದ್ದಾರೆ. ಇವರು ಕುಬೇರನ ಪರಿವಾರದವರು. ಲಂಕೆಯಲ್ಲಿ ವಾಸ್ತವ್ಯ ಮಾಡಿಕೊಂಡಿದ್ದ ಕುಬೇರನು ರಾವಣನಿಂದ ಪರಾಜಿತನಾಗಿ ಉತ್ತರಕ್ಕೆ ಸರಿದನಂತೆ. ರಾವಣನೂ ಶಿವಭಕ್ತ, ಈ ಯಕ್ಷರೂ ಭಕ್ತರು. ಇವರು ಪೂಜೆ ಮಾಡುವಾಗ ಬಳಸಿಕೊಂಡ ಹಾಡುಗಳ ಒಂದು ಬಗೆಯ ಧಾಟಿಯೇ ಯಕ್ಷಗಾನವೆಂದಾಗಿದೆ. 'ಸಂಗೀತ ರತ್ನಾಕರ'ವನ್ನು ಬರೆದ ೧೩ನೇ ಶತಮಾನದ ಶ್ರೀಶಾರ್ಙ್ಗದೇವನು ಯಕ್ಷಗಾನ ಶೈಲಿಯನ್ನು 'ಜಕ್ಕ' ಎಂದು ಕರೆದಿದ್ದಾನೆ. ವೇದಗಳಲ್ಲಿ ಹಾಗು ಜೈನ ಕಥಾನಕಗಳಲ್ಲಿ 'ಯಕ್ಷ' ಪದ ಬಳಕೆಯಲ್ಲಿದೆ. ಸಂಗೀತ ಶಾಸ್ತ್ರಕಾರನಾದ ೧೭ನೇ ಶತಮಾನದ ಗೋವಿಂದ ದೀಕ್ಷಿತನು 'ಯಕ್ಷೌಘ ಗೀತಮಪಿ ಗಾನಶೈಲಿ' ಎಂದು ಕರೆದಿದ್ದಾನೆ. ಇಂಥ ಈ ಯಕ್ಷಗಾನ ಶೈಲಿಯನ್ನು ಬಯಲಾಟದ ಹಾಡುಗಳಿಗೆ ಅಳವಡಿಸಿಕೊಂಡದ್ದರಿಂದ ಬಯಲಾಟಗಳನ್ನು 'ಯಕ್ಷಗಾನ ಬಯಲಾಟ' ಎಂದು ಕರೆಯುತ್ತ ಬಂದಿರುವರು.

ವಿಜಯನಗರದ ಅರಸರ ಕಾಲದಲ್ಲಿ ಯಕ್ಷಗಾನ ಬಯಲಾಟಕ್ಕೆ ವಿಶೇಷವಾದ ಮನ್ನಣೆ ದೊರೆತಿತ್ತು. ಸೈನಿಕರನ್ನು ಹುರಿದುಂಬಿಸಲು ಈ ಆಟಗಳನ್ನು ಆಡಿಸುತ್ತಿದ್ದರು. ೧೫ನೇ ಶತಮಾನದ ಸಾಳ್ವ ನರಸಿಂಹರಾಯನ ಕಾಲದಲ್ಲಿ ಆಂಧ್ರಪ್ರದೇಶದ ಪೊಲ್ಲುಗಂಟಿ ಚೆನ್ನಶೌರಿ ಎಂಬಾತನು, 'ಸೌಭುಚರಿತಮಲ' ಎಂಬ ಕಥೆಯನ್ನು ಯಕ್ಷಗಾನದಲ್ಲಿ ಬರೆದನೆಂದು ಹೇಳುತ್ತಾರೆ. ಇದು 'ಕೇಳಿಕೆ' ಎಂದೂ, ಯಕ್ಷಗಾನ ಅಲ್ಲವೆಂದೂ, ಕಂದುಕೂರಿ ರುದ್ರಯ್ಯನು ಬರೆದ 'ಸುಗ್ರೀವ ವಿಜಯ' ತೆಲುಗಿನ ಪ್ರಪ್ರಥಮ ಯಕ್ಷಗಾನ ಎಂದೂ ಹೇಳುತ್ತಾರೆ. ಈತನು ೧೬ನೇ ಶತಮಾನದ ವಿಜಯನಗರದ ದೊರೆ ಕೃಷ್ಣದೇವರಾಯನ ಕಾಲದಲ್ಲಿ ಆಸ್ಥಾನ ವಿದ್ವಾಂಸನಾಗಿದ್ದನು.

ಅಂದು ತೆಲುಗಿನಲ್ಲಿ ಪ್ರಾರಂಭವಾದ ಯಕ್ಷಗಾನ ಪ್ರಯೋಗಗಳು ಕನ್ನಡದಲ್ಲೂ ಬರಹತ್ತಿದವು. ೧೬ನೇ ಶತಮಾನದ ವಿಷ್ಣು ಎಂಬವನು ವಿರಾಟಪರ್ವ ಮತ್ತು ಗೋಗ್ರಹಣವನ್ನು, ಸುಬ್ರಹ್ಮಣ್ಯನೆಂಬುವನು ರಾವಣೋದ್ಭವ, ಶಂಬರಾಸುರ ಎಂಬ ಕಥೆಗಳನ್ನೂ ರಚಿಸಿದ್ದೆಂದು ತಿಳಿದಿರುತ್ತದೆ. ೧೭ನೇ ಶತಮಾನದ 'ದೇವಿದಾಸ' ಎಂಬ ಕವಿಯು ಕೃಷ್ಣಾರ್ಜುನಕಾಳಗ, ಇಂದ್ರಕೇಲಕ, ಕೃಷ್ಣಸಂಧಾನ, ಭೀಷ್ಮಪರ್ವ, ಅಭಿಮನ್ಯು ಕಾಳಗ, ಸೈಂಧವವಧೆ, ಚಿತ್ರಸೇನ ಕಾಳಗ,

ಗಿರಿಜಾಕಲ್ಯಾಣ ಮೊದಲಾದ ಯಕ್ಷಗಾನಗಳನ್ನು ರಚಿಸಿದ್ದಾನೆ. ಇದೇ ಕಾಲದ ಇನ್ನೊಬ್ಬ ಕವಿಧ್ವಜಪುರದ ನಾಗಪ್ಪಯ್ಯನು ಚಂದ್ರಾವಳಿ, ನಳಚರಿತ್ರೆ, ಘಟೋದ್ಭವ ಪ್ರಸಂಗಗಳನ್ನು ಬರೆದಿದ್ದಾನೆ. ಕೆಳದಿ ಬಸವಪ್ಪ ನಾಯಕರ ಆಸ್ಥಾನದಲ್ಲಿದ್ದ ಅಜಪುರದ ಸುಬ್ಬನು ಪಟ್ಟಾಭಿಷೇಕ ಪಂಚವಟಿ, ವಾಲಿಸುಗ್ರೀವರ ಕಾಳಗ, ಇಂದ್ರಜೀತು ಕಾಳಗ, ಕುಂಭಕರ್ಣ ಕಾಳಗ, ಕುಶಲವರ ಕಾಳಗ, ಐರಾವತ, ಪಾರಿಜಾತ ಮೊದಲಾದ ಕಥೆಗಳನ್ನು ಸೃಷ್ಟಿಸಿದ್ದಾನೆ. ೧೮ನೇ ಶತಮಾನದ ಕವಿಗಳಲ್ಲಿ ಹಳೆಮಕ್ಕಿರಾಯ, ಅಜಪುರದ ವೆಂಕಟ, ನಿತ್ಯಾನಂದ ಅವಧೂತ, ಪಾಂಡೇಶ್ವರ ವೆಂಕಟ, ಮಟ್ಟಿವಾಸುದೇವಪ್ರಭು; ೧೯ನೆಯ ಶತಮಾನದ ಭಾಳಾಕ್ಷ, ರಂಗಾಚಾರ್ಯ, ಗೆರುಸೊಪ್ಪೆ ಶಾಂತಪ್ಪಯ್ಯ, ನಂದಳಿಕೆಯ ಲಕ್ಷ್ಮೀನಾರಾಯಣಪ್ಪ(ಮುದ್ದಣ) ಮೊದಲಾದವರು ನೂರಾರು ಯಕ್ಷಗಾನ ಪ್ರಸಂಗಗಳನ್ನು ರಚಿಸಿದ್ದಾರೆ. ಅಳಿಯ ಲಿಂಗರಾಜನೊಬ್ಬನೇ ನಾಲ್ವತ್ತಕ್ಕೂ ಹೆಚ್ಚು ಪ್ರಸಂಗಗಳನ್ನು ರಚಿಸಿ ಕೀರ್ತಿಶೇಷನಾಗಿದ್ದಾನೆ.

ಯಕ್ಷಗಾನ ಕೃತಿಗಳನ್ನು ರಚಿಸುವವರು ದಕ್ಷಿಣ ಕನ್ನಡ ಇಲ್ಲವೆ ಉತ್ತರ ಕನ್ನಡದವರು ಎಂಬ ತಿಳುವಳಿಕೆ. ಆ ಭಾಗದಲ್ಲಿಯೇ ಅವುಗಳ ಪ್ರಯೋಗಗಳಿರುವುದರಿಂದ ಇದು ಸ್ವಾಭಾವಿಕವೂ ಅಹುದು. ಆದರೆ ಇತ್ತೀಚೆಗೆ ನಮಗೆ ಉತ್ತರ ಕರ್ನಾಟಕದಲ್ಲೂ ಯಕ್ಷಗಾನಗಳನ್ನು ರಚಿಸುತ್ತಿದ್ದರು ಎಂಬುದಕ್ಕೆ ಸಾಕಷ್ಟು ಹಸ್ತಪ್ರತಿಗಳು ದೊರೆತಿವೆ. ಅಂಥವುಗಳಲ್ಲಿ ದುರದುಂಡೀಶ ಕವಿಯ ಅನೇಕ ಯಕ್ಷಗಾನಗಳು ಮಹತ್ವದವುಗಳಾಗಿವೆ.

೧೯೭೫ರಲ್ಲಿ ವೀ. ಸೀತಾರಾಮಯ್ಯನವರು 'ಯಕ್ಷಗಾನ' ಎಂಬ ಕೃತಿಗೆ ಸಮೀಕ್ಷೆ ಬರೆಯುತ್ತ ಅದರಲ್ಲಿ '....ಅಲ್ಲಮ ಮಾಯೆ ಮುಂತಾದುವನ್ನು ಹೊಸತಾಗಿ ಯಕ್ಷಗಾನ ಪ್ರಸಂಗಗಳಾಗಿ ನಿರ್ಮಿಸುವದು ಶಕ್ಯವಾದರೆ ಹೊಸ ವಿಷಯದ ನೆಲಸೊಂದು ಸೇರುವಂತಾದೀತು.' ಎಂದಿದ್ದಾರೆ. ಈ ಹೊಸ ವಿಷಯದ ನೆಲಸೊಂದು ೧೯ನೇ ಶತಮಾನದ ಆರಂಭದಲ್ಲಿಯೇ ಬೆಳಕು ಕಂಡಿರುತ್ತದೆ ಎಂಬ ಮಾತನ್ನು ಇಲ್ಲಿ ಬಹಿರಂಗಪಡಿಸಬೇಕಾಗಿದೆ. ಉತ್ತರ ಕರ್ನಾಟಕದಲ್ಲೂ ಅಂದು ಯಕ್ಷಗಾನಗಳನ್ನು ಆಡುವ, ಬರೆಯುವ ಹವ್ಯಾಸ ಬೆಳಸಿಕೊಂಡಿದ್ದರು. ಎಂಬುದಕ್ಕೆ ದುರದುಂಡೀಶ ಕವಿಯ ಹತ್ತಿಪ್ಪತ್ತು ಯಕ್ಷಗಾನ ಕೃತಿಗಳೇ ಸಾಕ್ಷಿಯಾಗಿರುತ್ತವೆ.

'ದುರದುಂಡೀಶ' ಎನ್ನುವುದು ಪ್ರಾಯಶಃ ಕವಿಯ ಕಾವ್ಯನಾಮವಾಗಿದೆ. 'ಚೋರಬಸವೇಶ್ವರ ಪುರಾಣ' ಎಂಬ ಹಸ್ತಪ್ರತಿಯ ಕೊನೆಗೆ ಲಿಪಿಕಾರನು, "ಶ್ರೀಮದ್ಘೋಂಗಲ ಪುರಾಣೀಕಮಠದ ದುಂಡಪ್ಪನವರ ಪುಸ್ತಕಮಿದು" ಎಂದು ಬರೆದಿದ್ದಾನೆ. ಹಸ್ತಪ್ರತಿಯ ಆರಂಭದಲ್ಲಿ "ಶ್ರೀ ಗುರುಪ್ರಸನ್ನ ಅಥಃ ಚೋರಬಸವೇಶ್ವರ ಪುರಾಣಂ ಮಯಾ ಲಿಖ್ಯತೇ ತಸ್ಯ ಲೇಖನಸ್ಯ ಶುಭಂಭವತು" ಎಂದಿದ್ದಾನೆ. ಚೋರಬಸವೇಶ್ವರ ಪುರಾಣದ ಈ ಹಸ್ತಪ್ರತಿಯ ಹಸ್ತಾಕ್ಷರಗಳೂ ದುರದುಂಡೀಶ ಕವಿ ರಚಿಸಿದ 'ಸೀತಾಸ್ವಯಂವರ ಯಕ್ಷಗಾನ'ದ ಹಸ್ತಾಕ್ಷರಗಳೂ ಒಂದೇ ಇರುವುದರಿಂದ ಚೋರಬಸವೇಶ್ವರ ಪುರಾಣವನ್ನು ದುರದುಂಡೀಶನೇ ಪ್ರತಿಮಾಡಿರಬೇಕು. ಪ್ರಸ್ತುತ ಪ್ರತಿಯನ್ನು

ತಾನು ಮುಪ್ಪಿನ ಕಾಲದಲ್ಲಿ ಮಾಡಿದನೆಂಬುದೂ ಈ ಪ್ರತಿಯಲ್ಲಿರುವ, 'ಕಷ್ಟೇನ ಲಿಖಿತಂ ಗ್ರಂಥಂ ಯತ್ನೇನ ಪರಿಥಥಲಿತಂ ವೃಧಾಪಕಾಲೇ ಚ ಮಯಾಲಿಖಿತಂ ಸತ್ವರೇಣ ಚ ತಸ್ಮಾತ್ತುಥ್ರುಲವರ್ಣಾನಿ ಸ್ಥಿತಾನಿ ಪುಸ್ತಕೇ ಮತಃ ಶ್ರೀಪ್ರಸನ್' ಎಂಬ ಮಾತುಗಳಿಂದ ಸ್ಪಷ್ಟವಾಗುತ್ತದೆ. ಈ ಪುರಾಣದಲ್ಲಿ ಉಲ್ಲೇಖಗೊಂಡ 'ದುಂಡಪ್ಪ' ಎನ್ನುವ ಹೆಸರು 'ದುಂಡಯ್ಯ' ಎಂಬ ಕವಿಯ ಹೆಸರನ್ನೇ ಸೂಚಿಸಿರಬಹುದು. ಈತನಿಗೆ 'ಪಡದಯ್ಯ' ಎಂದೂ ಕರೆಯುತ್ತಿದ್ದರಂತೆ (ಇದು ಕವಿಯ ಮೊಮ್ಮಗ ಹೇಳಿದ ಮಾತು).

ಕವಿಯು ಅರಭಾವಿಯ ದುರದುಂಡೀಶ್ವರಮಠದ ಭಕ್ತನಾಗಿರಬಹುದು. ಆದುದರಿಂದ 'ದುರದುಂಡೀಶ' ಎಂಬ ಹೆಸರನ್ನೇ ತನ್ನ ಕಾವ್ಯನಾಮವನ್ನಾಗಿ ಇಟ್ಟುಕೊಂಡಿರುವ ಸಾಧ್ಯತೆ ಇದೆ. ಕವಿಯ ಮನೆತನದವರು ಬೆಳಗಾವಿ ಜಿಲ್ಲೆಯ ಅರಭಾವಿಯಲ್ಲಿರುವ ದುರದುಂಡೀಶ್ವರಮಠಕ್ಕೆ ಇಂದಿಗೂ ಭಕ್ತಿಪೂರ್ವಕ ನಡೆದುಕೊಳ್ಳುತ್ತಿದ್ದಾರೆ. 'ದುರದುಂಡೀಶ' ಕವಿಯು ತನ್ನ ಪೂರ್ವಜರ ಬಗೆಗಾಗಲಿ ತನ್ನ ವಂಶಾವಳಿಯ ಬಗೆಗಾಗಲಿ ಏನನ್ನೂ ಹೇಳಿಕೊಂಡಿಲ್ಲ. ಅವನ ಕೃತಿಗಳಲ್ಲಿ ಕೇವಲ ಅವನ ಕಾವ್ಯನಾಮ. ತಂದೆಯ ಹೆಸರು, ಮನೆತನದ ಹೆಸರು, ಊರು ಇಷ್ಟು ಮಾತ್ರ ದೊರೆಯುತ್ತದೆ. ತನ್ನ ಕೃತಿಗಳಲ್ಲಿ ಕೊನೆಗೆ ಒಂದು ಭಾಮಿನಿ ಷಟ್ಪದಿ ಅಥವಾ ಸಂಸ್ಕೃತ ಶ್ಲೋಕರೂಪದಲ್ಲಿ (ಕೆಲವೊಮ್ಮೆ ಎರಡನ್ನೂ ಒಟ್ಟಿಗೆ) ಈ ಕುರಿತು ಹೇಳಿಕೊಂಡಿದ್ದಾನೆ:

೧. "ಕನಕಕಂಠ ಸುನಗರ ಸಂಸ್ಥಿತ
ವಿನೂತಮಠ ಪುರಾಣಿ ಶಿವಬಸ
ವೆನಿಪ ಶಿವಯೋಗಿಶ್ವರನ ತನುಜಾತನೆಂದೆನಿಪ
ಅನಘ ದುರದಂಡೀಶ ಕವಿ ತಾ
ನನುವಿನಿಂದೀ ಯಕ್ಷಗಾನಂ
ದೆನಿಪ ಸತ್ಕಥನಾಮೃತವನೊಲವಿಂದೆ ನಿರ್ಮಿಸಿದಂ

೨. ಹೇಮಗ್ರೀವೇತಿ ನಗರೇ ಸ್ಥಿತ್ವಾ ಛಾತ್ರಾದಿನಾಯಕಃ
ಪೌರಾಣೀ ಶಿವವೃಷಭಸ್ಯ ಆತ್ಮಜೋಬಲವಾನ್ಧಿಯೀ
ದುರದುಂಡೀನಾಮ ಕವೀನಾ ಕೃತೇದಂ ಚರಿತಂಭುವೀ॥"[೭]

ಕವಿಯ ಕಾಲವನ್ನು ನಾವು ನಿರ್ದಿಷ್ಟವಾಗಿ ಗುರುತಿಸುವುದು ಕಷ್ಟಸಾಧ್ಯವಾದ ಮಾತು. ಯಕ್ಷಗಾನಗಳು ಹಾಗೂ ಇತರ ಕೃತಿಗಳು ಬರೆಯಲ್ಪಟ್ಟ ಹಾಳೆಗಳ ಮೇಲೆ ಇಂಗ್ಲಿಷಿನಲ್ಲಿ ಕ್ರಿ.ಶ. ೧೮೫೮ರ ಮುದ್ರೆ ಇರುವುದರಿಂದ ಈ ಕಾಲದ ಅನಂತರವೇ ಕವಿ ಕೃತಿಗಳನ್ನು ರಚಿಸಿದ್ದಾನೆ; ಇಲ್ಲವೆ ಪ್ರತಿಮಾಡಲಾಗಿದೆ. ಈ ಹಿಂದೆಯೆ ಗಮನಿಸಿರುವಂತೆ ಚೋರಬಸವ ಪುರಾಣದ ಹಸ್ತಪ್ರತಿಯಲ್ಲಿ, ಮುಪ್ಪಿನ ಕಾಲದಲ್ಲಿ ಬರೆದಿರುವೆನೆಂದು ಹೇಳಿರುವುದರಿಂದ ಆ ಕಾಲಕ್ಕೆ ಕವಿಗೆ ಸುಮಾರು ೭೦ ವರ್ಷ ವಯಸ್ಸೆಂದು ಕಲ್ಪಿಸಿದರೆ ಕವಿ ಜನಿಸಿದ್ದು ಸುಮಾರು ೧೭೯೫

ಎಂದಾಗುತ್ತದೆ. ಇದರಿಂದ ಕವಿಯು ೧೯ನೇ ಶತಮಾನದ ಪೂರ್ವಾರ್ಧದಲ್ಲಿಯೇ ಕೃತಿಗಳನ್ನು ರಚಿಸಲಾರಂಭ ಮಾಡಿರಬಹುದಾಗಿದೆ. ತನ್ನ ಜೀವನದ ಕೊನೆಕೊನೆಯ ದಿನಗಳವರೆಗೂ ಬರೆಯುತ್ತ ಸಾಗಿದ್ದನೆಂದು ತೋರುತ್ತದೆ. ಕಾರಣ ಕ್ರಿಶ. ಸುಮಾರು ೧೮೩೦ರಿಂದ ೧೮೬೫-೧೮೭೦ರ ವರೆಗೂ ಅವನ ಬರವಣಿಗೆಯ ಅವಧಿ ಇರಬಹುದೆಂದು ಊಹಿಸಬಹುದಾಗಿದೆ.

ಡಿ.ಬಿ. ಸವದತ್ತಿಮಠ ಅವರ ಮನೆಯಲ್ಲಿ ದೊರೆತ ಕಟ್ಟಿನಲ್ಲಿ ಒಟ್ಟು ೧೮ ಯಕ್ಷಗಾನಗಳು ಲಭ್ಯವಾಗಿವೆ. ಇವುಗಳಲ್ಲಿ ದುರದುಂಡೀಶ ಕವಿ ತಾನೇ ರಚಿಸಿದನೆಂದು ಹೇಳಿಕೊಂಡವುಗಳೆಂದರೆ ಕೇವಲ ನಾಲ್ಕು. ಇನ್ನುಳಿದ ಯಕ್ಷಗಾನಗಳು ಯಾರಿಂದ ರಚಿಸಲ್ಪಟ್ಟಿವೆಯೆಂಬುದರ ಪ್ರಸ್ತಾಪ ಇಲ್ಲವಾದರೂ ಅವುಗಳ ಅಕ್ಷರ, ಹಾಳೆ, ವಿಷಯ ವಿವೇಚನೆಯ ಕ್ರಮ ಶೈಲಿ ಇವುಗಳನ್ನು ಗಮನಿಸಿದರೆ ಅವುಗಳಲ್ಲಿ ಇನ್ನು ಕೆಲವಾದರೂ ದುರದುಂಡೀಶ ಕವಿಯಿಂದ ರಚಿಸಲ್ಪಟ್ಟಿರಬೇಕೆಂದು ಊಹಿಸಲು ಶಕ್ಯವಿದೆ. ೮ ಯಕ್ಷಗಾನಗಳು ಅಪೂರ್ಣ ಸ್ಥಿತಿಯಲ್ಲಿ ದೊರೆತಿವೆ. ಕಟ್ಟಿನಲ್ಲಿ ದೊರೆತ ಒಟ್ಟು ಕೃತಿಗಳಿವು:

| | |
|---|---|
| ೧. ಪ್ರಭುದ್ಯವರ ಯಕ್ಷಗಾನ | –ಪೂರ್ಣಶುದ್ಧ ಪ್ರತಿ, ತಿದ್ದುಪಡಿ ಸೇರ್ಪಡೆ ಇತ್ಯಾದಿ ಇಲ್ಲ |
| ೨ ಕೃಷ್ಣಹರಣ ಯಕ್ಷಗಾನ | –೨ ಪೂರ್ಣ ಪ್ರತಿಗಳಿವೆ. ಶುದ್ಧಪ್ರತಿಗಳು. ತಿದ್ದುಪಡಿ ಸೇರ್ಪಡೆ ಇಲ್ಲ. ಒಂದು ಪ್ರತಿ ಸ್ವರ ಸಂಕೇತಗಳಿಂದ ಕೂಡಿದೆ. |
| ೩. ಸೀತಾಸ್ವಯಂವರ ಯಕ್ಷಗಾನ | –ಪೂರ್ಣವಿದೆ. ಶುದ್ಧಪ್ರತಿ. ತಿದ್ದುಪಡಿ ಸೇರ್ಪಡೆ ಇಲ್ಲ |
| ೪. ಚೋಳಾಂಗನಾ ಯಕ್ಷಗಾನ | –೨ ಪ್ರತಿ. ಒಂದರಲ್ಲಿ ಕವಿ ಪ್ರಸ್ತಾಪ ಇಲ್ಲ. ಒಂದು ಅಶುದ್ಧ ಪ್ರತಿ (ಈ ಮೇಲಿನ ನಾಲ್ಕರಲ್ಲಿ ಕವಿಯ ಪ್ರಸ್ತಾಪವಿದೆ) |
| ೫. ಸುಧನ್ವಯಕ್ಷಗಾನ | –ಅಪೂರ್ಣ, ಅಶುದ್ಧಪ್ರತಿ |
| ೬. ಬಭ್ರುವಾಹನ ಯಕ್ಷಗಾನ | –೨ ಪ್ರತಿಗಳು. ಎರಡೂ ಅಪೂರ್ಣ ಅಶುದ್ಧಪ್ರತಿಗಳು |
| ೭. ? | –ಗುರುತಿಸಲಾಗದ ಯಕ್ಷಗಾನ– ವಿ/ಗೋ/ಯ ಎಂದು ಮಾರ್ಜಿನ್‌ನಲ್ಲಿದೆ. ಅಪೂರ್ಣ, ಅಶುದ್ಧ ಪ್ರತಿ |
| ೮. ಜಲಂಧರಾಸುರ ಯಕ್ಷಗಾನ | –ಅಪೂರ್ಣ, ಅಶುದ್ಧ |
| ೯. ಸ್ವೇತನ ಯಕ್ಷಗಾನ | –ಪೂರ್ಣ ಶುದ್ಧಪ್ರತಿ, ತಿದ್ದುಪಡಿಗಳಿಲ್ಲ |
| ೧೦. ಶಿವರಾತ್ರಿ ಯಕ್ಷಗಾನ | –ಪೂರ್ಣ, ಅಶುದ್ಧಪ್ರತಿ |
| ೧೧. ಬಾಣಾಸುರನ ಕಥೆ | –ಪೂರ್ಣ, ಅಶುದ್ಧಪ್ರತಿ |

೧೨. ಭೀಮ ದುಶ್ಯಾಸನರ ಯುದ್ಧ–ಪೂರ್ಣ, ಅಶುದ್ಧಪ್ರತಿ

೧೩. ಸಿರಿಯಾಳನ ಕಥೆ –ಪೂರ್ಣ, ಅಶುದ್ಧಪ್ರತಿ

೧೪. ಕೊಟ್ಟಣದ ನಂಬಿಯ ಕಥೆ –ಪೂರ್ಣ, ಅಶುದ್ಧಪ್ರತಿ (ಅರ್ಥಾತ್ ಸಾಧೂ ಮಹಾತ್ಮೆ) ರಾಗ ತಾಳ ಸೂಚನೆ ಇದೆ.

೧೫. ಮಾರ್ಕಂಡೇಯ ಚರಿತ್ರೆ –ಎರಡು ಪ್ರತಿ. ಅಪೂರ್ಣ, ಅಶುದ್ಧ

೧೬. ಗಜಾಸುರ ಯಕ್ಷಗಾನ –ಅಪೂರ್ಣ, ಅಶುದ್ಧ

೧೭. ಮಯೂರ ಧ್ವಜನ ಕಥೆ –ಅಪೂರ್ಣ, ಅಶುದ್ಧ

೧೮. ಪ್ರಾಸ ರತ್ನಾಕರ –ಎರಡು ಭಾಗಗಳಲ್ಲಿದೆ. ಪೂರ್ಣ ಎನಿಸುವುದಿಲ್ಲ. ಸಾಧಾರಣ ಪ್ರತಿ ಕವಿ ಪ್ರಸ್ತಾಪವಿದೆ.

೧೯. ಪ್ರಾಸದ ಮಾತುಗಳು –ಅಪೂರ್ಣ, ಕವಿ ಪ್ರಸ್ತಾಪವಿಲ್ಲ, ಸಾಧಾರಣ ಪ್ರತಿ

ಅಲ್ಲದೆ ಇತರರು ಬರೆದ ೯ ಕೃತಿಗಳನ್ನು ಪ್ರತಿಮಾಡಿಟ್ಟುಕೊಂಡಿದ್ದಾನೆ. ಹೀಗೆ ಒಟ್ಟು ೨೯ ಹಸ್ತಪ್ರತಿಗಳು ಈ ಕಟ್ಟಿನಲ್ಲಿವೆ. ಮುರುಗೋಡದ ಶ್ರೀಮಹಾಂತ ದುರದುಂಡೀಶ್ವರ ಮಠದಿಂದ ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಾಂಡಾರಕ್ಕೆ ಹೋದ ಹಸ್ತಪ್ರತಿಗಳಲ್ಲಿ ಕೆಲವು ಅಪೂರ್ಣ ಹಸ್ತಪ್ರತಿಗಳು ದುರದುಂಡೀಶನ ಅಕ್ಷರಗಳನ್ನು ಹೋಲುತ್ತವೆ. ಅವೆಂದರೆ:

ಅ.ಸಂ. ೯೬೬ ಪ್ರಭುದೇವರ ಯಕ್ಷಗಾನದ – ಕೆಲವು ಪಾನುಗಳು

ಅ.ಸಂ. ೯೬೭ ವರ್ಣಾಂಶಪದ ವ್ಯಾಖ್ಯಾನ – ಸಾಧಾರಣ ಪ್ರತಿ

ಅ.ಸಂ. ೯೬೮ ಸುಧನ್ವಯಕ್ಷಗಾನ – ಸಾಧಾರಣ ಪ್ರತಿ

ಅ.ಸಂ. ೯೭೦ ಮಯೂರಧ್ವಜನ ಕಥಿ – ಸಾಧಾರಣ ಪ್ರತಿ

ಅ.ಸಂ. ೯೭೧ ಕನಕಾಂಗಿ ಕಲ್ಯಾಣ ಯಕ್ಷಗಾನ– ಸಾಧಾರಣ ಪ್ರತಿ

ಇವುಗಳಲ್ಲಿ ಕನಕಾಂಗಿ ಕಲ್ಯಾಣ ಯಕ್ಷಗಾನವೊಂದು ದುರದುಂಡೀಶನ ಯಕ್ಷಗಾನಗಳ ಪಟ್ಟಿಗೆ ಸೇರುತ್ತದೆ. ಇನ್ನೆರಡು ಯಕ್ಷಗಾನಗಳು ಡಿ.ಬಿ. ಸವದತ್ತಿಮಠ ಅವರಲ್ಲಿ ದೊರೆತ ಕಟ್ಟಿನಲ್ಲಿವೆ. ವರ್ಣಾಂಶಪದ ವ್ಯಾಖ್ಯಾನ ಯಾರದೋ ತಿಳಿಯದು. ಇದರಿಂದಾಗಿ ದುರದುಂಡೀಶನ ಯಕ್ಷಗಾನಗಳ ಸಂಖ್ಯೆ ೫ರಿಂದ ೧೮ರ ವರೆಗೆ ಹೋಗುತ್ತದೆ. ಈ ಪಟ್ಟಿಯನ್ನು ನೋಡಿದರೆ ಕವಿಯು ಯಕ್ಷಗಾನಗಳ ಬಗೆಗೆ ಎಷ್ಟೊಂದು ಆಸಕ್ತಿವಹಿಸಿದ್ದನೆಂಬುದು ಸ್ಪಷ್ಟವಾಗುತ್ತದೆ. ಕೆಲವೆಡೆ ಸ್ವರಸಂಕೇತಗಳನ್ನೂ ಬಳಸಿದ್ದರಿಂದ ಇಂದಿಗೆ ಸುಮಾರು ಒಂದೂವರೆ ಶತಮಾನದಷ್ಟು ಹಿಂದೆ ಉತ್ತರ ಕರ್ನಾಟಕದಲ್ಲಿ ಯಕ್ಷಗಾನಗಳ ಸ್ವರೂಪ ಹೇಗೆ ಇದ್ದಿರಬಹುದು ಎಂಬುದರ ಕಲ್ಪನೆ

ಮಾಡಿಕೊಳ್ಳಬಹುದಾದ್ದರಿಂದ ಇದೊಂದು ಅಪೂರ್ವ ನಿಧಿಯೇ ಎನ್ನಬಹುದಾಗಿದೆ. ರಾಗತಾಳ ಲಯಗಳಿಗೆ ಅನುಗುಣವಾಗಿ ಇಲ್ಲಿಯ ಹಾಡುಗಳನ್ನು ಹೇಗೆ ಬಳಸಬೇಕೆಂಬುದರ ಬಗ್ಗೆ ಧಾಟಿಯ ಸೂಚನೆಯಿದೆ. ಹಾಡುಗಳಲ್ಲಿ ಷಟ್ಪದಿ, ಲಾವಣಿ, ಚೂಲಿಕಾ ಪದ ಮುಂತಾದ ವೈವಿಧ್ಯಗಳಿವೆ. ಸಂಭಾಷಣೆ ಸ್ವಾರಸ್ಯಕರವಾಗಿದೆ. ದುರದುಂಡೀಶನ ಯಕ್ಷಗಾನಗಳನ್ನು ನೋಡಿದಾಗ ಇವು ಕೇವಲ ಸಾಹಿತ್ಯಿಕ ದೃಷ್ಟಿಯಲ್ಲಿ ರಚಿಸಲ್ಪಟ್ಟಿರದೆ ಹೆಚ್ಚು ಪ್ರಾಯೋಗಿಕ ದೃಷ್ಟಿಯಿಂದ ರಚಿಸಲ್ಪಟ್ಟಿವೆ ಎಂಬುದನ್ನು ಮನಗಾಣುವಂತಾಗುತ್ತದೆ. ಪ್ರಾಯಶಃ ಉತ್ತರ ಕರ್ನಾಟಕದ ಬಯಲಾಟಗಳ ಪೂರ್ವಸ್ವರೂಪ ಈ ಯಕ್ಷಗಾನಗಳಲ್ಲಿ ಒಡಮೂಡಿದೆ. ದುರದುಂಡೀಶನ ಯಕ್ಷಗಾನಗಳು ಪ್ರಾಚೀನತೆಯ ದೃಷ್ಟಿಯಿಂದಲೂ ಉತ್ತರ ಕರ್ನಾಟಕದ ಜಾನಪದ ಬಯಲಾಟದ ಇತಿಹಾಸಕ್ಕೆ ಅಪೂರ್ವವೆನಿಸುವುದರಲ್ಲಿ ಸಂದೇಹವಿಲ್ಲ. ದುರದುಂಡೀಶನ ಯಕ್ಷಗಾನಗಳಲ್ಲಿ ಜಾನಪದ ಧಾಟಿಯ ಹಾಡುಗಳಷ್ಟೇ ಅಲ್ಲ ಸಂಭಾಷಣೆಗಳೂ ಮನಸೆಳೆಯುತ್ತವೆ.

ಡಿ.ಬಿ. ಸವದತ್ತಿಮಠ ಅವರ ಮಗ ಸಂಗಮೇಶ ಸವದತ್ತಿಮಠ ಅವರ ಹತ್ತಿರ ಈ ಹಸ್ತಪ್ರತಿಗಳಿವೆ. ಸಂಗಮೇಶ ಸವದತ್ತಿಮಠ ಅವರು ಖ್ಯಾತ ಭಾಷಾವಿದ್ವಾಂಸರು. ಗುಲಬರ್ಗಾ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ಈಗ ನಿವೃತ್ತರಾಗಿದ್ದಾರೆ. ಅವರು ಈ ಹಸ್ತಪ್ರತಿಗಳನ್ನು ಶಾಸ್ತ್ರಶುದ್ಧವಾಗಿ ಸಂಪಾದಿಸಿ ಪ್ರಕಟಿಸುವ ಯೋಜನೆಯೊಂದನ್ನು ಅವರು ರೂಪಿಸಿದ್ದಾರೆ.

**ಪ್ರಭುದೇವರ ಯಕ್ಷಗಾನ :**

ದುರದುಂಡೀಶನ ಯಕ್ಷಗಾನಗಳಲ್ಲಿ ಪ್ರಭುದೇವರ ಯಕ್ಷಗಾನ ಗಾತ್ರ ಹಾಗೂ ಸತ್ವ ಎರಡೂ ದೃಷ್ಟಿಯಿಂದ ಅತಿ ಮಹತ್ವದ್ದಾಗಿದೆ. ಈ ಕೃತಿಯನ್ನು ಎಂ. ಎಸ್. ಲಠ್ಠೆ ಅವರು ಸಂಪಾದಿಸಿ ಪ್ರಕಟಿಸಿದ್ದಾರೆ. ಇಲ್ಲಿ ಭಕ್ತಿರಸದ ಪಾರಮ್ಯವಿದೆ. ಶೈಲಿ ಪ್ರೌಢವಾಗಿದೆ. ಇಲ್ಲಿನ ಕಥಾಸರಣಿ ಚಾಮರಸನ ಪ್ರಭುಲಿಂಗಲೀಲೆಯನ್ನೇ ಬಹುಮಟ್ಟಿಗೆ ಅನುಸರಿಸಿದೆ. ಯಕ್ಷಗಾನದ ಆರಂಭದಲ್ಲೆ 'ಸತ್ತವರ ಕಥೆಯಲ್ಲವಿದು...' ಎಂಬ ಪ್ರಭುಲಿಂಗಲೀಲೆಯ ಪದ್ಯವನ್ನು ಯಥಾವತ್ತಾಗಿ ಉದ್ಧರಿಸುತ್ತಾನೆ. ಅಂತೆಯೆ ಪ್ರಭುಲಿಂಗಲೀಲೆಯ ಸಂಪೂರ್ಣ ಪ್ರಭಾವವಲಯದಲ್ಲಿಯೇ ಕಥೆ ಸಾಗುತ್ತದೆ.

ಕೈಲಾಸದಲ್ಲಿ ಶಿವನು ಶಾಂಭವಿ ಸಹಿತ ಸಿಂಹವಿಷ್ಟರದಲ್ಲಿ ಆಸೀನನಾಗಿದ್ದಾನೆ. ಶಿವಗಣ ಸಭಾಸದಸ್ಯರೆಲ್ಲ ಅಲ್ಲಿ ನೆರೆದು ಶಿವನನ್ನು ಮನವಾರೆ ಸ್ತುತಿಸುತ್ತಿದ್ದಾರೆ. ಆಗ ಪ್ರಭು ಅಲ್ಲಿಗೇಕೆ ಬಂದನೆಂದು ಪಾರ್ವತಿ ಶಿವನನ್ನು ಪ್ರಶ್ನಿಸುತ್ತಾಳೆ. ಶಿವನು ಪ್ರಭುವಿನ ವೈರಾಗ್ಯ ವಿಶೇಷತೆಯನ್ನು ಹೊಗಳಿದಾಗ ಗಿರಿಜೆ ಕೋಪಿಷ್ಟಳಾಗಿ, ಸ್ತ್ರೀಮಾಯೆಯ ಮುಂದೆ ಇಂಥ ಪುರುಷನ ಪೌರುಷವೇನು ಮಹಾ? ಎಂದು ಹೀಗಳೆಯುತ್ತಾಳೆ. ಪರಶಿವನನ್ನೇ ಝುಂಕಿಸಿ ಜರೆಯುತ್ತಾಳೆ. ಗಿರಿಜೆಯ ಈ ನುಡಿ ಕೇಳಿ ಶಿವನು ನಸುನಕ್ಕು 'ಮಳಲ ಹುರಿಯನು ಹೊಸೆದು ಹಗ್ಗಮಾಡಬಹುದೆ...?' ಎಂದು,

ಪ್ರಭುವಿನ ಮುಂದೆ ನಿನ್ನಾಟವೇನೂ ಸಾಗದು ಎಂದು ಎಚ್ಚರಿಸುತ್ತಾನೆ. ಮಾತಿಗೆ ಮಾತು ಬೆಳೆದು ಇಬ್ಬರೂ ಸ್ಪರ್ಧೆಗೆ ಸಿದ್ಧರಾಗುತ್ತಾರೆ.

ಕೆಲದಿನ ಕಳೆದ ಮೇಲೆ ನಾರದ ಶಿವನ ಓಲಗಕ್ಕೆ ಬರುತ್ತಾನೆ. ಭೂಲೋಕದಲ್ಲಿ ನಡೆದ ಎಲ್ಲ ವಿದ್ಯಮಾನಗಳ ವರದಿ ಒಪ್ಪಿಸಲು ಶಿವನು ನಾರದನಿಗೆ ಅಪ್ಪಣೆ ಕೊಡಿಸುತ್ತಾನೆ. ಆಗ ನಾರದನು 'ಕಡೆಗಾಲ ಬಂತು ಧರ್ಮಕ್ಕೆ ದಯಾಸಾಗರಾ ನುಡಿಯಲಾರೆನು ದೇವ ಕಲಿಯ ಕೌಟಿಲವನು' ಎಂದು ಭೂಲೋಕದಲ್ಲಿ ನಡೆಯುತ್ತಿರುವ ಅಧರ್ಮ ಅನ್ಯಾಯಗಳನ್ನೆಲ್ಲ ಅರಹುತ್ತಾನೆ. ಆಗ ಶಿವನು ಪ್ರಭುವನ್ನು ಭೂಲೋಕಕ್ಕೆ ಹೋಗುವಂತೆ ಸೂಚಿಸುತ್ತಾನೆ. ಅಲ್ಲಿ ನಡೆಯುತ್ತಿರುವ ಅಧರ್ಮ, ಅನೀತಿ ತೊಡೆದು ಮಾಯೆಯನ್ನು ಗೆಲ್ಲಲು ಆಜ್ಞಾಪಿಸುತ್ತಾನೆ. ಆದರೆ ಪ್ರಭುವು ಶಿವನನ್ನಗಲಿ ಭೂಲೋಕಕ್ಕೆ ಹೋಗುವುದಕ್ಕೆ ಅನುಮಾನಿಸಿದಾಗ ಅವನಿಗೆ ಧೈರ್ಯತುಂಬಿ ಕಳಿಸುತ್ತಾನೆ.

ಬಳ್ಳಿಗಾವೆಯಲ್ಲಿ ಸುಜ್ಞಾನಿ ನಿರಹಂಕಾರರ ಹೊಟ್ಟೆಯಲ್ಲಿ ಪ್ರಭು ಜನ್ಮತಳೆಯುತ್ತಾನೆ. ಅವನು ಹುಟ್ಟಿದೊಡನೆ ಇಳೆಯ ತಾಮಸವಡಗಿ ಮಳೆ, ಬೆಳೆಅಧಿಕವಾಯ್ತಂತೆ. ಹೊಳೆ, ಹಳ್ಳ ಕಾಸಾರಗಳು ತಿಳಿಯಾದುವಂತೆ. ಇತ್ತ ಶಾಂಭವಿಯೂ ತನ್ನ ಮಾಯೆಯನ್ನು ಭೂಲೋಕದಲ್ಲಿ ಹುಟ್ಟುವಂತೆ ಮಾಡುವಳು. ಅವಳು ಹುಟ್ಟುತ್ತಲೇ ಯೋಗಿ ಜೋಗಿ ಸಿದ್ಧಸಾಧಕರ ಮನ ಚಂಚಲವಾದುವಂತೆ. ಮಮಕಾರ ಮೋಹಿನಿಯರು ಅವಳ ತಂದೆ ತಾಯಿಗಳು. ಕೆಲವರ್ಷಗಳಲ್ಲೇ ಸಕಲ ಕಲಾಪಾರಂಗತಳಾದ ಮಾಯೆ, ರತಿ, ಶಚಿ, ಭಾರತಿ ಇವರೆಲ್ಲರನ್ನೂ ಮೀರಿ ಚೆಲುವಿಕೆಯಿಂದ ಬೆಳೆದಳು. ಮಗಳು ಬೆಳೆದುದನ್ನು ಕಂಡು ಇವಳಿಗೆ ವರ ಎಂಥವನನ್ನು ಹುಡುಕಬೇಕೆಂದು ರಾಜಗುರುವನ್ನು ಕೇಳಿಕೊಂಡಾಗ 'ಮಧುಕೇಶ್ವರ ದೇವಾಲಯಕ್ಕೆ ನೃತ್ಯ ಸೇವೆ ಮಾಡಲು ಕಳಿಸು, ಆಗ ಆ ಮಧುಕೇಶ್ವರನೇ ಅವಳಿಗೆ ವರನನ್ನು ಹುಡುಕಿ ತಾನಾಗಿ ತಂದು ಕೊಡುತ್ತಾನೆ.' ಎಂದು ಉಪದೇಶಿಸುತ್ತಾನೆ.

ಪ್ರಭುವು ತನ್ನ ಅಗಲಿಕೆಯಿಂದ ದುಃಖಿಸುವ ತಂದೆ-ತಾಯಿಗಳನ್ನು, ಬಂಧು ಬಾಂಧವರನ್ನು, ಮಂತ್ರಿಗಳನ್ನು ಮಕುಟವರ್ಧನ ಮಾಂಡಲಿಕರನ್ನು ಸಂತೈಸಿ 'ಅಲ್ಲಿರ್ದಡಿಲ್ಲಿಹೆನು ಇಲ್ಲಿರ್ದಡಲ್ಲಿಹೆನು' ಎಂದು ಹೇಳಿ ಅಂತರ್ಧಾನನಾಗುತ್ತಾನೆ. ಬನವಾಸಿಗೆ ಬರುತ್ತಾನೆ. ಆಗ ಅವನಿಗೆ ೧೮ ವರ್ಷದ ಎಳೆ ತಾರುಣ್ಯ. ಅಲ್ಲಿ ಮಾಯೆ ನೃತ್ಯ ಮಾಡುತ್ತಿರುತ್ತಾಳೆ. ಇವನು ಮೃದಂಗ ಬಾರಿಸುತ್ತಾನೆ. ಅವನನ್ನು ಮಾಯೆ ನೋಡಿ ಮೋಹಗೊಳ್ಳುತ್ತಾಳೆ. ಅವನನ್ನು ಕರೆತರಲು ಸಕಳೆಯನ್ನು ನೇಮಿಸುತ್ತಾಳೆ. ಅವಳು ಅವನೊಂದಿಗೆ ಮಾತಿನಲ್ಲಿ ಚತುರತೆಯಿಂದ ಒಲಿಸಿ ಮಾಯೆಯೆಡೆಗೆ ಕರೆತರುತ್ತಾಳೆ. ಪ್ರಭುವನ್ನು ನೋಡಿ ಮಾಯೆ ಕಾಮಜ್ವರದಿಂದ ಮೂರ್ಛೆ ಹೋಗುತ್ತಾಳೆ. ತನ್ನ ಮನದ ಕಾಮನೆಯನ್ನು ಸಕಳೆಗೆ ಅರುಹಿ ತನ್ನೊಂದಿಗೆ ಅವನು ಕಾಮಿಸುವಂತೆ ಮಾಡೆಂದು ಬೇಡಿಕೊಳ್ಳುತ್ತಾಳೆ. ಸಕಳೆ ಎರಡನೆಯ ಸಲ ಅವರಿಬ್ಬರೂ ಪರಸ್ಪರ ಭೇಟಿಯಾಗುವಂತೆ ಮಾಡುತ್ತಾಳೆ. ಅಲ್ಲಮಪ್ರಭುವು

ಮಾಯೆಯ ಮೋಹದ ಬಲೆಗೆ ಮರುಳಾಗದೆ ಜಾರಿಕೊಳ್ಳುತ್ತಾನೆ. ಮತ್ತೊಮ್ಮೆ ಮಾಯೆ ತಡೆಯಲಾರದೆ ಅವನನ್ನು ಅಪ್ಪಿಕೊಳ್ಳಲು ಹೋಗುತ್ತಾಳೆ, ಪ್ರಭುವು ಅಲ್ಲಿರದೆ ಅವನ ಸ್ಥಳದಲ್ಲಿ ಸಕಳೆ ಇರುತ್ತಾಳೆ! ಆಗ 'ಏನು ಮಾಡಲಿ ನಾನು ಸಾಯ್ವೆನು' ಎನ್ನುತ್ತಾಳೆ ಮಾಯೆ. ಸಕಳೆ ಅವಳನ್ನು ಪರಿಪರಿಯಿಂದ ಸಂತೈಸುತ್ತಾಳೆ.

ಇತ್ತ ಶಾಂಭವಿಯು ವಿಮಳೆ ಎಂಬ ಇನ್ನೊಬ್ಬ ಉತ್ತಮ ರುದ್ರಕನ್ನಿಕೆಯನ್ನು ಮಾಯೆಗೆ ಸಹಾಯವಾಗಲಿ ಭೂಲೋಕಕ್ಕೆ ಕಳಿಸುತ್ತಾಳೆ. ವಿಮಳೆ ಬಂದು ಪ್ರಭುದೇವನೆದುರು ಮಾಯೆಯನ್ನು ತರುವಾಗ, ಅವಳನ್ನು ವಿರಹತಾಪದಲ್ಲಿ ಒರಗಿಸಿ ಕೊರಗಿಸಿ ಕೈಯಲ್ಲಿಯ ಮದ್ದಳೆ ಬಿಟ್ಟು ನಿರಂಜನನಾಗಿ ಬಿಡುತ್ತಾನೆ. ಅವನು ಮಾಯವಾದುದನ್ನು ಕಂಡು ವಿಮಳೆಯು ಮಾಯಾದೇವಿಗೆ 'ನಿನ್ನ ಪಂಥ ತಪ್ಪಿಹೋಯಿತು' ಎಂದು ಹೇಳುತ್ತಾಳೆ. ಆಗ ಪ್ರಭುವನ್ನು ಹುಡುಕಲು ಅರಣ್ಯದೆಡೆಗೆ ಸಕಳೆ, ವಿಮಳೆ, ಮಾಯೆ ಎಲ್ಲರೂ ನಡೆಯುತ್ತಾರೆ. ಅಲ್ಲಮನನ್ನು ಸುತ್ತುವರಿದು ಅವನನ್ನು ನಿಲ್ಲಿಸುತ್ತಾರೆ. ಮಾಯೆಗೂ, ಪ್ರಭುವಿಗೂ ಮಾತಿನ ಚಕಮಕಿ ಆಗುತ್ತದೆ. ಮಾಯೆಗೆ ಪ್ರಭು ಸಿಲುಕದೆ ಕೊನೆಗೆ ಮಾಯೆ ಸೋಲುತ್ತಾಳೆ. ಆಗ ಅವಳು ಗೌರಿಯ ಹತ್ತಿರ ಬಂದು ರೋಧಿಸುತ್ತ 'ಸೋತೆ'ನೆಂದು ಹೇಳುತ್ತಾಳೆ. ನಂದಿವಾಹನನು ನಸುನಗುತ್ತ ಗಿರಿಜೆಯ ಮುಖ ನೋಡಿ 'ದೇವಿಯ ಮುಖವ್ಯಾಕೆ ಕುಂದಿತು?' ಪಂಥವೇನಾಯ್ತು? ಎಂದು ಅಣಕಿಸುತ್ತಾನೆ. ಸಿಟ್ಟಿಗೆದ್ದ ಪಾರ್ವತಿ ಶಿವನನ್ನು ಮನಬಂದಂತೆ ಜರಿಯುತ್ತಾಳೆ. ಕೊನೆಗೆ ಶಿವನೇ ಅವಳನ್ನು ಸಮಾಧಾನಿಸುತ್ತಾನೆ. ಸರ್ವರ ಹೃದಯದಲ್ಲೂ ಪ್ರಭುವಿದ್ದಾನೆ. ಆ ಪ್ರಭುವೇ ನಾನು ಎಂಬುದಾಗಿ ಶಿವನು ಪಾರ್ವತಿಗೆ ನಿರೂಪಿಸಲು ಶಾಂಭವಿಯು ತನ್ನ ಹೃದಯವನ್ನೇ ಉಗುರುಗಳಿಂದ ಬಗಿದು ನೋಡುತ್ತಾಳೆ. ಅಲ್ಲಿ ಶಿವನೇ ಪ್ರಭುವಿನ ರೂಪದಲ್ಲಿ ರಾರಾಜಿಸುತ್ತಿರುವುದನ್ನು ಕಂಡು ಗದ ಗದ ನಡುಗಿ ಭೋರೆಂದು ಬೆಮರಿ ಪರವಶಳಾಗಿ ಶಿವನಂಕವನ್ನು ಬಿಟ್ಟು ಕೆಳಗೆ ಇಳಿದು ಬರುತ್ತಾಳೆ. ಪ್ರಭುವಿನ ಮಂತ್ರವನ್ನು ಸ್ಮರಿಸುತ್ತಾಳೆ. ಅನಂತರ 'ಆ ಮಾಯಾ ಕೋಳಾಹಳನನ್ನು ಕಾಣದೆ ಇರಲಾರೆ' ಎಂದು ಪರಿತಪಿಸುತ್ತಾಳೆ. ಇಷ್ಟು ಹೇಳಿ ಬಾಗೇವಾಡಿಯಲ್ಲಿ ಮಾದರಸ ಮಾದಾಂಬೆಯರ ಹೊಟ್ಟೆಯಲ್ಲಿ ಹುಟ್ಟಿ ಅಕ್ಕನಾಗಮ್ಮನೆಂಬ ಹೆಸರನ್ನು ಪಡೆಯುತ್ತಾಳೆ. ಇತ್ತ ಪರಮೇಶ್ವರನು ಮಾಯೆಯನ್ನು ಕರೆದು ಮರ್ತ್ಯಲೋಕಕ್ಕೆ ಹೋಗಿ, ಅಲ್ಲಿ ಉಡುತಡಿಯಲ್ಲಿ ಹುಟ್ಟಿ ಮಹಾದೇವಿಯಕ್ಕನಾಗಿ ಪ್ರಭುವಿನ ಕರುಣವನ್ನು ಪಡೆ ಎಂದು ಹೇಳಲಾಗಿ ಅವಳು ಹಾಗೆಯೆ ಮಾಡಿ ಪ್ರಭುವಿನಿಂದ ಮುಕ್ತಿಯನ್ನು ಪಡೆಯುತ್ತಾಳೆ.

**ಯಕ್ಷಗಾನ ವೈಶಿಷ್ಟ್ಯ :**

ಚಾಮರಸನ ಪ್ರಭುಲಿಂಗಲೀಲೆಯನ್ನು ಯಕ್ಷಗಾನವನ್ನಾಗಿ ಮಾರ್ಪಡಿಸುವಲ್ಲಿ ದುರದುಂಡೀಶ ಕವಿ ಸಂಪೂರ್ಣ ಯಶಸ್ವಿಯಾಗಿದ್ದಾನೆಂದು ಹೇಳಲೇಬೇಕು. ಮಾಯೆಯು ಪ್ರಭುವಿನಿಂದ ಸೋತ ಘಟನೆಯೆ ಇಲ್ಲಿ ಮುಖ್ಯವಾಗಿದ್ದರೂ ಕವಿ ಕಥೆಯಲ್ಲಿ ಸ್ವಲ್ಪ ಬದಲಾವಣೆಯನ್ನು ಮಾಡಿಕೊಂಡಿದ್ದಾನೆ.

'ಮಾಯೆ'ಯ ಪಾತ್ರ ಪಾರ್ವತಿಯ ತಾಮಸ ಕಳೆಯ ಪ್ರತೀಕವಾಗಿದ್ದರೂ ಅದೊಂದು ಪ್ರತ್ಯೇಕ ಪಾತ್ರವೆಂದೇ ಕವಿ ಕಲ್ಪಿಸಿದ್ದಾನೆ. ಅಂತೆಯೆ ಕೊನೆಗೆ ಪಾರ್ವತಿ ಅಕ್ಕನಾಗಮ್ಮನಾಗಿ, ಮಾಯೆ ಅಕ್ಕಮಹಾದೇವಿಯಾಗಿ ಬೇರೆ ಬೇರೆ ಸ್ಥಳಗಳಲ್ಲಿ ಜನ್ಮತಳೆದುದನ್ನು ಕವಿ ಸೂಚಿಸಿದ್ದಾನೆ. ಈ ಬಗೆಯ ವಿಚಾರ ಎಳಂದೂರು ಹರೀಶ್ವರನ 'ಪ್ರಭುದೇವರ ಪುರಾಣ' (೧೬೦೬)ದಲ್ಲಿ ಬಂದಿದೆ. ಬಹುಶಃ ದುರದುಂಡೀಶ ಕವಿ ಆ ಪುರಾಣವನ್ನು ಓದಿರಬಹುದಾಗಿದೆ. ಯಕ್ಷಗಾನವಾದ್ದರಿಂದ ನಾರದ ಮಹರ್ಷಿಯ ಆಗಮನ ಇಲ್ಲಿ ಸಾಂಪ್ರದಾಯಕವಾಗಿ ನಾರದನು ಪರಶಿವನ ಆಸ್ಥಾನಕ್ಕೆ ಬಂದು ಭೂಲೋಕದ ವಿವರಗಳನ್ನು ಸ್ವಾರಸ್ಯವಾಗಿ ನಿರೂಪಿಸಿದ್ದಾನೆ. ಯಕ್ಷಗಾನದ ಕೇಂದ್ರ ಸನ್ನಿವೇಶ ಮಾಯಾ ಕೋಲಾಹಲವಾದರೂ ಇಲ್ಲಿ ನೇರವಾಗಿ ಮಾಯೆಗೂ ಅಲ್ಲಮನಿಗೂ ವಾಗ್ವಾದ ಸೆಣಸಾಟ ಆಗುವುದೇ ಇಲ್ಲ. ವಿಮಳೆ–ಸಕಳೆಯರೇ ಮಾಯೆಯ ಪರವಾಗಿ ಅಲ್ಲಮನೊಡನೆ ವಾದಿಸುವರು. ಪ್ರಯತ್ನಪಟ್ಟು ಅಲ್ಲಮ–ಮಾಯೆಯರನ್ನು ಒಂದುಗೂಡಿಸಲು ಯತ್ನಿಸುವರು. ಪಾರ್ವತಿ ಪರಮೇಶ್ವರರ ಮಧ್ಯೆ ಮಾತ್ರ ಸ್ವಾರಸ್ಯಕರವಾದ ವಾಗ್ವಾದ ಎದ್ದು ಕಾಣುತ್ತದೆ.

ಭೋಗ, ಭಾಮಿನಿ, ವಾರ್ಧಕ ಷಟ್ಪದಿಗಳು, ಚೂಲಿಕಾ, ಆರ್ಯ ಮುಂತಾದ ವೃತ್ತಗಳು, ಲಾವಣಿ ಮುಂತಾದ ಪದಗಳು, ಸರ್ವಜ್ಞನ ವಚನಗಳು, ಸಂಸ್ಕೃತ ಶ್ಲೋಕಗಳು, ಕಂದಪದ್ಯಗಳು, ಸೋಮೇಶ್ವರ ಶತಕದ ವೃತ್ತಗಳು, ಗದ್ಯ, ಮಾತುಗಳು ಹೀಗೆ ವೈವಿಧ್ಯಪೂರ್ಣ ಚಂಪೂ ಕಾವ್ಯದಂತೆ ಪ್ರಸ್ತುತ ಯಕ್ಷಗಾನ ಶೋಭಿಸುತ್ತಿದೆ. ಇಲ್ಲಿಯ ಹಾಡುಗಳಿಗೆ ಕವಿ ಸುಪ್ರಸಿದ್ಧ ಹಾಡಿನ ಧಾಟಿಯನ್ನೇ ಸೂಚಿಸಿದ್ದಾನೆ. ಕೆಲವೆಡೆ ಹಾಡುಗಳ ರಾಗ ತಾಳಗಳನ್ನೂ ಸೂಚಿಸಿದ್ದಾನೆ. ದುರದುಂಡೀಶ ಕವಿಯ ಇನ್ನೊಂದು ಯಕ್ಷಗಾನ 'ಶ್ರೀಕೃಷ್ಣಹರಣ ಯಕ್ಷಗಾನ'ದ ಒಂದು ಪ್ರತಿಯಲ್ಲಿ ಹಾಡುಗಳಿಗೆ ಸ್ವರಸಂಕೇತಗಳನ್ನೂ ನೀಡಿದ್ದಾನೆ.

"ಕೆ.ಜಿ.ಕುಂದಣಗಾರರು ನೇಮಣ್ಣ ಕವಿಯ 'ಜ್ಞಾನಭಾಸ್ಕರ ಚರಿತೆ' ಕೃತಿಯನ್ನು ಆ.ನೇ. ಉಪಾಧ್ಯೆ ಅವರೊಡನೆ ಸೇರಿಕೊಂಡು ಜೈನ ಸಾಂಗತ್ಯ ಕಾವ್ಯವನ್ನು ಸಂಪಾದಿಸಿ, ಪರಿಷ್ಕರಣ ಮಾಡಿದ ವಿಷಯ ತಿಳಿಯುತ್ತದೆ. 'ನೇಮಣ್ಣಕವಿಯ ಜ್ಞಾನಭಾಸ್ಕರ ಚರಿತೆ' (ಸು. ೧೫೫೯) ಇದು ಸಹಿತ ಆ.ನೇ.ಉಪಾಧ್ಯೆ ಅವರೊಡನೆ ಸೇರಿ ಸಂಪಾದಿಸಿದ ಕೃತಿ. ಇದು ಜೈನಸಾಂಗತ್ಯಕಾವ್ಯ. ಈ ಕೃತಿಯು ಪರಮಾತ್ಮನ ಅನುಗ್ರಹದಿಂದ ಮೋಕ್ಷ ಹೊಂದುವ ಬಗೆಯನ್ನು ನಿರೂಪಿಸುವ ಕತೆಯನ್ನೊಳಗೊಂಡಿದೆ. ಒಟ್ಟು ೧೩೩ ಪದ್ಯಗಳಲ್ಲಿ ಕಾವ್ಯ ಹೆಣೆಯಲ್ಪಟ್ಟಿದೆ. ಕುಂದಣಗಾರರು ಮೂರು ಹಸ್ತಪ್ರತಿಗಳ ನೆರವಿನಿಂದ ಈ ಕಾವ್ಯವನ್ನು ಪರಿಷ್ಕರಿಸಿದ್ದಾರೆ. ಆದರೆ ಸಂಪಾದಕರು ಗ್ರಂಥಸಂಪಾದನೆಯ ವಿಧಾನದ ವಿವರವಾಗಲಿ ಹಸ್ತಪ್ರತಿ ಪೀಳಿಗೆಯ ವಿವರವಾಗಲಿ ಪ್ರಸ್ತಾಪಿಸಿಲ್ಲ. ಸಂಪಾದಕರು ತಮ್ಮ ಸಂಪಾದಕೀಯ ಮಾತುಗಳಲ್ಲಿ ತಮಗೆ ಯಾರಿಂದ ಹಸ್ತಪ್ರತಿಗಳು ದೊರೆಯಿತೆಂಬುದನ್ನು ಪ್ರಸ್ತಾಪಿಸಿದ್ದಾರೆ. ಕೃತಿಯುದ್ದಕ್ಕೂ ಶೋಧಿತವೂ ಸಂಪಾದಿತವೂ ಆದ ಶುದ್ಧಪಾಠವನ್ನು ಕೊಟ್ಟಿದೆ."[೮] ಈ ಜ್ಞಾನಭಾಸ್ಕರ ಚರಿತ್ರೆಯನ್ನೇ ಭುಜೇಂದ್ರ ಮಹಿಷವಾಡಿ ಅವರು

ಮತ್ತೊಮ್ಮೆ ಪರಿಷ್ಕರಿಸಿ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಪೀಠದ ಜೈನವಿಭಾಗದಿಂದ ಪ್ರಕಟಿಸಿದರು.

ಜೈನ–ವೈದಿಕ ರಾಮಾಯಣಗಳಿಗೆ ಪೂರ್ವದಲ್ಲಿ ಜಾನಪದ ರಾಮಾಯಣದ ಕಥೆ ಪ್ರಚಲಿತವಿದ್ದುದನ್ನು ಗುರುತಿಸುವ ಕಾರ್ಯವನ್ನು ಮಾಡುವುದರ ಜೊತೆಗೆ ಚಾರುದತ್ತನ ಚರಿತ್ರೆ ಜೈನ ಮಹಾಭಾರತದಲ್ಲಿ ಕಂಡುಬಂದಿರುವ ಈ ಚಾರಿತ್ರಿಕ ವಿಚಾರವನ್ನು ಕಾಣುತ್ತೇವೆ. "ಪ್ರಸ್ತುತ ಚಾರುದತ್ತ ಚರಿತೆಯನ್ನು ಮಂಗರಸನ ನೇಮಿಜಿನೇಶ ಸಂಗತಿಯ ಹತ್ತನೆಯ ಸಂಧಿಯಿಂದ ಆಯ್ದುಕೊಂಡು ಸಂಪಾದಿಸಿಕೊಟ್ಟಿದ್ದಾರೆ. ಒಟ್ಟು ೨೪೦ ಪದ್ಯಗಳನ್ನಿಟ್ಟುಕೊಂಡು ಸಂಗ್ರಹಿಸಿ, ಕಥಾಸಾರದಲ್ಲಿ ವೀರಪ್ರಭುಲಯಕ್ಷರು ಚಾರುದತ್ತನನ್ನು ಪರೀಕ್ಷೆ ಮಾಡಿದ ಭಾಗವನ್ನು ಹಾಡುಗಳನ್ನು ತರಬೇತು ಮಾಡುವ ವಿಧಾನವನ್ನು ಸವಿವರವಾಗಿ ವಿಶ್ಲೇಷಿಸಿದ್ದಾರೆ. ೫೨ ಪುಟಗಳಲ್ಲಿ ಬಂದ ಚಾರುದತ್ತ ಚರಿತ್ರೆ ಕಾವ್ಯಕ್ಕೆ ೩೮ ಪುಟಗಳ ಸುದೀರ್ಘ ಪ್ರಸ್ತಾವನೆ ೩೮ ಪುಟಗಳ ಸರಳಾನುವಾದವು ಸಾಮಾನ್ಯ ಓದುಗನಿಗೆ ಪ್ರಯೋಜನೆಯಾಗಿದೆ."[೯]

ಹಾಗೆಯೇ ಚಾರುದತ್ತನ ಚರಿತೆ ಜೈನ ಮಹಾಭಾರತದಲ್ಲಿ ಕಂಡು ಬಂದಿರುವುದನ್ನು ತೌಲನಿಕ ಅಧ್ಯಯನದ ಮೂಲಕವೇ ಎತ್ತಿತೋರಿಸಿದ್ದು ಕಂಡುಬಂದಿದೆ. ಇದರೊಂದಿಗೆ ಶೂದ್ರಕನ ಮೃಚ್ಛಕಟಿಕ ನಾಟಕಕ್ಕೆ ಭಾಸನ ನಾಟಕವೇ ಮೂಲ ಆಕರವೆಂದು ಆ ಭಾಸನ ಚಾರುದತ್ತ ಚರಿತೆಗೆ ಗುಣಾಢ್ಯನ ಬೃಹತ್ಕಥೆ ಮೂಲವೆಂಬುದನ್ನು ಸಂಶೋಧನೆಯ ಮೂಲಕ ಮಹಿಷವಾಡಿಯವರು ಹೊಸ ಬೆಳಕು ಚೆಲ್ಲಿದ್ದಾರೆ. ಭುಜೇಂದ್ರ ಮಹಿಷವಾಡಿ ಅವರು ೧೧ ಪ್ರಾಚೀನ ಕೃತಿಗಳನ್ನು ಸಂಪಾದಿಸಿದ್ದಾರೆ. ೧. ಜ್ಞಾನಭಾಸ್ಕರ ಚರಿತೆ (ನೇಮಿವ್ರತಿ), ೨. ಅನಂತನಾಥ ಪುರಾಣಂ (ಜನ್ನ), ೩. ಸಮ್ಯಕ್ತ್ವ ಕೌಮುದಿ (ಮಂಗರಸ), ೪. ಪ್ರಶ್ನೋತ್ತರ ರತ್ನಮಾಲಿಕೆ (ನೃಪತುಂಗ), ೫. ಸೀತಾಪಹರಣಂ (ನಾಗಚಂದ್ರ), ೬. ಪಂಚಪರಮೇಷ್ಠಿ ವ್ಯಾಖ್ಯಾನ (ಚಂದ್ರಸಾಗರವರ್ಣಿ) ೭. ನೇಮಿಜಿನೇಶ ಸಂಗತಿ (ಮಂಗರಸ), ೮. ಚಾರುದತ್ತ ಚರಿತೆ (ಮಂಗರಸ), ೯. ಧರ್ಮಾಮೃತ (ನಯಸೇನ), ೧೦. ಷೋಡಶ ಭಾವನಾ ಚರಿತೆ (ಶಾಂತಿಕೀರ್ತಿ), ೧೧. ಸುವಿಚಾರ ಚರಿತೆ (ನೇಮಿವ್ರತಿ).

"ಜೈನಸಾಹಿತ್ಯ ಕೃತಿಗಳ ಸಂಪಾದನೆಯಲ್ಲಿ ಜೈನ ಸಿದ್ಧಾಂತದ ಬಗೆಗಿನ ಮಹಿಷವಾಡಿಯವರ ಖಚಿತವಾದ ನಿಲುವು, ಸ್ಪಷ್ಟವಾಗಿ ಎಲ್ಲೆಡೆ ವ್ಯಕ್ತವಾಗಿದೆ. ಸಿದ್ಧಾಂತದ ಕ್ಲಿಷ್ಟ ಸಮಸ್ಯೆಗಳನ್ನು ತಿಳಿಯಾಗಿ ಸ್ಪಷ್ಟವಾಗಿ ತಿಳಿಸುವಲ್ಲಿ ಮಹಿಷವಾಡಿಯವರು ಅನುಸರಿಸಿದ ಮಾರ್ಗ ಮಾದರಿಯಾಗಿದೆ. ಸಂಸ್ಕೃತ ಹಾಗೂ ಹಳಗನ್ನಡ ಕೃತಿಗಳ ಸಂಪಾದನೆಯ ಸಂದರ್ಭದಲ್ಲಿ ಆಯಾ ಪದ್ಯಗಳ ಕನ್ನಡ ಭಾವಾನುವಾದವನ್ನು ಸಮರ್ಥವಾಗಿ ನೀಡಿದ್ದಾರೆ. ಹೀಗಾಗಿಯೇ ಸಿದ್ಧಾಂತದ ಬಗೆಗಿನ ಖಚಿತವಾದಗಳು ಸ್ವತಂತ್ರ ರಚನೆಯಂತೆ ಪರಿಣಾಮಕಾರಿಯಾಗಲು ಸಾಧ್ಯವಾಗಿದೆ."[೧೦]

ಇನ್ನೊಬ್ಬ ಮಹತ್ವದ ಕವಿ ಶಾಂತಿಕೀರ್ತಿ ಷೋಡಶಭಾವನಾ ಚರಿತೆ ಬರೆಯುವುದರೊಂದಿಗೆ ೧೮ ಕೃತಿಗಳನ್ನು ರಚಿಸಿದ ಉಲ್ಲೇಖ ದೊರೆಯುತ್ತದೆ. ಕವಿ ಶಾಂತಿಕೀರ್ತಿಯವರಿಂದ ರಚಿತವಾದ

ಪ್ರಸ್ತುತ ಕಾವ್ಯದ ಕವಿ, ಕೃತಿ–ಕಾಲದ ಬಗ್ಗೆ ಇದ್ದ ಸಂಶಯವನ್ನು ನಿವಾರಿಸಿ ಶಾಂತಿಕೀರ್ತಿಮುನಿ ಹಾಗೂ ಶಾಂತಿಕೀರ್ತಿ ಎಂಬವರು ಬೇರೆ ಬೇರೆಯಲ್ಲ ಒಬ್ಬನೇ ಎಂಬುದನ್ನು ಸಹ ನಿರ್ಧರಿಸಿದ ಮಹಿಷವಾಡಿಯವರು ಆತನ ಒಟ್ಟು ೧೮ ಕೃತಿಗಳನ್ನು ರಚಿಸಿದ್ದುದನ್ನು ತಿಳಿಸುವುದರೊಂದಿಗೆ ಅವುಗಳ ಪಟ್ಟಿಯನ್ನು ಸಹ ನೀಡಿದ್ದು ಓದುಗರಿಗೆ ಸಹಾಯಕಾರಿಯಾಗಿದೆ. ಐದು ಸಂಧಿಗಳ ೫೦೦ ಪದ್ಯಗಳಿಂದ ಕೂಡಿದ ಪ್ರಸ್ತುತ ಕಾವ್ಯಕ್ಕೆ ೫೦ ಪುಟಗಳ ಪ್ರಸ್ತಾಪವನೆ ಬರೆದದ್ದು. ಆರ್. ನರಸಿಂಹಾಚಾರ್ಯರು ವ್ಯಕ್ತಪಡಿಸಿದ 'ಶಾಂತಿನಾಥ ಚರಿತೆ'ಯ ಕರ್ತೃ ಶಾಂತಿಕೀರ್ತಿ ಮುನಿಯ ಕಾಲ ಕ್ರಿ.ಶ. ೧೫೮೯ ಎಂದು ಮುಂದೆ ೧೭೫೫ರಲ್ಲಿದ್ದ ಶಾಂತಿಕೀರ್ತಿ ಎಂಬುವರು ದೇವಸೇನನ "ಆರಾಧನಾ ಸಾರಕ್ಕೆ ಟೀಕೆ ಬರೆದರೆಂಬ ಸಂಶಯವನ್ನು ಹೋಗಲಾಡಿಸಿ ಅವರಿಬ್ಬರೂ ಒಬ್ಬರೇ ಎಂದು ಸಮರ್ಥಿಸಿದ್ದಾರೆ. ಅದಲ್ಲದೇ ಮುನಿಧರ್ಮವನು ಅನುಸರಿಸಿ ಸದಾಸಂಚಾರದಲ್ಲಿಯೇ ಕಾಲ ಕಳೆಯುತ್ತಿದ್ದ ಶಾಂತಿಕೀರ್ತಿ 'ಶಾಂತಿನಾಥ ಚರಿತೆ'ಯನ್ನು ತುಳುರಾಜ್ಯದ ವೇಣುಪುರ (ಮೂಡಬಿದಿರೆ)ದಲ್ಲಿ ಷೋಡಶಭಾವನಾ ಚರಿತೆಯನ್ನು ಕುಂತಳ ದೇಶದ ಗೋಕಾವಿ ನಗರದಲ್ಲಿ ಬರದನೆಂದು ಸಾಕ್ಷಾಧಾರಗಳಿಂದ ಸ್ಪಷ್ಟಪಡಿಸಿದ್ದು ಅವರ ಪರಿಶ್ರಮಕ್ಕೂ ವಿದ್ವತ್ತಿಗೂ ಗೌರವವನ್ನು ತಂದಿದೆ."[೧೧]

ಕನ್ನಡ ಸಾಹಿತ್ಯ ಸಾಂಸ್ಕೃತಿಕ ವಿದ್ವತ್‌ಲೋಕಕ್ಕೆ ಅಪಾರ ಕೊಡುಗೆಯನ್ನು ನೀಡಿದ ಪ್ರಾಚೀನ ಕವಿಗಳಲ್ಲಿ ಸವದತ್ತಿ ತಾಲೂಕಿನ ಹೂಲಿ ಗ್ರಾಮದ ಸಿದ್ಧನಂಜೇಶನು ಒಬ್ಬ. ಸು. ೧೬೫೦ರಲ್ಲಿ ಬಾಳಿಬದುಕಿದವನು. ಸಿದ್ಧನಂಜೇಶ ೧೬ನೆಯ ಶತಮಾನದ ಉತ್ತರಾರ್ಧದಲ್ಲಿದ್ದನೆಂದು ಹೇಳಬಹುದು. ಗುರುರಾಜಚಾರಿತ್ರವೇ ಸಿದ್ಧನಂಜೇಶನ ಕೊನೆಯ ಕೃತಿಯೆಂದಿಟ್ಟುಕೊಂಡರೆ ಆತನಿಂದ ರಚಿತವಾದ ಗ್ರಂಥಗಳು ನಾಲ್ಕು ಎಂದು ಹೇಳಬಹುದು.

೧. ರಾಘವಾಂಕಚಾರಿತ್ರ.

೨. ತೋಂಟದ ಸಿದ್ಧದೇಶಿಕನ ಭಾವರತ್ನಾಭರಣ

೩. ಬಸವಶತಕ

೪. ಗುರುರಾಜಚಾರಿತ್ರ

ಗುರುರಾಜ ಚಾರಿತ್ರ ಕೃತಿಯನ್ನು ಸಂಪಾದಿಸಿದ ಸಂ. ಶಿ. ಭೂಸನೂರಮಠ ಅವರು ಇವನ ಕೃತಿಗಳ ಕುರಿತು ಹೀಗೆ ಹೇಳುತ್ತಾರೆ. ಇವುಗಳಲ್ಲಿ ಉಪಲಬ್ಧವಿರುವ ಗ್ರಂಥಗಳೆರಡೇ ೧. ರಾಘವಾಂಕ ಚಾರಿತ್ರ, ೨. ಗುರುರಾಜ ಚಾರಿತ್ರ. ತೋಂಟದ ಸಿದ್ಧದೇಶಿಕನ ಭಾವರತ್ನಾಭರಣ ಮತ್ತು ಬಸವಶತಕಗಳು ನಮಗಿನ್ನೂ ದೊರೆತಿಲ್ಲ. ಇದರಲ್ಲಿ ಭಾವರತ್ನಾಭರಣ ಚಂಪೂ ರೂಪವಾಗಿರಬಹುದೆಂದು ತೋರುತ್ತದೆ. ಏಕೆಂದರೆ ಕವಿ ವಸ್ತುಕ ವರ್ಣಕವಾಗಿ ತನ್ನ ಗ್ರಂಥಗಳನ್ನು ಬರೆದಂತೆ ಗುರುರಾಜ ಚಾರಿತ್ರದಲ್ಲಿ ಹೇಳಿಕೊಂಡಿದ್ದಾನೆ. ಇನ್ನು ಬಸವಶತಕ ಕನ್ನಡ ಸಾಹಿತ್ಯದಲ್ಲಿ

ದೊರೆವ ಇನ್ನುಳಿದ ಶತಕಗಳಂತೆ ಆವುದೊಂದು 'ಖ್ಯಾತ ಕರ್ನಾಟಕ' ವೃತ್ತರೂಪವಾಗಿರಬಹುದು. ನಮಗೀಗ ಉಪಲಬ್ಧವಿರುವ ರಾಘವಾಂಕ ಚಾರಿತ್ರ ಮತ್ತು ಗುರುರಾಜ ಚಾರಿತ್ರಗಳೇ ವರ್ಣಕ ಗ್ರಂಥಗಳು. ಸಿದ್ಧನಂಜೇಶನ ಆದ್ಯಕಾವ್ಯವಾಗಿರಬಹುದಾದ ರಾಘವಾಂಕ ಚಾರಿತ್ರದಲ್ಲಿ ಕವಿ ೧೨ನೆಯ ಶತಮಾನದಲ್ಲಿದ್ದ ಹರಿಶ್ಚಂದ್ರ ಕಾವ್ಯ ಮೊದಲಾದ ಗ್ರಂಥಕರ್ತೃವಾದ ರಾಘವಾಂಕನ ಜೀವನ ಚರಿತೆಯನ್ನು 'ಭಾವಜ್ಞ ಸತ್ಕವಿಗಳಹುದೆ'ನ್ನುವಂತೆ ಹೇಳಿದ್ದಾನೆ. ಅಲ್ಲಿ ಚಿತ್ರಿತವಾದ ರಾಘವಾಂಕನ ಕತೆಯನ್ನು ಸಂಗ್ರಹವಾಗಿ ಹೀಗೆ ಹೇಳಬಹುದು.

"ಕುಂತಳ ದೇಶದಲ್ಲಿ ಹರಿವ ತುಂಗಭದ್ರೆಯ ತೀರದಲ್ಲಿರುವ ಪಂಪಾನಗರ. ಅರಸು ದೇವರಾಜ. ಅಲ್ಲಿ ಮಹಾದೇವಭಟ್ಟ ರುದ್ರಾಣಿಯರ ಪುಣ್ಯಗರ್ಭದಲ್ಲಿ ರಾಘವಾಂಕ ಹುಟ್ಟಿದ. ಸೋದರಮಾವ ಮತ್ತು ವಂಶಾಚಾರ್ಯನಾದ ಹಂಪೆಯ ಹರೀಶ್ವರನಿಂದ ದೀಕ್ಷೆಪಡೆದು ವಿದ್ಯಕಲಿತು 'ರಾಘವನೆ ಬುಧವರನೆನಿಸಿದನಿಳೆಯೊಳು.' ಪಂಪಾವಿರೂಪಾಕ್ಷನಪ್ಪಣೆಯಂತೆ ದೇವರಾಜನ ಸಭೆಗೆ ಹೋಗಿ ಪಂಡಿತರು ತಲೆದೂಗುವಂತೆ ಕವಿಕುಲತಿಲಕನಾದ ರಾಘವಾಂಕನು ಹರಿಶ್ಚಂದ್ರ ಕಾವ್ಯವನ್ನು ಹೇಳಿದ. ತನ್ನ ಕಾವ್ಯವನ್ನು ಗುರು ಕೇಳದಿರಲು ಇದಿರು ವಾದಿಸಿ ಹಲ್ಲು ಕಳೆದುಕೊಂಡು ಮತ್ತೆ ಗುರುವಿಂದ ಹಲ್ಲುಪಡೆದುಕೊಂಡ. ಹರಿದೇವ ರಾಘವಾಂಕನಿಗೆ ಅಷ್ಟಾವರಣದ ಮಹಿಮೆಯನ್ನು ವಿಸ್ತಾರವಾಗಿ ಸಪ್ರಮಾಣವಾಗಿ ಹೇಳಿ ಅವನ್ನು ತಿಳಿದು ಆಚರಿಸಿ ಮುಕ್ತಿಪಡೆದ ಶಿವಭಕ್ತರ ಮಹಾಕಥೆ ಹೇಳಿದ. ಗುರುನಿರೂಪದಿಂದ ರಾಘವಾಂಕ ಹರಿಶ್ಚಂದ್ರ ಕಾವ್ಯವನ್ನು ಅತಿಗಳೆದು ಸೋಮನಾಥ ಕಾವ್ಯವನ್ನು ರಚಿಸಿದ ಮತ್ತು ಶರಭಚಾರಿತ್ರವನ್ನು ಹೇಳಿದ. ಕುಮಾರವ್ಯಾಸನ ಗರ್ವಮುರಿದು ಆತನಿಗೆ ಹರಿಹರದೇವನ ಮಹತ್ವವನ್ನು ಹೇಳಿದ. ರಾಘವಾಂಕ ಭೀಮಬುಧವರೆಗೆ ವಿದ್ಯೆ ಕಲಿಸಿದ. ತಾನು ಹೇಳಿದ ಸಿದ್ಧರಾಮ ಚಾರಿತ್ರವನ್ನು ಕೆರೆಯ ಪದ್ಮರಸ ನಿರಸನ ಮಾಡಿದನೆಂದು ಹೊಯ್ಸಳ ನಗರಕ್ಕೆ ಹೋಗಿ ಪದ್ಮರಸನ ಮಹಿಮೆಗಂಡು ಮದವುಡುಗಿ ಹಂಪೆಗೆ ಮರಳಿ ಬಂದು ತನ್ನ ಗುರು ಹರಿದೇವನಪ್ಪಣೆಯಂತೆ 'ಭಕ್ತರ ಭೃತ್ಯನಾಗಿ ಪಂಪಾಧಿಪತಿ'ಯ ಭಜಿಸುತ್ತಿದ್ದ. ಓರುಗಲ್ಲಿನ ರಾಜನಾದ ರುದ್ರಪ್ರತಾಪನ ಸಭೆಯಲ್ಲಿ ಏಕ-ದ್ವಿ-ತ್ರಿಸಂಧಿಗ್ರಾಹಿಗಳೆಂಬ ಕುಕವಿಗಳಿರುವುದನ್ನು ತಿಳಿದು ಅಲ್ಲಿಗೆ ಹೋಗಿ ವೀರೇಶನಾಲಯದ ಹಿಂದೆ ಕುಳಿತು ಮೀಸಲುಗವಿತೆಯೆಂದೆನಿಸುವ ವೀರೇಶಚರಿತೆಯನ್ನು ರಚಿಸಿ ಏಕಾದಿ ಸಂಧಿಗ್ರಾಹಿಗಳನ್ನು ಸೋಲಿಸಿ ರುದ್ರಪ್ರತಾಪನಿಂದ ಪೂಜೆವಡೆದು ಹಂಪೆಗೆ ಮರಳಿ ಬಂದು ಕೈಲಾಸಕ್ಕೆ ಬಾರೆಂದು ಶಿವ ಕರೆದರೊಲ್ಲದೆ ಗುರು ಹರಿದೇವನಪ್ಪಣೆಯಂತೆ ರಾಘವಾಂಕ ಬೇಲೂರಲ್ಲಿ ಶಿವಸಮಾಧಿ ಹೊಂದಿದ."[೨]

ಸಂ.ಶಿ.ಭೂಸನೂರಮಠ ಅವರು ಹೇಳಿದಂತೆ ತೋಂಟದ ಸಿದ್ಧೇಶ್ವರ, ಭಾವರತ್ನಾಭರಣ ಮತ್ತು ಬಸವ ಶತಕ ಹಸ್ತಪ್ರತಿಗಳು ವಿದ್ವಾಂಸರ ಕಣ್ಣುತಪ್ಪಿಸಿ ಅಲೆದಾಡುತ್ತಿದ್ದವು. ಸಿದ್ಧನಂಜೇಶ ಬೆಳಗಾವಿ ಜಿಲ್ಲೆಯ ಹೂಲಿ ಗ್ರಾಮದವನು. ಆದರೆ ಇತನ ಭಾವರತ್ನಾಭರಣ ಕೃತಿಯ ಒಂದೇ ಒಂದು ಹಸ್ತಪ್ರತಿ ದೊರೆತದ್ದು ಕಲಬುರ್ಗಿ ಜಿಲ್ಲೆಯಲ್ಲಿ ಎಡ್ರಾಮಿ ಗ್ರಾಮದಲ್ಲಿ ಎಂಬುದು ಕೌತುಕದ

ಸಂಗತಿ. ಬೆಳಗಾವಿ ಜಿಲ್ಲೆ ಹೂಲಿ ಪಂಚಾಚಾರ್ಯ ಸಂಪ್ರದಾಯಕ್ಕೆ ಸೇರಿದ ಗುರುಪೀಠದ ಅಧಿಕಾರಿಯಾಗಿದ್ದ ಸಿದ್ಧನಂಜೇಶ ವಿರಕ್ತವರ್ಗದ ಯುಗಪುರುಷ ತೋಂಟದ ಸಿದ್ಧಲಿಂಗೇಶ್ವರರನ್ನು 'ತೋಂಟದ ಸಿದ್ಧೇಶ್ವರ ಭಾವರತ್ನಾಭರಣ' ಕೃತಿಯಲ್ಲಿ ಸ್ತುತಿಸಿದ್ದು ವಿಶೇಷವೆನಿಸಿದೆ. ಆ ಕಾಲದಲ್ಲಿ ಗುರುವರ್ಗ ಮತ್ತು ವಿರಕ್ತರಲ್ಲಿ ಇದ್ದ ಅನ್ಯೋನ್ಯತೆಯನ್ನು ಸಾಮರಸ್ಯತೆಯನ್ನೂ ಈ ಕೃತಿ ತಿಳಿಸಿಕೊಡುತ್ತದೆ.

ತೋಂಟದ ಸಿದ್ಧಲಿಂಗೇಶ್ವರರ ಪವಾಡಗಳನ್ನು, ಮಹಿಮೆಗಳನ್ನು ಸಾರುವ ಸ್ತುತಿಪರ ಪದ್ಯಗಳನ್ನು ಒಳಗೊಂಡಿರುವ ಪ್ರಸ್ತುತ ಕೃತಿಗೆ ಆಕರವಾಗಿದ್ದು ವಿರಕ್ತ ತೋಂಟದಾರ್ಯನ 'ಸಿದ್ಧೇಶ್ವರ ಪುರಾಣ'. ಪ್ರಸ್ತುತ ಕೃತಿ ಕೆಲವು ಹೊಸ ಸಂಗತಿಗಳನ್ನು ಮೊದಲ ಬಾರಿಗೆ ತಿಳಿಸುವುದನ್ನು ಕಲಬುರ್ಗಿ ಅವರು ಗುರುತಿಸಿದ್ದಾರೆ. ತೋಂಟದ ಸಿದ್ಧಲಿಂಗ ಯತಿಗಳ ಕಾಲ ನಿರ್ಣಯಕ್ಕೆ ಒಂದು ಮಹತ್ವದ ಸುಳಿವನ್ನು ಈ ಕೃತಿ ನೀಡುತ್ತದೆ. ಅಲ್ಲದೆ ಕರಸ್ಥಲದ ನಾಗಿದೇವನಿಗೆ ಹಂಪೆಯ ವಿರೂಪಾಕ್ಷನು ಹರಿಹರಕೃತ 'ಬಸವರಾಜ ದೇವರ ರಗಳೆ'ಯ ಭಿಕ್ಷೆಯನ್ನು ನೀಡಿದನೆಂಬ ಸಂಗತಿ ಪ್ರಥಮ ಸಲ ಬೆಳಕಿಗೆ ಬಂದಿದೆ.

ಕೃತಿ ಕುರಿತು ಕಲಬುರ್ಗಿ ಅವರು ಹೇಳುವ ಮಾತುಗಳು ಹೀಗಿವೆ : "ಅಲ್ಲಲ್ಲಿ ಸುಂದರವಾದ ಕಾವ್ಯಾಂಶವಿದ್ದರೂ ಕವಿತ್ವದ ದೃಷ್ಟಿಯಿಂದ ಇದು ಮಧ್ಯಮ ವರ್ಗದ ಕೃತಿಯೆಂದೇ ಹೇಳಬೇಕು. ಆದರೆ ಈ ಕವಿತ್ವದ ಹಿಂದಿರುವ ಭಕ್ತಿಭಾವ ಮಾತ್ರ ಅನನ್ಯವಾದುದು. ಗುರುವರ್ಗದ ಒಬ್ಬ ಶಿವಯೋಗಿ ವಿರಕ್ತವರ್ಗದ ಇನ್ನೊಬ್ಬ ಶಿವಯೋಗಿಯನ್ನು ಕುರಿತು ಈ ರೀತಿ ಭಕ್ತಿಭಾವದಿಂದ ಹಾಡಿದುದು, ಭಾವನಿರ್ಭರತೆಯಿಂದ ಹೊಗಳಿದುದು ಉಭಯವರ್ಗಗಳ ಅನ್ಯೋನ್ಯತೆಯನ್ನು ತೋರಿಸಿಕೊಡುತ್ತದೆ. ಗುರು-ವಿರಕ್ತರೆಂಬ ಕಲಹದಲ್ಲಿ ನಿರತರಾದವರಿಗೆ ನಿಜಸ್ಥಿತಿಯನ್ನು ನಿವೇದಿಸುತ್ತದೆ."[೧೩]

ಪ್ರಸ್ತುತ ಕೃತಿಯ ಕುರಿತು ಕೆಲವು ಸಂದೇಹಗಳಿರುವುದನ್ನು ಅವರು ಒಪ್ಪಿಕೊಂಡಿದ್ದಾರೆ. ವಿದ್ವಾಂಸರು ಈ ದಿಶೆಯಲ್ಲಿ ನಮಗೆ ಪರಿಹಾರ ಸೂಚಿಸಬೇಕೆಂದು ವಿನಂತಿಸಿಕೊಂಡಿರುವುದು ಅವರ ಸಂಪಾದನಾ ಚಾತುರ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಕವಿಯು ಪೂರ್ವಾರ್ಧದಲ್ಲಿ ಬೆಳಗಾವಿ ಜಿಲ್ಲೆ ಹೂಲಿಯಲ್ಲಿ, ಉತ್ತರಾರ್ಧ ಬದುಕನ್ನು ಶ್ರೀಶೈಲ ಸಮೀಪವಿರುವ ನಂದ್ಯಾಲಪುರ ಗ್ರಾಮದಲ್ಲಿ ಕಳೆದನು. ಕಲಬುರ್ಗಿ ಅವರು ಆ ಪ್ರದೇಶದಲ್ಲಿ ಕ್ಷೇತ್ರಕಾರ್ಯ ಮಾಡಿಸಿ ಈ ಕೃತಿಯ ಹುಡುಕಾಟ ನಡೆಸಿದ್ದರು. ಆದರೆ ಈ ಕೃತಿ ಅವರಿಗೆ ದೊರತದ್ದು ಕಲಬುರ್ಗಿ ಜಿಲ್ಲೆಯ ಜೇವರಗಿ ತಾಲೂಕಿನ ಎಡ್ರಾಮಿ ಗ್ರಾಮದಲ್ಲಿ. ದೊರೆತ ಒಂದೇ ಒಂದು ಹಸ್ತಪ್ರತಿಯನ್ನು ಆಧರಿಸಿ ಈ ಕೃತಿಯನ್ನು ಸಂಪಾದಿಸಿರುವುದರಿಂದ ದೋಷಗಳು ಉಳಿದಿರುವ ಸಾಧ್ಯತೆ ಇದೆ. ೧೯೭೯ರಲ್ಲಿ ಈ ಕೃತಿ ಪ್ರಕಟವಾಗಿದೆ. ಇಲ್ಲಿಯವರೆಗೆ ಬೇರೆ ಯಾವ ಆಕರಗಳು ಈ ಕೃತಿಯ ಕುರಿತು ದೊರೆತಿಲ್ಲ.

"ಭೂವಿನುತಕವಿ ರಾಘವಾಂಕ ಚಾರಿತ್ರಮಂ
ಪಾವನಾತ್ಮಕ ತೋಂಟದಾಸಿದ್ಧದೇಶಿಕನ
ಭಾವರತ್ನಾಭರಣಮಂ ಬಸವಶತಕಗಳ ವಸ್ತುಕದಿ ವರ್ಣಕದೊಳು
ಭಾವಜ್ಞ ಸತ್ಕವಿಗಳ ಹುದೆನಲು ಪೇಳ್ದುಬಳಿ
ಕೀ ವಿಮಲ ಗುರುರಾಜ ಚಾರಿತ್ರವನ್ನೊರೆದ
ನಾ ವೀರ ಮಾಹೇಶ್ವರರ ಬಗೆಗೆ ಬರ್ಪಂತೆ ನಂಜೇಶನೇಂ ಧನ್ಯನೋ." ೧೪

ಈ ಮೇಲಿನ ಪದ್ಯದಿಂದ ತಿಳಿದು ಬರುವ ವಿಷಯವೆಂದರೆ 'ಬಸವ ಶತಕ' ಕೃತಿ ಬಹಳ ದಿನಗಳವರಿಗೆ ಸಿಕ್ಕಿರಲಿಲ್ಲ. ಹೂಲಿಯ ಗುರುಮಠದ ಸಿದ್ಧನಂಜೇಶ ಕೃತ ಬಸವ ಶತಕ ಅನೇಕರ ಕಣ್ಣುತಪ್ಪಿಸಿ ಅಲೆದಾಡುತ್ತಿತ್ತು. ಎಂ. ಎಂ. ಕಲಬುರ್ಗಿ ಅವರಿಗೆ ಈ ಶತಕದ ೨೬ ಪದ್ಯಗಳು ಮಾತ್ರ ದೊರೆತಿದ್ದವು. ಸಿದ್ಧನಂಜೇಶನ ಮೇಲೆ ಸಂಶೋಧನೆ ಮಾಡಿದ ಸಾರಾಪೂರೆ ಅವರಿಗೂ ಈ ಶತಕ ದೊರೆತಿರಲಿಲ್ಲ. ಆದರೆ ಶಿವಣ್ಣನವರ ವಿಚಕ್ಷಣ ದೃಷ್ಟಿಗೆ ಈ ಶತಕ ಗೋಚರಿಸಿತು. ಮೈಸೂರು ವಿ.ವಿ.ಯ ಪ್ರಾಚ್ಯಸಂಶೋಧನ ಸಂಸ್ಥೆಯಲ್ಲಿ ಇದರ ಹಸ್ತಪ್ರತಿ ಶಿವಣ್ಣನವರಿಗೆ ದೊರೆಯಿತು. ೧೧೨ ವಾರ್ಧಕ ಷಟ್ಪದಿಗಳನ್ನು ಒಳಗೊಂಡ ಈ ಕೃತಿಯಲ್ಲಿ ಬಸವಣ್ಣನವರ ಮಹಿಮೆಯನ್ನು ತುಂಬಾ ಅರ್ಥವತ್ತಾಗಿ ಬಣ್ಣಿಸಲಾಗಿದೆ. ಬೆಳಗಾವಿ ಜಿಲ್ಲೆಯ ಹೂಲಿಯ ಸಿದ್ಧನಂಜೇಶನ ಈ ಕೃತಿ ಉತ್ತರ ಕರ್ನಾಟಕದಲ್ಲಿ ದೊರೆಯದೆ, ಮೈಸೂರಿನಲ್ಲಿ ದೊರೆತದ್ದು ವಿಶೇಷವೆನ್ನಬೇಕು. ಕಲಬುರ್ಗಿ, ಸಾರಾಪೂರೆ ಅವರಂಥ ಸಂಶೋಧಕ ವಿದ್ವಾಂಸರು ಈ ಕೃತಿಯನ್ನು ಹುಡುಕಲು ತುಂಬಾ ಪ್ರಯತ್ನ ಪಟ್ಟಿದ್ದರು. ಶಿವಣ್ಣನವರು ಈ ಕೃತಿಯನ್ನು ಶೋಧಿಸಿದಾಗ ಕಲಬುರ್ಗಿ ಅವರಿಗೆ ತುಂಬಾ ಸಂತೋಷವಾಗಿ, ಗದುಗಿನ ತೋಂಟದಾರ್ಯ ಸಂಸ್ಥಾನಮಠದ ಪ್ರಸಾರಾಂಗದಿಂದ ೨೦೦೧ರಲ್ಲಿ ಈ ಕೃತಿ ಪ್ರಕಟಣೆಗೆ ಏರ್ಪಾಡು ಮಾಡಿದರು. ಸಿದ್ಧನಂಜೇಶನ ಗುರುರಾಜ ಚಾರಿತ್ರ ಮತ್ತು ರಾಘವಾಂಕ ಚಾರಿತ್ರಗಳು ಎರಡೂ ಮಹತ್ವದ ಚಾರಿತ್ರಿಕ ಕೃತಿಗಳಾಗಿವೆ.

ಗುರುರಾಜಚಾರಿತ್ರವನ್ನು ಸಿದ್ಧನಂಜೇಶ ವಾರ್ಧಕ ಷಟ್ಪದಿಯಲ್ಲಿ ಬರೆದಿದ್ದಾನೆ. ಇದರಲ್ಲಿ ೧೬ ಸಂಧಿ, ೧೨೭೭ ಪದ್ಯಗಳಿವೆ. ಗ್ರಂಥಾರಂಭದಲ್ಲಿ ಕವಿ ೫ ಪದ್ಯಗಳಿಂದ ತನ್ನ ಗುರು ಹೂಲಿಯ ಸಿಂಹಾಸನಾಧೀಶ ಸಿದ್ಧನಂಜೇಶನ ಸ್ತೋತ್ರ ಮಾಡಿ 'ಸಕಲ ಸದ್ಭಕ್ತ ಹೃದಯಾಂಭೋಜದಲ್ಲಿ ಬೆಳಗುವ ಪರಂಜ್ಯೋತಿ' ಬಸವರಾಜೇಂದ್ರನ ಪಾಲಿಸೆಂದು ಬೇಡಿ ಹರಿದೇವ, ಕೆರೆಯ ಪದ್ಮರಸ, ರಾಘವಾಂಕ, ಪಾಲ್ಕುರಿಕೆ ಸೋಮೇಶ್ವರ, ಭೀಮ ಕವಿವರ್ಯರಿಗೆ ತನ್ನ ಪ್ರಣಾಮಂಗಳನರ್ಪಿಸಿ ಗುರುರಾಜಚಾರಿತ್ರವನ್ನು ಹೇಳುವುದಕ್ಕೆ ಮೊದಲು ಮಾಡಿದ್ದಾನೆ. ಶಿವಕವಿ ಸಿದ್ಧನಂಜೇಶ ಪರಮ ಸದ್ಭಕ್ತಿಯಿಂದ 'ಬುಧರ ಬಗೆ ಬಯಸುವಂತೆ' 'ವೀರ ಮಾಹೇಶ್ವರರ ಬಗೆಗೆ ಬರ್ಪಂತೆ' ತನ್ನ ಗ್ರಂಥರಚಿಸಿ ಶಿವಭಕ್ತರ ಮುಂದಿಟ್ಟಿದ್ದಾನೆ.

ಸಿದ್ಧನಂಜೇಶ ಗುರುರಾಜಚಾರಿತ್ರ ಬರೆದುದು, ತನ್ನ ಗುರುಸಿದ್ಧ ನಂಜೇಶನ ಅಪ್ಪಣೆಯಂತೆ. ಗುರುಸಿದ್ಧನಂಜೇಶ ತನ್ನ ನಿಜಸತಿ ಚೆನ್ನವೀರಾಂಬೆಗೆ ಹೇಳಿದುದನ್ನೇ ತಾನು ಗುರುರಾಜಚಾರಿತ್ರರೂಪವಾಗಿ ಬರೆದೆನೆಂದು ಕವಿ ಹೇಳುತ್ತಾನೆ. ಪ್ರತಿಸಂಧಿಯಲ್ಲಿ ಸಿದ್ಧನಂಜೇಶ–ಚೆನ್ನವೀರಾಂಬೆಯರ ಸಂಭಾಷಣೆಯಿಂದಲೇ ಕಾವ್ಯ ವಿಷಯ ಮುಂದುವರಿಯುತ್ತದೆ. ಗುರುರಾಜ ಚಾರಿತ್ರದ ವಿವಿಧ ವಿಷಯಕ್ಕೆ ಏಕಸೂತ್ರತೆ ಬಂದಿರುವುದು ಈ ಪರಮಪೂಜ್ಯ ದಂಪತಿಗಳಿಂದಲೇ. ಅಂದಿನ ವೀರಶೈವ ಬೇಡುವ ಆಚಾರ್ಯರುದ್ಭವ, ಆ ಗುರುಸಂಪ್ರದಾಯ, ಅವರಲ್ಲಿ ತೋರಿದ ಪ್ರಭೇದ, ಅವರಿಂದುಂಟಾದ ನಾನಾ 'ಬಗೆ' ಇಲ್ಲವೆ 'ವರ್ಗ'ದ ವಿವರ, ಷಟ್‌ಸ್ಥಲ, ನೂರೊಂದು ಸ್ಥಲಗಳ ಸಂಗ್ರಹಬೋಧ, ಶಿವನ ಪಂಚವಿಂಶತಿ ಲೀಲೆ, ಅಷ್ಟವಿಧಾರ್ಚನೆ ಷೋಡಶೋಪಚಾರ, ಇಷ್ಟಲಿಂಗಪೂಜಾವಿಧಿ, ಅವಕ್ಕೆ ತಕ್ಕ ದೃಷ್ಟಾಂತ, ಎಂಬತ್ತೆಂಟು ಪವಾಡ ರಚಿಸಿದ ಬಸವೇಶ್ವರನ ಕತೆ, ಬಸವಣ್ಣನವರ ಘನಮಹಿಮೆ ಕೇಳಿ ಕಲ್ಯಾಣಕ್ಕೆ ಬಂದ ಅಸಂಖ್ಯಾತ ಶರಣರ ಕತೆ, ಮಲ್ಲಿಕಾರ್ಜುನ ಪಂಡಿತಾರಾಧ್ಯರೊರೆದ ಗಣಸಹಸ್ರನಾಮ, ಲಕ್ಕಣಾಮಾತ್ಯ, ಗುಬ್ಬಿಯ ಮಲ್ಲಣಾರ್ಯರು ತಮ್ಮ ಶಿವತತ್ವಚಿಂತಾಮಣಿ ಮತ್ತು ವೀರಶೈವಾಮೃತ ಮಹಾಪುರಾಣದಲ್ಲಿ ಹೇಳಿದ ನೂತನ ಪುರಾತನರ ಚರಿತೆ, ಅವಲ್ಲದೆ ವರ್ತಮಾನ ಕಾಲದಲ್ಲಿದ್ದ ನೂತನ ಪುರಾತನರ ಕತೆ, ಆ ಮೇಲೆ ವೀರಶೈವಧರ್ಮ, ನೀತಿತತ್ವ ರಹಸ್ಯವನ್ನೆಲ್ಲ ಒಂದೇ ಗ್ರಂಥದಲ್ಲಿ ಕೂಡಿಹಾಕಿ ಹೆಣೆದು ಸಿದ್ಧನಂಜೇಶ ತನ್ನ 'ಮರ್ತ್ಯದ ಮಣಿಹ ಪೂರೈಸಿತೆ'ಂದು ಭಾವಿಸಿಕೊಂಡಿದ್ದಾನೆ. 'ನಂಜೇಶನೇಂ ಕೃತಾರ್ಥನೋ!' ಎಂದು ಆನಂದದಿಂದ ತನ್ನ ಕೃತಿಗೆ ತಾನೇ ತಲೆದೂಗಿದ್ದಾನೆ. ಗುರುರಾಜ ಚಾರತ್ರದಲ್ಲಿ ಕಾವ್ಯಾಂಶಕ್ಕಿಂತ ಧರ್ಮಾಂಶ ಹೆಚ್ಚಿದೆ. ಇದೇ ಕವಿಯ ಕೃತಿ ರಾಘವಾಂಕಚಾರಿತ್ರವನ್ನು ಓದುವಾಗ ನಮ್ಮ ಭಾವನೆ ತಿರುವುಮುರುವಾಗುತ್ತದೆ.

ರಾಘವಾಂಕ ಚಾರಿತ್ರದಲ್ಲಿ ಮತಾಂಶ ಬರುವುದು ನಿಜ. ಆದರೆ ಅಲ್ಲಿ ಕಾವ್ಯದ ರಸ ಮತಾಂಶವನ್ನು ಮೀರಿ ಮೆರೆವಂತೆ ತೋರುತ್ತದೆ. ರಾಘವಾಂಕನ ಚಾರಿತ್ರವನ್ನು ಚಿತ್ರಿಸಿದ ಕವಿಯ ಮನೋಭಾವನೆಗೂ ಗುರುರಾಜಚಾರಿತ್ರ ಹೇಳಿದ ಭಾವನೆಗೂ ವ್ಯತ್ಯಾಸಗಳು ಬೇರೆ ಎಂದು ಹೇಳಬಹುದು. 'ಕವಿಭಾವರಸಶರಧಿವರ್ಧನಸುಧಾಕರಂ, ಕವಿರಾಜ ಕವಿಪಟಲ ವಾಗ್ವನ ವಸಂತನುಂ ಪ್ರಚುರಕವಿ ಚೂಡಾಮಣಿ, ಉಭಯ ಕವಿ ಶರಭಭೇರುಂಡನ್' ಎಂದೆನಿಸುವ ಹಂಪೆಯ ಮಹಾಕವಿ ರಾಘವಾಂಕನ ಸಚ್ಚಾರಿತ್ರವನ್ನು ಕವಿ ಹೇಗೆ ಹೇಳಬೇಕು? ನಂದನವನವನ್ನು ಹೇಗೆ ನೋಡಬೇಕು? ಹೇಗೆ ಬಣ್ಣಿಸಿ ನುಡಿಯಬೇಕು? ಪುಣ್ಯಕ್ಷೇತ್ರ ದೇವಾಲಯಗಳನ್ನು ನೋಡುವ ಕಣ್ಣಾವುದು? ಹೊಗಳುವ ನಾಲಗೆ ಯಾವುದು?

'ಮಹಾಕವಿ ರಾಘವಾಂಕನ ಪೊಗಳಿ ಕವಿತಾನುಭವ ಪಡೆವೆನು' ಎಂದು ಹೇಳುವ ಕವಿ ರಾಘವಾಂಕನ ಶಿವಕಾವ್ಯಜೀವನದ ಸೌಂದರ್ಯವನ್ನು ಕಂಡು ಆ ಸರಸ ಸೌಂದರ್ಯವನ್ನೆ ತನ್ನ ರಾಘವಾಂಕಚಾರಿತ್ರದಲ್ಲಿ ಬಣ್ಣ ಬಣ್ಣವಾಗಿ ಚಿತ್ರಿಸಿದ್ದಾನೆ. 'ರಸಿಕರ ರಸಾಯನ, ಕಬ್ಬಿಗರ ಹಬ್ಬ'ವಾದ ತನ್ನ ಕಾವ್ಯ ದರ್ಶನವನ್ನು ರಸಭರಿತವಾಗಿ ಹಾಡಿದ್ದಾನೆ. ಅಂತೆಯೇ ತನ್ನಕಾವ್ಯ.

"ಇದುವೆ ರಸಿಕರ ರಸಾಯನ ಕಬ್ಬಿಗರ ಹಬ್ಬ
ವಿದು ಪ್ರೇಮದಿಂ ಕೇಳ್ವ ಜನದ ಕರ್ಣಾಭರಣ
ವಿದುವೆ ಸೊಬಗರ ಸೊಬಗು ಕೋವಿದರ ಕೊರಲ ಹಾರಂ ಗಮಕಿಗಳ ಗಮಕವು
ಇದುವೆ ಭಾವದ ಪಕ್ಕೆಯಿದುವೆ ನವರಸದಿಕ್ಕೆ
ಯಿದು ಸದಾಚಾರ ಸುಖಸದನ ಮೋಹನದ ಧನ
ವಿದನೋದಿ ಕೇಳಿ ಲಾಲಿಸದರಾರ್ ಧರೆಯೊಳಗೆ ದಿವ್ಯಕಾವ್ಯಾಮೃತವನು." ೧೫

ಇಂತಹ 'ದಿವ್ಯಕಾವ್ಯಾಮೃತ'ವ ಶಿವಕಥಾಮೃತರಸ'ವ ಓದಿ ಕೇಳಿ ಮೆಚ್ಚದರಾರು? ಕವಿಯ ಈ ಆತ್ಮಪ್ರಶಂಸೆ ಬರಡುನುಡಿಯಲ್ಲ. ರಾಘವಾಂಕ ಚಾರಿತ್ರವನ್ನೋದುವ ಸಹೃದಯರೆಲ್ಲ ಬಹುಮಟ್ಟಿಗೆ ಒಪ್ಪಬೇಕಾದ ಮಾತೇ ಇದು.

ಗುರುರಾಜಚಾರಿತ್ರ್ಯವನ್ನು ಬರೆಯುವಾಗ ಸಿದ್ಧನಂಜೇಶನಿಗೆ ಮತತತ್ವದರ್ಶನದಷ್ಟು ಕಾವ್ಯದರ್ಶನ ಸ್ಪಷ್ಟವಿಲ್ಲ. ಈಗ ಆತನ ಉದ್ದೇಶವೂ ಅದಲ್ಲ. ಪರಿಣತವಯಕ್ಕೆ ಕಾವ್ಯಕ್ಕಿಂತ ಧರ್ಮವೇ ಹೆಚ್ಚು ಸೊಗಸಿದಂತೆ ತೋರುತ್ತದೆ. ರಸಿಕರಿಗೆ ರಸಾಯನದೂಟವನ್ನು ನೀಡುವುದಕ್ಕಿಂತ ಸದ್ಭಕ್ತಮಾಹೇಶ್ವರರ ಸಂತತಿಗೆ ಭಕ್ತಿರಸವನ್ನು ನೀಡಿ ಕೃತಕಾರ್ಯನಾಗಬೇಕೆಂದು ಕವಿ ಇಲ್ಲಿ ಬಗೆದಂತಿದೆ. ರಾಘವಾಂಕ ಚಾರಿತ್ರವನ್ನು ಬರೆಯುವಲ್ಲಿ ಇಟ್ಟ ಲಕ್ಷ ಇಲ್ಲಿ ಕೆಲಮಟ್ಟಿಗೆ ಮಾಯವಾದಂತೆ ತೋರುತ್ತದೆ. ರಾಘವಾಂಕನ ಕಾವ್ಯ ರಚಿಸುವಾಗ ನಂದೀಶಕವಿ ರಾಚವಟ್ಟಿಯಾರಾಧ್ಯರಂತಹ ಬಲ್ಲವರ ಸಹಾಯವನ್ನು ಪಡೆದರೆ, ಇಲ್ಲಿ ತನ್ನ ಗುರುನಾಥ ಸಿದ್ಧನಂಜೇಶನ ಹೊರತು ಯಾರ ಸಹಾಯವನ್ನೂ ಕೋರಿದಂತೆ ತೋರುವುದಿಲ್ಲ. ಅಂತೆಯೇ ಗುರುರಾಜಚಾರಿತ್ರವನ್ನು ಬರೆದ ಕವಿಯೇ ರಾಘವಾಂಕನ ಚಾರಿತ್ರವನ್ನು ಬರೆದಿರಬಹುದೇ ಎಂದು ಓದುಗರಿಗೆನಿಸುವುದು ಸ್ವಾಭಾವಿಕ.

'ರಾಘವಾಂಕ ಚಾರಿತ್ರ' ಇನ್ನೂ ಒಂದು ದೃಷ್ಟಿಯಿಂದ ಅತ್ಯಂತ ಮಹತ್ವದ ಚಾರಿತ್ರಿಕ ವಿಷಯವನ್ನು ನಮಗೆ ನಿರೂಪಿಸುತ್ತದೆ. ರಾಘವಾಂಕ ಕವಿ ಬರೆದ ಸಿದ್ಧರಾಮ ಚಾರಿತ್ರ ನಮಗೆ ಕೇವಲ ೯ ಸಂಧಿಗಳ ಹಸ್ತಪ್ರತಿ ದೊರೆತಿದೆ. ಆದರೆ ಸಿದ್ಧನಂಜೇಶ ರಾಘವಾಂಕನ ಕೃತಿಗಳ ಪರಿಚಯ ಮಾಡುತ್ತ, ಸಿದ್ಧರಾಮ ಚಾರಿತ್ರದ ೯ ಸಂಧಿಯ ಮುಂದಿನ ಭಾಗವನ್ನು ಪ್ರಸ್ತಾಪಿಸುತ್ತಾನೆ. ಕಲ್ಯಾಣ ಕ್ರಾಂತಿಯ ಸಮಗ್ರ ವಿವರಗಳನ್ನು ಸಿದ್ಧನಂಜೇಶ ತಿಳಿಸುವುದನ್ನು ನೋಡಿದರೆ ಮೂಲ ಸಿದ್ಧರಾಮ ಚಾರಿತ್ರ ಇನ್ನೂ ಪೂರ್ಣಪ್ರಮಾಣದಲ್ಲಿ ನಮಗೆ ಸಿಕ್ಕಿಲ್ಲವೆಂದೇ ಹೇಳಬೇಕು. ಲಿಂಗಾಯತ ಪರಂಪರೆಯ ಸಿದ್ಧನಂಜೇಶನು ತನ್ನ ಗುರುಪರಂಪರೆಯನ್ನು ಗುರುರಾಜ ಚಾರಿತ್ರದಲ್ಲಿ ಹೇಳಿಕೊಂಡಿದ್ದಾನೆ. ನೀಲಗುಂದದ ಸಿಂಹಾಸನಾಧೀಶ ಪಂಚವಣಿಗೆಯ ಅನ್ನದಾನೇಶ್ವರ ಅವನ ಶಿಷ್ಯ ಕುರುವತ್ತಿಪುರದ ಸಿಂಹಾಸನಾಧೀಶ ನಂಜೇಶ. ಅವನ ಶಿಷ್ಯ ಹೂಲಿ ಪೂವಲ್ಲಿಯ ಪುರದ ಸಿಂಹಾಸನಾಧೀಶ ಸಿದ್ಧನಂಜೇಶ್ವರ ಅವನ ಶಿಷ್ಯ ನವನಂದಿ ಮಂಡಲದ ನಂದ್ಯಾಲಪುರದ ಸಿಂಹಾಸನಾಧೀಶ ಕವಿ ಸಿದ್ಧನಂಜೇಶ. ಈತನಿಗೆ ಇನ್ನೊಂದು ಹೆಸರು ಚಿಕ್ಕನಂಜೇಶ ಎಂದು ತಿಳಿದುಬರುತ್ತದೆ. ತನ್ನ

ಗುರುವಾದ ಸಿದ್ಧನಂಜೇಶ್ವರನು ಆಚಾರ್ಯ ರೇವಣಾಸಿದ್ಧೇಶ್ವರ ಮರುಳಸಿದ್ಧಾಚಾರ್ಯ ರಾಮಿದೇವಾಚಾರ್ಯ ಗುರು ಪಂಡಿತಾರಾಧ್ಯ ಚೌಕಮಧ್ಯದಿನಿಂದ ಪಂಚವಣಿಗಿ ಸಿದ್ಧನಂಜೇಶ್ವರ ಎಂದು ಚತುರಾಚಾರ್ಯರಿಗೆ ಸಮಾನನೆಂಬ ಭಾವದಿಂದ ಸ್ತುತಿಸಿದ್ದಾನೆ. ಹೀಗೆ ಸಿದ್ಧನಂಜೇಶ ತನ್ನ ಗುರುಪರಂಪರೆಯನ್ನು ಚಾರಿತ್ರಿಕ ರೂಪದಲ್ಲಿ ಅನಾವರಣಗೊಳಿಸಿದ್ದಾನೆ.

**ಸ್ಥಳೀಯ ಮಹಾತ್ಮರ ಚಾರಿತ್ರಿಕ ಕೃತಿಗಳು :**

ಭರತಭೂಮಿ ಸಂತರ ಸಿದ್ಧರ, ಶರಣರ ಯೋಗಿಗಳ ದಾರ್ಶನಿಕರ ಬೀಡಾಗಿದೆ. ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಕನ್ನಡ ನಾಡಿನಲ್ಲಿ ೧೨ನೇ ಶತಮಾನದ ಕಲ್ಯಾಣದ ಶರಣರ ವೈಚಾರಿಕ ಕ್ರಾಂತಿಯಿಂದ ಜಿಡ್ಡುಗಟ್ಟಿದ ಸಮಾಜದಲ್ಲಿ ತೀವ್ರ ಸಂಚಲನವುಂಟಾಯಿತು. ಶರಣರ ಆಡುಭಾಷೆಯ ವಚನಗಳು ಮಾನವತೆ ಸಾರಿ ನೊಂದವರ ಶೊಷಣೆ ಅನ್ಯಾಯಕ್ಕೆ ಒಳಗಾದವರ ಹೃದಯಕ್ಕೆ ಅಮೃತ ಸಿಂಚನವಾದವು. ವಚನಗಳು ಮಾನವ ಧರ್ಮರಕ್ಷಣೆಯ ಕೋಟೆಗಳಾದವು. ಕಲ್ಯಾಣ ಕ್ರಾಂತಿಯ ಕಾವು ಬೆಳಗಾವಿ ಜಿಲ್ಲೆಗೆ ಬಡಿಯದಿರಲಿಲ್ಲ. ಶರಣರ ದಂಡು ಉಳವಿಗೆ ಹೋಗುವ ಮಾರ್ಗ ಬೆಳಗಾವಿ ಜಿಲ್ಲೆಯೇ ಆಗಿತ್ತು. ಹೀಗಾಗಿ ಸ್ಥಳೀಯವಾಗಿ ಅನೇಕ ಧಾರ್ಮಿಕ ಮಠಗಳು ತಲೆಎತ್ತಿದ್ದವು.. ಇಲ್ಲಿನ ಮಠಾಧಿಪತಿಗಳೇ ಪವಾಡಗಳನ್ನು ಮಾಡುವುದರ ಮೂಲಕ ಜನಪ್ರಿಯತೆಯನ್ನು ಬೆಳೆಸಿಕೊಂಡು ತಮ್ಮದೆಯಾದ ವ್ಯಕ್ತಿತ್ವದಿಂದ ಸಮಾಜ ಸೇವೆಗೈದರು. ಆದುದರಿಂದ ಇವರ ಕುರಿತು ಕಾವ್ಯ, ಪುರಾಣ, ಚರಿತ್ರೆಗಳು ರಚನೆಗೊಂಡಿವೆ.

**ದುರದುಂಡೀಶ್ವರ ಚರಿತ್ರೆ :**

ಗೋಕಾಕ ತಾಲೂಕಿನ ಅರಭಾವಿ ಮಠದ ಮೂಲ ಕರ್ತೃಗಳಾದ ಶ್ರೀ ದುರದುಂಡೀಶ್ವರರು ಅವತಾರ ಪುರುಷರು. ಆ ಭಾಗದ ಜನರ ಮನೆದೇವರಾಗಿದ್ದಾರೆ. ಶ್ರೀಮಠಕ್ಕೆ ನಡೆದುಕೊಂಡರೆ ತಮ್ಮ ಇಷ್ಟಾರ್ಥ ಸಿದ್ಧಿಯಾಗುವುದೆಂದು ಭಾವಿಸಿ ಭಕ್ತಾದಿಗಳು ಭಯ, ಭಕ್ತಿಯಿಂದ ನಡೆದುಕೊಳ್ಳುತ್ತಿದ್ದಾರೆ. ಅರಭಾವಿ ದುರದುಂಡೀಶ್ವರರು, ಮಹಾಲಿಂಗಪುರದ ಮಹಾಲಿಂಗೇಶ್ವರರು, ಸಾವಳಗಿ ಶಿವಲಿಂಗೇಶ್ವರರು ಸಮಕಾಲೀನ ಸಿದ್ಧಿಪುರುಷರು. ದುರದುಂಡೀಶ್ವರ ಮತ್ತು ಮಹಾಲಿಂಗೇಶ್ವರರನ್ನು ಕುರಿತು ೧೮ನೆಯ ಶತಮಾನದ ಬಸವ ಕವಿ ಮಹಾಕಾವ್ಯಗಳನ್ನು ಬರೆದಿದ್ದಾನೆ. ದುರದುಂಡೀಶ್ವರಲೀಲೆ ಎಂಬ ಕೃತಿಯ ಹಸ್ತಪ್ರತಿಯನ್ನು ಧಾರವಾಡ ಮುರುಘಾಮಠದ ಮೃತ್ಯುಂಜಯಪ್ಪಗಳು ೧೯೨೩ರಲ್ಲಿ ಮೊದಲ ಬಾರಿಗೆ ಪ್ರಕಟಿಸಿದ್ದಾರೆ. ದುರದುಂಡೀಶ್ವರರ ಮಹಿಮಾಶಾಲಿ ವ್ಯಕ್ತಿತ್ವವನ್ನು ಅತ್ಯಂತ ಅದ್ಭುತವಾಗಿ ಇಲ್ಲಿ ಚಿತ್ರಿಸಲಾಗಿದೆ. ದುರದುಂಡೀಶ್ವರ ತೋರುಗದ್ದಿಗೆ ಕಾರಣವಾಗಿ ನಿಡಸೋಸಿ ದುರದುಂಡೀಶ್ವರ ಸಿದ್ಧಸಂಸ್ಥಾನಮಠವು ಜಾಗೃತಸ್ಥಾನವೆನಿಸಿದೆ. ಈ ಪೀಠದ ಏಳು ಜನ ಸ್ವಾಮಿಗಳನ್ನು ಕುರಿತು ತುಕಾರಾಮಪ್ಪ ಕೋಪರ್ಡೆ ಅವರು 'ಸಪ್ತಸ್ವಾಮಿಗಳ ಪುರಾಣ' ಎಂಬ ಕಾವ್ಯವನ್ನು ರಚಿಸಿದ್ದರು. ೧೯೪೬ರಲ್ಲಿ ಈ ಕೃತಿ ನಿಡಸೋಸಿಯಿಂದ ಪ್ರಕಟವಾಗಿದೆ. ಪಂಡಿತ ವೈ. ನಾಗೇಶ ಶಾಸ್ತ್ರಿಗಳು ೧೯೫೦ರಲ್ಲಿ ಶಿವಲಿಂಗ ಶಿವಯೋಗೀಶ್ವರ ಪುರಾಣ ಮತ್ತು ನಿಜಲಿಂಗ ಶಿವಯೋಗೀಶ್ವರ

ಪುರಾಣ ಎಂಬ ಎರಡು ಮಹಾಕಾವ್ಯಗಳನ್ನು ರಚನೆ ಮಾಡಿದ್ದರು. ಇವೆರಡೂ ಹಸ್ತಪ್ರತಿಗಳು ನಿಡಸೋಸಿ ದುರದುಂಡೀಶ್ವರಮಠದಲ್ಲಿ ಇವೆ. ಇದರಲ್ಲಿ ಶಿವಲಿಂಗೇಶ್ವರ ಪುರಾಣವನ್ನು ಇತ್ತೀಚೆಗೆ ಗುರುಪಾದ ಮರಿಗುದ್ದಿ ಅವರು ಸಂಪಾದಿಸಿ ನಿಡಸೋಸಿಯಿಂದ ಪ್ರಕಟಿಸಿದ್ದಾರೆ. ಮರಿಗುದ್ದಿ ಅವರು ದುರದುಂಡೀಶ್ವರ ಕಂದಮಾಲೆ ಎಂಬ ಅಪ್ರಕಟಿತ ಕೃತಿಯೊಂದನ್ನು ಸಂಪಾದಿಸಿದ್ದಾರೆ.

**ಸಾವಳಗಿ ಶಿವಲಿಂಗೇಶ್ವರ ಚರಿತೆ :**

ಸಾವಳಗಿ ಶಿವಲಿಂಗೇಶ್ವರರು ಈ ನಾಡಿನ ಧಾರ್ಮಿಕ ಲೋಕದ ಒಂದು ನಕ್ಷತ್ರ. ಅವರು ಲೋಕಸಂಚಾರ ಮಾಡಿ ಕೊನೆಗೆ ನೆಲೆನಿಂತ ಊರು ಬೆಳಗಾವಿ ಜಿಲ್ಲೆ ಗೋಕಾಕ ತಾಲೂಕಿನ ಸಾವಳಗಿ ಗ್ರಾಮ. ಘಟಪ್ರಭಾ ನದಿ ದಂಡೆಮೇಲಿರುವ ಈ ಸಾವಳಗಿ ಮಠದ ಮೂಲ ಪುರುಷ ಶಿವಲಿಂಗೇಶ್ವರರ ಚರಿತ್ರೆಯನ್ನು ಕಲಬುರ್ಗಿ ಜಿಲ್ಲೆಯ ಭೀಮಾನದಿಯ ತೀರದಲ್ಲಿರುವ ಶಿವಪುರದ ಕವಿ ಸಿದ್ಧಲಿಂಗನು ಬರೆದಿರುವುದು ವಿಶೇಷ. ಅನೇಕ ವರ್ಷಗಳ ಕಾಲ ಈ ಹಸ್ತಪ್ರತಿ ಕಣ್ಮರೆಯಾಗಿತ್ತು. ೧೯೫೩ರಲ್ಲಿ ಸಾವಳಗಿಮಠದ ಪೀಠಾಧಿಪತಿಗಳಾಗಿ ಬಂದ ಜಗದ್ಗುರು ಸಿದ್ಧರಾಮ ಸ್ವಾಮಿಗಳು ಮಠದಲ್ಲಿರುವ ಹಳೆಯ ಕಾಗದ ಪತ್ರಗಳನ್ನು ಪರಿಶೀಲಿಸುತ್ತಿದ್ದಾಗ, ಈ ಪುರಾಣ ಕೃತಿ ಅವರಿಗೆ ದೊರೆಯಿತು. ಈ ಕೃತಿಯಲ್ಲಿ ೧೫ ಸಂಧಿ ೭೮೫ ಪದ್ಯಗಳಿವೆ. ಭಾಮಿನಿ ಷಟ್ಪದಿಯಲ್ಲಿರುವ ಈ ಕೃತಿ ಶಿವಲಿಂಗೇಶ್ವರರ ಮಹಿಮಾನ್ವಿತ ಬದುಕನ್ನು ಚಿತ್ರಿಸುತ್ತದೆ. ಈ ಚರಿತ್ರ ಕಾವ್ಯವನ್ನು ಹಂಪಿ ವಿಶ್ವವಿದ್ಯಾಲಯದ ಮೊದಲ ಕುಲಪತಿಗಳಾಗಿದ್ದ ಚಂದ್ರಶೇಖರ ಕಂಬಾರ ಅವರು ತುಂಬಾ ಆಸ್ಥೆವಹಿಸಿ ಸಂಗಮೇಶ ಹಂಡಗಿ ಅವರಿಂದ ಪರಿಷ್ಕರಿಸಿ ಕನ್ನಡ ವಿಶ್ವವಿದ್ಯಾಲಯದಿಂದ ೨೦೦೩ರಲ್ಲಿ ಪ್ರಕಟಿಸಿದ್ದಾರೆ.

ಈ ಕೃತಿಯನ್ನು ಸಂಪಾದಿಸಿದ ಸಿದ್ಧರಾಮ ಸ್ವಾಮಿಗಳು ಹೀಗೆ ಹೇಳುತ್ತಾರೆ: "ಪುರಾಣ ಪ್ರಕಟಣೆ ಕಾರ್ಯ ಕೈಕೊಳ್ಳುವ ಮೊದಲು ಗದ್ಯರೂಪದಲ್ಲಿ ಇದರ ಇತಿಹಾಸವನ್ನು ಬರೆಯಿಸಿ ಪ್ರಕಟಿಸಬೇಕೆಂದು ಸಂಕಲ್ಪಿಸಿ ಈ ಕಾರ್ಯದಲ್ಲಿ ಸಮರ್ಥರೂ ಬಾಲ್ಯದಿಂದಲೂ ನಮ್ಮ ಆತ್ಮೀಯರಾದ ಮಲ್ಲಾಬಾದಿ ವೀರಭದ್ರಪ್ಪನವರಿಗೆ ಈ ಉದ್ದೇಶ ಸೂಚಿಸಲಾಗಿದೆ. ಅವರು ಶಿರಸಾವಹಿಸಿ ಸಾವಳಗಿ ಶಿವಲಿಂಗೇಶ್ವರರ ಚರಿತ್ರೆಯನ್ನು ಬರೆದುಕೊಟ್ಟರು. ಸಚಿತ್ರವಾಗಿ ಎರಡು ಸಾರೆ ಪ್ರಕಟಿಸಿದೆವು. ಆ ಪುಸ್ತಕದ ಪ್ರಭಾವ, ಪರಿಣಾಮ ಜನಮನದ ಮೇಲೆ ಅಧಿಕವಾಯಿತು."[೧೬] ಈ ಕೃತಿಗೆ ಮುನ್ನುಡಿ ಬರೆದವರು ಖ್ಯಾತ ವಿದ್ವಾಂಸರಾಗಿದ್ದ ಶಿ.ಚೆ.ನಂದೀಮಠ ಅವರು.

ಭಾವಸಂಗಮ ನಲ್ನುಡಿ ಬರೆದ ಚಂದ್ರಶೇಖರ ಕಂಬಾರ ಅವರು "ಶಿವಲಿಂಗೇಶ್ವರರು ಬೀಡುಬಿಟ್ಟ ಸ್ಥಳದಲ್ಲಿ ಲಿಂಗಪೂಜೆಗಾಗಿ ಮಠಕಟ್ಟಿಕೊಟ್ಟ ಭಕ್ತರು ಅಂಥ ಸ್ಥಳವನ್ನು ಸಾವಳಗಿ ಎಂದೇ ಕರೆದರು. ಈಗ ಉತ್ತರ ಕರ್ನಾಟಕವೊಂದರಲ್ಲೇ ಹದಿನಾಲ್ಕು ಸಾವಳಗಿಗಳಿವೆ. ಕರ್ನಾಟಕ, ಮಹಾರಾಷ್ಟ್ರ ಹಾಗೂ ತಮಿಳುನಾಡುಗಳಲ್ಲಿ ಶಿವಲಿಂಗೇಶ್ವರರ ಒಟ್ಟು ಮೂನ್ನೂರರವತ್ತು ಮಠಗಳಿವೆಯೆಂದು ದಾಖಲೆಗಳು ಹೇಳುತ್ತವೆ. ಈ ಬಗ್ಗೆ ಮತ್ತು ಶಿವಲಿಂಗೇಶ್ವರರ ಸಾಧನೆಯ

ಬಗ್ಗೆ ವಿಶೇಷವಾದ ಅಧ್ಯಯನಗಳು ನಡೆಯಬೇಕಾಗಿದೆ......ಜಾತಿ ಸಾಮರಸ್ಯದ ಪ್ರಯೋಗವನ್ನು ಬಸವಣ್ಣನವರು ಮಾಡಿದ್ದರು. ಧರ್ಮ ಸಮನ್ವಯದ ಪ್ರಯೋಗವನ್ನು ಶಿವಲಿಂಗೇಶ್ವರರು ಮಾಡಿದರು. ಈ ಎರಡೂ ಪ್ರಯೋಗಗಳ ಬಗ್ಗೆ ಗಂಭೀರವಾದ ಅಧ್ಯಯನ ಇನ್ನೂ ನಡೆಯಬೇಕಿದೆ."[೧೭] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾದ ಈ ಕಾವ್ಯಕೃತಿಗೆ ಹೊಸ ಪ್ರಸ್ತಾವನೆ ಬರೆದವರು ಖ್ಯಾತ ವಿದ್ವಾಂಸರಾಗಿದ್ದ ಎಸ್. ವಿದ್ಯಾಶಂಕರ ಅವರು ಈ ಕೃತಿಯ ಚಾರಿತ್ರಿಕ ಮಹತ್ವವನ್ನು ತಿಳಿಸಿದ್ದಾರೆ. "ಪುರಾಣದಲ್ಲಿ ಬಿಟ್ಟೂ ಬಿಡದಂತೆ ಕಥನ ಕ್ರಮವಿದೆ. ಕಥಾನಾಯಕನ ಮಾನವೀಯವಾದ, ಕಷ್ಟಗಳಿಗೆ ಸ್ಪಂದಿಸುವ ಜೀವಪರ ಕಳಕಳಿಯ ಚಾರಿತ್ರ ಕಥನವಿದೆ. ಕಥಾನಾಯಕನದು ನಿಂತಲ್ಲಿ ನಿಲ್ಲದ ಜಂಗಮನ ಚಲನಶೀಲತೆ. ಲೋಕದ ನೋವಿನ ಪರಿಹಾರಕ್ಕಾಗಿಯೇ ಅವನ ಸುತ್ತಾಟಗಳು; ಲೀಲೆಗಳು. ಅವನ ಚಲನಶೀಲ ವ್ಯಕ್ತಿತ್ವ ಲೀಲಾಮುಖಿಯಾದರೂ ಅಲೌಕಿಕ ನೆಲೆಯಲ್ಲಿಯೇ ನಿಂತುಬಿಡುವುದಿಲ್ಲ. ಜನಸಮ್ಮುಖಿಯಾದ ಅವನ ಕಾರ್ಯಚಟುವಟಿಕೆಗಳು ಚೈತನ್ಯವಾಹಿನಿಯಾಗಿ ಚಲಿಸುತ್ತವೆ. ಹೀಗಾಗಿ ಪುರಾಣದಲ್ಲಿನ ನಿರೂಪಣೆಯಲ್ಲಿ ಒಂದು ಸಾತತ್ಯವಿದೆ. ಕನ್ನಡ ಚಂಪೂ ಕಾವ್ಯಗಳ ಕಥನಕ್ರಮಕ್ಕೂ ಇಲ್ಲಿನ ಕಥನಕ್ರಮಕ್ಕೂ ವ್ಯತ್ಯಾಸವಿರುವುದು ನಿರೂಪಣೆಯಲ್ಲಿನ ಸಾತತ್ಯಗುಣದಿಂದಲೇ. ಪುರಾಣದ ಕೇಂದ್ರವಸ್ತು 'ದಂತಕಥೆಯಾಗಿ ಹೋದ' 'ನಿನ್ನೆ'ಯಾದರೂ ಪುರಾಣದ ಒಳತಿರುಳಿನ ವಾಂಛೆ (Disire) ದ್ರವಿಸುವ ಮಾನವಾಂತಃಕರಣದ್ದು. ಪುರಾಣದ ಆಶಯ ಸಕಲ ಜೀವಜಾಲಗಳ ಸಾರೋದ್ಧಾರದ ಶ್ರೀಮಂತ ಕನಸಾಗಿದ್ದು ಸರಳ ರೇಖಾತ್ಮಕವಾಗಿದೆ. ಪುರಾಣದ ಪಠ್ಯವು ಸಾಂಸ್ಕೃತಿಕ ಹಾಗೂ ಸಾಂಕೇತಿಕವಾಗಿದೆ. ಉದಾಹರಣೆಗೆ ಇತಿಹಾಸದಲ್ಲಿ ಸುಪ್ರಸಿದ್ಧನಾದ ದಿಲ್ಲಿಯ ಔರಂಗಜೇಬನು ಬಾಲಖೇಡದಲ್ಲಿ ಶಿವಲಿಂಗೇಶ್ವರರಿಗೆ ಮಠ ಕಟ್ಟಿಸಿಕೊಟ್ಟದ್ದು; ಶಿವಲಿಂಗೇಶ್ವರರು ವಿಶ್ವವಿಖ್ಯಾತ ಸೂಫಿಸಂತ ಕಲಬುರ್ಗಿಯ ಖಾಜಾಬಂದೇನವಾಜರ ಆಹ್ವಾನವನ್ನು ಸ್ವೀಕರಿಸಿ ಉರಸ್‌ನಲ್ಲಿ ಭಾಗವಹಿಸಲು ಬಂದದ್ದು; ಶಿವಲಿಂಗೇಶ್ವರರು ಸುರಪುರದ ಅರಸರ ಆಹ್ವಾನವನ್ನು ಸ್ವೀಕರಿಸಿ ಅವರ ಅರಮನೆಗೆ ಬಂದದ್ದು–ಇವೆಲ್ಲ ಸಾಂಸ್ಕೃತಿಕವಾಗಿ ಮಹತ್ವದ ಸಂಗತಿಗಳು. ಸುರಪುರದ ಅರಸರ ಬಗೆಗೆ ಇತ್ತೀಚೆಗೆ ಹೊಸ ಶೋಧಗಳು ನಡೆದಿವೆ. ಕಕ್ಕೇರಿಯಲ್ಲಿ ಬೇಡರ ಒಡೆಯನ ಹಾಗೂ ಜಕ್ಕಪ್ಪನಾಯಕನ ಸಮಾಧಿಯಿರುವುದನ್ನು ಎಸ್.ಕೆ. ಅರುಣಿ ಗುರುತಿಸಿರುವರು. ಸುರಪುರದ ಹಳೆಯ ದರ್ಬಾರ್ ಹೊಸ ದರ್ಬಾರ್‌ನ ಶಿಲ್ಪ ಕಲೆಯ ವೈಶಿಷ್ಟ್ಯವನ್ನು ಹಾಗೂ ಹೊಸ ದರ್ಬಾರ್‌ನಲ್ಲಿ ಕುಳಿತು ಅಲ್ಲಿಂದಲೇ ವೇಣುಗೋಪಾಲಸ್ವಾಮಿ ದೇವಸ್ಥಾನವನ್ನು ದರ್ಶಿಸಬಹುದಾದ ಶಿಲ್ಪಗಳ ವಾಸ್ತು ವಿಶೇಷವನ್ನು ಗಮನಿಸಬಹುದು. ಸುರಪುರದ ದೊರೆ ಏಕಚಿಂತಪುರದ ಅರಸನ ಮೇಲೆ ಬೇಡರಪಡೆ ಕಳುಹಿಸಿದ್ದು, ಏಕಚಿಂತಪುರದ ಅರಸನ ಏಕೈಕ ಸಂತಾನವನ್ನು ಶಿವಲಿಂಗೇಶ್ವರರು ರಕ್ಷಿಸಿ ಅವನಿಗೆ ನ್ಯಾಯವಾಗಿದಕ್ಕಬೇಕಾದ ರಾಜ್ಯದೊಡೆತನವನ್ನು ಸುರಪುರದ ಅರಸನಿಂದ ಮರಳಿ ದೊರಕಿಸಿಕೊಟ್ಟಿದ್ದು ಶಿವಲಿಂಗೇಶ್ವರರ

ನ್ಯಾಯಪರತೆಯನ್ನು ಸಂಕೇತಿಸುತ್ತದೆ. ಇವೆಲ್ಲವೂ ನಡೆದ ಘಟನೆಗಳಾದರೆ ಈ ಪುರಾಣದಿಂದ ಇತಿಹಾಸಕ್ಕೆ ಹೊಸ ನೆಲೆ ಸಹಜವಾಗಿ ಪ್ರಾಪ್ತವಾಗುತ್ತದೆ."೧೮

ಈ ಕೃತಿಯನ್ನು ಮೊದಲು ಸಂಪಾದಿಸಿದ ಸಿದ್ಧರಾಮ ಸ್ವಾಮಿಗಳು ಪ್ರಕಾಂಡ ಪಂಡಿತರಾಗಿದ್ದರು. ನೂರಾರು ಹಸ್ತಪ್ರತಿಗಳನ್ನು ತಮ್ಮ ಶ್ರೀಮಠದಲ್ಲಿ ಸಂಗ್ರಹಿಸಿದ್ದರು. ರಾಘವಾಂಕ ಚರಿತ್ರ ಮತ್ತು ಗುರುರಾಜ ಚಾರಿತ್ರದಂಥ ಚಾರಿತ್ರಿಕ ಕಾವ್ಯಗಳನ್ನು ಬರೆದ ಸಿದ್ಧನಂಜೇಶನ ವಂಶಜರಾಗಿದ್ದ ಶ್ರೀಗಳು ಶಿ.ಶಿ.ಬಸವನಾಳರ ಜೊತೆಗೆ ಕೂಡಿ ಅನೇಕ ತಾಡೋಲೆ ಗ್ರಂಥಗಳನ್ನು ಬೆಳಕಿಗೆ ತಂದರು. ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಪರವಾಗಿ ೧೯೫೮ರಲ್ಲಿ ಪ್ರಕಟವಾದ ಭೀಮಕವಿಯ ಬಸವಪುರಾಣ ತಾಡೋಲೆ ಕೋರಿ ಕಾಗದದ ಪ್ರತಿ ಒದಗಿಸಿದವರೇ ಸಿದ್ಧರಾಮ ಸ್ವಾಮಿಗಳು. ಅವರು ಶಿವಪುರದ ಸಿದ್ಧಲಿಂಗ ಕವಿ ಬರೆದ ಶಿವಲಿಂಗೇಶ್ವರ ಪುರಾಣದ ಏಕೈಕ ಹಸ್ತಪ್ರತಿಯನ್ನು ಸಂಪಾದಿಸಿ ಪ್ರಕಟಿಸದೇ ಹೋಗಿದ್ದರೆ ಶಿವಲಿಂಗೇಶ್ವರರ ಚರಿತ್ರೆ ಇನ್ನೂ ಅಜ್ಞಾತವಾಗುತ್ತಿತ್ತು ಎಂದೆನಿಸುತ್ತದೆ.

**ಕಾಡಸಿದ್ಧೇಶ್ವರ ಚರಿತೆ :**

ಕಾಡಸಿದ್ಧೇಶ್ವರರು ಒಬ್ಬ ಮಹಿಮಾನ್ವಿತ ಪುರುಷರು. ಇವರು ನೆಲೆನಿಂತಲ್ಲಿ ಮಠಗಳು ನಿರ್ಮಾಣವಾಗಿವೆ. ನೂರಾರು ಮಠಗಳು ಇಂದಿಗೂ ಅಸ್ತಿತ್ವದಲ್ಲಿವೆ. ಅಂದಾಜು ಮೂರನೂರಕ್ಕೂ ಹೆಚ್ಚು ಮಠಗಳು-ದೇವಸ್ಥಾನಗಳು ಕಾಡಸಿದ್ಧೇಶ್ವರರ ಹೆಸರಿನಲ್ಲಿವೆ. ಕಾಡಸಿದ್ಧೇಶ್ವರರು ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಶೇಗುಣಸಿ ಗ್ರಾಮದ ಗೌಡಪ್ಪನವರ ಮನೆತನದವರು. ಲಿಂಗಲೀಲಾ ವಿನೋದಿಗಳಾಗಿ ಲೋಕಸಂಚಾರ ಮಾಡುತ್ತ ಭಕ್ತರನ್ನು ಉದ್ಧರಿಸುತ್ತ ಬಂದವರು. ಗೋಕಾಕ ತಾಲೂಕಿನ ಕೊಣ್ಣೂರು ಮರಡಿಮಠ, ಮಹಾರಾಷ್ಟ್ರದ ಕೊಲ್ಲಾಪುರ ಸಮೀಪವಿರುವ ಕನೇರಿ ಕಾಡಸಿದ್ಧೇಶ್ವರಮಠಗಳು ಇಂದಿಗೂ ಕ್ರಿಯಾಶೀಲವಾಗಿವೆ. ಲಕ್ಷಾಂತರ ಭಕ್ತರು ಇಲ್ಲಿಗೆ ಬರುತ್ತಾರೆ. ಕಾಡಸಿದ್ಧೇಶ್ವರರು ವಚನಗಳನ್ನು ಬರೆದಿರುವುದು ಗಮನಿಸುವ ಅಂಶ.

ಮರಡಿಮಠ ಕೊಣ್ಣೂರು ಕಾಡಸಿದ್ಧೇಶ್ವರ ಮಠವು ಅನೇಕ ಪವಾಡಗಳಿಗೆ ಹೆಸರನ್ನು ಪಡೆದುಕೊಂಡಿದೆ. ಕಾಡಸಿದ್ಧೇಶ್ವರರ ಕುರಿತು ಇರುವ ಭಕ್ತರ ಅಖ್ಯಾಯಿಕೆಗಳನ್ನು ಸಂಗ್ರಹಿಸಿ ಮಠದ ಪೀಠಾಧಿಪತಿಗಳಾದ, ಅದೃಶ್ಯ ಕಾಡಸಿದ್ಧೇಶ್ವರರು ಸಂಗ್ರಹಿಸಿ ಚರಿತ್ರೆ ರೂಪದಲ್ಲಿ ಬರೆದಿದ್ದಾರೆ. ಶ್ರೀಗಳ ಈ ಹಸ್ತಪ್ರತಿಯನ್ನು ಓದಿ ಪರಿಷ್ಕರಣೆ ಮಾಡಿ ಭಾಷಿಕ ಲೋಪದೋಷಗಳನ್ನು ಸರಿಪಡಿಸಿದವರು ಕೊಚ್ಚರಗಿ ಎಂಬ ಭಕ್ತರು. ಕಾಡಸಿದ್ಧೇಶ್ವರರ ಮಠ ಗದ್ದುಗೆಗಳನ್ನು ಗಮನದಲ್ಲಿಟ್ಟುಕೊಂಡು ಚರಿತ್ರೆ ರೂಪಿಸಿರುವುದರಿಂದ ಚಾರಿತ್ರಿಕ ಅಂಶಗಳ ಸ್ಪಷ್ಟತೆಯನ್ನು ವಚನಗಳ ಮೂಲಕ ಹೇಳಿರುವುದು ಅನನ್ಯವಾಗಿದೆ.

**ಶಿವಬೋಧರಂಗರ ಚರಿತ್ರೆ :**

ಮೂಡಲಗಿಯ ಸ್ವಾಮಿಯ ಪರಂಪರೆ ಮತ್ತು ಸಾಹಿತ್ಯ ಇವುಗಳ ಅಭ್ಯಾಸಕ್ಕೆ ಅತ್ಯಂತ ಮಹತ್ವದ ಸಾಧನವೆಂದರೆ 'ದೇಶಿಕ ಚರಿತ್ರೆ' ಮೂಲತಃ ಇದು ಏಕೈಕ ಹಸ್ತಪ್ರತಿಯನ್ನು ಹೊಂದಿದೆ. ಇತ್ತೀಚೆಗೆ ಇದು 'ದೇಶಿಕ ಚರಿತೆ' ಎಂದು ಪ್ರಕಟವಾಗಿದೆ. ಶ್ರೀಮಠದಲ್ಲಿ ಇದು ದೊರೆಯುತ್ತದೆ. ಮೂಲ ಹಸ್ತಪ್ರತಿ ಮಾತ್ರ ಸ್ವಾಮಿಯ ದೇವರ ಮನೆಯಲ್ಲಿ ದೇವರ ಜೊತೆಗೆ ಪೂಜೆ ಸಲ್ಲಿಸುತ್ತಿದ್ದಾರೆ. 'ದೇಶಿಕ ಚರಿತ್ರೆಯು ಬೃಹತ್ ಗಾತ್ರವನ್ನು ಹೊಂದಿದೆ.

"ಈ ದೇಶಿಕ ಚರಿತವು ಒಟ್ಟು ಏಳು ಅಧ್ಯಾಯಗಳಲ್ಲಿ ೮೯೬ ಪದ್ಯಗಳಲ್ಲಿ ಬರೆಯಲ್ಪಟ್ಟಿದೆ. ಸುಮಾರು ೧೯೦ ಪುಟಗಳ ಚಿಕ್ಕ ಹಾಗೂ ಚೊಕ್ಕವಾದ ಈ ಕೃತಿಯಲ್ಲಿ ಕವಿವರ್ಯ (ಗುರುನಾಥ)ನು ಮೂಡಲಗಿಯ ಸ್ವಾಮಿಗಳಲ್ಲಿಯ ರಂಗಬೋಧ, ಅದ್ವಯಬೋಧ, ಶಿವಬೋಧ, ೨ನೇ ರಂಗಬೋಧ ಮತ್ತು ೨ನೇ ಶಿವಬೋಧ ಎಂಬ ಐದು ಜನ ಸಂತರ ಚರಿತ್ರೆಯನ್ನು ನಿರೂಪಿಸಿದ್ದಾನೆ. ಶ್ರೀ ಶಕೆ ೧೭೦೭ ಚೈತ್ರ ಶುದ್ಧ ಪೂರ್ಣಿಮೆಯಂದು (ಕ್ರಿ.ಶ. ೧೭೮೫ರಲ್ಲಿ) ಈ ಗ್ರಂಥದ ಬರವಣಿಗೆ ಮುಗಿಯಿತೆನ್ನಲಾಗಿದೆ. ಈ ಮೂಲ ಕೃತಿಯನ್ನು ಆಧರಿಸಿ ಸಂಗಬೋಧರೆಂಬುವರು ಪ್ರತಿ ಮಾಡಿಕೊಂಡಿದ್ದು ಶ್ರೀ ಶಕೆ ೧೭೦೯ ಪ್ಲವಂಗನಾಮ ಸಂವತ್ಸರ ಆಶ್ವಿಜ ವದಿ ೩ ಇಂದುವಾರ ಶುಭದಿನ 'ದೇಶಿಕ ಚರಿತ್ರೆ' ಗ್ರಂಥಲೇಖನ ಸಮಾಪ್ತ."[೧೯]

**ಶ್ರೀಮಚ್ಚರಿತ್ರೆ :**

ಗುರ್ಲಹೊಸೂರಿನಲ್ಲಿ ಚಿದಂಬರ ದೀಕ್ಷಿತರೆಂಬ ಹಿರಿಯ ಅವತಾರ ಪುರುಷರಾಗಿ ಹೋದರು. ಅವರ ನಾಲ್ಕು ಚರಿತ್ರೆಗಳು ಇಂದು ಲಭ್ಯವಿವೆ. ಅವುಗಳಲ್ಲಿ ಮೂರು ಮರಾಠಿಯಲ್ಲಿದ್ದರೆ ಒಂದು ಗ್ರಂಥ ಮಾತ್ರ ಸಂಸ್ಕೃತದಲ್ಲಿದೆ. ಮೊದಲನೆಯ ಚರಿತ್ರೆಯು ಸ್ವಾಮಿಯ ಪರಮಭಕ್ತನಾದ ರಾಜಾರಾಮ ಅಭಂಗ ರೂಪದಲ್ಲಿ ರಚನೆ ಮಾಡಿದ್ದಾನೆ. ಚಿದಂಬರ ಚರಿತ್ರೆ ಎಂದು ಉಲ್ಲೇಖದಿಂದ ತಿಳಿದುಬರುತ್ತದೆ.

ಸ್ಥಳೀಯ ಮಹಾತ್ಮರ ಕುರಿತು ಗ್ರಂಥರೂಪದಲ್ಲಿ ಪ್ರಕಟಗೊಂಡಿರುವುದನ್ನು ಗಮನಿಸಿದ ನಂತರ ಮಹಾತ್ಮರ ಚಾರಿತ್ರಿಕ ಮಹಿಮೆಯ ವಿಚಾರ ಕುರಿತು ಹಸ್ತಪ್ರತಿಗಳಲ್ಲಿ ಉಲ್ಲೇಖಗೊಂಡಿರುವ ವಿಚಾರವನ್ನು ನೋಡಬಹುದು. ಮಹಾತ್ಮರು ಹೆಜ್ಜೆ ಇಟ್ಟ ನೆಲವೆ ಪಾವನ ಅವರು ನುಡಿದ ವಾಕ್ಯವೆ ಸರ್ವೋಚ್ಚವಾದದ್ದು ಎಂಬ ನಂಬಿಕೆ ನಮ್ಮ ಭಾರತೀಯ ಜನರ ಮನದಾಳದಲ್ಲಿ ಚಿತ್ರಿತಗೊಂಡಿದೆ. ಆ ದಿಶೆಯಲ್ಲಿ ಮಹಾತ್ಮರು ತಮ್ಮ ಕರ್ತೃತ್ವಶಕ್ತಿಯಿಂದ ಸಿದ್ಧಿ ಸಾಧನೆಯಿಂದ ಜನರ ಮೇಲೆ ತಮ್ಮ ದಯಾಳುತನ ತೋರಿಸುತ್ತ ಭಕ್ತರನ್ನು ಸಲುಹುತ್ತ ಬಂದಿದ್ದಾರೆ.

**ಅಂಕಲಗಿ ಅಡವಿಸಿದ್ಧೇಶ್ವರ ಮಹಾಸ್ವಾಮಿಗಳ ಚರಿತ್ರೆ :**

ಇವರ ಚರಿತ್ರೆಯ ವಿಷಯದಲ್ಲಿ ಬೆಳಗಾವಿ ಜಿಲ್ಲೆಗೆ ಸೇರಿದ ಗೋಕಾಕ ಪುರವಾಸಿಗಳಾದ ವಿರೂಪಾಕ್ಷ ಶಾಸ್ತ್ರಿಗಳಿಂದ ಕ್ರಿ.ಶ. ೧೮೫೭ ಶಕೆ ೧೭೭೮ ನಳನಾಮ ಸಂವತ್ಸರದಲ್ಲಿ ಅಂದರೆ

ಶ್ರೀ ಅಡಿವೆಪ್ಪನವರು ದೇಹವಿಟ್ಟು ಐದಾರು ತಿಂಗಳುಗಳಾದ ಬಳಿಕ ರಚಿಸಲ್ಪಟ್ಟ ಶ್ರೀ ಮಚ್ಚಿದಾರಣ್ಯಾಖ್ಯಾಮಹಿಮ್ನ ತಂತ್ರ ಎಂಬುದೊಂದು ಪಾರ್ವತಿ ಪರಮೇಶ್ವರರ ಸಂವಾದ ರೂಪವಾದ ಸಂಸ್ಕೃತ ಪುರಾಣ ಗ್ರಂಥವು ಉಪಲಬ್ಧವಿದೆ. ಅದರಲ್ಲಿ ಗ್ರಂಥಕಾರರು ಸ್ವಾಮಿಗಳ ಪೂರ್ವವೃತ್ತಾಂತವನ್ನು ಬರೆಯುವಾಗ ಬಸವೇಶ್ವರನ ಅವತಾರದ ಆರಂಭದಂತೆ, ಅಂದರೆ ಮೃತ್ಯುಲೋಕದಲ್ಲಿ ಶೈವಮತವು ಕುಂದ ಹತ್ತಿತೆಂದು ನಾರದರ ಮುಖದಿಂದ ಶ್ರೀ ಪರಮೇಶ್ವರನಿಗೆ ಹೇಳಿಸಿ ಬಸವೇಶ್ವರರೂ ಪರಮೇಶ್ವರರೂ ಜಂಗಮ ರೂಪವನ್ನು ತಾಳಿ ಕೈಲಾಸದಿಂದ ಭೂಲೋಕಕ್ಕೆ ಬಂದು ದ್ವಾದಶ ಲಿಂಗಗಳ ದರ್ಶನವನ್ನು ಮಾಡಿ ಅಂಕಲಗಿ ಎಂಬ ಗ್ರಾಮದ ಸಮೀಪದಲ್ಲಿ ಬಂದ ಬಳಿಕ ಪರಮೇಶ್ವರನು ಗುಪ್ತವಾದನು ಹಾಗೂ ಬಸವೇಶ್ವರನು ಒಂದು ಬಿದುರು ಮಳೆಯಲ್ಲಿ ವಾಸಿಸಿ ಮುಂದೆ ಶ್ರೀ ಅಡಿವೆಪ್ಪನವರು ಎಂಬ ಹೆಸರಿನಿಂದ ಪ್ರಸಿದ್ಧನೆಂದು ಚರಿತ್ರೆಯು ದಾಖಲಿಸುತ್ತದೆ. ೧೫೭ ಪುಟ ಗಾತ್ರದ ಒಂದು ಚಿಕ್ಕದಾದ ಪುಸ್ತಕದ ಚರಿತ್ರೆ ದೊರೆಯುತ್ತದೆ. ಈ ಗ್ರಂಥವು ಶ್ರೀಮಠದಿಂದ ಪ್ರಕಟಿಸಿ ನೀಡುತ್ತಿರುವುದು ಗಮನಾರ್ಹ ಸಂಗತಿ.

**ಅಂಕಲಗಿ ಅಡಿವೆಪ್ಪನ ಮಹಿಮೆ :**

**ಆದಿ :** "ಶ್ರೀ ಗುರುಸಿದ್ಧೇಶ್ವರಾಯ ನಮಃ । ಅಂಕಲಗಿ ಶ್ರೀ ಅಡಿವೆಪ್ಪನವರ ಚರಿತ್ರೆ ಮಂಗಳಾಚರಣ ಶ್ಲೋಕ ವೃತ್ತ। ಸುರವರ ಮುನಿಪೂಜ್ಯಂ ಸ್ವರ್ಗ ಮೋಕ್ಷೈಕ ಬಂಧುಂ ಬವನದಾವಾಗ್ನಿಂ ಪ್ರಣವರೂಪಂ ಪರೇಶಂ॥ ಅಘತಿಮಿರ ಪತಂಗಂ ಮರದರ್ಪಾವಿಭಂಗಂ । ಭಜ ಭಜ ಅಟವೀಶ ಯೋಗಿನಾ ಯೋಗಿನಾಮ್ಯಂ॥೧॥

**ಅಂತ್ಯ :** ಸ್ವಾಮಿ ಈ ಪಾಪಿಯ ಮೇಲೆ ಕೃಪೆಯನ್ನು ಮಾಡಬೇಕು ಶಿನೆಯ ಸ್ತ್ರೀಯು ನನ್ನ ಹೆಸರು ಕಾಶಮ್ಮ ನಾನು ಬಾಲ ವಿಧವೆಯಾಗಿರುವೆನು ನನಗೆ ತಾಯಿ ತಂದೆಗಳಿಲ್ಲ ಬಂಧು ಬಳದವರಿಲ್ಲ ಕಣ್ಣು ಬೇನೆ ಬಂದು..."[೨೦]

ಮೇಲಿನ ಹಸ್ತಪ್ರತಿಯ ವಿಷಯ ಗಮನಿಸಿದಾಗ ಅಡಿವೆಪ್ಪನವರ ಮಹಿಮೆ ಶ್ರೇಷ್ಠವಾದದ್ದು. ಈ ಭಾಗದ ಆರಾಧ್ಯದೇವರು ಬೇಡಿದವರಿಗೆ ಬೇಡಿದ್ದನ್ನು ನೀಡುವ ದಾಕ್ಷಿಣ್ಯತೆವುಳ್ಳವರಾಗಿದ್ದರು. ಶ್ರೀಗಳು ನೀಡಿದ ವರದ ಕುರಿತು ಜನರು ತಮ್ಮ ಬಾಯಿಂದ ಇಂದಿಗೂ ಮಾತನಾಡುತ್ತಾರೆ. ನೆರೆಯ ಗ್ರಾಮವಾದ ತವಗಮಠಕ್ಕೆ ಶ್ರೀಗಳ ಆಶೀರ್ವಾದಿಂದ ಬೆಳೆಯುತ್ತಾ ಬಂದಿದೆ ಎಂಬ ಪ್ರತೀತಿ ಈಗಲೂ ಇದೆ.

**ಜನಪದ ಚರಿತ್ರೆಯ ಲಾವಣಿ ಹಸ್ತಪ್ರತಿಗಳು :**

ಪದ್ಯರೂಪದ ಅತ್ಯಂತ ಪ್ರಾಚೀನ ರೂಪವನ್ನು ಹೊಂದಿದ ಒಂದು ಪ್ರಕಾರವನ್ನು ಲಾವಣಿಗಳೆಂದು ಕರೆಯುತ್ತೇವೆ. ನಮ್ಮ ಸಾಹಿತ್ಯ ನಿಜವಾದ ಸಾಂಪ್ರದಾಯಿಕ ಜಾತಿಯ ಲಾವಣಿಗಳಿಂದ ಸಮೃದ್ಧವಾಗಿವೆ. ಬೆಳಗಾವಿ ಜಿಲ್ಲೆಯಲ್ಲಿ ಲಾವಣಿ ಕಲಾವಿದರ ಸಂಖ್ಯೆ ಅಪಾರವಾಗಿದೆ. ಅನೇಕ ಜನ ಲಾವಣಿಕಾರರು

ಬರೆಯುವುದರ ಜೊತೆಗೆ ಹಾಡುತ್ತಿದ್ದರು. ಕೆಲವರು ಬರವಣಿಗೆಯನ್ನಷ್ಟೇ ಮಾಡಿದ್ದಾರೆ. ಶಿಷ್ಟ ಸಾಹಿತ್ಯ ಕೃಷಿಯು ಬಹಳ ತೀವ್ರಗತಿಯಿಂದ ಸಾಗುತ್ತಿರುವಾಗ ಗ್ರಾಮೀಣ ಪರಿಸರದಲ್ಲಿ ವಿಪುಲವಾದ ಜನಪದ ಸಾಹಿತ್ಯವು ರಚನೆಗೊಂಡಿದ್ದು ಹೆಮ್ಮೆಯ ಸಂಗತಿಯಾಗಿದೆ.

ಕ್ಷೇತ್ರಕಾರ್ಯದ ಅಧ್ಯಯನದ ಪ್ರಕಾರ ಈ ಜಿಲ್ಲೆಯ ಮೊದಲ ಲಾವಣಿಕಾರ ಪುಂಡಬಸವಕಂದ (೧೮೦೦-೧೮೭೦) ಲಾವಣಿಕಾರರಲ್ಲಿ 'ಪುಂಡಬಸವಕಂದ' ಎಂಬ ಅಂಕಿತದ ಜನಪದ ಕವಿಯೂ ಒಬ್ಬನಾಗಿದ್ದಾನೆ. ಇವನ ವಿಷಯಕ್ಕೆ ಹೆಚ್ಚಿನ ಮಾಹಿತಿ ತಿಳಿದು ಬಂದಿಲ್ಲ. ಕಿತ್ತೂರ ಸಂಸ್ಥಾನ ಹಾಳಾದ ತರುವಾಯದಲ್ಲಿ ಈ ಕವಿ ಬಹುಶಃ ಆ ಕಥೆಯನ್ನೆಲ್ಲಾ ಜನರ ಬಾಯಿಂದಕೇಳಿಯೊ, ಚಿಕ್ಕಂದಿನಲ್ಲಿ ಕಣ್ಣಾರೆಕಂಡು ಕಿತ್ತೂರ ಸಂಸ್ಥಾನದ ದೊರೆಗಳ ಮೇಲೆ ಲಾವಣಿಗಳನ್ನು ರಚಿಸಿರಬೇಕು. ದೊಡ್ಡಭಾವೆಪ್ಪ ಮೂಗಿ ಅವರೂ ಕೂಡ 'ಕಿತ್ತೂರಿನ ಪ್ರಕರಣವೆಲ್ಲ ಕೊನೆಗೊಂಡಾಗ ಈತನು ಜನರ ಬಾಯಿಂದ ಕೇಳಿದ ಕಥೆಯನ್ನೆ ಲಾವಣಿಯಲ್ಲಿ ಹೆಣೆದಿದ್ದಾನೆ' ಎಂದಿದ್ದಾರೆ. ಹೊಂಗಲದ ಬಸವನ ಶಿಷ್ಯಮಗನಾಗಿರಬೇಕೆಂದು ಮಧುರಚೆನ್ನರು ಊಹಿಸಿದ್ದಾರೆ. **'ಬಸವನ ಕಂದ'** ಕಂಡಂತೆ ಕವಿ ಮಾಡಿದ ವಿಸ್ತಾರ' ಎಂಬ ಈತನ ಹಾಡುಗಳ ಕೊನೆಗೆ ಬರುವ ಚರಣದಲ್ಲಿ 'ಬಸವನಕಂದ' ಎಂದಿದೆ. ಬಹುಶಃ ಮಧುರಚೆನ್ನರು ಹೇಳಿದಂತೆ ಹೊಂಗಲದ 'ವೃಷಭ' ಬಸವಕವಿಯ ಶಿಷ್ಯನಾಗಿರಬೇಕೆಂದು ಒಪ್ಪಿಕೊಳ್ಳಬಹುದಾಗಿದೆ.

'ಪುಂಡ ಬಸವಕಂದ'ನು ಸಂಗೊಳ್ಳಿ ರಾಯಣ್ಣ, ಮಲ್ಲಸರ್ಜ, ಚೆನ್ನಮ್ಮ ಮೊದಲಾದವರ ಕುರಿತು ಲಾವಣಿ ರಚಿಸಿದ್ದಾನೆ.

"ಕಿತ್ತೂರ ಚನ್ನವ್ವನ ಸೊಸಿ । ಹೊಂಗಲ ಬಿಟ್ಟು
ಹೋಗುವಾಗೆ ಮಾಡತಾಳ ಮಾ ದುಃಖಾ
ಮತ್ತ ನಮ್ಮ ಮಲ್ಲಸರ್ಜ ಸತ್ತು ಹೋಗದಿದ್ದರಿಂತು
ಹೊತ್ತು ಹೋಗುದೇಕೆ ನಮ್ಮ ಬದುಕು ॥ಪ॥

..............................................................

ದಾನಧರ್ಮವ ಕೊಟ್ಟು । ನೇಮ ನಿತ್ಯ ತೀರಿಸಿ ।
ಮನ್ಯ ಮುಕ್ತಿ ಕೊಡೆಂದು
ಚನ್ನವ್ವನ ಸೊಸಿ ಮಣ್ಣೊಳಗಿಟ್ಟ ತಿರುಗಿದರು...."[೨೧]

**ಬೈಲಹೊಂಗಲದ ಶಾಮರಾವ (೧೮೦೦-೧೮೮೦) :**

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಶಾಮರಾವ ಎಂಬ ಜನಪದ ಕವಿಯು ಬಲಭೀಮನ ಭಕ್ತನಾಗಿದ್ದ ತನ್ನ ಹಾಡುಗಳಲ್ಲಿ ಅವನನ್ನು ಸ್ಮರಿಸಿದ್ದಾನೆ. ಸಂಗೊಳ್ಳಿ ರಾಯಣ್ಣನ ದಂಗೆ ಎಂಬ ಚಾರಿತ್ರಿಕ ಲಾವಣಿಯೊಂದನ್ನು ಬರೆದಿದ್ದಾನೆ. ಅಲ್ಲದೆ ನೂರಾರು ಇತರ ಲಾವಣಿಗಳನ್ನೂ ಬರೆದಿರಬೇಕು. ಬಹುಶಃ ಈತನು ೧೮೦೦ ರಿಂದ ೧೮೮೦ರ ಅವಧಿಯಲ್ಲಿ ಬಾಳಿದವನಾಗಿರಬೇಕು. ಹೆಚ್ಚಿನ ಮಾಹಿತಿ ತಿಳಿದು ಬಂದಿಲ್ಲ.

"ಶಾಹೀರ ಶಾಮರಾವ ಬಾರೋ ಜಾಹೀರ ಕರ್ನಾಟಕದೊಳು
ತಯಾರ ಮಾಡ್ಯಾರೊ ಚಂದ ಚಂದ ಕವಿತಾ
ತಾಯಿ ಕ್ಷೀರ ಕಡದಂಗ ಆತೋ ಹಸುಗೂಸಿಗೆ ಹಿತಾ
ಬೈಲಹೊಂಗಲ ಶಹರಾ ಬಲಭೀಮನ ದಯಾಪೂರ್ತಾ
ಕುಲಕರ್ಣಿ ದಶಿಯಿಂದ ಮ್ಯಾಲೆ ಕದನಹುಟ್ಟಿ
ಊರ ಬಿಟ್ಟ ಸುತ್ತೆಲ್ಲಾ ಹಾವಳಿ ಮಾಡಿದ ವಿಪರೀತಾ
ಬಂಟನಿದ್ದಾರನಿರಬೇಕ ರಾಯಣ್ಣ ಪುಂಡ ಪ್ರಖ್ಯಾತಾ."[೨೨]

**ಗೋಕಾಕದ ಅನಂತಾಚಾರ್ಯ (೧೮೦೦–೧೮೮೦) :**

ಗೋಕಾಕ ಬೆಳಗಾವಿ ಜಿಲ್ಲೆಯ ತಾಲೂಕ ಸ್ಥಳವಾಗಿದೆ. ಇಲ್ಲಿ ಹಲವಾರು ಜನಪದ ಕವಿಗಳೂ ಆಗಿ ಹೋಗಿದ್ದಾರೆ. ಕ್ರಿ.ಶ. ಸು. ೧೮೦೦ರಲ್ಲಿ ಹುಟ್ಟಿ ೮೦ ವರುಷಗಳ ತುಂಬುಜೀವನ ಬದುಕಿದ ಅನಂತಾಚಾರ್ಯ 'ಅನಂತಾದ್ರೀಶ' ಎಂಬ ಮುದ್ರಿಕೆಯಲ್ಲಿ ನೂರಾರು ಅನುಭವ ಪದಗಳನ್ನು ರಚಿಸಿದ್ದಾನೆ. ಸಂಸ್ಕೃತ ಪಂಡಿತನೂ, ಸಂಗೀತ ಶಾಸ್ತ್ರಜ್ಞನೂ ಆಗಿದ್ದನೆಂದು ತಿಳಿದುಬರುತ್ತದೆ. ಶ್ರೀಸಾಮಾನ್ಯರಿಗೆ ತಿಳಿಯುವ ಭಾಷೆ ಬಳಸಿ, ಜನಪದ ಧಾಟಿಯಲ್ಲಿ ಹಲವಾರು ಕೃತಿಗಳನ್ನು ಬರೆದಿದ್ದನೆಂದು ತಿಳಿದುಬರುತ್ತದೆ. ಹತ್ತಾರು ಬಯಲಾಟಗಳೂ ಈತನಿಂದ ಸೃಷ್ಟಿಯಾಗಿರುತ್ತವೆ. ಪಾರಿಜಾತ ಆಟದಲ್ಲಂತೂ ಇವನಿಗೆ ವಿಶೇಷ ಒಲವು. ಕೃಷ್ಣಪಾರಿಜಾತದಂತೆ ಶಿವಪಾರಿಜಾತವೊಂದನ್ನು ರಚಿಸಿದ ಕೀರ್ತಿ ಇವನಿಗೆ ಸಲ್ಲುತ್ತದೆ. ನೂರಾರು ಲಾವಣಿಗಳನ್ನು ಬರೆದಿದ್ದಾನೆ.

ಕವಿಯ ವಿಷಯಕ್ಕೆ ಹೆಚ್ಚಿನ ಮಾಹಿತಿಗೆಂದು ಗೋಕಾಕ ಊರನ್ನೆಲ್ಲ ಸುತ್ತುಹಾಕಿದರೂ ಅವನ ಸುಳಿವು ಗೊತ್ತಾಗಲಿಲ್ಲ. ಆದರೆ ಅನಂತಾದ್ರಿಶರು ಬರೆದ ಶಿವಪಾರಿಜಾತ ಮತು ವೆಂಕಟೇಶ ಪಾರಿಜಾತದ ಸಚಿತ್ರ ಹಸ್ತಪ್ರತಿಗಳು ಬೆಂಗಳೂರಿನಲ್ಲಿ ವಾಸವಾಗಿರುವ ಅವರ ಮೊಮ್ಮಗಳ ಹತ್ತಿರ ಇವೆ.

"ಹ್ಯಾಂಗ ಮಾಡಲೆವ್ವಾ ನಾನು ಏ ಮಾತ ನಾ । ಇ
ನ್ಹ್ಯಾಂಗ ಮಾಡಲೆವ್ವ ನಾನು ॥ಪ॥
ಹ್ಯಾಂಗ ಮಾಡಲೆವ್ವಾ ನಾನು
ಹೋಗಿ ಸವತಿಮನಿ ಸೇರಿದ
ಭೋಗಮಂದಿರ ಬೇಸರಾಯಿತು
ಬೇಗ ಈಗಲೇ ಹೋಗಿ ಕರೆಯೆ ॥ಅ.ಪ॥
ನೀರಿನೊಳಗ ಮನಿಯಮಾಡಲ್ಯಾ ಅಲ್ಲ್ಯವನು ಪೊತ್ತ
ಭಾರಬೆನ್ನೊಳು ಪೊತ್ತು ತಾಳಲ್ಯಾ

ಬೇರು ತಿನಿಸಿ ಮರುಳು ಮಾಡಿ ಕ್ರೂರಬುದ್ಧಿ ಬಿಡಿಸಲೇನು
ಯಾರ ಮುಂದ ಹೇಳಲಿನ್ನದಾರಮಾತು ಕೇಳಲೊಲ್ಲ ॥೧॥
ಕಂತು ಪಿತಾನಂತಾದ್ರೀಶ ನಿಂತನಲ್ಲೆ ನಾಚಿಕೆಬಿಟ್ಟು
ಭ್ರಾಂತಳಾಗಿ ಕುಳಿತೆ ಆತಗೆ ಎಂಥ ಕುದುರಿ ಕಳುಹಲಮ್ಮ."[೨೩]

**ನೇಸರಗಿಯ ಅಡಿವೆಪ್ಪ (೧೮೦೦-೧೯೦೦) :**

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ನೇಸರಗಿ ಗ್ರಾಮದ ಅಡಿವೆಪ್ಪ ಚೌಬಾರಿ ಎಂಬವನು ಕ್ರಾಂತಿಕಾರಿ ಜನಪದ ಕವಿಯೆನಿಸಿದ್ದಾನೆ. ಸು. ೧೮೦೦ ರಿಂದ ೧೯೦೦ ರ ಅವಧಿಯಲ್ಲಿ ಬಾಳಿರಬೇಕು. ಶಿನೇ ಇಯತ್ತೆವರೆಗೆ ಓದಿದ ಅಡಿವೆಪ್ಪ ಗಾಂವಠಿ ಶಾಲೆಯೊಂದರಲ್ಲಿ ಶಿಕ್ಷಕನಾಗಿದ್ದನೆಂದು ತಿಳಿದುಬರುತ್ತದೆ. ಅಡಿವೆಪ್ಪನ ಮೂಲ ಉದ್ಯೋಗ ಒಕ್ಕಲುತನ.

ಕಿತ್ತೂರ ಸಂಸ್ಥಾನದ ಮೇಲೆ ಅಧಿಕನಿಷ್ಠೆ ಈ ಕವಿಗೆ. ಮಲ್ಲಸರ್ಜ ಎಂದರೆ ಎಲ್ಲಿಲ್ಲದ ಅಭಿಮಾನ. ಬ್ರಿಟಿಷರ ಕೈವಶವಾದ ಬಳಿಕ ಸಂಗೊಳ್ಳಿ ರಾಯಣ್ಣನ ಜೊತೆಗೂಡಿ ಅವರ ವಿರುದ್ಧ ಹೋರಾಡಲು ದಂಡು ಕೂಡಿಸಿದ್ದನು. ಕಿತ್ತೂರಿನ ಕೊನೆಯ ಕಾಳಗ ಎಂಬ ಲಾವಣಿಯೊಂದನ್ನು ಈತನೇ ರಚಿಸಿದ್ದನೆಂದು ಅಲ್ಲಿಯ ಪದ್ಯಗಳಿಂದ ತಿಳಿದುಬರುತ್ತದೆ. ದೊಡ್ಡಭಾವೆಪ್ಪ ಮೂಗಿಯವರು ಇದನ್ನು ಕಿತ್ತೂರಿನ ಕಾಳಗ ಎಂಬ ಪುಸ್ತಕದಲ್ಲಿ ಪ್ರಕಟಿಸಿದ್ದಾರೆ. ಇದು ಕಿತ್ತೂರ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಿದೆ. 'ಕರವೀರಭದ್ರ' ಎಂಬುದು ಕವಿಯ ಅಂಕಿತವಾಗಿದೆ. ಹಲವಾರು ಬಯಲಾಟಗಳನ್ನೂ ಕವಿ ರಚಿಸಿದ್ದನೆಂದು ಜನರು ಹೇಳುತ್ತಾರೆ.

"ಧರೆಯೊಳು ಮೆರೆಯುವ ನೇಸರಗಿ । ಕರವೀರಭದ್ರಗ ನಾ ಹೋಗಿ
ಸರದಾರ ರಾಮಣ್ಣ ನ್ಹಾಡಿಗೆ । ಅಪ್ಪ ಮಲ್ಲಸರ್ಜನ ದೊರೀತನಿರುವಾಗ
ಸರದಾರ ರಾಮಣ್ಣ ಸಣ್ಣವನೊ..............
..................................................................
ಚಿತ್ತವಿಟ್ಟು ಕೇಳಿರಿ ನೀವು ಇನ್ನು । ಬರೆದು ಕೊಟ್ಟಂಥ ವತನವನು।
ಇಂಗ್ರೇಜಾ-ಇಲ್ಲಿತನಕ ತಾನು ನಡಸಿದನೋ..."[೨೪]

**ಬೈಲಹೊಂಗಲದ ಅಪ್ಪು (೧೮೨೦-೧೯೦೦) :**

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ಗ್ರಾಮದ ಮರಾಠಾ ಜಾತಿಗೆ ಸೇರಿದ 'ಅಪ್ಪು' ಪ್ರಸಿದ್ಧ ಜನಪದ ಕವಿ. ಬೈಲಹೊಂಗಲದಲ್ಲಿಯೆ ನಡೆಯಿತೆಂದು ಹೇಳಲಾಗುವ ೧೮೬೩ರ ಅಕ್ಟೋಬರ್ ೧೨ ರಂದು ನಡೆದ ಒಂದು ಕೊಲೆಯ ಆಧಾರದ ಮೇಲೆ 'ಅಪ್ಪು' 'ಸಂಗ್ಯಾನ ಅಪರಾಧ ಮತ್ತು ಸಾವು' ಎಂಬ ಐತಿಹಾಸಿಕ ಲಾವಣಿಯನ್ನು ರಚಿಸಿದ್ದಾನೆ. ಫ್ಲೀಟರು ಇದನ್ನು ೧೮೯ರಲ್ಲಿಯೆ ಸಂಗ್ರಹಿಸಿದ್ದುಂಟು. ಅದಕ್ಕೂ ಮೊದಲು ಈ ಹಾಡಿನ ರಚನೆಯಾಗಿರಬೇಕು. ಆದ್ದರಿಂದ ಕವಿ.

ಸು. ೧೮೨೦ರಿಂದ ೧೯೦೦ರ ಅವಧಿಯಲ್ಲಿ ಬಾಳಿದವನಾಗಿರಬೇಕು. ಊರ ಹನಮಂತ ದೇವರನ್ನು ಹಾಡುಗಳಲ್ಲಿ ಸ್ಮರಿಸಿದ್ದಾನೆ. ತೇರದಾಳ ತುಕಾರಾಮನ ಶಿಷ್ಯನಿವನು.

"ಬಡತನ ಅಂಬುದು ಬಾಳ ಕೆಟ್ಟ
ಬಡವಗ ಬಂತು ಬಹು ಸಿಟ್ಟ
ಸಾವಕಾರ ಸಾಲಾ ಕೊಡಬೇಕಾದರ
ಸಂಗ್ಯಾಗ ಆದಿತೊ ಸಂಕಷ್ಟ ॥ಪಲ್ಲ॥
ಶಹರ್ ಹೊಂಗಲದಾಗ ಸಾವಕಾರ
ದೂರವಜಂತಿ ಅವನ ಹೆಸರ
ಬೆಳ್ಳಿ ಬಂಗಾರ ರೊಕ್ಕ ರೂಪಾಯಿ
ಅಳ್ಳಿಯ ವಹಿವಟ ವ್ಯಾಪಾರ
ಚಿನಾಯಿ ಕುರೇದ ಚಾರುತರ
ರೂಪಾಯಿ ವೋಯುತ್ತಾರ ಪತ್ತಾರ
ವಾರವರ ಚಲತಿ ಚಾಕಲೆಕ್ಕ ಮಾಡೋದು ಶನಿವಾರ
ಅಂದಾದುಂದಿ ಅವನ ಕಾರ್ಭಾರ
ಹತ್ತೆಂಟು ಮಂದಿ ಅವನ ಮನುಷ್ಯರ
ಮಾಗಿ ಮಳಿಗಾಲ ಹತ್ತಿ ಅರವುತಾರ ಗೊತ್ತ ಇಲ್ಲದ ಹೆಂಗಸರ

...............................................................

ಊರ ಬೈಲ್‌ಹೊಂಗಲ ದೊಡ್ಡ ಶಹರ
ಜಾಹೀರಾ
ಸುತ್ತ ರಾಜ್ಯದ ವಳಗ ಹೆಸರಾ
ಹನುಮಂತ ದೇವರಾ ಅವಗ ನಮಸ್ಕಾರಾ
ತುಕಾರಾಮ ನಮ್ಮ ವಸ್ತದರಾ
ಶಾಯಿರಾ ಕವಿ ಅಪ್ಪು ಮಾಡಿದ ತಯಾರಾ" [೨೫].

**ಬೆಲ್ಲದಬಾಗೇವಾಡಿಯ ಬಾಳಗೋಪಾಳ (೧೮೩೦-೧೯೧೦) :**

ಬೆಲ್ಲದಬಾಗೇವಾಡಿ ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಒಂದು ಸುಧಾರಿತ ಗ್ರಾಮವಾಗಿದೆ. ಇಲ್ಲಿಯ ಜಮೀನದಾರರೂ ಶ್ರೀಮಂತರೂ ಆದ ಭೀಮರಾಯರ ಮಗ ಗೋಪಾಲನೇ 'ಬಾಳಗೋಪಾಳ'. 'ಬಾಳಗೋಪಾಳ' ಎನ್ನುವುದು ಕವಿಯ ಅಂಕಿತವಾಗಿರುತ್ತದೆ. ಚಿಕ್ಕಂದಿನಲ್ಲಿ ಪ್ರೀತಿಯಿಂದ 'ಬಾಳ' ಎಂದು ಕರೆಯುತ್ತಿದ್ದುದರಿಂದ ಬಾಳಗೋಪಾಲನು ಮುಂದೆ 'ಬಾಳಗೋಪಾಳ'ನೆನಿಸಿ ಜನಪದ ಸಾಹಿತ್ಯಕ್ಷೇತ್ರದಲ್ಲಿ ಪ್ರಸಿದ್ಧಿಪಡೆದನು. ಬೆಲ್ಲದ ಬಾಗೇವಾಡಿಯ

'ಬಾಳಗೋಪಾಳ' ಎಂದು ಪ್ರಸಿದ್ಧಿಪಡೆದ ಲಾವಣಿಕಾರನ ಹಾಡುಗಳನ್ನು ನಿಂಗಣ್ಣ ಸಣ್ಣಕ್ಕಿ ಅವರು ಈಗಾಗಲೇ ಸಂಗ್ರಹಿಸಿ ಪ್ರಕಟಿಸಿದ್ದಾರೆ.

ಬ್ರಾಹ್ಮಣರಾದ ಭೀಮರಾಯರು ತಮ್ಮ ಮಗ ಒಳ್ಳೆಯ ಶಾಸ್ತ್ರಕಾರನಾಗಬೇಕೆಂದು ಅವನಿಗೆ ಯೋಗ್ಯ ಗುರುವಿನಿಂದ ವೈದಿಕಧರ್ಮದ ತಿಳುವಳಿಕೆ ಮಾಡಿಸಿಕೊಟ್ಟಿದ್ದರು. ಅಣ್ಣಾರಾವಜಿ ಎಂಬ ಗುರುಗಳಿಂದ ಜ್ಞಾನ ಸಂಪಾದಿಸಿದ್ದನು. ಅಂತೆಯೆ ಕವಿ ಈ ಗುರುವಿನನ್ನು ತನ್ನ ಹಾಡುಗಳಲ್ಲಿ ಸ್ಮರಿಸಿದ್ದಾನೆ.

"ಅಣ್ಣಾರಾವಜಿ ವಸ್ತಾದನ ಜ್ಞಾನಾ । ಚರಣದಲ್ಲಿ ಗುರುಬ್ರಹ್ಮಹರಾ।
ಬಾಳಗೋಪಾಳನಿಂತ ಹಾಡತಾನಾ । ನಮ್ಮಮ್ಯಾಲ ಇರ್ಬೇಕು ಕರುಣಾ।
ಬಾಗೋಡಿ ಜಾಗ ರಂಗಲಾಲ ನಾಡನಾಡಿಗೆ ಸುರದಂಗ ರನ್ನಾ।
ಅಣ್ಣಾರಾವಜಿ ಗುರುವಿನ ಹಾಡ...."[೨೫]

ತಂದೆ ಹಾಡುವುದಕ್ಕಾಗಲಿ, ಹಾಡು ಕೇಳುವುದಕ್ಕಾಗಲಿ ಮಗನನ್ನು ಬಿಟ್ಟಿರದಿದ್ದರೂ ಆ ಜಾನಪದ ಗತ್ತನ್ನು ಗಿಟ್ಟಿಸಿಕೊಂಡ ಛಲವಂತ. ಕರ್ನಾಟಕ ಮಹಾರಾಷ್ಟ್ರಗಳಲ್ಲೆಲ್ಲಾ ಅಂದು ಹೆಸರು ಪಡೆದವನು. ಇಂಚಲದ ಕೆಂಚನಾಯ್ಕ, ಸಕ್ರನಾಯ್ಕರ ಜೊತೆಗೆ ಹಾಡುವವನಾಗಿದ್ದನು. ೧೮೩೦ರಲ್ಲಿ ಜನಿಸಿ ೧೯೧೦ರಲ್ಲಿ ಸ್ವರ್ಗವಾಸಿಯಾಗಿರಬೇಕು.

ಬಾಳಗೋಪಾಳನು ಮರಾಠಿಯನ್ನೂ ಬಲ್ಲವನಾಗಿದ್ದನು. ಮರಾಠಿಯಲ್ಲೂ ಕೂಡ ಹಲವಾರು ಲಾವಣಿ ರಚಿಸಿದ್ದನೆಂದು ಹೇಳುತ್ತಾರೆ. ಬೆಲ್ಲದ ಬಾಗೇವಾಡಿಯ 'ಜಡಿಸಿದ್ದೇಶ್ವರ ಯೋಗಿ'ಗಳ ಪ್ರಭಾವವೂ ಇವನ ಮೇಲಾದದ್ದು ತಿಳಿದುಬರುತ್ತದೆ.

"ಶ್ರೀ ಸಿದ್ಧೇಶ್ವರ ಸದ್ಗುರುವಿನ ದಯದಿಂದ
ಯಾರ್‍ಯಾರದಿಲ್ಲ ನಮಗ ಅಂಜಿಕೆ
ಕವಿ ಗೋಪಾಳ ಕಲಗಿ ಹಾಡವರ
ತೆಲಿಮ್ಯಾಗ ಅಗಳಿ ಜಡದಾ ಜಡದಾ."[೨೬]

ಬಾಳಗೋಪಾಳನು ಹರದೇಶಿ ಪಂಗಡದವನು. ಗಂಡು ಹೆಚ್ಚು ಎಂದು ಹಾಡು ಹೇಳುತ್ತಿದ್ದನು. ಕವಿಯಷ್ಟೇ ಅಲ್ಲ; ಜನಪ್ರಿಯ ಹಾಡುಗಾರನೂ ಆಗಿದ್ದನು.

"ಮಾನಗೇಡಿ ಮಾಡುದುಕ ಸೀರಿಕುಬಸಾ ಕಳಸಿ
ಸುಣ್ಣ ಕ್ಯಾಮಣ್ಣ ಮುಸಡಗಿ ಬಡದ ಓಣ್ಯಾಗ ನಿಲ್ಲಿಸಿ
ಊರತುಂಬ ಮೆರಸಿದಾರ ಕತ್ತಿಮ್ಯಾಲ ಕೂಡ್ರಿಸಿ
ಬಿಳೆಗರತಿ ಹೆಣತಿನ ಮಾಡಿಕೊಂಡ ಮುರಮಾಸಿ
ಸುತ್ತನಾಡೊಳಗ ಬಾಗೋಡಿ ಊರ ಒಳೆ ಬೇಸಿ
ಕಲಗಿ ಇಟ್ಟ ಡಪ್ಪ ಓಡಿಹೋದಾಳ ನಾಗೇಶಿ."[೨೭]

ಮೊದಲಾದ ಹಾಡುಗಳಲ್ಲಿ ಕಲಗಿಯವರನ್ನು (ಹೆಣ್ಣು ಹೆಚ್ಚೆಂದು ಹಾಡುವವರು) ಗೇಲಿ ಮಾಡಿದ್ದು ತಿಳಿದುಬರುತ್ತದೆ.

**ಗೋಕಾವಿಯ ಮಲ್ಲೇಶಪ್ಪ (೧೮೩೨–೧೯೧೭) :**

ಬೆಳಗಾವಿ ಜಿಲ್ಲೆಯ ತಾಲೂಕು ಸ್ಥಳವಾದ ಗೋಕಾಕ ಜನಪದ ಸಾಹಿತ್ಯದ ಆಗರವಾಗಿದೆ. ಇಲ್ಲಿಯ ಪತ್ತಾರ ಅಯ್ಯಪ್ಪನ ಮಗ ಮಲ್ಲೇಶಪ್ಪ ಬೆಳ್ಳಿಬಂಗಾರದ ಕೈಕುಸುರಿನ ಕಲಾವಂತ. ಜನಪದ ಕವಿಯೂ ಆಗಿ ಮೆರೆದಿದ್ದಾನೆ.

ಮಲ್ಲೇಶಪ್ಪ ೧೮೩೨ರಲ್ಲಿ ಹುಟ್ಟಿ ೧೯೧೭ರಲ್ಲಿ ತೀರಿಕೊಂಡನು. ಈ ಅವಧಿಯಲ್ಲಿ ಮನೆಯ ಉದ್ಯೋಗದ ಜೊತೆಗೆ ಜನಪದ ಹಾಡುಗಳನ್ನು ಕಟ್ಟಿದ್ದಾನೆ. ಅದೇ ಊರ ಜಿನಗಾರ ಸಾಂಬಣ್ಣನು ಈತನ ಜೊತೆಗಾರ. ಅವನ ಸಹಾಯದಿಂದ ಹಾಡು ಹೇಳುತ್ತಿದ್ದನು. ಅವನ ಒಪ್ಪಿಗೆ ಪಡೆದೇ ಹಾಡು ಹೊರಹಾಕುತ್ತಿದ್ದನು. ಅಂತೆಯೇ ತನ್ನ ಲಾವಣಿಗಳಲ್ಲಿ ಸಾಂಬಣ್ಣನನ್ನು ಕವಿ ಸ್ಮರಿಸಿದ್ದಾನೆ. 'ನಾಗೇಶಿ' ಪಂಗಡಕ್ಕೆ ಸೇರಿದ ಕವಿ ಈತ. ನೂರಾರು ಲಾವಣಿಗಳನ್ನು ರಚಿಸಿದ್ದಾನೆ. ಅವುಗಳಲ್ಲಿ 'ಕೌಂಡ್ಲಿಕ', 'ಗೆಳಿಮೈತ್ರು', 'ರಾಮ–ಭೀಮ', 'ವಟಸಾವಿತ್ರಿ' ಮೊದಲಾದ ಲಾವಣಿಗಳು ಪ್ರಸಿದ್ಧಿ ಪಡೆದಿವೆ.

"ಜ್ಯಾಡರ ಹುಡುಗ ಬ್ಯಾಡರ ಹುಡುಗ ।
ಜೋಡಿಲಿ ಇಬ್ಬರು ಗೆಳಿಯಾರು ಕೂಡಿ।
ತಿರಿಗ್ಯಾಡ್ಯಾರು ನಿತ್ಯ ರಾತ್ರಿ ಹಗಲಿ।
ಬ್ಯಾಡರ್‍ಹುಡುಗನ ಹೆಸರ ಭೀಮ।
ಜ್ಯಾಡರ್‍ಹುಡುಗನ ಹೆಸರ ರಾಮ।
ಇಬ್ರ ಪ್ರೀತಿ ಒಬ್ಬನಕ್ಕಿಂತ ಒಬ್ಬನ ಮ್ಯಾಲಿ।
..........................................
ಗೋಕಾವಿ ಊರ ಮೋಜಿನ ಶಾರ।
ನಾಡೊಳಗ ಹಾಡಮಾಡು ಹರ್ತಸಿಕ್ಕಿಲ್ಲ ಇವರ್‍ಹಾಂಗs।
ಪದಾಮಾಡು ಹದಾ ಟಾವಕಿಲ್ರಿ ನಿಮಗ।
ಸಾಂಬಣ್ಣ ಅಂತಾನ ಮಾಡ್ಬೇಕ ಇದರ್‍ಹಾಂಗ।
ಪತ್ತಾರ ಮಲ್ಲೇಶನ ಪದಾ ಮುತ್ತ ಸುರದ್ಹಂಗ।
ಹತ್ತಮಂದಿ ಕುಂತಕೇಳಿ ಆಗ್ತಾರ ಖುಷಿಮಾಲಿ
ರಾಮನಕ್ಕಿಂತ ಭಾಳ ಪ್ರೀತಿ ಭೀಮನ ಮ್ಯಾಲಿ."[೨೮]

ಸ್ತ್ರೀ ನೆರೆದಫಲ ಮೊದಲಾದ ಹಾಡುಗಳನ್ನು ಕವಿಮಲ್ಲೇಶಿ ಅದೇ ಊರ ಶ್ಯಾಮಣ್ಣ ಜೊತೆಗೆ ಹಾಡಿದ್ದುಂಟು. ಇವರಿಬ್ಬರಿಗೂ ಜ್ಯೋತಿಷ್ಯಶಾಸ್ತ್ರ ಹೇಳಿಕೊಟ್ಟ ಗುರು 'ಏಕನಾಥ' ಎಂದೂ ತಿಳಿದುಬರುತ್ತದೆ.

**ಗೋಕಾವಿಯ ಯಲ್ಲಪ್ಪ (೧೮೫೦-೧೯೦೦) :**

ಬೆಳಗಾವಿ ಜಿಲ್ಲೆಯ ಗೋಕಾಕ ಸಮೀಪದ ಗಿರಣಿಯೊಂದರಲ್ಲಿ ಕಾರ್ಮಿಕನಾಗಿ ದುಡಿಯುತ್ತಿರುವ ಯಲ್ಲಪ್ಪ ಬಹುಶಃ ಮೂಲತಃ ಅಡಿಬಟ್ಟಿ ಗ್ರಾಮದವನಿರಬೇಕು. ೧೮೭೦ರ ಸುಮಾರು ನಡೆದ ಕಟ್ಟಿಚೆನ್ನನ ಚರಿತ್ರೆಯನ್ನು ಆಯ್ದುಕೊಂಡು ಲಾವಣಿಯಲ್ಲಿ ಹಾಡಿದ್ದಾನೆ. ಈತನು ಬದುಕಿದ್ದುದು ಸು. ೧೮೫೦ ರಿಂದ ೧೯೦೦ರ ಅವಧಿಯಲ್ಲಿ ಹಲವಾರು ಲಾವಣಿಗಳನ್ನು ರಚಿಸಿದ್ದಾನೆ. ಅಡಿಬಟ್ಟಿ ಯಲ್ಲ 'ಗಿರಣಿ ಯಲ್ಲಣ್ಣ' ಎಂಬ ಮುದ್ರಿಕೆಗಳು ಈತನ ಹಾಡುಗಳಲ್ಲಿ ಬರುತ್ತವೆ.

"ಕಟ್ಟಿಯ ಚೆನ್ನನ ಪ್ರಾಬಲ್ಯ ಎಷ್ಟಂತ ಹೇಳಲಿ ನಾನು
ಶ್ರೇಷ್ಠನಾಗಿ ಹೋದ ಅಂವ ಈ ಮರ್ತ್ಯದೊಳಗ
ದುಷ್ಟದುರ್ಯೋಧನನಕಿಂತ ಸಿಟ್ಟ ಅವನ ಹೊಟ್ಟಿಯೊಳಗ ಭಾಳ
ಬಂಟಸ್ತನದ ಪದವಿ ಇತ್ತ ಅವನ ಮನಸಿನೊಳಗ"[೨೯]

**ಕವಿ ದ್ವಾರಪಾಲ :**

"ಕನ್ನಡ ಮರಾಠಿ ಭಾಷೆಗಳಲ್ಲಿ ಲಾವಣಿ, ಗೀಗೀ ಪದಗಳನ್ನು ರಚಿಸಿದ ದ್ವಾರಪಾಲ (ಬೆಳಗಾವಿ) ಜನಪದ ಸಾಹಿತ್ಯಕ್ಕೆ ನೀಡಿದ ಕಾಣಿಕೆ ಅನುಪಮವಾದುದು. ಇವರು ಬರೆದ ಜಿನಭಜನೆ ಶಾಂತಿಸಾಗರ ಲಾವಣಿ, ಪವಣಂಜಯನ ಲಾವಣಿ ಯುರೋಪ ಖಂಡದ ಪ್ರಥಮ ಯುದ್ಧದ ಲಾವಣಿ, ಸಿದ್ಧಸಾಗರ ಚರಿತ್ರೆ (ಮರಾಠಿ) ಇತ್ಯಾದಿ ಕೃತಿಗಳು ಸಾಹಿತ್ಯಿಕ ದೃಷ್ಟಿಯಿಂದ ಅಭ್ಯಾಸ ಯೋಗ್ಯವಾದವುಗಳು. ಇತಿಹಾಸವನ್ನೇ ಹಾಡುಮಾಡಿಕೊಂಡು ಕನ್ನಡ ವೀರಶ್ರೀಯ ಕಾಂತಿಯನ್ನು ಹೆಚ್ಚಿಸಿದ ಶ್ರೇಯಸ್ಸು ದ್ವಾರಪಾಲನಿಗೆ ಸಲ್ಲಬೇಕು ಎಂಬ ಭುಜೇಂದ್ರ ಮಾಹಿಷವಾಡಿಯವರು ಈತನ ಸಾಹಿತ್ಯ ಕುರಿತು ನೀಡಿದ ನಿರ್ಣಯವು ಸೂಕ್ತವಾದುದು."[೩೦] ೧೮೫೦-೧೯೨೪ರ ಕಾಲಘಟ್ಟದಲ್ಲಿ ಜೀವಿಸಿದ್ದ ದ್ವಾರಪಾಲ ಲಾವಣಿ ಬರೆಯುವುದರಲ್ಲಿ ತುಂಬ ಪರಿಣಿತನಾಗಿದ್ದನು.

**ಗೋಕಾಕದ ಲಕ್ಷ್ಮಣ (೧೮೫೦-೧೯೪೨) :**

ಲಕ್ಷ್ಮಣನು ಬೆಳಗಾವಿ ಜಿಲ್ಲೆಯ ಗೋಕಾಕದ ಪತ್ತಾರ ಮಲ್ಲೇಶಪ್ಪನ ಮಗನು. ಸುಮಾರು ೧೮೫೦ರಲ್ಲಿ ಹುಟ್ಟಿ ೧೯೪೨ರಲ್ಲಿ ಸ್ವರ್ಗಲೋಕ ಸೇರಿದನು. ಉದ್ಯೋಗ ಪತ್ತಾರಿಕೆ. ತಂದೆಯಂತೆ ಜನಪದ ಲಾವಣಿಗಳನ್ನು ರಚಿಸಿದ ಈತನೂ 'ನಾಗೇಶಿ' ಪಂಗಡದವನು.

ಗೋಕಾಕ ಬಿಟ್ಟು ಧವಳೇಶ್ವರ ಸೇರಿದ್ದ ಲಕ್ಷ್ಮಣನಿಗೆ ಅಲ್ಲಿಯ ಗುಡದೀಶ್ವರನ ಕೃಪಾಶೀರ್ವಾದದಿಂದ ಹಾಡುರಚಿಸುವ ಪ್ರೇರಣೆಯಾಯಿತಂತೆ. ತಂದೆಯಿಂದಲೂ ಸ್ನೇಹಿತನಾದ ರಾಚಯ್ಯನಿಂದಲೂ ಪ್ರಭಾವಿತನಾದ ಲಕ್ಷ್ಮಣ, ಶ್ರೇಷ್ಠ ಜನಪದ ಹಾಡುಗಾರನೆನಿಸಿದನು. ಈತನನ್ನು ಲಚ್ಚಪ್ಪ ಎಂದೇ ಕರೆಯುತ್ತಿದ್ದರು. ಜೀವದ ಗೆಳೆಯ ರಾಚಯ್ಯನನ್ನೂ ಗುರು ಗುಡದೀಶ್ವರನನ್ನೂ ತನ್ನ ಹಾಡುಗಳಲ್ಲಿ ಸ್ಮರಿಸಿದ್ದಾನೆ. ತಂದೆಯನ್ನೂ ಸ್ಮರಿಸಿದ್ದನ್ನು ಕಾಣಬಹುದು.

ಲಚ್ಚಪ್ಪ ಬರೆದ ಲಾವಣಿಗಳಲ್ಲಿ 'ಕೃಷ್ಣ ಪಾರಿಜಾತ', 'ಸಿರಿಯಾಳ ಸತ್ವಪರೀಕ್ಷಾ', 'ಶಿಬಿ ಚಕ್ರವರ್ತಿ', 'ದ್ರೌಪದಿ ವಸ್ತ್ರಾಪಹರಣ' ಮೊದಲಾದವು ಅತ್ಯಂತ ಜನಪ್ರಿಯವಾಗಿವೆ.

"ಸರ್ವಜನರಿಗೆಲ್ಲಾ ಸಾರಿಪೇಳುವ ಕೃಷ್ಣ
ಪಾರಿಜಾತದ ಸಾರ ಹರುಷದಲಿ
ನಾರದ ಮುನಿಸುರ ಪಾರಿಜಾತವ ತಂದು
ಶ್ರೀಹರಿ ಕರದಲಿ ಕೊಡುವುತಲಿ
ನಾರಿ ರುಕ್ಮಿಣಿ ಚಾರುದುರ ಬಿನೊಳ್ ಮುಡಿಸಲು,
ಸೇರಿದ ಸತ್ಯಭಾಮೆ ಮರಗುತಲಿ
.......................................
ಧರೆಯೊಳು ಗೋಕಾಕಪುರವಾಸನು
ಶಿರೋಮಣಿ ಕವಿಶ್ರೇಷ್ಠ ಮಲ್ಲೇಶನು
ವರಪುತ್ರ ಕವಿ ಲಕ್ಷ್ಮಣ ಇವನು
ಸರಸಾದ ಭಾಗವತ ರಚಿಸಿದನು
ಚಿರಕಾಲ ನಡಸಿಂಥಾ ಕವೀಂದ್ರರು
ಪರಮ ಮಿತ್ರಮೆನಗೆ ರಾಚಯ್ಯ
ಗುರುದೇವ ಗುಡದೀಶಾ ಪರಮಪಾವನ
ವರದ ಹಸ್ತಿರಿಸೆನ್ನ ಸಿರದ ಮೇಲೆ."[೩೧]

**ಸಂಬರಗಿ ಚನ್ನಪ್ಪ (೧೮೫೦-೧೯೫೦) :**

ಬೆಳಗಾವಿ ಜಿಲ್ಲೆಯ ಸಂಬರಗಿ (ಸಾಂಬ್ರಾ) ವಿಮಾನ ನಿಲ್ದಾಣದ ಸ್ಥಳವಾಗಿದೆ. ಇಲ್ಲಿಯ ಮರಾಠಾ ಜಾತಿಗೆ ಸೇರಿದ, ಓದು-ಬರಹ ಅರಿಯದ ಚನ್ನಪ್ಪನು ಜನಪದ ಹಾಡುಗಳನ್ನು ಅದೂ ಕನ್ನಡದಲ್ಲಿ ಸುಶ್ರಾವ್ಯವಾಗಿ ಹಾಡುತ್ತಿದ್ದನು. ಅನೇಕ ಲಾವಣಿಗಳನ್ನು ಬರೆದಿದ್ದಾನೆ. ಈತನ ಒಡನಾಟ ಹೆಚ್ಚಾಗಿ ಲಿಂಗವಂತರ ಜೊತೆಗೆ. ಮರಾಠಿ ಭಾಷೆಯಲ್ಲೂ ಜನಪದ ಹಾಡುಗಳನ್ನು ಹಾಡಿದ್ದುಂಟು. ಸಂಬರಗಿಯ ಬಸವೇಶ್ವರ ದೇವರು ಆರಾಧ್ಯದೇವತೆಯಾಗಿದ್ದಾನೆ. ಕನಸಿನಲ್ಲಿ ಒಮ್ಮೆ ಈ ಬಸವೇಶ್ವರ ದೇವರು ಬಂದು ಚನ್ನಪ್ಪನಿಗೆ ರಾಮಾಯಣದ ಕಥೆಯನ್ನು ಹೇಳಿದನಂತೆ. ಅದನ್ನೇ ಚನ್ನಪ್ಪ ಲಾವಣಿಯಲ್ಲಿ ಹಾಡಿಬಿಟ್ಟನೆಂದು ಹೇಳುತ್ತಾರೆ.

ಚನ್ನಪ್ಪನಿಗಿಂತ ೨೦-೨೫ ವರುಷ ಸಣ್ಣವನಾದ ನರಸಿಂಗನು ಚನ್ನಪ್ಪನ ಹಾಡುಗಳನ್ನು ಬರೆದಿಡುತ್ತಿದ್ದನಂತೆ. ಈ ನರಸಿಂಗನಿಂದ ಈ ಭಾಗದ ಹಲವಾರು ಜನರು ಈತನ ಹಾಡುಗಳನ್ನು ಕಲಿತುಕೊಂಡಿದ್ದಾರೆ. ಚನ್ನಪ್ಪನು ತನ್ನ ಹಾಡುಗಳಲ್ಲಿ ಅಲ್ಲಲ್ಲಿ ಮಾರುತಿ ದೇವರನ್ನು ಸ್ಮರಿಸಿದ್ದಾನೆ. ಈತನ ಹಾಡುಗಳು ಹೆಚ್ಚಾಗಿ ತ್ರಿಪದಿಯಲ್ಲಿವೆ.

"ಸಂಬರಗಿ ಊರಾಗ ಮಾಡ್ಯಾರೊ ಈ ಕವಿ
ಶಂಭೊ ಮಾರುತಿ ದಯಾ ಅವರ ಮ್ಯಾಲ
ಕೇಳಿದವರಿಗಿ ಅಮೃತ ಕುಡದ್ಹಂಗ
ಸಂಬರಗಿ ಊರಾ ಸಿಸ್ತೊ ಟಿಕಾನಾ
ಸಿಸ್ತೊ ಟಿಕಾನಾ ನೆನದೊ ಬಸವಣ್ಣಾ
ಜಾತರಿ ಮಾಡತಾರೊ ಉಗಾದಿ ದಿನಾ
ಊರಬಿಟ್ಟ ದೂರ ಜಾಗಾ ಆರಂಬ
ನೋಡಿ ನೆನೆದ ಬಸವೇಸೂರ ಚರಣಾ
ಚನ್ನಪ್ಪ ಮಗನ ಇರಲೆಂದ ಅಂತಃಕರಣಾ ।
ಹಿಡದ ಅವನ ಚರಣಾ."[೨]

**ಶೀಗಿಹಳ್ಳಿಯ ರಾಮರಾವ :**

ಶೀಗಿಹಳ್ಳಿ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಒಂದು ಹಳ್ಳಿ. ಇಲ್ಲಿಯ ತಮ್ಮಾಜಿಯವರ ಮಗನೇ ಈ ರಾಮರಾವ-ಲಾವಣಿಕಾರ. ಈತನು ಸು. ೧೮೫೬ರಲ್ಲಿ ಹುಟ್ಟಿ ೧೯೨೬ರಲ್ಲಿ ನಿಧನನಾಗಿದ್ದಾನೆ.

ಈತನ ಉದ್ಯೋಗ ಕುಲಕರ್ಣಿಕಿ. ಕಲಿತದ್ದು ಕನ್ನಡ ಮತ್ತು ಮೋಡಿ. ತನ್ನ ೨೫ನೇ ವಯಸ್ಸಿನಿಂದಲೇ ಲಾವಣಿ ರಚಿಸಲು ಪ್ರಾರಂಭಿಸಿದನು. ಭಕ್ತ ಸುದಾಮ, ಘಟೋದ್ಗಜ ಸಂಹಾರ, ಗಣಪತಿ, ದ್ರೌಪದೀ ವಸ್ತ್ರಾಹರಣ, ಹೆಣ್ಣು ಗಂಡಿನ ಲಾವಣಿ, ರಾಮಾಯಣ-ಮಹಾಭಾರತಕ್ಕೆ ಸಂಬಂಧಿಸಿದ ಹಾಡು-ಹೀಗೆ ನೂರಾರು ಲಾವಣಿ ರಚಿಸಿ ಜನಪ್ರಿಯ ಜಾನಪದ ಕವಿಯೆನಿಸಿದ್ದಾನೆ. ಈತನ ಶಿಷ್ಯನಾದ ಬಸವಂತಪ್ಪ ಭೀಮನಗೌಡ್ರ ಎಂಬುವವರು ಈತನ ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಶೀಗಿಹಳ್ಳಿಯ ಬಲಭೀಮ ದೇವರು ಈತನ ಹಾಡುಗಳಲ್ಲಿ ಬರುವ ಅಂಕಿತವಾಗಿದೆ. ರಾಮರಾವ ಎನ್ನುವ ಹೆಸರು ಅಲ್ಲಿ ಬರುತ್ತದೆ. ಸುದಾಮನ ಲಾವಣಿಯಲ್ಲಿಯ ಕೆಲ ಸಾಲುಗಳನ್ನು ನಾವು ಗಮನಿಸಬಹುದು.

"ಹುಡುಗರದ ಹಸಿತ ಭಾಳ ಹೊಟ್ಟಿ । ಬೇಡತಾರ ರೊಟ್ಟಿ
ಕೊರಳೀಗಟಮಿಟಿ ಹಾಕಿ ತಾಯಿನಾ। ಯಾಕ ನಡಿ ಲಗುಮಾಡಿ ಹಾಕ ಅನ್ನಾ
ಸುದಾಮ ಸುರಿಸಿ ಕಣ್ಣೀರು । ಹಾಕತಾನ ಉಸಿರು
ತಂದೆ ದೇವರು ಎಂಥಾ ಬಡತನಾ । ಇದರೊಳಗ ಉಳೂದು ಕಠಿಣಾ
ಯಾರ್‍ಯಾರು ಕೊಡವಲ್ರು ಏನೇನಾ । ಎಷ್ಟಂತ ದಿನದಿನಾ
ಕೊಟ್ಟಾರ ನಿಮಗಿನ್ನಾ । ಪುಗಶೆಟ್ಟಿ ಜನಾ । ಹ್ಯಾಂಗ ತಿರಿಗವರಿಗೆ ಬೇಡುವಾ

ಸತಿ ಅಂತಾಳ ಏನ ಹೇಳ್ರಿ ಬಗಿ । ಎತ್ತಿ ನೀರ ಕುಡದೇನಂದ್ರ ಇಲ್ಲ ಮಗಿ
ಎತ್ತ ಹೋದ್ರ ಮನಿ ಸೋರಿ ಹುದಲಾಗಿ । ಸುತ್ಲ ಬರ್ರ್ಪಂಥ ಗಾಳಿ ಬಿಸಲೀಗಿ
ಏರು॥ ದೀಪ ನಮಗಪರೂಪವೆಂದು ಸಂತಾಪ ಕುಚ್ಯೆಲಿಗಾಗಿ ಅತಕೋತಾ
ನಿಂತಾವ ಹುಡುಗರಾರೆ ಸುತ್ತ ಮುತ್ತಾ । ಅಂತಾವ ಹಸವ ಆತೋ ಭಾಳೊತ್ತಾ."[೩೩]

**ಗೋಕಾಕದ ಸಾತು ಕ್ಯಾಮಣ್ಣ :**

ಸಾತು ಕ್ಯಾಮಣ್ಣನು ಬೆಳಗಾವಿ ಜಿಲ್ಲೆಯ ಗೋಕಾಕದವನು. ಅಲ್ಲಿಯ ಹಾವನಾಳೆ ಮನೆತನದಲ್ಲಿ ಸು. ೧೮೬೨ರಲ್ಲಿ ಹುಟ್ಟಿದ ಈ ಕವಿಯು ಕುರುಡನಿದ್ದನಂತೆ. ಹಾಡುಬಲ್ಲ ಕ್ಯಾಮಣ್ಣ ಹಾಡುತ್ತ ಹಾಡುತ್ತ ತಾನೂ ಕವಿಯಾದ ಸಾತೂ ಎನ್ನುವ ಗುರುವಿನ ಜೊತೆ ಕೂಡಿಕೊಂಡು ಹಾಡುತ್ತ ರಚಿಸುವುದನ್ನೂ ಅರಗಿಸಿಕೊಂಡನಂತೆ. ಗೊಂದಲಿಗರಿಗೂ ಲಾವಣಿ ರಚಿಸಿ ಕೊಟ್ಟವನು. ಕ್ಯಾಮಣ್ಣ ಸಾತೂನನ್ನು ಮೊದಲಿಗೆ ಸ್ಮರಿಸಿದ್ದಾನೆ. 'ಸಾತೂ ಕ್ಯಾಮಣ್ಣ' ಎನ್ನುವುದು ಈತನ ಹಾಡುಗಳಲ್ಲಿ ಬರುವ ಮುದ್ರಿಕೆಯಾಗಿದೆ. ಇತನ ಲಾವಣಿಗಳನ್ನು ನಿಂಗಣ್ಣ ಸಣ್ಣಕ್ಕಿ ಅವರು ಸಂಪಾದಿಸಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ೨೦೦೪ರಲ್ಲಿ ಪ್ರಕಟಿಸಿದ್ದಾರೆ. ಇದಲ್ಲದೆ ಕಲ್ಲೋಳಿಯ ಸುರೇಶ ಹನಗಂಡಿ ಅವರ ಹತ್ತಿರ ಇನ್ನೂ ಇಪ್ಪತ್ತು ಹೊಸ ಲಾವಣಿಗಳು ದೊರೆತಿವೆ. ಅವು ಅಪ್ರಕಟಿತವಾಗಿವೆ.

ಗೋಕಾಕದ ಬೋರಗುಂಡಿ ತಮ್ಮಣ್ಣಪ್ಪ ಮತ್ತು ಆತನ ಮಗ ಗುರುಸಿದ್ಧನೂ ಕ್ಯಾಮಣ್ಣನ ಹಾಡುಗಳನ್ನು ಹಾಡುತ್ತಿದ್ದರು. ತುರಾಯಿ ಪಂಗಡಕ್ಕೆ ಸೇರದ ಕವಿ ಈತನು.

"ನಾನ ಜಲ್ಮ ತಿರುಗಿ ಮಾನವ ಜನ್ಮಕ ಬಂದಮ್ಯಾಲ
ನಾನು ನೀನೆಂಬಹಂಕಾರ ಬಿಡಬೇಕ ।

.............................................

ನಾವು ಇರೋದು ಗೋಕಾಕ ಶಾರ ಪಸಂದಾ
ಘಟಪ್ರಭಾ ಗಂಗಾ ಊರ ಮುಂದಾ
ಸೇವಕ ಬಾಳ ಗುರುಭಜನಿಯಲ್ಲಿ ಸದಾನಂದಾ
'ಸಾತೂ ಕ್ಯಾಮಣ್ಣನ' ಲಾವಣಿ ಕೇಳಿ
ಸಪ್ಪಗಾತ ಕಲಿಗ್ಯಾವರ ಮಾರಿ'
'ನಾರಿ ಅಂತ ಇದಾರಿಗಿ ತಿಳಿದಿಲ್ಲ
ಬ್ಯಾರಿ ಇರುವುದು ಒಳಗಿನ ಕುಶಾಲಾ
ಗಂಡ ಹೆಂಡರ ಪ್ರೀತಿಲಿ ವ್ಯಾಪಾರ ಮಾಡತಿದ್ರ
ಅಂಗಡಿಯ ಮ್ಯಾಲ...
'ಸಾತೂ ಕ್ಯಾಮಣ್ಣ ಜೋಡಿ ಹಾಡತಾರ
ಛಾಪ ಹಾಕಿ ಡಪ್ಪಿನ ಮ್ಯಾಲ."[೩೪]

ಸಾತು ಕ್ಯಾಮಣ್ಣ ದೇವತೆಗಳ ಹುಟ್ಟಿನ ಕುರಿತು ಒಂದು ಸುಂದರ ಲಾವಣಿ ರಚಿಸಿದ್ದಾನೆ.

"ಶಕ್ತಿ ಕೇಳತಾಳ ಇವನ ಅರ್ಜಮಾಡಿ ಕೈಮುಗದ ನಿಂತಾ
ನಿಮ್ಮ ಹಡದಾರಾರು ನನ್ಯಾರ ಹುಟ್ಟಿಸ್ಯಾರ
ಹೇಳಾಕ ಗುಣವಂತಾ ॥ಪ॥
ಈ ಬ್ರಹ್ಮಾಂಡ ಅಂಬುದಾ ಹುಟ್ಟೀತಿ ಗಾಳೀಯಿಂದಾ
ಒಳಗಿನ ಆತ್ಮ ಹೊರಗ ಬಂದಾನು ತೋರಿ ಶಿವರೂಪ ತಾ ನಿಂತ ॥
ವಿಷ್ಣು ಭುಜದಿಂದಾ । ಬ್ರಹ್ಮದೇವರ ಉದಯ
ನಾಭಿ ಕಮಲದಿಂದ ಹೊಂಕಳದಿಂದ ಪುಲಾ ಹುಟ್ಟಿದಾನ
ಕೃತ್ತು ಕೈಯಿಂದ ಬಾಯಿಂದ ಆದ್ರಿ ಋಷಿ ಹುಟ್ಟಿದಾನ
ಚಾಲ॥ ಗುರುಮುನಿ ಚರ್ಮದಿಂದ ನಾರದ ತೊಡಿಯಿಂದ
ವಶಿಷ್ಟ ಪ್ರಮಾಳದಿಂದ ದಕ್ಷ ಆದ ಅಂಗುಷ್ಠದಿಂದಾ
ಗಂಡಿಗೆ ಗಂಡಿರೆ ಪಿಂಡಾ ಉತ್ಪತ್ತಿ
ಹೆಂಡ ಆದರ ಮಸ್ತಾ."[೩೫]

ಕವಿ ಸಾತು ಕ್ಯಾಮಣ್ಣನು ಕಾಮಸೂತ್ರ ಕುರಿತು ಒಂದು ಲಾವಣಿಯನ್ನು ಬಹಳ ಸುಂದರವಾಗಿ ಹೇಳಿದ್ದಾನೆ. ಸ್ತ್ರೀಯಳಿಗೆ ನಾಲ್ಕು ಜಾತಿ ಅವುಗಳ ಲಕ್ಷಣಗಳನ್ನು ತುಂಬಾ ಮಾರ್ಮಿಕವಾಗಿ ಮಾರ್ಮಿಕವಾಗಿ ಹೇಳುವುದರಲ್ಲಿ ಕವಿ ಯಶಸ್ವಿಯಾಗಿದ್ದಾನೆ.

"ಕಾಮಶಾಸ್ತ್ರದ ನೇಮ ಕೇಳತಾಳ
ರತಿಯು ಮನ್ಮಥನ ಪ್ರೀತಿಯಲಿ
ರತಿಯ ಮುಂದೆ ಮನ್ಮಥ ಹೇಳತಾನ
ಕಾಮಶಾಸ್ತ್ರದೊಳಗಿನ ಲೀಲೆ ॥
ಸ್ತ್ರೀಯೊಳಗೆ ನಾಲ್ಕು ಜಾತಿ ಇರುವದು
ಕೇಳ ಚಿತ್ತಯಿಟ್ಟಾ
ಪದ್ಮಿಣಿ, ಚಿತ್ತಣಿ ಶಂಕಿನಿ ಹಸ್ತಿನಿ
ಯಲ್ಲದೊರಳಗ ಪದ್ಮಿಣಿ ಶ್ರೇಷ್ಠ
ಪದ್ಮಿಣಿ ಜಾತಿಯ ಲಕ್ಷಣ ಹೇಳತನ
ಸ್ವಲ್ಪ ಕೇಳಿರಿ ಮನಸಯಿಟ್ಟಾ
ಪೂರ್ಣ ಚಂದ್ರನಂಗ ವರ್ಣ ಮುಖದ ಮ್ಯಾಗ
ಯಾವತ್ತು ನೋಡಳು ವಾರಿನೋಟಾ
ಪುಟ್ಟ ಕುಚ್ಚ ನಸುಗೆಂಪು ಮೈಬಣ್ಣ

ಹಿಣ್ಣಿಯಿರುವಳು ಆಯಕಟಾ
ದಂತವುಂದ ಬಹು ಸುಂದರ ಕುಚಗಳ
ನೋಟಗಳ ಮ್ಯಾಲಕ ಇರುವುದು ಪೊಟಾ
ದೇಹ ಕೇಳಿರಿ ಶುದ್ಧ ಸುಸರ ಹೂವಿನ್ಯಾಂಗ
ಮೃದು ಕೆಸರ ಇಲ್ಲಾಯಳ್ಳಷ್ಟು
ಕಲಾಕುಶದಲ್ಲಿ ಜಾಣ ಇರುವಳು
ಸ್ವಲ್ಪ ಮಾತ್ರ ಮಾಡುವಳು ಉಂಟಾ
ಒಳ್ಳೆ ನಡತೆ ಹೆಸರಳು
ಪ್ರಾಗು ಕಮಲದ್ದಾಂಗ ದೇಹ ಕಾಣಿಸುವುದು."೨೬

ಕಾಮಶಾಸ್ತ್ರದ ವಿಚಾರಗಳನ್ನು ಮತ್ತು ಅವುಗಳ ರಹಸ್ಯವನ್ನು ಭೇದಿಸುವದರ ಮೂಲಕ ಲಾವಣಿಕಾರ ಇನ್ನು ಮೂರು ಸ್ತ್ರೀ ಜಾತಿಯ ಲಕ್ಷಣಗಳನ್ನು ಚಾರಿತ್ರಿಕತೆ ಹಿನ್ನೆಲೆಯಲ್ಲಿ ಹೇಳಿರುವುದು ತುಂಬಾ ವೈಶಿಷ್ಟ್ಯಪೂರ್ಣವಾಗಿದೆ.

**ಜಲಾಲಪೂರದ ಕವಿ ರಾಚೋಟಿ (೧೮ನೇ ಶತಮಾನ) :**

ರಾಯಬಾಗ ತಾಲೂಕಿನ ಚಿಕ್ಕಗ್ರಾಮ ಜಲಾಲಪೂರದ ಕವಿ ರಾಚೋಟಿ ಅಂದಿನ ಕಾಲಕ್ಕೆ ಸ್ವರಚಿತ ಲಾವಣಿಗಳನ್ನು ಹಾಡಿ ಜನರ ಮನಸ್ಸು ಗೆಲ್ಲುತ್ತಿದ್ದನು. ಕಲ್ಗಿ ಹಾಡುಗಳನ್ನು ಹಾಡುವುದರಲ್ಲಿ ತುಂಬಾ ಮೇಧಾವಿ. ತನ್ನ ಲಾವಣಿಯಲ್ಲಿ ನರಸಿಂಹವಾಡಿಯ ನರಸಿಂಹನನ್ನು ಸ್ಮರಿಸಿಕೊಳ್ಳುತ್ತಾನೆ. ಹೀಗಾಗಿ ಆ ದೇವರ ಅನುಗ್ರಹ ಈ ಕವಿಗೆ ಇದ್ದಂತೆ ಕಾಣುತ್ತದೆ. ಚಕ್ಕಡ-ಚಾಲ-ಪದಾ-ತಿರುನುಡಿ-ಸುಖಿ ಪದಗಳನ್ನು ಬಳಸಿದ್ದಾನೆ. ಈ ಲಾವಣಿಕಾರನು ಶ್ರೀ ಜಿನೇಶ್ವರ ಪ್ರಸನ್ನ ಎಂದು ಲಾವಣಿ ಆರಂಭದಲ್ಲಿ ಬರೆಯುತ್ತಾನೆ. ಹೀಗಾಗಿ ಇತನು ಜೈನ ಧರ್ಮಕ್ಕೆ ಸೇರಿದವನಾಗಿರಬೇಕು ಎಂಬ ಊಹೆಗೆ ಅವಕಾಶವಿದೆ.

**ಖವಟಕೊಪ್ಪದ, ಸಿದ್ಧಪ್ಪ ಅಪ್ಪಣ್ಣ ಹೇಮಗಿರಿ :**

ಅಥಣಿ ತಾಲೂಕಿನ ಖವಟಕೊಪ್ಪದ ಸಿದ್ಧಪ್ಪನು ದಿನಾಂಕ ೧೦-೧೧-೧೮೫೫ರಂದು ಲಾವಣಿಗಳನ್ನು ರಚಿಸಿದ್ದೇನೆ ಎಂದು ದಿನಾಂಕವನ್ನು ಆರಂಭದಲ್ಲಿಯೇ ಹೇಳಿದ್ದಾನೆ. ಚಕ್ಕಡ, ಸಖಿ, ಚಾಲ ಪದಗಳನ್ನು ಬಳಸಿದ್ದಾನೆ. ತುಕಾರಾಮ ಎಂಬ ಲಾವಣಿಕಾರ ಇವನ ಗುರುವಾಗಿದ್ದ ಮತ್ತು ಗೋಪಾಲ ದುರದುಂಡಿ ಶಿಷ್ಯ ನಾನು ಎಂದು ತಾನೆ ಲಾವಣಿಯಲ್ಲಿ ಹೇಳಿಕೊಂಡಿದ್ದಾನೆ. ಸುಮಾರು ೫೦ಕ್ಕೂ ಹೆಚ್ಚು ಲಾವಣಿಗಳು ಇತನ ಹೆಸರಿನಲ್ಲಿ ದೊರೆಯುತ್ತವೆ ಎಂದು ವ್ಹಿ. ಎಸ್. ಮಾಳಿಯವರು ಅಭಿಪ್ರಾಯಪಟ್ಟಿದ್ದಾರೆ.

**ಮಮದಾಪುರದ ಮಾರೋತೆಪ್ಪ (೧೮೮೦-೧೯೫೦) :**

ಮಮದಾಪುರ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಒಂದು ಹಳ್ಳಿ. ಮೇಧಾವಿ ಡಿ.ಸಿ.ಪಾವಟೆಯವರಿಂದ ಈ ಗ್ರಾಮಕ್ಕೆ ಇನ್ನೂ ದೊಡ್ಡ ಹೆಸರುಬಂದಿದೆ. ಇದೇ ಗ್ರಾಮದ ಪ್ರಸಿದ್ಧ ಪೈಲವಾನ ಎನಿಸಿದ ಮಾರೋತೆಪ್ಪ ಜನಪದ ಕವಿಯೂ ಆಗಿದ್ದನ್ನು ಮರೆಯುವಂತಿಲ್ಲ.

ಇಲ್ಲಿಯ ಭೀಮಪ್ಪ ಉಪ್ಪಾರಟ್ಟಿ ಎಂಬವರಿಗೆ ಮಗನಾಗಿ ಸು. ೧೮೮೦ರಲ್ಲಿ ಜನಿಸಿದ ಮಾರೋತೆಪ್ಪನು ದೇವಾಂಗ ಜಾತಿಯವನು. ಉದ್ಯೋಗ ನೇಕಾರಿಕೆಯಾಗಿತ್ತು. ಕಲಿತದ್ದು ಕನ್ನಡ ೭ನೇ ಈಯತ್ತೆ. ಬಸವಗುರು ಎಂಬವರ ಸಾನಿಧ್ಯದಲ್ಲಿದ್ದುಕೊಂಡು ನೂರಾರು ಜನಪದ ಹಾಡುಗಳನ್ನು ರಚಿಸಿದ್ದಾನೆ. ಈತನ ಹಾಡುಗಳಲ್ಲಿ 'ಮಾರೋತಿ'ಯನ್ನೂ ಸ್ಮರಿಸಿದ್ದಾನೆ. ಈತ ೧೯೫೦ರಲ್ಲಿ ತೀರಿಕೊಂಡನು. ವೇದಾಂತದಲ್ಲೂ ಈತನಿಗೆ ವಿಶೇಷ ಆಸಕ್ತಿ. ಕುಸ್ತಿ ಕಲೆಯಲ್ಲಿ ನಿಷ್ಣಾತ. ಹೋಳಿಹಾಡು, ಲಾವಣಿ ಹಾಗೂ ಕಲ್ಗಿ ತುರಾಯಿ ಪದಗಳನ್ನು ರಚಿಸಿದ್ದಾನೆ.

"ಗಿರಿಜಕಂದನೆ ನಿನ್ನ ಚರಣ ಪೂಜಿಸುವೆನು
ಕರುಣದಿ ಕಾಯೊ ಸಭಾದೊಳಗ
ಗೌರಿಯ ಕಂದನೆ ನೀನು ವರವಕೊಟ್ಟು ಪಾಲಿಸೊ ನನ್ನ
ಧರೆಯೊಳು ಮಮದಾಪುರ ಭಕ್ತರನ್ನ
ಎಂದು ಪ್ರಾರ್ಥಿಸಿದ್ದಾನೆ.
ಮಮದಾಪೂರ ಗಂಡಮೆಟ್ಟ
ಗುರು ಮಾರೂತಿ ಇರುವ ಮೆಟ್ಟ
ಹೋಳಿಪದ ಹುಟ್ಟಿತಾವ ಅಜಕಟ್ಟ
ಅವನ ಪಾದಕ ಹೊಂದಿ ಕಳಿಯೂನು ಜಲ್ಮದ ಪಾಪ
ಕಂಚಿನದ ಗೌರಿ ಕಾಲಿಡ ನನ ಗೆಣತಿ ಹಂಚಿಕಿಲಿ ಬಾಳೆ ಮಾಡೋಣ."[೩೭]

ಎನ್ನುವಲ್ಲಿ ಕವಿ ಊರ 'ಮಾರುತಿ' ದೇವರನ್ನು ಸ್ಮರಿಸಿದ್ದನ್ನು ಕಾಣಬಹುದಾಗಿದೆ. ಹೆಣ್ಣು ಗಂಡಿನ ಸಂವಾದವೊಂದರಲ್ಲಿ ಕವಿಯ ಪ್ರತಿಭೆ, ಪ್ರಜ್ಞೆಗಳು ವಾಸ್ತವಿಕತೆಯೊಂದಿಗೆ ಸೂಸುವರಿದುದನ್ನು ಅರಿಯಬಹುದಾಗಿದೆ. ಜನಪದ ಕವಿಗಳು ಎಷ್ಟು ರಸಿಕರಾಗಿದ್ದರೆಂಬುದನ್ನು ತಿಳಿಯಬಹುದು.

**ಹೆಣ್ಣು–**

"ಕೇಳಿ ಕೆಡಬೇಡೊ ತಮ್ಮ । ಬಾಳೆವಂತರ ಮಗಳೊ
ತೋಳ ಹಿಡಿವೂದ ತರವಲ್ಲೊ
ಕೂಲಿಯ ಮಾಡುವ ಕುರೂಪಗೇಡಿ । ಗಿರಪಾವ ಜೋಳಾ ತರತೇನಂತಿ
ಕುರಪಿ ಹೊರ್ತ ಇಲ್ಲೊ ನಿನಗ ಗತಿ । ಪರ ನಾರ್‍ಯಾರ ಕಂಡ

ದರಪ ಮಾಡಿದರ ಮುರಸೇನೊ ಬಾಯ್ಯಾಗಿನ ಹಲ್ಲ
ತಂಗಿ ಅಂತ ಕರಿಯಬೇಕು ಮಂಗ್ಯಾನಂಗ ಮಾಡಬಾರದು
ಭಂಗಿಸೇದಿ ಬಂದಿದಿ ಏನೊ ಮೂರ್ಖ ಇಂಥಾದರ
ಸಲುವಾಗಿ ಹೋಗೇತೊ ಮಳಿ ಮಾರಾ
ಕಡಸಿನ ಹೋಗೊ ಕಬ್ಬಿನ್ಹಂಗ, ಸುಲಸೀನ ಹೋಗೊ ಸ್ವಾಗಿಹಂಗ
ಅಂಜಿಕಿ ಅಳಿಕಿ ಇಲ್ಲೊ ನಿನಗ । ಏಟ ನಿನ್ನ ಮನದಾನ ಗೇನಕಿ
ಅಂಬರಕ ಹಾಕಿನಂದರ ಇಲ್ಲೊ ದಾರಾ–ತೋಳ ಹಿಡಿವುದ
ತರವಲ್ಲೊ ನಿನ್ನ ಮನಿಯೊ ಹಾಳ ಬಿದ್ದೈತೊ ಹಂಚಿಲ್ಲೊ

**ಗಂಡು–**

ಹಂಚಿಲ್ಲನ್ನಬ್ಯಾಡ ಮಂಚವ ತಂದೀನ । ಕಂಚಿನದ ಗೌರಿ ಕಾಲಿಡ
ಕಂಚ್ಯಾನಂಬುದ ಕಡಿಮಿಲ್ಲ ಪಂಚೇರ ಬಂಗಾರ ಕೊಡುವೆನು ಮೊದಲ
ಚಂಚಗಾರಿಕೆ ಕೊಡುವೆ ಮುನ್ನೂರ ರೋಕ ಆ
ಮಂಚವನೇರಿ ತೀರಸ ನಡಿಯ । ನನ್ನ ಕಾಮಶೋಕ
ಜಂಬಿನ ಮಾತಾ ಬಿಟ್ಟಬಿಡ । ತುಂಬಿದ ಕೊಡ ಈಗ ಆಗುವುದು ಕೇಡ
ಗಂಭೀರ ಹುಡುಗ ನಾನು ದೇಶ ।
ರಂಬಿ ನನ್ನ ಕೈಲಿಂದ ದಾಟುವದೈತಿ ನಾಜೂಕ
ಒಲ್ಲೆನ ಒಲ್ಲೆನಬ್ಯಾಡಾ । ಜಲ್ಲಿಲಿ ಎಳದ ಒಯ್ಯುವೆ ಮೊದಲ
ಗುಲ್ಲ ಮಾಡುವುದಲ್ಲ ತಿಳಿಯ ಮನಕ ಸಲ್ಲ । ಇಲ್ಲದಂಗ ಇರುನ
ನನ್ನ ಮನಿಯ ತನಕ.............[೨೭]

**ಯಕ್ಕುಂಡಿ ಗುರುಪಾದಪ್ಪ (೧೮೮೦–೧೯೬೯) :**

ಯಕ್ಕುಂಡಿ ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಒಂದು ಹಳ್ಳಿ. ಈಗ ಈ ಹಳ್ಳಿ ಮಲಪ್ರಭಾ ಆಣೆಕಟ್ಟು ಯೋಜನೆಯಲ್ಲಿ ಮುಳುಗಿ ಹೋಗಿದೆ. ಇಲ್ಲಿ ವಾಸಿಸುತ್ತಿದ್ದ ಜನರಿಗೆ ಹೊಸ ಊರು ಕಟ್ಟಿಸಿಕೊಟ್ಟಿದ್ದಾರೆ. ಯಕ್ಕುಂಡಿಯ ಅಡಿವೆಪ್ಪ ಹೊಂಗಲ ಅವರ ಮಗನೇ ಈ ಗುರುಪಾದಪ್ಪ. ಗುರುಪಾದಪ್ಪನು ಪ್ರಾಥಮಿಕ ಶಾಲೆಯ ಶಿಕ್ಷಕನಾಗಿದ್ದನು. ಆಧ್ಯಾತ್ಮಿ, ಬ್ರಹ್ಮನಿಷ್ಠನೂ ಆಗಿದ್ದನು. ಕನ್ನಡ–ಮರಾಠಿ ಹಾಗೂ ಸಂಸ್ಕೃತ ಭಾಷೆಗಳಲ್ಲಿ ಪರಿಣತಿ ಪಡೆದಿದ್ದನು. ಶ್ರೀಸಾಮಾನ್ಯರಿಗಾಗಿ ಜನಪದ ಹಾಡು ರಚಿಸಿ ಕೃತಕೃತ್ಯನಾಗಿದ್ದಾನೆ.

ಕ್ರಿ.ಶ. ಸು. ೧೮೮೦ರಲ್ಲಿ ಜನಿಸಿ ದಿ. ೧೯–೮–೧೯೬೯ರಲ್ಲಿ ಸ್ವರ್ಗವಾಸಿಯಾದನು. ಕಿತ್ತೂರಿನ ಬಸವಾರ್ಯರು ಇವನ ವಿದ್ಯಾಗುರುಗಳಾಗಿದ್ದರು. ಸವದತ್ತಿಯ ಬೇಟಸೂರಮಠದ ಪಟ್ಟದ್ದೇವರು

ಮತ್ತು ಗುರ್ಲಹೊಸೂರಿನ ಬಾಬಾ ಗರ್ದೆ ಅವರು ಇವನಿಗೆ ಅಧ್ಯಾತ್ಮವಿದ್ಯೆ ನೀಡಿದ್ದರು. ತನ್ನ ಗುರುಗಳ ಜೊತೆ ಕೂಡಿಕೊಂಡು ಹಲವಾರು ಗೀಗೀ, ಲಾವಣಿ ಹಾಡುಗಳನ್ನು ಗುರುಪಾದಪ್ಪ ರಚಿಸಿದ್ದುಂಟು. ಸ್ವತಂತ್ರವಾಗಿಯೂ ನೂರಾರು ಪದಗಳನ್ನು ಕಟ್ಟಿದ್ದಾನೆ. ಸ್ವತಃ ಪುರಾಣ-ಕೀರ್ತನ-ಪ್ರವಚನ ಹೇಳುತ್ತಿದ್ದನು. ಸಾಮಾಜಿಕ ಕಾರ್ಯಕರ್ತನೂ ಆಗಿದ್ದನು.

ಬ್ರಿಟಿಷರ ವಿರುದ್ಧ ಹೋರಾಟ ನಡೆದ ಆ ಕಾಲದಲ್ಲಿ ಲಾವಣಿ ರಚಿಸಿ ಜನತೆಯಲ್ಲಿ ದೇಶಾಭಿಮಾನ ಹೆಚ್ಚಿಸುತ್ತಿದ್ದನು. ಬಡವ-ಶ್ರೀಮಂತರಲ್ಲಿಯ ಭೇದ-ಭಾವ ಹೊಡೆದು ಹಾಕುವಲ್ಲಿ ಪ್ರಯತ್ನಿಸುತ್ತಿದ್ದನು. ಅಜ್ಞಾನವೆಂಬ ರಾಕ್ಷಸನನ್ನು ಹೊಡೆದೋಡಿಸಲು ಹಲವಾರು ರೀತಿಯಲ್ಲಿ ಜನತೆಗೆ ತಿಳುವಳಿಕೆ ಮಾಡಿಕೊಡುತ್ತಿದ್ದನು. ಸಾಕ್ಷರತಾ ಪ್ರಚಾರಕ್ಕಾಗಿ, ಸದ್ಗುಣಿಗಳನ್ನಾಗಿ ಪರಿವರ್ತಿಸಲು ಪ್ರೇರೇಪಿಸುತ್ತಿದ್ದನು. ಯಕ್ಕುಂಡಿಯ ರಾಮಲಿಂಗ ಇವನ ಹಾಡುಗಳಲ್ಲಿ ಬರುವ ಅಂಕಿತವಾಗಿದೆ. ಈತ ಬರೆದ 'ತಗಣಿ' ಹಾಡು ಬಹು ಜನಪ್ರಿಯವಾದ ಲಾವಣಿಯಾಗಿದೆ. ಅಲ್ಲಿ ಅನ್ಯೋಕ್ತಿ ಸೂಸಿ ಹರಿಯುತ್ತದೆ.

"ತಗಣಿ ಕಡೂತದ ಹಾಸಿಗ್ಯಾಗ ಹೊಕ್ಕ ।
ಹಾವಳಿ ನಡಿಸೇದ ।ಪ।
ಅಗಣಿತ ಮರಿಗಳ ಹಡೆಯುವ ತಗಣಿ ।
ಹಗಲಿರುಳೆನ್ನದೆ ಕಾಡುವ ತಗಣಿ
..........................................
ದುಷ್ಟ ದುರ್ಜನ ಆಗಿ ಹುಟ್ಟಿದ ತಗಣಿ
ರಾಷ್ಟ್ರಕ ಘಾತಾ ಮಾಡುವ ತಗಣಿ
ಶ್ರೇಷ್ಠ ಯಕ್ಕುಂಡಿಯ ರಾಮಲಿಂಗನ ಪಾದ
ನಿಷ್ಠೆಯ ಕೆಡಿಸುವ ಯಾಮದ ತಗಣಿ."[೯]

ಹಾಗೆಯೆ ಎಚ್ಚರಾಗಿರಿ ಎನ್ನುವ ಪದ್ಯದಲ್ಲಿ ಕವಿಯ ದೇಶಾಭಿಮಾನದ ಕೆಚ್ಚನ್ನು ಕಾಣಬಹುದಾಗಿದೆ.

"ಸರಕಾರ ಬಾಲಾಬಡದ । ಡೊಳ್ಳು ಬೆಳೆಸಿಕೊಳ್ಳುವ ಮಂದಿ
ದೇಶದಾಗ ಬಾಳಾಯ್ತು
ಜ್ಞಾನವಿಲ್ಲದ ಈ ಮಾನಗೇಡಿ ಮಂದಿಗೆ ಹೇಳಿ ಹೇಳಿ ಸಾಕಾಯ್ತುSS
ಪರತಂತ್ರ ಆಗಿ ನಾವು ಕೊಳಕೊಂತ ಬಿದ್ದ ಈಗ ದೀಡನೂರ ವರ್ಷಾಯ್ತು
ಬಂಗಾರದಂಥ ಭಾರತಮಾತೆಗೆ ಎಂಥಾ ವ್ಯಾಳೆ ಬಂತುSSS...." [೧೦]

ಯಾವುದು ಕೆಟ್ಟ ಎನ್ನುವಲ್ಲಿಯ ಕವಿಯ ಲೋಕವ್ಯವಹಾರವನ್ನು ಗುರುತಿಸಬಹುದಾಗಿದೆ.

"ಜಗಳಗಂಟ ಮಡದಿ ಕೆಟ್ಟ
ಸುಗುಣ ಇಲ್ಲದ ಮಗಾ ಕೆಟ್ಟ

ತಗಲ ತಂಟಿ ಮಾಡಾವ ಕೆಟ್ಟ
ಹಗಲಗಳ್ಳರ ನೆರಿ ಕೆಟ್ಟ
ಸಗಣಾ ತಿನ್ನು ನವಕರದಾರಾ । ಇನ್ನೂ ಕೆಟ್ಟs...."[೪೧]

**ಗೋಕಾಕದ ಬನಪ್ಪ (೧೮೮೪-೧೯೬೪) :**

ಗೋಕಾಕ ಜನಪದ ಕವಿಗಳಿಗೂ ಕಲಾಕಾರರಿಗೂ ಸ್ಫೂರ್ತಿಯ ಕೇಂದ್ರವಾಗಿದೆ. ಇಲ್ಲಿಯ ಹುನೂರು ಮನೆತನದ ಶಂಕ್ರಪ್ಪನವರಿಗೆ ಸು. ೧೮೮೪ರಲ್ಲಿ ಬನಪ್ಪ ಹುಟ್ಟಿದನು. ಈತ ಕಲಿತದ್ದು ೪ನೇ ಇಯತ್ತೆ, ಅಲ್ಲದೆ ಮೋಡಿ ಕೂಡ ಓದಲು ಬರೆಯಲು ಕಲಿತಿದ್ದನು. ತನ್ನ ೮೦ ವರುಷಗಳ ತುಂಬುಜೀವನದಲ್ಲಿ ಕಂಡುಂಡ ಅನುಭವ ಹಿರಿದಾದುದಾಗಿದೆ. ಈತನ ಲಾವಣಿಗಳಲ್ಲಿ ಅಂಥ ಹಲವಾರು ಘಟನೆಗಳನ್ನೂ ಕಾಣಬಹುದಾಗಿದೆ.

ಬನಪ್ಪನಿಗೆ 'ಬನೂ' ಎಂದು ಪ್ರೀತಿಯಿಂದ ಕರೆಯುತ್ತಿದ್ದರು. ನಾಗೇಶಿ ಹಾಡುರಚಿಸುತ್ತಿದ್ದನು. ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ ಮುಖಂಡರ ಮೇಲೂ ಹಲವಾರು ಲಾವಣಿ ಬರೆದಿದ್ದಾನೆ. ಮನೆದೇವರು ಬಾದಾಮಿಯ ಬನಶಂಕರಿ. 'ಬನಶಂಕ್ರಿಮ್ಯಾಲ ಇಡ್ರಿ ನಿಷ್ಠಾ' ಎಂದು ತನ್ನ ಹಾಡುಗಳಲ್ಲಿ ಆ ದೇವತೆಯನ್ನು ಸ್ಮರಿಸಿದ್ದಾನೆ. ಗೋಕಾಕದ ಬರಗಾಲಿ ಪರಶುರಾಮ ಮತ್ತು ಬನಪ್ಪ ಕೂಡಿಯೇ ಹಾಡು ರಚಿಸುತ್ತಿದ್ದುದರಿಂದ 'ಬನೂ ಪರಶುರಾಮ ಸಖಿಮಾಡಿದಾರ' ಎಂದೂ ಹಾಡಿದ್ದುಂಟು. ಒಮ್ಮೊಮ್ಮೆ ಬನೂನ ಹೆಸರೇ ಬರುತ್ತದೆ. 'ಕವಿಮಾಡಿ ಬನುಕವಿ ಹಾಡತಾನ ಗೋಕಾವ್ಯಾಗ ಮಾಡಿದ ರಚನಾ.' ಈತನು ನೇಕಾರ ವೃತ್ತಿಯವನಾಗಿದ್ದುದರಿಂದ ನೇಕಾರರ ಪರಿಸ್ಥಿತಿ ಕುರಿತು ಲಾವಣಿಯೊಂದನ್ನು ರಚಿಸಿದ್ದಾನೆ.

"ಭಾರತದಲ್ಲಿ ಬೇಕಾರ ಆದಾರ ।
ನೇಕಾರ ಮಂದಿಗಿ ಇಲ್ಲ ಅನ್ನ
ಕೂಳಕೂಳ ಅಂತ ಘೋಳಾಡಿ ।
ಅಳತಾರ ಹೆಂಥಾ ವ್ಯಾಳ್ಯಾ ತಂದಿ ಭಗವಾನಾ ॥ಪ॥
ನೂಲ ಇಲ್ಲದಲೆ ಖಾಲಿ ಕೂತಿದಾರಾ
ಸಾಲಾ ಕೊಡೊದಿಲ್ಲ ಯಾರ್‍ಯಾರ
ಹೊಟ್ಟೆಗಿಲ್ಲದೆ ಎಷ್ಟಂತ ತಾಳೂನಂತ
ಬಿಟ್ಟಹ್ವಾದ್ರ ತಮ್ಮ ಮನಿಮಾರಾ
ಹಂಡೆ ಭಾಂಡೆ ಎಲ್ಲಾ ಮಾರಿಕೊಂಡಾರು
ಕೊಂಡ ತಗೊಂಡಾರ ಬೋಗಾರಾ
ಎಷ್ಟು ಮಾಡಿದರೇನ ಹೊಟ್ಟಿ ತುಂಬುವಲ್ಲು

ಎಂಥಾ ಕೆಟ್ಟ ನಮ್ಮ ಹಣಿಬಾರಾ
ಎಷ್ಟ ಹೇಳಿದರ ತೀರುದಿಲ್ಲ ವಿಧಿ ಕಾಡುಕಾಲ ಶನಿ ಕಂತ್ರಾಟಾ
ಬನಶಂಕ್ರಿ ಮ್ಯಾಲ ಇಡ್ರಿ ನಿಷ್ಠಾ
ಕವಿ ಮಾಡಿ ಬನು ಸವಿ ಹಾಡತಾನ
ಗೋಕಾವ್ಯಾಗ ಮಾಡಿದ ರಚನಾ
ಕೂಳಕೂಳ ಅಂತ ಘೋಳಾಡಿ ಅಳತಾರ
ಹೆಂಥಾವ್ಯಾಳ್ಯಾ ತಂದಿ ಭಗವಾನಾ."[೪೨]

**ಯಾದವಾಡದ ಹುಸೇನಿ (೧೮೯೬–೧೯೭೬) :**

ಗೋಕಾಕ ತಾಲೂಕಿನ ಯಾದವಾಡ ಈ ಹುಸೇನಿಯ ಊರು. ೧೮೯೬ರಲ್ಲಿ ಹುಟ್ಟಿದ ಈತನಿಗೆ ಹಾಡು ರಚಿಸುವ ಕಲೆ ಕರಗತವಾದದ್ದು ಚಿಕ್ಕಂದಿನಿಂದಲೇ. ಓದು–ಬರಹ ಅಷ್ಟಕಷ್ಟೇ. ಶಾಲೆಗೆ ಹೋಗಿ ಕಲಿತದ್ದಲ್ಲ. ಹೆಣ್ಣು ಹೆಚ್ಚು ಎಂದು ಹಾಡು ಹೇಳುತ್ತಿದ್ದನು. 'ಯಾದವಾಡ ಹುಸೇನಿ' ಎಂಬ ಮುದ್ರಿಕೆ ಈತನ ಹಾಡುಗಳಲ್ಲಿ ಕಂಡುಬರುತ್ತದೆ. ಗಾಂಧೀಜಿ ಕುರಿತಾದ ಲಾವಣಿ ಅತ್ಯಂತ ಪ್ರಸಿದ್ಧಿ ಪಡೆದದ್ದು.

"ಹುಟ್ಟಬಂದ ಭೂಮಿ ಮೇಲೆ ಶ್ರೇಷ್ಠ ಪದವಿ ಗಳಿಸಿಕೊಂಡ
ಲೋಕದೊಳು ಕೀರ್ತಿ ಅವರ್ದೂ ಆತ ಜಾಹೀರಾ
ಗಾಂಧೀ ಮಹಾತ್ಮಾ ಅಂಬೋರು ಬುದ್ಧಿಯಲ್ಲಿ ಭಾಳೆ ಚತುರಾ
ಶಾಂತಮೂರ್ತಿ ಸಮುದ್ರಗುಣ ಇದ್ದಂಗ ಭೋಳಶಂಕರಾ
ರೂಪನೋಡಿದರ ಅವನ ಸ್ವರೂಪ ಸದಾಶಿವನ್ಹಂಗ
ಸ್ವರ್ಗದಿಂದ ಬಂದಾರೇನ ತೊಟ್ಟ ಅವತಾರ
ರತ್ನ ಕಳದ ಕತ್ತಲಿ ಬಿದ್ದಂಗ ಆತ ಶುಕ್ರಾರಾ
ಸತ್ರಸುದ್ದಾ ಅವರು ಸತ್ತಾಂಗಲ್ಲಾ ಕೇಳರಿ ಇದ್ದಂಗ
ಕೇಳ್ರಿ ಅವ್ರು ಭಾಳ್ ಸಾತ್ವಿಕರಾ
ಸತ್ವ ಬಿತ್ತಿ ತೋರಿಸಿ ಹ್ವಾದ್ರ ಅವರು ತಮ್ಮ ಅವತಾರಾ
ಯಾದವಾಡ ಹುಸೇನಿಸಾಬ ತನಗ ತಿಳಿದಷ್ಟು ಹೊಂದಿಸಿ ಅಕ್ಷರ."[೪೩]

**ಬೆಂಡಿಗೇರಿ ಸಿದ್ಧಪ್ಪ (೧೯೦೦–೧೯೬೭) :**

ಬೆಳಗಾವಿ ತಾಲೂಕಿನ ಭೆಂಡಿಗೇರಿಯಲ್ಲಿ ಸಂಗನಬಸಯ್ಯ ನಾಗೇಶಿ ಹಾಡುಕಟ್ಟಿದರೆ ಸಿದ್ದಪ್ಪ ಹರದೇಶಿ ಹಾಡು ರಚಿಸಿದ್ದಾನೆ. ಇಲ್ಲಿಯ ಸಂಬರಗಿ ಮನೆತನದ ಪರಮೇಶ್ವರಪ್ಪ ಮತ್ತು ಈರವ್ವ ದಂಪತಿಗಳಿಗೆ ೭ ಜನ ಗಂಡುಮಕ್ಕಳು. ಇವರಲ್ಲಿ ಎರಡನೆಯವನೇ ಈ ಸಿದ್ದಪ್ಪ. ಚಿಕ್ಕಂದಿನಿಂದಲೂ ಹಾಡು ಹೇಳುವ ಗೀಳು ಇಟ್ಟುಕೊಂಡಿದ್ದನು. ಒಳ್ಳೆಯ ಕಲಾಕಾರ. ಸ್ವತಃ ಗಂಡು ಹೆಚ್ಚು ಎಂದು

ಸಾರುವ ಹರದೇಶಿ ಹಾಡುಗಳನ್ನು ರಚಿಸಿದ್ದಾನೆ. ಸು. ೧೯೦೦ರಲ್ಲಿ ಜನಿಸಿದ ಕವಿ ೧೯೬೭ರಲ್ಲಿ ತೀರಿಕೊಂಡಿದ್ದಾನೆ. ಸಿದ್ದಪ್ಪನು ಸಣ್ಣಾಟಗಳನ್ನೂ ಬರೆದಿದ್ದಾನೆ. ಸ್ವತಃ ಅಲ್ಲಿ ಪಾತ್ರಗಳನ್ನೂ ಹಾಕುತ್ತಿದ್ದನು. ೧. ಹೇಮದತ್ತ ೨. ಭದ್ರವಿರಾಜ ೩. ರಾಜಾನಾಟ ೪. ಮಹಾದೇವಿ ಇವು ಸಿದ್ದಪ್ಪ ರಚಿಸಿದ ಸಣ್ಣಾಟಗಳಾಗಿವೆ.

ಸಿದ್ದಪ್ಪ ಆಟಕಲಿಸುವ ಮಾಸ್ತರನು ಆಗಿದ್ದನು. ಹಳ್ಳಿಹಳ್ಳಿಯಲ್ಲಿ ವಾಸ್ತವ್ಯ ಮಾಡಿ ಶ್ರೀಸಾಮಾನ್ಯರನ್ನು ಕಲಾವಂತರನ್ನಾಗಿ ತರಬೇತಿಗೊಳಿಸುತ್ತಿದ್ದನು. ಮಾಟ–ಮಂತ್ರ–ತಂತ್ರಗಳಲ್ಲೂ ಬಲ್ಲಿದನಾಗಿದ್ದನು. ಬಂಗಾಲಿ ವಿದ್ಯೆಯನ್ನೂ ಬಲ್ಲವನಾಗಿದ್ದನು. ಗಾಂವಠಿ ಪದ್ಧತಿಯ ಔಷಧ ಕೊಡುತ್ತಿದ್ದನು. ಈತನು ಕಲಿತದ್ದು ಕನ್ನಡ ೨ನೇ ಈಯತ್ತೆ ಮಾತ್ರ. ಅಂಕಲಗಿ ಅಡಿವೆಪ್ಪ ಈತನ ಮನೆದೇವರು. ಡಪ್ಪು ಬಾರಿಸುವಲ್ಲೂ ಎತ್ತಿದ ಕೈ.

ಸಿದ್ದಪ್ಪನು ದೆವ್ವ ಬಿಡಿಸುತ್ತಿದ್ದನು. ಅವನಿಗೆ ಯಾವ ವ್ಯಸನಗಳೂ ಇದ್ದಿರಲಿಲ್ಲ. ಮನೆಯಕಡೆ ಎಳ್ಳಷ್ಟೂ ಚಿಂತಿಸದೆ ಕೇವಲ ಸಮಾಜ ಸೇವೆಯಲ್ಲಿ ಹಾಡುರಚಿಸುವಲ್ಲಿ ನಿರತನಾಗಿದ್ದನು. ಈತನ ತಮ್ಮನಾದ ಮಲ್ಲಪ್ಪನು ಕುರುಡನಿದ್ದು ತಬಲಾ ಬಾರಿಸುವಲ್ಲಿ ನಿಷ್ಣಾತನಿದ್ದನು. ಗೌಡಪ್ಪ ಹೆಣ್ಣಿನ ಹಾಡು ಹೇಳಿದರೆ ಈತ ಗಂಡಿನ ಹಾಡು ಹಾಡುತ್ತಿದ್ದನು.

ಇಷ್ಟು ಹೊತ್ತಿಗೆ ಸಾಯತ್ತೇನೆಂದು ಹೇಳಿ–ಕೇಳಿ ಸತ್ತ ಸಿದ್ಧಿಪುರುಷ ಇವನು. ಸಂಗೊಳ್ಳಿ ರಾಯಣ್ಣನ ಲಾವಣಿ ಅಪ್ರತಿಮವಾಗಿದೆ. 'ಸಿದ್ಧಲಿಂಗ' ಇವನ ಮುದ್ರಿಕೆಯಾಗಿದೆ.

"ವೀರ ಕಿತ್ತೂರ ನಾಡಾಗ
ಶೂರ ಸಂಗೊಳ್ಳಿ ರಾಮಾ
ಹಾರಿ ಹೋಗಿ ಕಡಿಯಾಂವಾ ಶತ್ರುಗಳಾ
ಕತ್ತಿಯೆತ್ತಿದರ ಹುಸಿಯಲ್ಲ ರಾಮಬಾಣಾ
ಪಂಚಪಾಂಡವರಲ್ಲಿ ಇದ್ದಂಗ ಅರ್ಜುನಾ
ಕನ್ನಡನಾಡ ವ್ಯಾಘ್ರ ಘನಪುಂಡ ಪ್ರಖ್ಯಾತ
ಕಡಕಡದ ಚಂಡರುಂಡ ತೂರಿದ ಹೆಣಾ
ರಕ್ತಕಾರಿಸಿಬಿಟ್ಟ ಕೆಂಪ ಮೋತಿಯವರನ್ನ...
ಭೆಂಡಿಪುರದ ಸಿದ್ಧಲಿಂಗ ಪ್ರಕರಣಾ."[೪೪]

**ಹುಲಕುಂದ ಭೀಮಕವಿ (೧೯೦೯–೧೯೭೦) :**

ಬೆಳಗಾವಿ ಜಿಲ್ಲೆಯ ಹುಲಕುಂದ 'ಭೀಮಕವಿ' ಎಂದು ಹೆಸರಾದ ಕವಿಯ ನಿಜವಾದ ಹೆಸರು ಬಸಪ್ಪ ಸಂಗಪ್ಪ ಬೆಟಗೇರಿ. ಹುಟ್ಟಿದ್ದು ೩–೨–೧೯೦೯ರಲ್ಲಿ, ತೀರಿಕೊಂಡದ್ದು ೨೨–೬–೧೯೬೦ರಲ್ಲಿ. ಕಲಿತದ್ದು ಕನ್ನಡ ೬ನೆಯ ಈಯತ್ತೆ. ಉದ್ಯೋಗ ನೇಕಾರಿಕೆ. ಇವರ ಮನೆಯ ಸಮೀಪವೇ

ಭೀಮ ಎಂಬ ಸಾಧುವಿನ ಗದ್ದಿಗೆಯೊಂದಿದೆ. ಆ ಗದ್ದುಗೆಯ ದರ್ಶನ ಪಡೆದೇ ತನ್ನ ಕಾರ್ಯಕೈಕೊಳ್ಳುತ್ತಿದ್ದ ಈ ಬಸಪ್ಪನಿಗೆ ಕಾವ್ಯರಚಿಸುವ ಶಕ್ತಿಬಂದದ್ದು ಆ ಸಾಧುವಿನ ಕೃಪೆಯೆಂದೇ ಬಗೆದು ಆತನನ್ನೇ ಹಾಡುಗಳಲ್ಲಿ ಸ್ಮರಿಸಿದ್ದಾನೆ. ತಂದೆಯೂ ಕವಿ ಇದ್ದ ಎನ್ನುವುದನ್ನು ಮರೆಯುವಂತಿಲ್ಲ. ಹರಿಶ್ಚಂದ್ರ, ಮಾರ್ಕಂಡೇಯ, ಸಿರಿಯಾಳ ಮೊದಲಾದ ಬಯಲಾಟದ ಕತೆಗಳನ್ನು ಭೀಮಕವಿಯ ತಂದೆ ಸಂಗಪ್ಪ ರಚಿಸಿದ್ದಾನೆ. ತಂದೆಯ ಪ್ರಭಾವವೂ ಈತನ ಮೇಲೆ ಬಿದ್ದುದನ್ನು ನೆನೆಯಬಹುದು. 'ಭೀಮಕವಿ' ಎಂಬುದು ಈತನ ಹಾಡುಗಳಲ್ಲಿ ಬರುವ ಮುದ್ರಿಕೆಯಾಗಿದೆ. ಭೀಮೇಶ, ಭೀಮ, ಭೀಮರಾಯ ಭೀಮಸಿಂಗ ಮೊದಲಾದ ಹೆಸರುಗಳು ಬರುತ್ತವೆ.

ಭೀಮಕವಿ ಸ್ವತಃ ಹಾಡುಗಾರ. ಹೊಸೂರಲ್ಲಿ ಮೇಳಕಟ್ಟಿಕೊಂಡು ನಾಡಿನ ತುಂಬೆಲ್ಲಾ ಹಾಡುಗಳ ಮುಖಾಂತರ ರಾಷ್ಟ್ರಾಭಿಮಾನ ಹೆಚ್ಚಿಸಿದವನು. ಸ್ವತಃ ಕವಿಯೂ ಹೌದು. ಸಾವಿರಾರು ಲಾವಣಿ ರಚಿಸಿದ್ದಾನೆ. ಸರಕಾರದ ಪ್ರಚಾರಕ್ಕೆ ಮೀಸಲಾದ ಹಾಡುಗಳಿಗಂತೂ ಲೆಕ್ಕವಿಲ್ಲ. ಸರ್ವೋದಯ ಪ್ರಚಾರದ ಹಡುಗಳು ಸಾಕಷ್ಟು ರಚಿತವಾಗಿವೆ. ೧೯೪೨ರಲ್ಲಿ ಜೇಲೂ ಕಂಡುಬಂದ ಈ ಕವಿಗೆ ಸಾಯುವವರೆಗೂ ಸರಕಾರದ ಸಹಾಯಧನ ದೊರೆಯುತ್ತಿತ್ತು. ತನ್ನ ಅರವತ್ತು ವರುಷಗಳ ತುಂಬುಜೀವನದಲ್ಲಿ ಕವಿ ಉಂಡದ್ದು ಹೆಚ್ಚಾಗಿ ಬಡತನದ ಕಹಿಯನ್ನೇ. ಭೀಮಕವಿ ಹಣಗಳಿಸದಿದ್ದರೂ ಹಾಡು ರಚಿಸಿ ಹೆಸರು ಗಳಿಸಿದರು. ಅದರಿಂದ ಆ ಊರಿಗೂ–ನಾಡಿಗೂ ವಿಶೇಷವಾಗಿ ಜಾನಪದ ಕ್ಷೇತ್ರಕ್ಕೆ ದೊಡ್ಡ ಹೆಸರು.

ಭೀಮಕವಿಯು ಆಕಾಶವಾಣಿಯಲ್ಲಿ ಹಾಡಿದ ಹಾಡುಗಳು ಧ್ವನಿ ಮುದ್ರಿಕೆಯಲ್ಲಿ (ಟೇಪ್ ರೆಕಾರ್ಡ) ಇರುವವಲ್ಲದೆ, ಕೆಲವು ಮುದ್ರಣಗೊಂಡಿರುತ್ತವೆ. ಮುದ್ರಣಗೊಂಡ ಕೃತಿಗಳು ಇಂತಿವೆ:

೧. ಜಾನಪದ ರಗಳೆಗಳು, ಸಂ. ತಲ್ಲೂರ ರಾಯನಗೌಡರು–೧೯೪೭

೨. ಸರ್ವೋದಯ ಗ್ರಾಮೀಣ ಜನಪದ ಗೀತೆಗಳು–೧೯೬೭

೩. ಗ್ರಾಮದಾನ ಭೂದಾನ ಪದ್ಯಾವಳಿ–೧೯೬೪, ೧೯೬೭

೪. ಗೀಗೀ ಪದ್ಯಸಂಗ್ರಹ–೧೯೫೫ ಇನ್ನೂ ಅಚ್ಚಾಗದೇ ಇದ್ದ ಸಾವಿರಾರು ಹಾಡುಗಳನ್ನು ಸಂಗಪ್ಪ ಅವರ ಸಂಗ್ರಹದಲ್ಲಿವೆ.

ಭೀಮಕವಿಯ 'ಎಂಥಾ ಶಾಣ್ಯಾ ಮಹಾತ್ಮಾ ಗಾಂಧಿ' ಎಂಬ ಹಾಡು ಅತ್ಯಂತ ಜನಪ್ರಿಯವಾದುದು. ಪ್ರಾಸ ಜೋಡಿಸುವುದರಲ್ಲಿ ಕವಿಯ ಜಾಣ್ಮೆ ಎದ್ದು ಕಾಣುತ್ತದೆ. ಭೀಮಕವಿಯು೧. ಕಿತ್ತೂರು ಕೋಟೆ, ೨ ಕಿತ್ತೂರು ಚನ್ನಮ್ಮ ರಾಣಿ, ೩. ಕಿತ್ತೂರು ಚನ್ನಮ್ಮ, ೪. ಕಿತ್ತೂರು ಚನ್ನಮ್ಮ ರಾಣಿ, ೫. ಬೆಳವಡಿ ಮಲ್ಲಮ್ಮ, ೬. ಶೂರಸಂಗೊಳ್ಳಿ ರಾಯಣ್ಣ, ೭. ಸಂಗೊಳ್ಳಿ ರಾಯಣ್ಣ ಈ ಏಳು ಚಾರಿತ್ರಿಕ ಲಾವಣಿಗಳನ್ನು ರಚಿಸಿದ್ದಾನೆ.

"ಕೂಡಿದ ಜನರೊಳು ಹಾಡಿದ ಪದಗಳು
ಪೇಡೆ ತಿಂದಂತೆ ಆಗಬೇಕು ಸಂವಿ
ಕೂಡದ ಪ್ರಾಸ ಗುದ್ಯಾಡಿ, ಜೋಡಸಾಂವ
ರೂಢಿಯೊಳಗ ಶತಮೂಢ ಕವಿ."[೪೫]

ಹಾಲುಮತದ ಪುರಾಣ ಕುರುಬರ ಸಮಾಜಕ್ಕೊಂದು ಬೈಬಲ್ಲ ಇದ್ದ ಹಾಗೆ. ಆ ತತ್ವಕ್ಕಂಟಿಕೊಂಡ ನೂರಾರು ಡೊಳ್ಳಿನ ಹಾಡುಗಳನ್ನು ಈ ಕವಿರಚಿಸಿದ್ದಾನೆ. ಅಲ್ಲಲ್ಲಿ ಹಾಡುವ ತೋಡಿಯ, ಖ್ಯಾಲಿಯ ಹಾಡುಗಳಿಗಂತೂ ಲೆಕ್ಕವಿಲ್ಲ. 'ನಾಡಿನ ಜನರು ಬೇಡಿದ ಪದ್ಯ ಮಾಡಿ ಹಾಡಾಂವ ಹುಲಕುಂದ ಭೀಮಕವಿ' ಎಂಬ ಕವಿಯ ನುಡಿಯಲ್ಲಿ ಯಾವ ಅತಿಶಯೋಕ್ತಿಯಿಲ್ಲ ಎನಿಸುತ್ತದೆ.

"ಕೈಯಾಗ ರೊಕ್ಕಯಿಲ್ಲ ಮೈಯಾಗ ರಕ್ತಯಿಲ್ಲ
ಕಾಲಾಗ ಶಕ್ತಿಯಿಲ್ಲ ಈಗಿನ ಗಂಡಸರಾ
ಚಹಾ ಕುಡದ ಆಗ್ಯಾರ ಭಾಳ ಹಗರಾs । ಗೀ– ಗೀ
ಖರ್ಚು ಕಡ್ಮಿ ಮಾಡುದಿಲ್ಲ ಹೇಳಿದರ ಕೇಳುದಿಲ್ಲ.
ತಮ್ಮದ ನಡಸ್ತಾರ ಭಾಳ ಟೊಪ್ಪಿಗಿಯವರ್ನ ಕಂಡ್ರ
ಕಂಡ್ಹಂಗ ಮಾತಾಡಸ್ತಾರ ಇವರಾ । ಗೀ–ಗೀ
ಗಾಂಧಿ ಟೋಪಿ ಹಾಕುದಿಲ್ಲ ಹಾಕಿದವರ್ಗಿ ಸೇರುದಿಲ್ಲ
ಒಲ್ಲೇವ ಅಂತಾರ ಅರಣ್ಯ ಪಂಡಿತರಾ
ಇಂತಾವ್ರ ನೋಡಿ ಹಿಂದೂಸ್ತಾನ ಕಳ್ಯಾವರಾ । ಗೀ ಗೀ
ದೇಶಸೇವಾ ಮಾಡುದಿಲ್ಲ ಸ್ವರಾಜ್ಯದ ಗರಜಿಲ್ಲ
ಗಾಂಧಿಯವ್ರ ದರಜಿಲ್ಲ ಇವರೆಂಥಾ ಲಫಂಗರಾ
'ಭೀಮೇಶಗ' ವಿರುದ್ಧ ನುಡಿಯುವರಾ । ಗೀ–ಗೀ."[೪೬]

ಎಂಬ ಈ ಹಾಡಿನಲ್ಲಿ ಅವರು ದೇಶಾಭಿಮಾನಕ್ಕಾಗಿ ಹೋರಾಡಿದುದನ್ನು ಅರಿತುಕೊಳ್ಳಬಹುದಾಗಿದೆ.

ಒಕ್ಕಲಿಗನಿಗೆ ಅತ್ಯಂತ ಪ್ರೀತಿಯ, ಸಂತಸದ, ಉಬ್ಬಿನ ಹಾಡುಗಳೆಂದರೆ ಹಂತಿಯ ಹಾಡುಗಳು. ದುಡಿದು ದಣಿವಾರಿಸಿಕೊಳ್ಳಲು ಹೊರಬಂದ ಅಂತರಂಗದ ಹಾಡುಗಳವು. ಅಂಥ ನೂರಾರು ಪದ್ಯಗಳನ್ನು ರಚಿಸಿದ್ದುಂಟು.

"ಎಂಟ ಎತ್ತಿನೊಳಗ ಬಂಟ ಮೂಡಲ ಎತ್ತ
ಗಂಟಿ ಸರಪಳಿ ಕೊರಳಾಗ । ಕಟಗೊಂಡ
ರಂಟಿಯ ಹೊಡೆದು ಉಣತಾವೊ

ಬಂಗಾರ ಕೊಂಬಣಸ ಬೆಳ್ಳಿಯ ಹಣಿಪಟ್ಟಿ
ಜಂಗ ಸರಗೆಜ್ಜಿ ಸರಪಳ್ಯೊ । ನಮ್ಮೆತ್ತಾ
ಮುಂಗಾರಿ ಬಿತ್ತಿ ಬರತಾವೊ
ಹಾದಿಯ ಹೊಲದಾಗ ನಮ್ಮೆತ್ತಾ
ಕಾಧ್ವಿಡದ ಡರಕಿ ಹೊಡದಾವೊ । ದಾದಿಲ್ದ
ಗೋದಿಯ ಬಿತ್ತಿ ಬರತಾವೊ."[೪೭]

ಸೋಬಾನದ ಹಾಡು, ಕೋಲಿನ ಹಾಡು 'ಜೋ ಜೋ' ಮಂಗಳಾರತಿ ಮೊದಲಾದ ಪದಗಳಿಗೂ ಕೊರತೆಯಿಲ್ಲ. ಕರ್ನಾಟಕದಲ್ಲೆಲ್ಲ ಜಯಭೇರಿ ಹೊಡೆದ ಕವಿಯೀತ. ಭೀಮಕವಿಯ ಕೆಲವು ಲಾವಣಿಗಳನ್ನು ಚನ್ನಕ್ಕ ಪಾವಟೆ ಅವರು ಸಂಪಾದಿಸಿ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಟಿಸಿದ್ದಾರೆ.

**ತಿಗಡೊಳ್ಳಿಯ ಬಿಷ್ಟಪ್ಪ :**

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನಲ್ಲಿಯ ತಿಗಡೊಳ್ಳಿ ಗ್ರಾಮ ಜನಪದ ಕಲಾಕಾರರ ಜನ್ಮಭೂಮಿಯಾಗಿದೆ. ಹಾಡುವ, ಹಾಡು ರಚಿಸುವ; ಬಯಲಾಟ ಆಡುವ, ಕಥೆ ರಚಿಸುವ ಜನಪದ ಕವಿಗಳು ಇಲ್ಲಿದ್ದಾರೆ. ಸ್ವಾತಂತ್ರ್ಯಯೋಧರಿಗೂ, ಕುಸ್ತಿ ಪಟುಗಳಿಗೂ ತಿಗಡೊಳ್ಳಿ ಗ್ರಾಮ ಹೆಸರು ಪಡೆದಿದೆ. ಈ ಗ್ರಾಮದ ಜೈನಧರ್ಮದ ಮಂಡೇದ ಕುಬೇರಪ್ಪನಿಗೆ ಮಗನಾಗಿ ಬಿಷ್ಟಪ್ಪ ೧೯೧೫ರಲ್ಲಿ ಜನಿಸಿದ್ದಾನೆ. ಐದನೇ ಈಯತ್ತೆ ವರೆಗೆ ಓದಿದ ಬಿಷ್ಟಪ್ಪ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿದ್ದ. ಈ ಊರಲ್ಲಿ ನಡೆಯುವ ಶ್ರೀಕೃಷ್ಣ ಪಾರಿಜಾತದಲ್ಲಿ ಬಿಷ್ಟಪ್ಪ ಪಾತ್ರ ಮಾಡಿದ್ದಾನೆ. ಬಿಷ್ಟಪ್ಪನ ಚಿಕ್ಕಪ್ಪ ಲಾವಣಿ, ಗೀಗೀ ಹಾಡು ಹೇಳುವಲ್ಲಿ ಪಳಗಿದವ. ಅವನ ಪ್ರಭಾವ ಈ ಕವಿಯ ಮೇಲೂ ಆದುದರಿಂದ, ಈತನು ಹಾಡಲು ಪ್ರಾರಂಭಿಸಿದನು. ಅಂದಿನಿಂದ ನೂರಾರು ಹಾಡುಗಳನ್ನು ರಚಿಸುತ್ತ ಬಂದ ಕೀರ್ತಿ ಈ ಕಲಾರಸಿಕನದಾಗಿದೆ.

ಧಾರವಾಡ ಆಕಾಶವಾಣಿಯ ಕಲಾಕಾರನೂ ಇವನು. ತನ್ನ ಹಾಡುಗಳಲ್ಲಿ 'ಶಾಂತಿನಾಥ'ನನ್ನು ನೆನೆಸಿದ್ದಾನೆ. ಜೈಲುವಾಸವನ್ನೂ ಅನುಭವಿಸಿದ ಈ ರಾಷ್ಟ್ರಯೋಧನಿಗೆ ಲಾವಣಿ ಹಾಡುವುದೆಂದರೆ ಹುಮ್ಮಸ್ಸು ಇಮ್ಮಡಿಯಾಗುತ್ತಿತ್ತು.

"ಲೋಲಾಡುವ ಬಿಷ್ಟಂಣ ಲೀಲೆಯಿಂದ ಹೇಳ್ಯಾನ
ಆಲಸ್ಯಮಾಡದೆ ಅನ್ನರೀ ಮಂತ್ರ
ಕೋಲ ಆಡುತ ತಿಗಡೊಳ್ಳಿ ಶಾಂತಿನಾಥನ ದಯದಿಂದ
ಪದ ಮಾಡತಾನ ಕೂತ ಸ್ವತಂತ್ರ'

'ವರಮುರವ ತಿಗಡೊಳ್ಳಿ ಗುರುಶಾಂತಿನಾಥನ
ದಯದಿಂದ ಭಕ್ತಿಯಿಮದ ಬಿಷ್ವಂಣ ಮಾಡ್ಯಾನ"೪೮

**ಮರಿಕಲ್ಲ ಕವಿ :**

ಇತ್ತೀಚಿನವರೆಗೂ ಬ್ರಿಟಿಷ್‌ರು ಬರೆದಿಟ್ಟಿರುವುದಷ್ಟೇ ನಿಜವಾದ ಇತಿಹಾಸವೆಂದು ಅಕ್ಷರಲೋಕದ ವಿದ್ವಾಂಸರು ನಂಬಿದ್ದರು. ಹಾಗೆಂದು ನಂಬಿಸಿದ್ದರು. ಇಂಥ ನಿಲುವು ಕಾರಣವಾಗಿ ಕನ್ನಡಗರಲ್ಲಿಯೂ ಅಕ್ಷರವಂಚಿತ ಪ್ರತಿಭೆಗಳನ್ನು ವ್ಯವಸ್ಥಿತವಾಗಿ ನಿರ್ಲಕ್ಷಿಸಿ ರಾಜ–ಮಹಾರಾಜರ, ಕೋಟೆ–ಕೊತ್ತಲಗಳ, ಶಿಲ್ಪ–ವಾಸ್ತುಶಿಲ್ಪಗಳ ಇತಿಹಾಸವನ್ನು ಮಾತ್ರ ಬರೆಯುವ ಪರಂಪರೆ ಬೆಳೆಯಿತೆನ್ನುವುದು ಸುಳ್ಳಲ್ಲ.ಇದರಿಂದಾಗಿ ಅಮೂಲ್ಯವಾದ ಎಷ್ಟೋ ಸ್ಥಳೀಯ ಚರಿತ್ರೆಗಳು, ವ್ಯಕ್ತಿ ಚರಿತ್ರೆಗಳು ಹೇಳಲು ಹೆಸರಿಲ್ಲದಂತೆ ಈಗಾಗಲೆ ನಾಶವಾಗಿವೆ. ಈ ಹಿನ್ನೆಲೆಯಲ್ಲಿ ಮರಿಕಲ್ಲ ಕವಿಯ ಜೀವನ ಅಧ್ಯಯನಯೋಗ್ಯವಾಗಿದೆ. ಚೆನ್ನಮ್ಮನ ಕಿತ್ತೂರು ಸಮೀಪದ ತಿಗಡೊಳ್ಳಿ ಗ್ರಾಮದ'ಮರಿಕಲ್ಲ ಕವಿ'(ಪೂರ್ಣಹೆಸರು ಮರಿಕಲ್ಲಪ್ಪ. ರುದ್ರಪ್ಪ. ಮಲಶೆಟ್ಟಿ)ಯ ಕೃಷಿ ಸಂಸ್ಕೃತಿಮೂಲದ ಒಂದು ಸಾಮಾನ್ಯ ಕುಟುಂಬದಲ್ಲಿ (ಜನನ :ಅಕ್ಟೋಬರ ೨೧, ೧೯೨೨) ಜನಿಸಿದರು.

ಮರಿಕಲ್ಲ ಪ್ರಧಾನವಾಗಿ ಗೀಗೀಕವಿ ಮತ್ತು ಹಾಡುಗಾರರೆನಿಸಿದ್ದರೂ ಅವರ ಚಲೇಜಾವ್ ಚಳವಳಿಯ ಹೋರಾಟ, ಕುಸ್ತಿ, ಜನಪದ ರಂಗಭೂಮಿ, ಆಧ್ಯಾತ್ಮ, ಸಂಗೀತ, ಹಿಡಕಿಕಲ್ಲು ಎತ್ತುವುದು ಇತ್ಯಾದಿ ಕ್ಷೇತ್ರಗಳ ಬಗೆಗಿನ ಆಸಕ್ತಿ ಒಂದು ಕಾಲಘಟ್ಟದ ಸಾಂಸ್ಕೃತಿಕ ಚರಿತ್ರೆ ಕಟ್ಟುವುದಕ್ಕೆ ನಿಸ್ಸಂದೇಹವಾಗಿಯೂ ಅಪರೂಪದ ಪ್ರೇರಣೆ. ಇದೇ ಕಾರಣಕ್ಕೆ ಮರಿಕಲ್ಲಕವಿಯ ಚರಿತ್ರೆ ವರ್ತಮಾನದ ಅಗತ್ಯವಾಗಿದೆ. ಸ್ವತಃ ಕುಸ್ತಿಪ್ರೇಮಿ ಹಾಗೂ ಹವ್ಯಾಸಿ ಲಾವಣಿ ಹಾಡುಗಾರರಾಗಿದ್ದ (ಮರಿಕಲ್ಲಕವಿಯ ತಂದೆ) ರುದ್ರಪ್ಪನವರಿಗೆ, ತಮ್ಮ ಇಬ್ಬರೂ ಗಂಡುಮಕ್ಕಳು ಕುಸ್ತಿಪೈಲವಾನರಾಗಿ ಪ್ರಸಿದ್ಧರಾಗಬೇಕೆಂದು ಬಯಕೆ ಇತ್ತು. ಅಂತೆಯೆ ಹಿರಿಯ ಮಗ ಕರಿಕಲ್ಲಪ್ಪನವರು ಕಿತ್ತೂರು ನಾಡಿನ ಆ ಕಾಲದ ಉದಯೋನ್ಮುಖ ಪೈಲವಾನರಲ್ಲಿ ಸಾಕಷ್ಟು ಹೆಸರು ಮಾಡಿದ್ದರು. ತಂದೆಯ ಕುಸ್ತಿಯ ಪ್ರೀತಿ, ಲಾವಣಿ ಹಾಡುಗಾರಿಕೆ ಇವೆರಡೂ ಮರಿಕಲ್ಲಪ್ಪನವರಿಗೆ ಬಳುವಳಿಯಾದವು. ಜೊತೆಗೆ"ಊರಲ್ಲಿ ನಿಯಮಿತವಾಗಿ ನಡೆಯುತ್ತಿದ್ದ ದೊಡ್ಡಾಟ, ಪಾರಿಜಾತ, ಸಣ್ಣಾಟ, ಕುಣಿತಗಳು, ಪಂಚಮಿಯಲ್ಲಿ ಉತ್ಸಾಹದಿಂದ ಪ್ರದರ್ಶಿಸತ್ತಿದ್ದ ಪಗರಣ ಮಾದರಿಯ ಸೋಗುಗಳು, ವರ್ಣಮಯ ಹೋಳಿಹುಣ್ಣಿವೆ, ಅಕ್ಕಪಕ್ಕದ ಊರಿನ ಜಾತ್ರೆಗಳು, ಲಾವಣಿ ಗೋಷ್ಠಿಗಳು ಬಾಲಕ ಮರಿಕಲ್ಲಪ್ಪನವರ ವ್ಯಕ್ತಿತ್ವ ರೂಪಿಸಿದವು, ಭಾವೀ ಕವಿಯೊಬ್ಬನ ಭಾವಕೋಶವನ್ನು ಶ್ರೀಮಂತಗೊಳಿಸಿದವು."೪೯

ಮರಿಕಲ್ಲಕವಿ ಪ್ರಾಯಕ್ಕೆ ಬರುವಷ್ಟರಲ್ಲಿ 'ಚಲೇಜಾವ್ ಚಳವಳಿ'ಯ ಗಾಳಿಜೋರಾಗಿ ಬೀಸತೊಡಗಿತ್ತು. ಆಗಲೇ ಊರಲ್ಲಿ ಎರಡುಬಾರಿ ಸಂಗೊಳ್ಳಿ ರಾಯಣ್ಣನ ಸೋಗುಹಾಕಿದ್ದ ಅವರಿಗೆ, ಬ್ರಿಟಿಷ್‌ರು ನಮ್ಮ ರಾಯಣ್ಣನನ್ನು ಗಲ್ಲಿಗೇರಿಸಿದ್ದಾರೆ. ಅದಕ್ಕೆ ಅವರನ್ನು ದೇಶ ಬಿಟ್ಟು ಓಡಿಸಬೇಕು ಎನ್ನುವ ಒಳಗುದಿ ಬೆಳೆದಿತ್ತು. ಅದರಿಂದ ಸಹಜವಾಗಿಯೇ ಅವರು 'ಚಳವಳಿ'ಯಿಂದ ಆಕರ್ಷಿತರಾದರು.

ಗೀಗೀ ಮೇಳಗಳಿಗೆ ಒಂದು ಹೊಸದಿಕ್ಕು ತೋರಿಸಿದ ಮೇಧಾವಿ ಹುಲಕುಂದದ (ಬಸಪ್ಪ ಸಂಗಪ್ಪ ಬೆಟಗೇರಿ) ಭೀಮಕವಿ. ಆ ಮಾಸ್ತರರ ಸಂಪರ್ಕ ಹಿಂಡಲಗಾ ಜೈಲಿನಲ್ಲಿದ್ದ ಮರಿಕಲ್ಲಪ್ಪನವರಿಗೆ ಒದಗಿತು. ಸಮಾನ ಆಸಕ್ತಿ, ಅವರಿಬ್ಬರನ್ನೂ ಬಹುಬೇಗಹತ್ತಿರತಂದಿತು. ಹೀಗೆ "....... ಮಾಸ್ತರರು ಮರಿಕಲ್ಲಪ್ಪನವರಿಗೆ ಗೀಗೀ ಗುರುಗಳಾಗಿ ಲಭ್ಯವಾದುದು ಒಂದು ಯೋಗಾಯೋಗ. (ಅವರು) ಜೇಲಿನಲ್ಲಿಯೇ ಗೀಗೀಮೇಳ ಕಟ್ಟಿದರು.ಈಗಾಗಲೇ ಒಂದಿಷ್ಟು ಲಾವಣಿ–ಗೀಗೀ ಸಂಸ್ಕಾರ ಪಡೆದಿದ್ದ ಮರಿಕಲ್ಲಪ್ಪನವರು ಸಮರ್ಥ ಹಿಮ್ಮೇಳದವರಾಗಿ ಮಾಸ್ತರರ ಮೇಳ ಸೇರಿಕೊಂಡರು. ಅಂದಿನಿಂದ ಮರಿಕಲ್ಲಪ್ಪನವರ ಅಭಿರುಚಿ ಬೇರೆಯಾಯಿತು."[೫೦] ಅದೇ ಅವಧಿಯಲ್ಲಿ ಅವರಿಗೆ, ಪಕ್ಕದ ಸೆಲ್‌ನಲ್ಲಿದ್ದಸಂಪಗಾವಿಯ ವಾಲಿ ಚೆನ್ನಪ್ಪನವರ ಪರಿಚಯವೂ ಆಯಿತು. ಮರಿಕಲ್ಲಕವಿಯ ಧೈರ್ಯ, ನಡಾವಳಿಯನ್ನು ಅವರು ತುಂಬಾ ಮೆಚ್ಚಿಕೊಂಡಿದ್ದರು.ತಾವು ಜೈಲಿನಿಂದ ಬಿಡುಗಡೆಯಾದಾಗ ಅವರುಹೊದ್ದುಕೊಳ್ಳುತ್ತಿದ್ದ ರಗ್ಗಿನ ಎಳೆ ಹರಿದು ಜೈಲು ಆವರಣದಲ್ಲಿದ್ದ ಹೂವುಗಳಿಂದ ಮಾಲೆಮಾಡಿ ಹಾಕಿ ಬೀಳ್ಕೊಟ್ಟದ್ದನ್ನು ಮರಿಕಲ್ಲಕವಿ ಸ್ಮರಿಸುತ್ತಿದ್ದರು. ಈ ಎಲ್ಲ ಅನುಭವಗಳನ್ನು ಅವರು ತಮ್ಮ '೪೨ರ ಚಳವಳಿ' ಗೀಗೀ ಹಾಡಿನಲ್ಲಿ ದಾಖಲಿಸಿದ್ದಾರೆ.

ಜೇಲಿನಿಂದ ಬಿಡುಗಡೆಗೊಂಡ ಮೇಲೆ ಮರಿಕಲ್ಲಕವಿಗೆ ಗೀಗೀ ಮರೆತಂತೆಯೇ ಆಗಿತ್ತು.ಆದರೆ ಅವರ ಸುಪ್ತಪ್ರತಿಭೆ ಪ್ರಕಟಗೊಳ್ಳುವ ಸಂದರ್ಭವೊಂದು ಒದಗಿಬಂದದ್ದು ೧೯೫೩ರಲ್ಲಿ.ಆಗ ಅತಿವೃಷ್ಟಿಯಾಗಿ ಮಲಪ್ರಭಾ ನದಿಗೆ ಮಹಾಪೂರ ಬಂದು ಬಹಳಷ್ಟು ಹಾನಿಯಾಗಿತ್ತು.ಇದು ಮರಿಕಲ್ಲಕವಿಯ ಹೃದಯವನ್ನು ತೀವ್ರವಾಗಿ ಬಾಧಿಸಿತು. ಆ ತಲ್ಲಣ ಕುರಿತು ಒಂದು ಗೀಗೀ ರಚಿಸಲು ಅವರು ನಿರ್ಧರಿಸಿದರು. ಅದಕ್ಕಾಗಿ ಮಲಪ್ರಭಾ ನದಿದಂಡೆಗುಂಟ ಹಲವಾರು ಹಳ್ಳಿಗಳಿಗೆ ಹೋಗಿ ಕ್ಷೇತ್ರಕಾರ್ಯದ ಮೂಲಕ ಅಂದಿನ ದಾರುಣ ಸ್ಥಿತಿಯನ್ನು, ಸಮಗ್ರವಾಗಿ ಅರಿತುಕೊಂಡು 'ಮಲಪ್ರಭಾ ಹೊಳಿ ಬಂದದ್ದು' ಪದಾ ರಚಿಸಿದರು. ಅದೇ ಅವರ ಮೊದಲ ರಚನೆಯಾಗಿದ್ದು; ಅದು ಎಂಟು ನುಡಿಗಳ ದೀರ್ಘಹಾಡಾಗಿದೆ.ಅದೊಂದು ಗೀಗೀ ಪರಂಪರೆಯ ಹೃದಸ್ಪರ್ಶಿಯಾದ ಕಥನ ಗೀತವಾಗಿದೆ. ಮರಿಕಲ್ಲಕವಿ ಹಾಡುರಚಿಸಿದ ಸುದ್ದಿ ಊರಲ್ಲಿ ಹಬ್ಬಿತು.ಜನರು ಅದನ್ನು ಹಾಡಿತೋರಿಸಲು ಒತ್ತಾಯಿಸಿದರು. ಒಂದುದಿನ ಗರಡಿಮನಿಯಲ್ಲಿ ಮಂಡೇದ ಬಿಷ್ಟಪ್ಪನವರ ಹಿಮ್ಮೇಳದವರ ಸಹಕಾರದೊಂದಿಗೆ 'ಹೊಳಿ ಬಂದ.......'ಹಾಡು ಹಾಡಿದರು.ಕೇಳಿದವರೆಲ್ಲ ತುಂಬಾ ಮೆಚ್ಚಿಕೊಂಡರು. ಅದರಿಂದ ಮರಿಕಲ್ಲಕವಿಯ ಹುರುಪು ಹೆಚ್ಚಿತು. ಒಂದರ ಮೇಲೊಂದು ಹಾಡುಗಳನ್ನು ರಚಿಸಲಾರಂಭಿಸಿದರು. ಎರಡು ಮೂರು ತಿಂಗಳಲ್ಲಿ ಹಲವಾರು ಹಾಡುಗಳು ರಚನೆಗೊಂಡವು.ಇತರರ, ವಿಶೇಷವಾಗಿ ಹುಲಕುಂದ ಮಾಸ್ತರರ ಹಾಡುಗಳನ್ನು ಕಲಿತುಕೊಂಡು ಒಂದು ರಾತ್ರಿಪೂರ್ತಿ ಹಾಡುವಷ್ಟು ಹಾಡುಗಳನ್ನು ಸಂಗ್ರಹಿಸಿದರು.

ಬಿಷ್ಟಪ್ಪನವರೊಂದಿಗೆ ಹಿಮ್ಮೇಳ ಮಾಡುತ್ತಿದ್ದ ಹರಿಜನರ ಬಾಳಪ್ಪ ದಾನಪ್ಪನವರ ಮತ್ತು ಹನಮಂತಪ್ಪ ಭರಮೇತ್ರಿ ಮರಿಕಲ್ಲಕವಿಗೆ ಖಾಯಂ ಸಾಥಿದಾರರಾಗಿ ದೊರೆತರು. ಅದೇ ವರ್ಷ

ಹಟ್ಟಿಹಬ್ಬದ ರಾತ್ರಿ ಅವರು ತಿಗಡೊಳ್ಳಿಯಲ್ಲಿ ಸ್ವತಂತ್ರವಾಗಿ ಗೀಗೀ ಗೋಷ್ಠಿ ನಡೆಸಿದರು. ಹಂದೂರಿನ ಚಂದ್ರವ್ವನ ಮೇಳ ಬಂದಿತ್ತು. ಕುರ್ಚಿಯ ಮೇಲೆ ಗಾಂಧಿ ಫೋಟೋ ಇಟ್ಟು ಪೂಜೆ ಮಾಡಿ ಹಾಡಲು ಪ್ರಾರಂಭಿಸಿದರು.ಚಂದ್ರವ್ವ ಅಂದು ತತ್ವಪದಗಳನ್ನು, ಪುರಾಣಕಥೆಯ ಪದಗಳನ್ನು ಮಾತ್ರ ಹಾಡಿದಳು. ಅಂದು ಮರಿಕಲ್ಲಕವಿ ತಾವೊಬ್ಬ ಸಮರ್ಥ ಗೀಗೀ ಕವಿ ಮತ್ತು ಹಾಡುಗಾರರೆಂಬುದನ್ನು ನಿರೂಪಿಸಿದರು. ನಿಧಾನವಾಗಿ ಅವರ ಹೆಸರು ಸುತ್ತಹಳ್ಳಿಗಳಿಗೆ ಪಸರಿಸಿತು. ಹಾಡಲು ಆಹ್ವಾನಗಳು ಬರತೊಡಗಿದವು. ಇಂಥ ಆಹ್ವಾನಗಳು ಹೆಚ್ಚಾದಂತೆ ಅವರ ಹಾಡುಗಳ ರಚನಾ ಸಂಖ್ಯೆಯು ಬೆಳೆಯಿತು. ಅಶ್ಲೀಲತೆಯ ಸೋಂಕಿಲ್ಲದಂತೆ ಜ್ಞಾನ , ಭಕ್ತಿ, ರಾಷ್ಟ್ರೀಯತೆ, ನೀತಿಗಳಿಗೆ ಸಂಬಂಧಿಸಿದ ಹಾಡುಗಳನ್ನು ಮಾತ್ರ ಹಾಡುತ್ತಿದ್ದ ಅವರಿಗೆ ವಿಶೇಷ ಮನ್ನಣೆ ದೊರೆಯಿತು. ತಿಗಡೊಳ್ಳಿಯಲ್ಲಿ ಜೈನಧರ್ಮೀಯರ ಸಂಖ್ಯೆ ಹೆಚ್ಚು, ಅಲ್ಲಿಯ ಬಸ್ತಿಗೆ ಜೈನ ಸನ್ಯಾಸಿಗಳು ಆಗಾಗ ಭೇಟಿ ನೀಡುತ್ತಿದ್ದರು.ಅವರ ಪ್ರವಚನಗಳು ಮರಿಕಲ್ಲಕವಿಯ ಮೇಲೆ ಪ್ರಭಾವ ಬೀರಿದ್ದರಿಂದ ಹಲವು ಜೈನ ಧರ್ಮದ ಹಾಡುಗಳೂ ರಚನೆಗೊಳ್ಳುವಂತಾಯಿತು. ಈ ಹಾಡುಗಳು ಎಷ್ಟು ಜನಪ್ರಿಯವಾದುವೆಂದರೆ ಒಂದು ಸಲ ಬೆಳಗಾವಿ ಸಮೀಪದ ಹಾಲಗಿ ಗ್ರಾಮದ ಜೈನ ಸಮಾಜದವರು ಮಹಾವೀರ ಜಯಂತಿ ಉತ್ಸವಕ್ಕೆ ಮರಿಕಲ್ಲಕವಿಯ ಗೀಗೀ ಮೇಳವನ್ನು ಆಹ್ವಾನಿಸಿದರು. ಆದರೆ ಹಿಮ್ಮೇಳದವರು ಹಿಂದುಳಿದ ಜಾತಿಯವರು ಎನ್ನುವುದನ್ನು ಗುರುತಿಸಿದ ಸ್ವಾಮಿಗಳೊಬ್ಬರು ಅವರು ಬಸದಿ ಪ್ರವೇಶಿಸಿವುದನ್ನು ತಡೆದರು. ಕೊನೆಗೆ ಸಂಘಟಕರಿಗೂ ಸ್ವಾಮಿಗಳಿಗೂ ರಾಜಿ–ಸಂಧಾನ ಮಾಡಿ ಕಾರ್ಯಕ್ರಮ ಜರುಗಿತು.ಮರಿಕಲ್ಲಕವಿ ಹಾಡಿದ ಜೈನಧರ್ಮದ ಮೇಲಿನ ಹಾಡುಗಳನ್ನು ಕೇಳಿದ ಆ ಸ್ವಾಮಿಗಳು ಸಂತೋಷಗೊಂಡು ಮೇಳವನ್ನು ಸನ್ಮಾನಿಸಿ ಕಳಿಸಿದರು.

ಬಸವರಾಜ ಮಲಶೆಟ್ಟಿ ಅವರು ೨೦೦೧ ರಲ್ಲಿ 'ಮರಿಕಲ್ಲ ಕವಿಯ ಗೀಗೀ ಹಾಡುಗಳು' ಕೃತಿಯನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಇದರಲ್ಲಿ ಅವರ ೩೩ ರಚನೆಗಳಿವೆ. ಇವು, ಮಲಶೆಟ್ಟಿ ಅವರು ಗುರುತಿಸಿರುವ ಹಾಗೆ ಮುಖ್ಯವಾಗಿ ಗಣಪತಿಸ್ತುತಿ, ಪುರಾಣ, ಇತಿಹಾಸ, ಧರ್ಮ, ನೀತಿ, ಆಧ್ಯಾತ್ಮ, ಸಮಾಜ ಚಿಂತನೆ, ಚಳವಳಿ, ಅಧ್ಯಾತ್ಮ, ಕುಸ್ತಿ, ಮಹಾಪೂರ, ಮಿತಕುಟುಂಬ, ಶಿಕ್ಷಣ ಹೀಗೆ ವಿಷಯ ವೈವಿಧ್ಯತೆಯಿಂದ ಕೂಡಿವೆ. ಒಂದು ಸಾಮಾಜಿಕ ಸಂದರ್ಭದ ಚರಿತ್ರೆ, ಘಟನೆ, ವರ್ತನೆ, ಸರಿತಪ್ಪು, ಐತಿಹ್ಯ, ಆದರ್ಶ, ಆಚರಣೆ ಮುಂತಾದವುಗಳನ್ನು ದೇಸಿಭಾಷೆ, ನುಡಿಗಟ್ಟು, ಮತ್ತು ಅಂತ್ಯಪ್ರಾಸಗಳೊಂದಿಗೆ ಕಟ್ಟಿಕೊಟ್ಟಿರುವುದರಿಂದ ಅವು ಅತ್ಯಂತ ಹೃದ್ಯವೆನಿಸುತ್ತವೆ. ಕೆಲವು ಗೀಗೀಪದಗಳನ್ನು ಇಲ್ಲಿ ಪರಿಶೀಲಿಸಬಹುದು.

ಪ್ರಸ್ತುತ 'ಮರಿಕಲ್ಲ ಕವಿಯ ಗೀಗೀ ಪದಗಳು' ಕೃತಿಯು 'ಗಣಪತಿಸ್ತುತಿ'ಯಿಂದ ಆರಂಭಗೊಂಡಿದ್ದು, ಗಣಪತಿ ಕುರಿತು ಎರಡು ಸ್ತುತಿಗಳಿವೆ. ಮೊದಲನೆಯದರಲ್ಲಿ ಗಣಪತಿಯ ಮಹಿಮೆ ಹಾಗೂ ರೂಪಾತಿಶಯವನ್ನು ವರ್ಣಿಸಲಾಗಿದೆ. ಎರಡನೆಯ ಸ್ತುತಿಪದವು ಭಕ್ತರ ಮನೆಯಲ್ಲಿ ವೆಗ್ಗಳವಾಗಿ

ಉಂಡು ಹೊರಟಿದ್ದ ಗಣಪತಿ, ದಾರಿಯಲ್ಲಿ ಮುಗ್ಗರಿಸಿ ಬಿದ್ದುದನ್ನು ನೋಡಿ ನಗೆಯಾಡಿದ ಚಂದ್ರನಿಗೆ ಶಾಪಕೊಟ್ಟ ಕಥೆಯನ್ನೊಳಗೊಂಡಿದೆ.ಅನಂತರ 'ಹನಮಂತನ ಲೀಲಾ', 'ಸಾಂಬಶಿವ' ಶೀರ್ಷಿಕೆಯ ಎರಡು ಸಖಿಗಳಿದ್ದು; ಕ್ರಮವಾಗಿ ಅವು ಆ ದೈವೀಪುರುಷರ ಸಂಕ್ಷಿಪ್ತ ಚರಿತ್ರೆ ಹೇಳುತ್ತವೆ. ಮುಂದಿನದು 'ಮಲಪ್ರಭಾ ಸ್ತುತಿ'. ಇದು ಮಲಪ್ರಭಾ ನದಿ(ಖಾನಾಪೂರ ಹತ್ತಿರದ) ಹುಟ್ಟುಗ್ರಾಮ ಕುಳಕುಂಬಿಯನ್ನು ಒಳಗೊಂಡಂತೆ (ಸಂಗೊಳ್ಳಿ ಹತ್ತಿರದ) ಮುಳಕೂರ ಗ್ರಾಮದ ವರೆಗೆ ಸಂಚರಿಸಿ ರಚಿಸಿದ ಹಾಡಾಗಿದೆ.ಕಿತ್ತೂರು ಕರ್ನಾಟಕದ ಜೀವನದಿ ಎನ್ನಬಹುದಾದ ಮಲಪ್ರಭೆಯ ಉಗಮ, ಅದುಮುಂದೆ ಸಾಗಿದರೀತಿ ಮತ್ತು ಸಂಗಮಿಸಿದ ಸ್ಥಳ ಈ ಮೂರು ಸಂಗತಿಗಳನ್ನು ನಿರೂಪಿಸುತ್ತದೆ. 'ಜಿನೇಶ್ವರ ಧ್ಯಾನ' ಹಾಡು "ಅರಹಂತ ದೇವರನ್ನ ಮರಿಯದೆ ಭಜಿಸಿರೊ ಮನಸಿನ ಮಡಿಉಟ್ಟು ಶಿಸ್ತಿಲಿಂದಲಿ ಬಂದು ಮನಮುಟ್ಟಿ ಪೂಜಿಸಿ ಗಡನೆ ಗತಿ ಪಡೆಯಿರೋ."[೫೧] ಎನ್ನುತ್ತ ತಮ್ಮೂರಿನ ಹೊಸ ಬಸದಿಯಲ್ಲಿ ಪ್ರತಿಷ್ಠಾಪನೆಗೊಂಡ ತೀರ್ಥಂಕರನ ದರ್ಶನ ಪಡೆಯಲು ನಿವೇದಿಸಿಕೊಳ್ಳುತ್ತದೆ. 'ಹಾಡು ಕೇಳಲು ಕೂಡಿದ ಜನ'ಎನ್ನುವ ಹಾಡು ಕೇಳುಗರ ಅಭಿರುಚಿಯನ್ನು ತಿದ್ದುವ ಆಶಯವುಳ್ಳುದಾಗಿದ್ದು,

"ಹಚ್ಚಿದೇರಿ ಹಾಡೋದಕ್ಕ ಕೂಡಿದೇರಿ ಕೇಳೋದಕ್ಕ
ಹುರುಪ ಆಗವಲ್ತ ಮನಕ ಗದ್ಲಾ ಎಬ್ಬಿಸಾರ ನಡಕ
ಹೆಣ್ಣಗಂಡಿನ ಪದಾ ಇಲ್ಲದ್ದಕ್ಕ."[೫೨]

ಎಂದು ಶ್ರೋತೃಗಳ ಕೀಳು ಅಭಿರುಚಿಯನ್ನು ಸರಿಯಾಗಿ ಚುಚ್ಚುತ್ತದೆ. ಬರೀ ಹರದೇಶಿ–ನಾಗೇಶಿ(ಕಲ್ಗಿ–ತುರಾಯಿ) ಹಾಡುಗಳನ್ನೇ ಕೇಳಿ ಕೇಳಿ ಕೀಳುಅಭಿರುಚಿಗೆ ಒಗ್ಗಿಕೊಂಡಿದ್ದ ಜನರನ್ನು ಸದಭಿರುಚಿಯತ್ತ ಹೊರಳಿಸುವ ಜವಾಬ್ದಾರಿ ಕೂಡ ಹಾಡುಗಾರರ ಮೇಲಿದ್ದ ಸಾಮಾಜಿಕ ಸ್ಥಿತಿಯನ್ನು ಆ ಸಾಲುಗಳು ತೆರೆದಿಟ್ಟಿವೆ. ನನ್ನದು ನಿನ್ನದು ಎಂದು ಹೊಡೆದಾಡುವವರನ್ನೂ 'ನಿನ್ನದು ನನ್ನದು' ಎನ್ನುವ ಪದಾ ಪರಿಹಾಸ ಮಾಡುತ್ತದೆ. 'ಮಹಾತ್ಮಾ ಗಾಂಧಿ' ಎನ್ನುವ ಪದವು "ಎಂದು ಮರಿಯಲಾರೆ ಮಹಾತ್ಮಾಗಾಂಧಿ ನಿನ್ನ ಹಿಂದುಸ್ಥಾನದ ತಂದಿ,....... ಮೂರು ಲೊಕದಲ್ಲಿ ಮೀರಿದಂತಾವ ನಿನ್ನ ಸರಿಯಗಾಣೆನು.... " ಎಂದು ಆತನ ಧ್ಯೇಯನಿಷ್ಠ ಬದುಕು ಮತ್ತು ದೇಶದ ಸ್ವಾತಂತ್ರ್ಯಕ್ಕಾಗಿ ಆತ ಹೋರಾಡಿದ ಅನನ್ಯತೆಯನ್ನು ಧನ್ಯತಾ ಭಾವದಲ್ಲಿ ಶ್ರುತಿಗೊಳಿಸಿ ಕೊಡುತ್ತದೆ.

'ಕಡ್ಲಿಮಟ್ಟಿ ಕಾಶಿಬಾಯಿ' ಉತ್ತರ ಕರ್ನಾಟಕದಲ್ಲಿ ಸಣ್ಣಾಟಕ್ಕೂ ವಸ್ತುವಾಗಿ ಮನೆಮಾತಾಗಿರುವ ಹೃದಯ ಹಿಂಡುವ ಜನಪದಲೋಕದ ಒಂದು ಕಥನಗೀತ.ಮರಿಕಲ್ಲಪ್ಪನವರು ಇಡೀ ಕಥೆಯನ್ನು ಸಾಲುಸಾಲಿನಲ್ಲಿ ಹೆಣೆಯುತ್ತ ಹೋಗುವ ರೀತಿ ಅನ್ಯಾದೃಶವಾಗಿದ್ದು; ಎಂಥಾ ಕಲ್ಲೆದೆಯವರೂ ಕರಗಿ ನೀರಾಗುವಂತಿದೆ. ಅದೊಂದು ಹೃದಯವಿದ್ರಾವಕವಾದ ಸನ್ನಿವೇಶ. ಕಾಮಾಂಧ ಸ್ಟೇಶನ್‌ಮಾಸ್ತರ, ಹಸುಗೂಸಿನ ಒಂದೊಂದೇ ಅಂಗಾಂಗಗಳನ್ನು ಕತ್ತರಿಸಿ ಕತ್ತರಿಸಿ ಕಿಡಕಿಯ ಹೊರಗೆ ಚೆಲ್ಲುತ್ತಿದ್ದರೂ

ಅದೆಲ್ಲವನ್ನೂ ನುಂಗಿಕೊಂಡು ತನ್ನ ಶೀಲವನ್ನು ರಕ್ಷಿಸಿಕೊಳ್ಳುವ ಕಾಶಿಬಾಯಿ ಅಸಾಧಾರಣ ಹೆಣ್ಣು. ಅದನ್ನು ಮರಿಕಲ್ಲಕವಿಯ ಕವಿಯ ಹೃದಯತಲಸ್ಪರ್ಶಿಯಾಗಿ ಅನುಭವಿಸಿ ಚಿತ್ರಿಸಿದೆ.ಅದು ಸ್ಟೇಶನ್ ಮಾಸ್ತರನೊಬ್ಬನ ಕಟುಕತನವನ್ನು ಕಾಶೀಬಾಯಿಯ ಧೀಮಂತಿಕೆಯನ್ನು ಒಟ್ಟೊಟ್ಟಿಗೇ ಸಾಕ್ಷೀಕರಿಸುವ ಹಾಡಾಗಿದೆ.ಗಂಡಿನ ಮೃಗೀಯತೆ, ಅನೈತಿಕ ಕಾಮಪಿಪಾಸೆ ಅದಕ್ಕಾಗಿ ಆತನಡೆಸುವ ಅಮಾನುಷ ಕ್ರೌರ್ಯಕೂಡ ಈ ಹಾಡಿನಲ್ಲಿ ಕರುಣಾಜನಕವಾಗಿ ವ್ಯಕ್ತವಾಗಿದ್ದು, ಕಥೆಯ ಬೇರೆ ಬೇರೆ ಆಯಾಮಗಳೊಂದಿಗೆ ಮುಖಾಮುಖಿಯಾಗುವ ಅವಕಾಶವನ್ನು ಒದಗಿಸುತ್ತದೆ. ಕೊನೆಯಲ್ಲಿ ಅದು 'ಕಾಶಿಬಾಯಿ ದುಡದಾಳು ಧರ್ಮಕ್ಕ ದುಷ್ಟಮಾಸ್ತರ ಗುರಿಯಾದ ಕರ್ಮಕ್ಕ' ಎನ್ನುವ ಜನಪದ ಆಶಯದೊಂದಿಗೆ ಮುಕ್ತಾಯಗೊಂಡಿದ್ದರು ಕೂಡಾ ನೀತಿಬೋಧೆ ಆ ಹಾಡಿನ ಕೇಂದ್ರಪ್ರಜ್ಞೆ, ಅಕ್ಷರಲೋಕದ ಪ್ರತಿನಿಧಿಯಾದ ಸ್ಟೇಶನ್ ಮಾಸ್ತರ ನೀತಿಗೆಟ್ಟು ವರ್ತಿಸುವಾಗ ಅನಕ್ಷರೆಯಾದ ಕಾಶಿಬಾಯಿ ಶೀಲವನ್ನು ಕಾಪಿಟ್ಟುಕೊಳ್ಳಲು ಹೋರಾಡುತ್ತ ತನ್ನ ಕರುಳ ಕುಡಿಯನ್ನೇ ಬಲಿಕೊಡುವುದಿದೆಯಲ್ಲ ಅದು, ಯಾರು ಸುಸಂಸ್ಕೃತರು? ಎಂದು ಇಡೀ ಸಾಕ್ಷರ ಸಮಾಜವನ್ನು ಪ್ರಶ್ನಿಸುವಂತಿದೆ.ಇದನ್ನೂ ಮೀರಿದ ಆಲೋಚನೆಗಳನ್ನು ಕವಿ ಓದುಗರಿಗೆ ಬಿಟ್ಟುಬಿಡುತ್ತಾರೆ.

ತರುವಾಯದ 'ವೀರಸಾಗರ ಮುನಿಗಳು''ಸಂಗೊಳ್ಳಿ ರಾಯಣ್ಣ', 'ಕಿತ್ತೂರ ಚೆನ್ನಮ್ಮ' 'ಬಸವೇಶ್ವರ', 'ಭಕ್ತಸಿರಿಯಾಳ', ಅನಸೂಯಾ, 'ಭೃಗುಋಷಿ' ಈ ಏಳು ಪದಗಳು ಕ್ರಮವಾಗಿ ಸಮಕಾಲೀನ ಜೈನಮುನಿಯೊಬ್ಬನ ಚರಿತ್ರೆ, ಬ್ರಿಟಿಷ್ ಅಧಿಕಾರಶಾಹಿ ವಿರುದ್ಧ ಕಿತ್ತೂರು ಸಂಸ್ಥಾನದ ಚಾರಿತ್ರಿಕ ವ್ಯಕ್ತಿಗಳಿಬ್ಬರ ದಿಟ್ಟಹೋರಾಟ, ಮೂವರು ಪೌರಾಣಿಕವ್ಯಕ್ತಿಗಳ ಜನಜನಿತ ಕಥೆಗಳನ್ನು ವಸ್ತುವಾಗಿಸಿಕೊಂಡಿವೆ. ಮರಿಕಲ್ಲಕವಿ ಇನ್ನೂ ಚಿಕ್ಕವರಿದ್ದಾಗಿನಿಂದಲೇ 'ಸಂಗೊಳ್ಳಿ ರಾಯಣ್ಣ'ನಹೋರಾಟಮಯ ವ್ಯಕ್ತಿತ್ವದಿಂದ ಪ್ರಭಾವಿತರಾದವರು. ಅಂತೆಯೇ ಈ ಹಾಡಿನಲ್ಲಿ ಒಳಸಂಚಿಗೆ ಬಲಿಯಾದ ಅವನ ಜೀವನಗಾಥೆಯನ್ನು ಪ್ರಮುಖ ಘಟನಾಳಿಗಳ ಮೂಲಕ ಬಿಡಿಸಿ ತೋರಿಸಿದ್ದಾರೆ. ಕುಲಕರ್ಣಿ ಬಾಳಪ್ಪ ಮತ್ತು ರಾಯಣ್ಣನ ನಡುವಿನ ವೈಷಮ್ಯಕ್ಕೆ ಕಾರಣವಾದ ಸಂಗತಿ, ನಂತರದ ಸಂಘರ್ಷ ಅದನ್ನು ಕಂಪನಿ ಸರಕಾರ ಬಳಸಿಕೊಳ್ಳುವ ರೀತಿ, ಸ್ಥಳೀಯ ವ್ಯಕ್ತಿಗಳ ದ್ರೋಹವ್ಯೂಹ.ರಾಯಣ್ಣನ ವೀರೋಚಿತ ಮರಣ ಇಲ್ಲಿ ಅಭಿವ್ಯಕ್ತಿ ಪಡೆದಿವೆ. ಇನ್ನೊಂದು ನೆಲೆಯಲ್ಲಿ ವರ್ಗ ಮತ್ತು ಅಧಿಕಾರಶಾಹಿ ದರ್ಪ, ದೌರ್ಜನ್ಯಗಳಿಗೆ ದಲಿತ ಸ್ವಾಭಿಮಾನಿಯೊಬ್ಬ ಮುಖಾಮುಖಿಯಾಗುವುದನ್ನು ಈ ಹಾಡು ತೆರೆದಿಟ್ಟಿದೆ.ಮೇಲಾಗಿ ರಾಯಣ್ಣನ ಸಾವು ವ್ಯರ್ಥವಲ್ಲ; ನಿಸ್ಸಂಶಯವಾಗಿಯೂ ಅದುಹೊಸಹೋರಾಟದ ಬಿತ್ತಿಗೆ ಜೀವಾಮೃತವೆನ್ನುವ ಸಂದೇಶವನ್ನೂ ಸಾರುವಂತಿದೆ.

'ಕಿತ್ತೂರ ಚೆನ್ನಮ್ಮ' ಹಾಡು, ಸ್ವಾತಂತ್ರ್ಯಸಂಗ್ರಾಮಕ್ಕೆ ಕಿಡಿಯೂರಿದ ಧೀರ ಮಹಿಳೆಯ ಚರಿತ್ರೆ. ಆಂಗ್ಲರ ದಬ್ಬಾಳಿಕೆಯ ವಿರುದ್ಧ ಅವಳು ಹೋರಾಡಿದ ಘಟನಾವಳಿಗಳನ್ನು ಚರಿತ್ರೆಗೆ ಕುಂದುಬಾರದ ರೀತಿಯಲ್ಲಿ ಕವಿ ನಿರೂಪಿಸಿರುವುದನ್ನು ಇಲ್ಲಿ ನೋಡಬಹುದಾಗಿದೆ:

"ಕಿತ್ತೂರ ಸಂಸ್ಥಾನದೊಳು ರಾಜ್ಯಭಾರ ಮಾಡುವಂಥ
ಶಿವಲಿಂಗರುದ್ರ ಮರಣ ಹೊಂದಿದರಾ
ವಟ್ಟಗೂಡಿ ದತ್ತಕ ಮಾಡಿದರಾ
ಕಣ್ಣೂರ ಮಲ್ಲಪ್ಪಶೆಟ್ಟಿ ಕಂಪನಿ ಸರಕಾರಕ್ಕ ಒಳಗಿಂದೊಳಗ
ಮಾಡಿದಾನ ಪಿತೂರಾ । ಬರದ ಪತ್ತರಾ ॥೧॥
ಕಪಿಕುಲದ ಪಿರಂಗೇರ್ನ ಕೈಮಾಡಿ ಕರದಂಗಾತು ಹಾತವರದ
ಬಂದ ಹೊಕ್ಕರ ಕಿತ್ತೂರಾ । ಅಲ್ಲಿ ಅಧಿಕಾರಿಗಳ ಮನಸ ಒಡಸಿದರಾ
ಸಂಸ್ಥಾನ ಕೈಸೇರೀ ತಂತ ಖಜಾನಿಗಳನ್ನ ಸೀಲಮಾಡಿ
ಶಾಮರಾಯ ಮಲ್ಲಪ್ಪಶೆಟ್ಟಿಗೆ ಒಪ್ಪಿಸಿದರಾ । ಎಲ್ಲ ಅಧಿಕಾರಾ॥೨॥
ಮನಸಿನೊಳಗ ಮಾಡಿದ ಸಾಸ ನೆನಸಗೊಡದ ಆದೀತಂತ
ಉಲ್ಲಾಸದಿಂದ ಇಬ್ರು ಉಬ್ಬಿದರಾ ಒಳ್ಳೇ ಉಮ್ಮೇದ್ವರಾ
ಕುಟಿಲ ಕಾರಸ್ಥಾನವಿದು ಕಣ್ಮುಂದ ಆಗೋದ ಕಂಡು ಚನ್ನಮ್ಮಾಜಿ
ಹಲ್ಲ ತಿಂದ್ಲ ಕರಾ ಕರಾ । ಆಗ ಇಲ್ಲ ಖಬರಾ ॥೩॥
ಕಷ್ಟ ಸಹಿಸಿ ಚನ್ನಮ್ಮ ರಾಣಿ ಕರಕೇಳತಾಳ ತನ್ನ ಸಂಸ್ಥಾನದ
ಉಪ್ಪ ಉಂಡ ಬಂಟರಾ । ಬಂದ್ರ ಎಲ್ಲಾರಾ
ಉಪಾಯೋನ ಮಾಡೂಣಂತ ಒಟ್ಟಗೂಡಿ ಮಾತಾಡತಾರ
ಸಂಧಾನಾಗೋದೊಂದೆ ಸಧ್ಯ ವಿಚಿಯಾರ್ । ಬರದ್ರ ಪತ್ತರಾ॥೪॥
..................................................
ತಿಗಡೊಳ್ಳಿ ಮಾರುತಿ ದಯದಿಂದಾ । ಮರಿಕಲ್ಲ ಕವಿ ಮಾಡಿದಾ.[೫೩]

ಈ ಮಲ್ಲಪ್ಪಸೆಟ್ಟಿಯ ಪತ್ರವೇ ಹೇಗೆ ಕಿತ್ತೂರು ಸಂಸ್ಥಾನದ ಮುಂದಿನ ಎಲ್ಲ ಕೇಡಿಗೆ, ಪತನಕ್ಕೆ ಕಾರಣವಾಯಿತೆನ್ನುವುದನ್ನು ಇನ್ನುಳಿದ ನುಡಿಗಳು ಸಮರ್ಥವಾಗಿ ವೇದ್ಯಗೊಳಿಸುತ್ತವೆ. ಐತಿಹಾಸಿಕ ಸಂಗತಿಗಳನ್ನು ಪುನಾರಚಿಸಿ ಹೇಳುವುದು ತುಂಬಾ ಅಪಾಯಕಾರಿಯಾದ ಕೆಲಸ. ಪಥ್ಯದ ಸರಿಯಾದ ತಿಳಿವಳಿಕೆ ಇಲ್ಲದಿದ್ದರೆ ನಿಶ್ಚಿತವಾಗಿಯೂ ಅದಕ್ಕೆ ನ್ಯಾಯವೊದಗಿಸಲು ಸಾಧ್ಯವಾಗುವುದಿಲ್ಲ. ಈ ದೃಷ್ಟಿಯಿಂದ ಮರಿಕಲ್ಲಕವಿಯದು ತುಂಬಾ ಎಚ್ಚರದ ನಡೆ ಎನ್ನುವುದನ್ನು ಇಂಥ ಹಾಡುಗಳು ಮನವರಿಕೆ ಮಾಡಿಸುತ್ತವೆ. ಆದರೆ 'ಬಸವೇಶ್ವರ' ಹಾಡು ಮಾತ್ರ ಅವನನ್ನು ಮತ್ತು ಅವನ ಸಮಕಾಲೀನ ಶರಣರನ್ನು ಅವತಾರ ಪುರುಷರೆಂದೇ ಭಾವಿಸಿ ಚಿತ್ರಿಸಿದಂತಿದೆ. ಬಸವೇಶ್ವರ ಇಲ್ಲಿ ನಂದಿಯ ಅವತಾರವಾದರೆ; ಶಿವಶರಣರು ಹರಗಣದವರ ಅವತಾರ. ಬಿಜ್ಜಳನು ಶಿವನ ದ್ವಾರಪಾಲಕನ ಅವತಾರವಾದರೆ; ನೀಲಾಂಬಿಕೆ ಬಿಜ್ಜಳನ ತಂಗಿ.ಶಿವನ ಆಣತಿಯಂತೆ ಶಿವಾಚಾರ ಬೆಳೆಸಲೆಂದೇ ಬಸವೇಶ್ವರ ಭೂಲೋಕಕ್ಕೆ ಬರುವುದು.

"ಶಿವನ ವಾಹನ ನಂದಿ ಬಸವಣ್ಣ ಶಿವಾಚಾರ ಪ್ರಕಟ ಮಾಡ್ಯಾನ"
"ಮೃತ್ಯು ಲೋಕಕ್ಕ ಹೋಗ ನೀ ಹೊಂಟಾ"
"ಹೋಗಿ ಬೆಳಸಬೇಕ ಶಿವಾಚಾರ ನೂರಾರು ಗಣದವರ
ಅವರ ಸಾಯಕ್ಕ ಕೊಟ್ಟಾ
ವೀರಭದ್ರ ಅವತಾರ ಆತ ಗಟ್ಟಿಮುಟ್ಟಾ"
"ಬಿಜ್ಜಳ ಬಸವಣ್ಣಗ ಹೇಳಿದ ನಮ್ಮ ತಂಗಿನ್ನ ಮಾಡಿಕೊ ಅಂದ."[೫೪]

ಈ ಸಾಲುಗಳನ್ನು ಗಮನಿಸಿದರೆ ಬಸವೇಶ್ವರ ಚರಿತ್ರೆ ಇಲ್ಲಿ ಶೈವಾಗಮನಿಷ್ಠವಾಗಿ ರೂಪಿತವಾಗಿರುವುದು ಸ್ಪಷ್ಟವಾಗುತ್ತದೆ. ಬಸವಣ್ಣನನ್ನು ಪುರಾಣೀಕರಿಸದೆ ಮಾನವೀಕರಿಸಿಕೊಂಡು ಚಿತ್ರಿಸಿದ್ದರೆ ಅವನ ಸಮಾಜೋ–ಧಾರ್ಮಿಕ ಹೋರಾಟವನ್ನು ಸಶಕ್ತವಾಗಿ ಮಂಡಿಸಲು ಸಾಧ್ಯವಿತ್ತು ಅನಿಸುತ್ತದೆ.ಏನೇ ಆದರೂ ಕವಿಯ ಗ್ರಹಿಕೆಯನ್ನು ಪ್ರಶ್ನಿಸುವಂತಿಲ್ಲ. ಇನ್ನು 'ಭಕ್ತ ಸಿರಿಯಾಳ' ಆರುನುಡಿ ಹನ್ನೊಂದು ಚಾಲಗಳನ್ನು ಒಳಗೊಂಡಿರುವ ದೀರ್ಘಹಾಡು. ಕಾಂಚಿಪುರದ ಅರಸುದಂಪತಿ(ಸಿರಿಯಾಳ+ಚೆಂಗಳಿ), ಮಾರುವೇಷದ ಶಿವನ ಇಚ್ಛೆಯಂತೆ ಇದ್ದ ಒಬ್ಬನೇ ಮಗನ ತಲೆಕಡಿದು ಕೈಯಾರೆ ಬೇಯಿಸಿ ಉಣಬಡಿಸಲು ಮುಂದಾದ ಭಕ್ತಿ ಪರಕಾಷ್ಠತೆಯ ಜನಜನಿತ ಕಥೆ. ತಮಿಳು ಶೈವದ ಗಣಾಚಾರವನ್ನು ಪವಾಡದ ಮೆರಗಿನೊಂದಿಗೆ ಸುಖಾಂತಗೊಳಿಸಿ ಪ್ರತಿಪಾದಿಸುವ ಚಮತ್ಕಾರಿಕ ತಂತ್ರ ಈ ಕಥೆಯ ಮೂಲದಲ್ಲಿಯೇ ಇದೆ. ಕೇಳುಗರನ್ನು ಗಾಢವಾಗಿ ಆವರಿಸಿಕೊಳ್ಳುವ ಕರುಣಾಕ್ರಂದನಗುಣ ಈ ಕಥೆಗಿರುವುದರಿಂದ ಇದನ್ನು ಮರಿಕಲ್ಲಪ್ಪನವರು ಗೀಗೀ ಮಾಧ್ಯಮಕ್ಕೆ ಬಳಸಿಕೊಂಡಿರುವುದು ಸಹಜವಾಗಿದೆ. ನಂತರದ 'ಅನಸೂಯಾ' ಹಾಗೂ 'ಬೃಗುಋಷಿ' ತುಂಬಾ ಜನಪ್ರೀಯತೆ ಪಡೆದಿರುವ ಪುರಾಣ ಕಥೆಗಳಾಗಿದ್ದು, ನೀತಿಬೋಧನೆ ಇವುಗಳ ಮುಖ್ಯ ಆಶಯ.ವಿಶೇಷವಾಗಿ ಜನಪದರಲ್ಲಿ ಇಂಥ ಕಥೆಗಳಿಗೆ ಬೇಡಿಕೆ ಹೆಚ್ಚು.ಇದರ ಅರಿವಿದ್ದ ಮರಿಕಲ್ಲಕವಿ, ಇವುಗಳನ್ನು ಮನೋಜ್ಞವಾದ ಹಾಡಾಗಿಸಿದ್ದಾರೆ. ಅತ್ರಿಮಹರ್ಷಿಯ ಹೆಂಡತಿ ಅನಸೂಯಾ, ತಮ್ಮ ಹೆಂಡಂದಿರ ಮಾತು ಕೇಳಿಕೊಂಡು ತನ್ನ ಶೀಲಪರೀಕ್ಷಿಸಲು ಭೂಲೋಕಕ್ಕೆ ಬರುವ ತ್ರಿಮೂರ್ತಿಗಳನ್ನೇ ಕೂಸುಗಳನ್ನಾಗಿ ಪರಿವರ್ತಿಸುತ್ತಾಳೆ. ಇದರಿಂದ ಮುಖಭಂಗಕ್ಕೆ ಒಳಗಾದ ದೇವತಾಸ್ತ್ರೀಯರು ತಮ್ಮ ಗಂಡಂದಿರನ್ನು ಮೂಲರೂಪದಲ್ಲಿ ಮರಳಿ ಪಡೆಯಲು ಅನಸೂಯಾಳ ಕೈಕಾಲು ಹಿಡಿದು ಬೇಡಿಕೊಳ್ಳಬೇಕಾಗುತ್ತದೆ. ಈರ್ಷೆ, ದುರಹಂಕಾರದ ಹೆಣ್ಣುಗಳು ತಾವಷ್ಟೇ ಅಲ್ಲ; ತಮ್ಮ ಕೈಹಿಡಿದ ಗಂಡಂದಿರನ್ನು ಹೇಗೆ ಪಾತಾಳಕ್ಕೆತಳ್ಳಿ ಅಪಹಾಸ್ಯಕ್ಕೀಡು ಮಾಡಬಲ್ಲರು ಎನ್ನುವ ತಾತ್ವಿಕತೆಯನ್ನು ಈ ಹಾಡು ನಿರೂಪಿಸತ್ತದೆ. ದೇವಾನುದೇವತೆಗಳ ಪಾಡೇ ಹೀಗಾದರೆ ಹುಲುಮಾನವರ ಗತಿಏನು? ಎನ್ನುವ ಆತ್ಮಾವಲೋಕನಕ್ಕೂ ಒತ್ತಾಯಿಸುವ ಕಥಾಮೂಲ ದ್ರವ್ಯವೇ ಈ ಹಾಡಿಗೆ ಆಕರವಾಗಿದೆ.

'ಕುಸ್ತಿ ಪೈಲವಾನರು', '೪೨ರ ಚಳವಳಿ' ಹಾಗೂ 'ಮಲಪ್ರಭಾ ಹೊಳಿ ಬಂದದ್ದು' ಈ ಮೂರೂ ಹಾಡುಗಳು ಆ ಕಾಲದ 'ಕುಸ್ತಿ','ಚಳವಳಿ', ಅಂತೆಯೇ 'ಮಹಾಪೂರದ' ವಿವರಗಳನ್ನು ಕಟ್ಟಿಕೊಟ್ಟಿರುವ ಶ್ರೇಷ್ಠ ಚರಿತ್ರೆಗಳೆನಿಸಿವೆ; ಒಂದೊದು ಪ್ರಬಂಧಕ್ಕೆ ವಸ್ತುವನ್ನು ಒದಗಿಸುವಷ್ಟು ಸಮಗ್ರತೆಯಿಂದ ಕೂಡಿವೆ. 'ಜೈನರಾಗಿ ಜನಿಸಿದ ಬಳಿಕ' 'ಜೈನರು' ಎನ್ನುವ ಮತ್ತೆರಡು ಪುಟ್ಟಹಾಡುಗಳು ಈಸಂಕಲನದಲ್ಲಿದ್ದು ಅವು; ಜೈನ ಶ್ರಾವಕರಿಗೆ ಆಹಾರ ಶುದ್ಧಿ, ಜಲಶುದ್ಧಿ, ಪ್ರಯಾಣಶುದ್ಧಿ, ಭಾವಶುದ್ಧಿ, ಣಮೋಕಾರ ಮಂತ್ರಪಠಣ, ಸಿದ್ಧಶಾಸ್ತ್ರಗಳ ಅಧ್ಯಯನ, ಕ್ಷೇತ್ರದರ್ಶನಗಳ ಮಹತ್ವವನ್ನು ತಿಳಿಸುವ ಉದ್ದೇಶದಿಂದ ಕೂಡಿವೆ. ನಂತರದ 'ಏನೇನು ಚಂದ'ಎನ್ನುವಹಾಡು ಸಾದೂರ ಸಂಗ, ಸದ್ಗುರುವಿನ ಧ್ಯಾನ, ಭಕ್ತಿಯಿದ್ರ ಭಜನೆ, ಶಕ್ತಿಯಿದ್ರ ಕುಸ್ತಿ, ಯುಕ್ತಿಯಿದ್ರ ರಾಜ್ಯ ಎಂದು ಸಾರುತ್ತ ಯಾವುದು ಯಾವುದಕ್ಕೆ ಚೆಂದ ಎನ್ನುವ ಚಂದದ ಸರಣಿಯನ್ನೇ ತೆರೆದಿಡುತ್ತದೆ. ಪ್ರತಿಸಾಲುಗಳ ಕೊನೆಯಲ್ಲಿ ಅಂತ್ಯ ಪ್ರಾಸವಾಗಿ ಬರುವ 'ಚೆಂದಾ'ಎನ್ನುವ ಪದವು ಇಡೀ ಹಾಡಿನಲ್ಲಿ ಅನರಣಿಸತ್ತಲೇ ಇರುವುದು ಆಕರ್ಷಕವಾಗಿದೆ. ಇದೇ ಮಾದರಿಯ ಪ್ರಾಸಪ್ರಿಯತೆ ಹಾಗೂ ಲಯಗಾರಿಕೆ'ಯಾರ್ಯಾರು ಕಮ್ಮ' ಎನ್ನುವ ಹಾಡಿನಲ್ಲಿಯೂ ವ್ಯಕ್ತವಾಗಿದೆ. ಬರೆಯಲಿಕ್ಕೆ ಕಲಿಯದಿದ್ದರೆ ಓದು ಕಮ್ಮ, ಕರೆಯದೆ ಇನ್ನೊಬ್ಬರ ಮನೆಗೆ ಹೋಗುವವನು ಕಮ್ಮ(ಕಡಿಮೆ), ತಿಳಿಯದೆ ಶಾಸ್ತ್ರ, ಪುರಾಣ ಕೇಳಾವ ಕಮ್ಮ, ಜಂಬ ಪೋಷಾಕಗಳ ಹಾಕಾಂವ ಕಮ್ಮ, ಕೆಲಸವಿಲ್ಲದೆ ಖಾಲಿ ತಿರಗಾಂವ ಕಮ್ಮ– ಹೀಗೆ ಯಾರ್ಯಾರಿಗೆ ಯಾವಯಾವ ಕಾರಣಕ್ಕೆ ಸಮಾಜದಲ್ಲಿ ಕಿಮ್ಮತ್ತು ಇರಲಾರದೆನ್ನುವ ತಿಳವಳಿಕೆ ಕೊಡುವ ಸರಳ ಉದ್ದೇಶ ಇಲ್ಲಿದೆ. ಇದೇ ಉಪಾಯವನ್ನು ಅನಸರಿಸುವ 'ಏನೇನು ಸಂವಿ' ಎಂಬ ಚಿಕ್ಕಹಾಡು ಕೂಡ ಸಾಧೂರ ಸಂಗ, ಸದ್ಗುರವಿನ ಧ್ಯಾನ, ಭಕ್ತಿಯುಳ್ಳ ಭಜನೆ, ವಿಸ್ವಾಸವುಳ್ಳ ಗೆಳೆತನ, ಬಾಲಕರಿಗೆ ಆಟ, ಹರೇದವಗ ನೋಟ– ಹೀಗೆ 'ಸವಿ' ಎನ್ನುವುದು ಯಾವ ಯಾವುದರಲ್ಲಿ ಅಡಗಿದೆ ಎನ್ನುವುದರ ಕಡೆಗೆ ಲಕ್ಷ್ಯ ಸೆಳೆಯುತ್ತದೆ. ಅಂತೆಯೇ 'ಎಂಥವರು ಬಾಳ' ಹಾಡಿನಲ್ಲಿ ಪ್ರಚಲಿತ ಸಮಾಜದಲ್ಲಿ ಭಂಡರು ಹೇಗೆ ಹೆಚ್ಚುತ್ತಿದ್ದಾರೆ, ಅಂಥ ಉದ್ಧಟರಿಗೇ ಹೇಗೆ ಮನ್ನಣೆ ಸಿಗುತ್ತಿದೆ ಎನ್ನುವ ವಿಷಾದಪೂರ್ಣ ವ್ಯಂಗ್ಯವನ್ನು ಪ್ರಕಟಿಸುತ್ತದೆ. ದುಡ್ಡಿನ ಆಸೆಗಾಗಿ ಅಶ್ಲೀಲ ಪದಗಳನ್ನು ಹಾಡುವವರನ್ನು, ಮನಸ್ಸಿನ ತುಂಬಾ ಮೈಲಿಗೆ ತುಂಬಿಕೊಂಡು ಮಡಿ ಮಾಡುವವರನ್ನು, ತಮ್ಮ ಹೇಯ ಕೆಲಸಗಳನ್ನು ಮುಚ್ಚಿಟ್ಟುಕೊಂಡು ಬೇರೆಯವರಿಗೆ ಆಚಾರ ಹೇಳುವವರನ್ನು, ಚಾಡಿಹೇಳಿ ಜಗಳಾ ಬೆಳೆಸಿ ಮೋಜು ನೋಡುವ ವಿಕೃತಸಂತೋಷಿಗಳನ್ನು ಸರಿಯಾಗಿ ಬಯಲಿಗೆಳೆದು ಅಂಥವರಿಗೆ ಮರ್ಮಾಘಾತವುಂಟುಮಾಡುತ್ತದೆ ಈ ಹಾಡು. ಬಸವರಾಜ ಮಲಶೆಟ್ಟಿ ತಮ್ಮ ತಂದೆಯವರ ಕವಿವ್ಯಕ್ತಿತ್ವ ಕುರಿತು "ಬಾಲ್ಯದಲ್ಲಿಯೇ ಕರಗತವಾಗಿದ್ದ ಲಾವಣಿಯ ಗತ್ತು, ಲಯ, ಪ್ರಾಸಗಳು ಮರಿಕಲ್ಲಪ್ಪನವರ ರಚನೆಗಳಲ್ಲಿ ಹಾಸುಹೊಕ್ಕಾಗಿ ಬೆರೆತುಕೊಂಡವು. ಅವರಿಗೆ ಹಳೆಯ ಧಾಟಿಗಳ ಬಗ್ಗೆ ನಿಷ್ಠೆಯಿತ್ತು.ಅವನ್ನು ಸಾಧ್ಯವಾದಷ್ಟು ಶುದ್ಧರೂಪದಲ್ಲಿ ಉಳಿಸಿಕೊಂಡು ಬಂದರು. ಹೆಚ್ಚು

ಓದಿರದ ಮರಿಕಲ್ಲಪ್ಪನವರ ಕಾವ್ಯಭಾಷೆಯಲ್ಲಿ ಗ್ರಾಂಥಿಕತೆಗಿಂತ ಜಾನಪದೀಯ ಅಂಶಗಳ ಪ್ರಮಾಣ ಹೆಚ್ಚಾಗಿದೆ. ಆಡುಮತಿನ ಲಯ, ಸೊಗಸು, ನುಡಿಗಟ್ಟುಗಳು ಅವರ ರಚನೆಯಲ್ಲಿ ಸಹಜವಾಗಿ ಹುರಿಗೊಂಡಿವೆ. ಕುಸ್ತಿಪಟು ಮರಿಕಲ್ಲಪ್ಪನವರಿಗೆ ಹನಮಂತ ಆರಾಧ್ಯ ದೈವ. ಆದ್ದರಿಂದಲೇ ತಮ್ಮ ಹಾಡುಗಳ ಕೊನೆಯಲ್ಲಿ ತಿಗಡೊಳ್ಳಿ ಮಾರುತಿಯನ್ನು, ಬಲಭೀಮನನ್ನು (ಹನಮಂತನನ್ನು) ಅಂಕಿತ ಗೊಳಿಸಿದ್ದಾರೆ."[೫೫] ಎಂದು ಅಭಿಪ್ರಾಯಪಟ್ಟಿದ್ದು, ಅದು ಮರಿಕಲ್ಲಕವಿಯ ಗೀಗೀ ರಚನೆಗಳನ್ನು ಓದುವ ಯಾರಿಗೇ ಆದರೂ ಅನುಭವಕ್ಕೆ ಬಾರದಿರಲಾರದು.

**ಸೋಮಲಿಂಗ ಕವಿ ದೊಡವಾಡ :**

ಸವದತ್ತಿ ತಾಲೂಕಿನ ಹೊಸೂರು ಗ್ರಾಮದ ಸೋಮಲಿಂಗಪ್ಪ ದೊಡವಾಡ ಅವರು ಜನ್ಮಜಾತ ಪ್ರತಿಭೆಯುಳ್ಳವರು. ಗಾಂಧಿ ವಿಚಾರಧಾರೆಯ ಪ್ರಭಾವದಲ್ಲಿ ಬೆಳೆದ ಅವರು ಸತ್ಯ, ಅಹಿಂಸೆಗಳಲ್ಲಿ ನಂಬಿಕೆಯುಳ್ಳವರು. ನೂರಾಒಂದು ವರುಷಗಳ ಕಾಲ ಬದುಕಿದ್ದ ಅವರು ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿಯೂ ಭಾಗಿಗಳಾದವರು. ದೇಶದ ಸರ್ವಾಂಗೀಣ ಅಭಿವೃದ್ಧಿಗಾಗಿ ಲಾವಣಿ ಹಾಗೂ ಗೀಗೀ ಪದಗಳನ್ನು ರಚಿಸಿ ಹಾಡುತ್ತ ದೇಶವನ್ನೇ ಸುತ್ತಿದವರು. ಇವರ ಲಾವಣಿ ಗೀತೆಗಳ ಹರವು ತುಂಬಾ ವಿಸ್ತಾರವಾದುದು. ಸಾಮಾಜಿಕ, ಧಾರ್ಮಿಕ, ನೈತಿಕ ಮೌಲ್ಯಗಳ ಜೊತೆಗೆ ಸರಕಾರದ ವಿಭಿನ್ನ ಜನಪರ ಯೋಜನೆಗಳನ್ನು ಪ್ರಸಾದ ಮಾಡುವವರೆಗೆ ವ್ಯಾಪ್ತಿಯನ್ನು ಹೊಂದಿರುವ ಲಾವಣಿಗಳು ತುಂಬ ಪರಿಣಾಮಕಾರಿಯಾಗಿ ಕಾರ್ಯ ಮಾಡಿರುವುದು ನಾಡವರಿಗೆಲ್ಲ ಚಿರಪರಿಚಿತ. ತಮ್ಮ ನಾಡು–ನುಡಿಯ ಸೇವೆಗಾಗಿ ಸರಕಾರ ಹಾಗೂ ಸಂಘ–ಸಂಸ್ಥೆಗಳ ಮಾನ–ಸಮ್ಮಾನಕ್ಕೆ ಪಾತ್ರರಾದವರು. ಹುಲಕುಂದ ಭೀಮಕವಿಯ ನಂತರ ಅತ್ಯಂತ ಪ್ರಭಾವಶಾಲಿ ಹಾಗು ಪ್ರತಿಭಾನ್ವಿತ ಕವಿ ಎಂಬ ಹೆಗ್ಗಳಿಕೆ ಇವರದು.

"ಹಳ್ಳಿಯ ಬದುಕಿನ ಎದೆಯಿಂದ ಹೊಮ್ಮಿದ ಪದಗಳ ಒಂದು ಮೆದೆ ಈ ಲಾವಣಿ ಸಂಗ್ರಹ. ಒಂದು ಕಾಲದಲ್ಲಿ ಸಮಾಜಶಿಕ್ಷಣದ ಒಂದು ಪ್ರಭಾವಿ ಮಾಧ್ಯಮವಾಗಿದ್ದ ಲಾವಣಿ ಪ್ರಕಾರ ಕಾಲಮಾನದ ದಾಳಿಯಲ್ಲಿ ತನ್ನ ಜನಪ್ರಿಯತೆಯನ್ನು ಕಳೆದುಕೊಂಡಂತಿದ್ದರೂ, ಅದನ್ನು ಜೀವಂತವಾಗಿಟ್ಟಿರುವ ಛಲಗಾರ ಕಲಾವಿದ ಬೈಲಹೊಂಗಲದ ಸೋಮಲಿಂಗಪ್ಪ ದೊಡವಾಡ. ಆಗಾಧ ಲೋಕಾನುಭವ ಮತ್ತು ಅಸಾಧಾರಣ ಕವಿಪ್ರತಿಭೆಯ ಸೋಮಲಿಂಗಪ್ಪ ದೊಡವಾಡ ಅವರು ನಿಜಕ್ಕೂ ಹಾಡಿನ ಹಗೇವು! ನಾವು ಆರೋಗ್ಯ ಇಲಾಖೆಯಲ್ಲಿದ್ದಾಗ ಜನಸಂಖ್ಯಾ ನಿಯಂತ್ರಣ ಪ್ರಚಾರಕ್ಕೆ ಅವರ ಸೇವೆಯನ್ನು ಬಳಸಿಕೊಂಡ ನೆನಪು. ಅವರಿಗಿರುವ ರಾಷ್ಟ್ರಾಭಿಮಾನ ಮತ್ತು ಸಾಮಾಜಿಕ ಕಳಕಳಿ ಮನತುಂಬಿ ಬರುವಂತಹವು. ಸ್ವಾತಂತ್ರ್ಯ ಹೋರಾಟದಲ್ಲಿ ನೇರವಾಗಿ ಪಾಲುಗೊಂಡಿರುವ ಈ ಜನಪದ ಕವಿ ಸ್ವಾತಂತ್ರ್ಯ ಬಂದಾಗ 'ಜನಪದ ಗೀತ ದಿನನಿತ್ಯ ಬರೆದು, ಹಳ್ಳಿಹಳ್ಳಿಗೆ ಪ್ರಚಾರ ಮಾಡಿ, ಕನ್ನಡ ನಾಡು ನುಡಿಗೆ ತಿರುಗಿದ ನನ್ನ ಸೇವೆಯು ಸಫಲವಾಯಿತು' ಎಂದು ಹಾಡಿದ್ದಾರೆ. ಸೋಮಲಿಂಗಪ್ಪ ದೊಡವಾಡ ಭಕ್ತಿಸ್ತೋತ್ರಗಳನ್ನೂ ಬರೆಯಬಲ್ಲರು,

ಪೌರಾಣಿಕ ಕತೆಗಳನ್ನು ಕಟ್ಟಬಲ್ಲರು, ಸ್ವಾತಂತ್ರ್ಯ ಗೀತೆಗಳನ್ನೂ ಮೊಳಗಿಸಬಲ್ಲರು, ಸಂಸಾರ ನೀತಿಯನ್ನೂ ಹೇಳಬಲ್ಲರು, ಆಧುನಿಕ ಅಗತ್ಯವನ್ನೂ ತಿಳಿಸಬಲ್ಲರು, ಅವರ ರಚನೆಗಳ ಹಾಸುವಿಸ್ತಾರ, ನುಡಿ ಸೊಗಡಿನ ಬೀಸು ಮನೋಹರ!"[೫೫] ಎಂದು ಗೊ.ರು. ಚನ್ನಬಸಪ್ಪನವರು ಇವರ ವ್ಯಕ್ತಿತ್ವ ಮತ್ತು ಲಾವಣಿ ಕುರಿತು ಹೇಳಿದ ಮಾತುಗಳು ಸ್ಮರಣೀಯವಾಗಿವೆ.

ಸೋಮಲಿಂಗಕವಿಯ ಲಾವಣಿಗಳನ್ನು ಸಂಪಾದಿಸಿದ ಸಿ.ಕೆ.ನಾವಲಗಿ ಅವರು "ಸೋಮಲಿಂಗ ಕವಿ ಇಲ್ಲಿಯ ಲಾವಣಿಗಳ ರಚನೆಯ ವಿನ್ಯಾಸದಲ್ಲಿ, ವಸ್ತುವಿನಲ್ಲಿ ವೈವಿಧ್ಯತೆಯನ್ನು ಮೆರೆದಿದ್ದಾರೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ, ಧಾರ್ಮಿಕ ಆಧ್ಯಾತ್ಮಿಕ, ವಸ್ತುಗಳುಳ್ಳ ವಿಶಿಷ್ಟ ರಚನೆಗಳನ್ನು ಸೃಷ್ಟಿಸಿದ್ದಾರೆ. ತಮ್ಮ ಅನುಭವ ಹಾಗು ಅಭ್ಯಾಸದ ಬಲದಿಂದ ಇಲ್ಲಿಯ ಹಾಡುಗಳನ್ನು ಬರೆದಿದ್ದಾರೆ. ಇವುಗಳಲ್ಲಿ ಕೆಲವು ಐತಿಹಾಸಿಕ ಮತ್ತು ಚಾರಿತ್ರಿಕ ಮಹತ್ವವನ್ನು ಪಡೆದಿರುವುದು ಗಮನಾರ್ಹ. ಲಾವಣಿ–ಗೀಗೀ ಸಾಂಪ್ರದಾಯಿಕ ಧಾಟಿಯನ್ನು ಕರಗತ ಮಾಡಿಕೊಂಡ ಈ ಕವಿ, ಅವುಗಳ ಗತಿ–ಗತ್ತು, ಲಯ–ಪ್ರಾಸಾದಿ, ದನಿಬನಿಗಳಲ್ಲಿ ಅಚ್ಚುಕಟ್ಟಾಗಿ ಬರೆಯಬಲ್ಲ ಶಕ್ತಿ ಹೊಂದಿದವರೆಂಬುದಕ್ಕೆ ಈ ಕೃತಿಯೇ ಸಾಕ್ಷಿ. ಲಾವಣಿಯ ಶುದ್ಧರೂಪವನ್ನು ಇಲ್ಲಿಯ ರಚನೆಗಳಲ್ಲಿ ಯಾರಾದರೂ ಗುರುತಿಸಬಹುದು. ಇವರ ಲಾವಣಿಯ ಭಾಷೆ ಜಾನಪದೀಯವಾದುದು. (ಅಲ್ಲಲ್ಲಿ ನಗರದ ಶಬ್ದಗಳ ಬಳಕೆಯೂ ಇದೆ. ಅದು ನಗರ ಜನಪದವಲ್ಲವೆ!) ಗಾದೆ, ನುಡಿಗಟ್ಟು, ಉಪಮೆ, ರೂಪಕ, ಹಾಸ್ಯ, ವ್ಯಂಗ್ಯ, ಜಾನಪದ ಸೊಗಡು, ಲಯ, ಧಾಟಿಗಳು ಅತ್ಯಂತ ಸಹಜವಾಗಿ ಅವರ ರಚನೆಗಳಲ್ಲಿ ಅಡಕಗೊಂಡಿವೆ. ಸ್ವಭಾವ ಸಹಜವಾದ ಇಂಥ ಅಪರೂಪದ 'ಲಾವಣಿ'ಗಳನ್ನು ನಾಡಿಗೆ ನೀಡಿದ 'ಆಶುಕವಿ', ಒಂದರ್ಥದಲ್ಲಿ 'ಅಭಿಜಾತ ಕವಿ' ಸೋಮಲಿಂಗಪ್ಪ ದೊಡವಾಡ"[೫೬]. ಎಂದು ಕರೆದಿರುವುದು ಅಕ್ಷರಶಃ ನಿಜ.

ಕಿತ್ತೂರು ಸಂಸ್ಥಾನ, ಬೆಳವಡಿ ಸಂಸ್ಥಾನ ಕುರಿತು ಅನೇಕ ಚಾರಿತ್ರಿಕ ಲಾವಣಿಗಳನ್ನು ಬರೆದ ಕೀರ್ತಿ ಸೋಮಲಿಂಗ ಕವಿಗಳದು. ಅವರ ಮನೆಯಲ್ಲಿ ಇನ್ನೂ ನೂರು ಲಾವಣಿಗಳ ಹಸ್ತಪ್ರತಿಗಳು ಇವೆ. ಅವುಗಳನ್ನು ಸಂಪಾದಿಸಿ ಪ್ರಕಟಿಸುವ ಅನಿವಾರ್ಯತೆ ಇದೆ. ಸೋಮಲಿಂಗ ಕವಿಯ ಚಾರಿತ್ರಿಕ ಲಾವಣಿಗಳಲ್ಲಿ ಕೆಲವನ್ನು ನೋಡುವುದಾದರೆ

**ಕಿತ್ತೂರು ಚನ್ನಮ್ಮಾಜಿ :**

"ಕಿತ್ತೂರ ಕೇಸರಿ ಮಾತಾ ಚನ್ನಮ್ಮಾಜಿ ಕ್ಷಾತ್ರ ತೇಜವನ್ನು ಚೆಲ್ಲಿ
ಒತ್ತಿ ಮುರದಿ ಪರರ ಶೃಂಖಲಿ
ಕರುನಾಡ ಖಡ್ಗವು ವರಿಯಿಂದ ಹೊರಬಂದು ಹರದೀತ ಥ್ಯಾಕರೆನ ರುಂಡಾ
ಬಿರುಗಾಳಿ ಹೊಡೆದಂತೆ ತುರಗ ಆನೆ ಒಂಟಿ ವೀರರ ಕಾಲಾಳ ದಂಡಾ
ಪರರ ಹೆಣಗಳನ್ನ ಹರಿದು ತಿನ್ನಲಿಕ್ಕೆ ಎರಗಿತ್ತನರಿನಾಯಿ ಹಿಂದಾ

ಇಂಥ ಭೀಕರ ಇಂಥ ಭೀಕರ ಕಾದಾಟ ಕ್ರಾಂತಿಯ ಭ್ರಾಂತಿ ಶಾಂತಿ ಇಲ್ಲ
ಮನದಲ್ಲಿ
ಕಿಡಿವುದರಿಂದಗ ಕಣ್ಣಲ್ಲಿ. ॥೧॥"[೫೭]

**ಕಿತ್ತೂರ ಚೆನ್ನಮ್ಮನ ಚರಿತ್ರೆ :**

"ಕೇಳಿ ಕೇಳಿರಯ್ಯಾ । ಚೆನ್ನಮ್ಮಾಜಿ ಚರಿತ್ರೆಯಾ ॥
ಹೇಳಿ ಹೇಳಿರಯ್ಯಾ॥ ವೀರ ಮಾತೆಯ ಕವಿತೆಯಾ ॥ಪ॥
ಜನ್ಮ ಭೂಮಿ ಕನ್ನಡಾಂಬೆ । ನಿನ್ನ ಉದರದಲ್ಲಿ ಬಂದ
ಧನ್ಯ ಧನ್ಯ ಚನ್ನಮ್ಮಾಜಿ ನಿನಗೆ ವಂದನಾ । ನಿನ್ನ ನಾಡ ಕನ್ನಡೆಂದು।
ನಿನ್ನ ಭಾಷೆ ಕನ್ನಡೆಂದು । ನಿನ್ನ ಪ್ರಾಣ ಕನ್ನಡಕ್ಕೆ ಮೀಸಲಾಯಿತೆ."[೫೮]

**ಕಿತ್ತೂರ ವಿಜಯೋತ್ಸವ :**

"ಕಿತ್ತೂರ ಸ್ವಾತಂತ್ರ್ಯ। ವಿಜಯೋತ್ಸವ ಇಂದು। ಜ್ಯೋತಿ ರೂಪ ಇಲ್ಲಿ ಬಂತು।
ಕನ್ನಡ ನಾಡ ಕೀರ್ತಿ ಉಳಿತು॥
ಹದಿನೇಳನೂರಾ। ಎಪ್ಪತ್ತೆಂಟನೆ ಇಸ್ವಿ ಹುಟ್ಟಿದಾಳ ವೀರ ಮಾತಾ।
ಬೆಳಗಾಂವಿ ಸಮೀಪ। ಕಾಗತಿಯವೂರು। ದೇಸಗತಿ ಮನಿತನ ಅಂತ।
ಮಲ್ಲಸರ್ಜ ದೊರಿ। ಮದಿವಿ ಹೆಂಡತಿ। ಮಕ್ಕಳಾಗಿದ್ದಿಲ್ಲ ಗೊತ್ತಾ॥ ಆವಾಗ॥
ಬ್ರಿಟೀಶರು। ಕಿತ್ತೂರು ಅರಸೊತ್ತಿಗಿ। ಕಸಕೊಳ್ಳುವ ಮಸಲತ್ತಾ।
ಒಳಸಂಚನಡಿಸಿದಾರ ಕೂತಾ॥"[೫೯]

**ಕಿತ್ತೂರ ಸ್ವಾತಂತ್ರ್ಯ :**

"ಕಿತ್ತೂರ ವಿಜಯದ। ಕೀರ್ತಿಗಳಿಸಿದ। ವೀರರನ್ನ ಸ್ಮರಿಸುವೆನು।
ದಿನಾ ನಿತ್ಯ ಮರೆಯದೆ ನಾನು।
ಭಾರತ ದೇಶ। ಆಂಗ್ಲರ ಅಧೀನ। ಮುನ್ನೂರ ವರ್ಷ ಇತ್ತು।
ಸ್ವಾತಂತ್ರ್ಯ ಚಳವಳಿ। ಹದಿನೆಂಟ ನೂರಾ। ಇಪ್ಪತ್ತ ನಾಲ್ಕಕ ಆತು।
ವೀರ ಶ್ರೀ ಕಿತ್ತೂರ। ಚೆನ್ನಮಾಜಿ ಇಂದು। ಥ್ಯಾಕರನ॥ ಅವತಾರಮುಗಿತೊ
ಆಮ್ಯಾಲ। ಬ್ರಿಟೀಶರು। ಧೈರ್ಯಗುಂದಿ। ಬರೆ ಫಿತೂರಿ ಯೋಜನೆಯನ್ನು।
ಮಾಡತಿದ್ರ ಹೊಲಸ ಕೃತ್ಯವನು."[೬೦]

**ಚನ್ನವ್ವನ ಪದಾ :**

"ಸ್ತ್ರೀಧರ್ಮ ತಕ್ಕ ಈ ಗರತಿ ಮಹಾ ಪತಿವ್ರತಿ ಚನ್ನವ್ವನ ಕಥಿ ಕೇಳ್ರಿ ಚಿತ್ತಿಟ್ಟ
ಸತ್ತ ಕಾಳಿಂಗಗ ಮದಿವಾತ ಹೋದ ಜೀವ ಬಂತ ಚನ್ನವ್ವನ ವ್ರತ
ಕೇಳ್ರಿ ಮನಸ್ಸಿಟ್ಟ ॥೧॥

ಕೊತ್ತಲ ರಾಯನ ರಂಭಿ ಮಡದಿ ಮಧುರಾಂಬಿ ಸೌಂದರ್ಯದ ಗೊಂಬಿ
ಬಂದ್ಲ ನಡಿಲಾಕ
ಮಕ್ಕಳು ಆಗದಕ್ಕ ಮರಿಗಿ ಮರಿಗಿ ಮನಕೊರಗಿ ಸೊರಗಿ ತಾವರಿಗಿ
ಮಾಡತಾಳ ದುಃಖ."[೧]

**ವೀರರಾಣಿ ಚೆನ್ನಮ್ಮ :**

"ಚೆನ್ನದಂತಾ ಕನ್ನಡ ನಾಡಿನ ಹೆಣ್ಣುಮಗಳು ಚನ್ನಮ್ಮಾಜಿ ಸಣ್ಣವಳಲ್ಲ ಧನ್ಯ ಧನ್ಯ
ವೀರವನಿತೆ
ಕಿತ್ತೂರಸಂಸ್ಥಾನದ ಮೇಲೆ ಕೆತ್ತೇಬಾಜೆ ಮಾಡಿದಂಥಾ ಥ್ಯಾಕರೇನ ರುಂಡಾ
ಹೊಡಿಸ್ಯಾಳ ಸ್ವಃ
ಸಾಗರಪ್ರಾಂತದ ಹಿರೇಮಲ್ಲಶೆಟ್ಟಿಯಿಂದ ಕರೆ ಕಿತ್ತೂರ ಸಂಸ್ಥಾನ ಉತ್ಪತ್ತಿ
ಶಕೆ ಹದಿನೈದನೂರಾ ಎಂಬತ್ತೈದರಿಂದ ಕಿತ್ತೂರ ರಾಜ್ಯವು ಸುರುವಾತಿ." [೨]
ವೀರರಾಣಿ ಬೆಳವಡಿ ಮಲ್ಲಮ್ಮ
"ಕನ್ನಡ ಕಣ್ಮಣಿ ಕನ್ಯಾರತ್ನ ಇದು ಬಣ್ಣಿಸಲಸದಳವಾಗಿಹುದು
ಶೂರ ಶಿವಾಜಿನ್ನ ಬೆರಗುಗೊಳಿಸಿದ ಬೆಳವಡಿ ರಾಣಿಯ ಚರಿತ್ರ ಇದು ॥೧॥
ಇಳೆಯೊಳು ಬೆಳವಡಿ ಕಳಯುಳ ಗ್ರಾಮವು ಬೆಳಗಾವಿ ಜಿಲ್ಲೆಯ ಹಳ್ಳಿಯದು
ಚಿಕ್ಕ ಸಂಸ್ಥಾನವು ಸಾಕಷ್ಟ ಫಲವಿತ್ತ ಮೂನ್ನೂರಾ ಆರವತ್ತ ಗ್ರಾಮದ್ದು ॥೨॥
ಕ್ರಿಸ್ತ ಶಕೆ ಹದಿನೇಳನೇ ಶತಮಾನ ಉತ್ತರಾರ್ಧದಲ್ಲಿ ನಡೆದದ್ದು
ಎಂಟೆದಿ ಬಂಟನ ಪಟ್ಟದರಸಿ ಈಶಪ್ರಭುವಿನ ಬಲಗೈ ಶಕ್ತಿ ಇದು."[೩]

**ಭಾರತ ಸ್ವಾತಂತ್ರ್ಯ :**

"ಭಾರತ ಸ್ವಾತಂತ್ರ್ಯ। ಸಂಪಾದನೆ। ಬಾಳ ಕಠಿಣ ಸಮರ।
ದೀರ್ಘ ಕಾಲದಿ। ಹೋರಾಡಿ ಯೋಧರು। ಸ್ವಾತಂತ್ರ್ಯಗಳಿಸಿದರ। ॥೧॥
ಆಂಗ್ಲ ಸರಕಾರ। ಹೊರಗಿನ್ನ ಶತ್ರು। ಗಂಜದವರ।
ಭಾರತ ದೇಶದ। ಗಾಂಧಿ ಅಸ್ತ್ರಕ್ಕೆ । ಥರಥರ ನಡಗಿದರ."[೪]
ಮಹಾತ್ಮಾ ಗಾಂಧೀಜಿ
"ಬಸವಣ್ಣನವರ ತತ್ವಗಳಂತೆ ಗಾಂಧೀಜಿ ಒಬ್ಬಾತ ನಡದಾ
ನಡದಂತೆ ನುಡಿ ಆಡಿದಾ
ಭಾರತ ರಾಷ್ಟ್ರೀಯ ಕಾಂಗ್ರೆಸ್ಸಧಿವೇಶನ ಬೆಳಗಾವಿ ಜಿಲ್ಲಾಕ ಇತ್ತು
ಕಾಂಗ್ರೆಸ್ ಅಧ್ಯಕ್ಷ ಗಾಂಧೀಜಿ ಇದ್ದರು ಬಸವಣ್ಣನ ನೆನಪಾತು
ಹತ್ತೊಂಬತ್ತನೂರಾ ಇಪ್ಪತ್ತನಾಲ್ಕರಲ್ಲಿ ಗಾಂಧೀಜಿ ಆಡಿದ ಮಾತು

ನಾ ಇಲ್ಲಿ ಹೇಳುಮಾತು ಬಸವಣ್ಣನಂತೆ ತತ್ವವನ್ನು ಪಾಲಿಸಿದಾ
ಭಾರತಕ ಸ್ವತಂತ್ರ ತಂದಾ."[೬೫]

**ಸುಭಾಸಚಂದ್ರ ಭೋಸ :**

"ಶೂರ ಸುಭಾಸರು ಹುಟ್ಟಿದ ದೇಶಾ
ಭಾರತ ಮಾತೆಯ ವೀರ ಪುರುಷಾ
ಇಂದು–ಅವರ
ಸ್ಮರಣ–ಮಾಡಿ
ಮುಂದೆ ಹಾಡುವೆ ಅವರ ಕವಿತಾ
ಸಮಯದ ಕೊರತೆ ಇರುವುದು ಅಂತಾ."[೬೬]
ಬಾಬಾಸಾಹೇಬ ಅಂಬೇಡ್ಕರ್
"ಬಾಬಾಸಾಹೇಬ ಅಂಬೇಡ್ಕರ್ ಗೋರೆಗಾಂವ ಊರ ಸಂಸ್ಥಾನಿಂದೂರ
ಸಂವಿಧಾನಶಿಲ್ಪಿ
ತಂದಿ ರಾಮಣ್ಣನ ಕಿರಿಮಗ ಭೀಮ ಅಂತ ಅವಗ ಕರಿಯತಿದ್ರ ಹಿಂಗ ವಾತ್ಸಲ್ಯದ
ವ್ಯಾಪಿ."[೬೭]

**ಅಗಸ್ಟ್ ೧೫ :**

"ಅಗಷ್ಟ ಹದಿನೈದ ಕ್ರಿಸ್ತ ಶಕೆ। ನಾಲವತ್ತೇಳ ಕಡಿದ।
ಸ್ವಾತಂತ್ರ್ಯ ಸಿಕ್ಕ। ಐವತ್ತಾರ ವರ್ಷ। ಸಂತೋಷ ಆಗೇದ॥೧॥
ಪ್ರಧಾನಿ ಆದದ್ದ। ಪಂಡಿತನೆಹರು। ಪ್ರಥಮದಿಂದ।
ಭಾರತದೇಶ ಹರಿದು ತಂದಿದ್ದರು। ಪರರು ಹೋಗುಮುಂದ."[೬೮]
ಸ್ವಾತಂತ್ರ್ಯ ಗೀತೆ
"ಎಷ್ಟ ಸರಳ । ಅಗಷ್ಟ ತಿಂಗಳ ।ಸ್ವಾತಂತ್ರ ದಾರಿ ನಿವಳ
ಬ್ರಿಟಿಷರೆ ನೀವು ಬಿಟ್ಟು ಹೋಗಿರೆಂದು ॥ಪ॥
ರಾಷ್ಟ್ರ ಪಿತಾಜಿ–ಸ್ಪಷ್ಟ ಹೇಳಿದ್ರು ।
ಇದೇ ಘೋಷಣೆ–ಆದ ತಕ್ಷಣ । ಮಹಾತ್ಮಾ ಗಾಂದೀನ್ನ–ಜೈಲಿಗ್ಹಾಕಿದರು."[೬೯]

**೪೨ರ ಚಳವಳಿ ಮತ್ತು ಪೋಲಿಸರು :**

"ನಾಲವತ್ತೆರಡರ। ಕಾಲದ ಚಳವಳಿ। ಪೊಲೀಸರಿಗೆ ಬಿತ್ತ–ಗುದ ಮುರಿಗಿ॥
ಮೇಲಿನವರ ಆಜ್ಞಾ ಪಾಲನೆ ಮಾಡಿ। ಮಾಲಿ ಬಿತ್ತ ಅವರ ಕೊರಳಿಗೆ ॥೧॥
ಚಳವಳಿ ಮಂದಿನ್ನ। ತುಳಿಯರಿ ಅಂತ। ಬಿಳಿಯರ ಹುಕಂ ಇವರಿಗೆ।
ಗಾಡಿತೆಕ್ಕೊಂಡ। ಹಿಡಿಯಲು ಬಂದ। ಬುಡುಮೇಲೆ ಆಧಾರತಾವಾಗಿ."[೭೦]

ಕಿತ್ತೂರು ನಾಡಿನಲ್ಲಿ ಹೋರಾಡಿದ ವೀರ ಸಂಗೊಳ್ಳಿ ರಾಯಣ್ಣನ ಕುರಿತು ಲಾವಣಿಕಾರರು ಚಾರಿತ್ರಿಕವಾದ ದಾಖಲೆಯ ಮೂಲಕ ಲಾವಣಿಗಳನ್ನು ಕಟ್ಟಿದ್ದಾರೆ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಶಾಸ್ತ್ರ ವಿಭಾಗದಲ್ಲಿ ರಾಯಣ್ಣನ ಚರಿತ್ರೆ ಸಾಕ್ಷಿಕರಿಸುವ ಒಂದು ಹಸ್ತಪ್ರತಿ ಸಂಗ್ರಹವಾಗಿದೆ.

"**ಆದಿ :** ಶ್ರೀಗುರು ಬಸವಲಿಂಗಾಯ ನಮಃ । ರಾಯ ನಾಯ್ಕನ ಪದ ಸರದಾರ ರಾಯನಾಯ್ಕ ಸಂಗೊಳ್ಳಿ ಸಂಪಗಾಂವಿ ಸುಭೇದಾರನ ಮೇಲಿ ಮಾಡಿದ ತಿಳಿ । ಸುಟ್ಟು ಬಿಟ್ಟ ನೋಡು ಗಡದ ಸುತ್ತಮುತ್ತಲಿರುವ ಹಳ್ಳಿ । ಸುಲಿಗೆ ಮಾಡಿದನು ಚಿನ್ನ ಬೆಳ್ಳಿ ॥ಪ॥

**ಅಂತ್ಯ :** ದಿಟದಿಟರು ಎಲ್ಲರೂ ಕೂಡಿ ತಾವು ಹೋಗಿ ನಿಡವ ಬಿದ್ದು ಬಂಟರಾಯ್ನಾಕಯಿದ್ದಡಿ । ಹೊರಗಿನ ಮಂದಿ ಒಳಿಯಕ ಬಂದರ ಹೊಡದ ನೀವು ಅಟ್ಟರೆಂದು ಹೇಳಿದನು ತಾಕೀತ ಮಾಡಿ । ಅತ್ತಲಾಗಿನವರು ನೀವು ಇತ್ತಲ್ಯಾಕ ಬಂದಿರೆಂದು ತಿವುದಾರು। ಕೆಟ್ಟ ಪರಂಗೇರ ಮೇಲೆ ಸಿಟ್ಟು ಮಾಡಿ ಬಂದಿವಿ ನಾವು ಸುಟ್ಟ ಬಿಡೂನ ಅವರ್ನ ಹೋಳಿ ಆಡಿ....

ರಣಧೀರ ರಾಯ್ನಾಕನ ಹೊರಸಿನ ಮೇಲೆ ಹೇರಿಕೊಂಡು ಹೊತ್ತರಣ್ಣ ನಾಲ್ಕು ಮಂದಿ ಕೂಡಿ ಬ್ಯಾಗಾದಿ ವಸ್ತಿ ಮಾಡಿ ದಾರ್ವಾಡಕ ತಂದು ಹೇಳು ದಾತರಿಲ್ಲದೆ ಹಾಕಿದಾರು ಬೇಡಿ । ಈ ತಾಲೆಗುತ್ತರ ಬಂದು ಇಡಬ್ಯಾಡರಿ ಏನೆಂದು ಹೇಳಿದಾರು ತಲೆಯ ಹೇಡಿ."[೭೧]

ಸಂಪಗಾವಿ ತಾಲೂಕಿನ ಸುಭೇದಾರ ರಾಯಣ್ಣನ್ನು ಬಂಧಿಸಿ ಧಾರವಾಡ ಕಳುಹಿಸುವ ತಂತ್ರಗಾರಿಕೆ, ಮಾಡಿದ್ದರಿಂದ ಸುತ್ತಮುತ್ತಲಿನ ಹಳ್ಳಿಗಳನ್ನು ಸುಲಿಗೆ ಮಾಡುತ್ತಿರುವುದು ಬ್ರಿಟಿಷರು ಸಹಿಸಿಕೊಳ್ಳದೆ ಆತನನ್ನು ಹಿಡಿದು ಬೇಡಿ ಹಾಕುವ ಸಂದರ್ಭ ಒಂದು ಒಬ್ಬ ವ್ಯಕ್ತಿಯ ಸ್ವಾತಂತ್ರ್ಯವನ್ನು ಹರಣ ಮಾಡುವ ಪಿತೂರಿಯಾಗಿದೆ. ಆದುದರಿಂದ ರಾಯಣ್ಣನ ಹೋರಾಟ, ಶೌರ್ಯ ಪರಾಕ್ರಮವೊಂದು ಚಾರಿತ್ರಿಕ ದಾಖಲೆಯಾಗಿದೆ.

ಇದೇ ಸಂಪುಟದಲ್ಲಿ ಲಾವಣಿ ಸಂಪ್ರದಾಯದ ಹಸ್ತಪ್ರತಿಗಳ ವಿವರ ದೊರೆಯುತ್ತದೆ. ಇವು ಹರದೇಶಿ–ನಾಗೇಶಿ ಎಂಬ ಎರಡು ಸಂಪ್ರದಾಯಗಳನ್ನು ಇಟ್ಟುಕೊಂಡು ಲಾವಣಿಕಾರ ರಚನೆ ಮಾಡಿರುವುದು ವೈವಿಧ್ಯಮಯವಾಗಿದೆ. ಸೀತೆಯ ಬದುಕಿನ ಚಾರಿತ್ರಿಕ ವಿಚಾರವನ್ನು ನಿರೂಪಿಸುತ್ತಾನೆ.

"**ಆದಿ :** ಹಮ್ಮ ಮಾಡಬ್ಯಾಡ ಕಮ್ಮ ಜಾತಿಯವವನದಮ್ಮಿನ ಮಾತಾ ಆಡಬ್ಯಾಡ । ಹನಿ ಹನಿ ಕೂಡಿ ಹರಿಯೋದಕ ಏನ ಹತ್ಯೋದಿಲ್ಲ ಅವಗಡ । ನಗಾರಿ ಮುಂದ ನಿನ್ನ ಜುಂಜಣಿ ಯಾತಕ ಧಾವಿಸಿ ಎರಡು ತಿಳಿಯದೆ ಸಭಾದವಳಗ ಓಡಿ ಬಂದಿನಿ ಅಡರಾಸಿ । ಹಿಂದ ಬಾಳ ಬಡಕೋತ್ತಿದಿ.

**ಅಂತ್ಯ :** ॥ಏರು॥ ಎತ್ತ ನೋಡತಿ ಗೊತ್ತ ಚಿತ್ತವಿಟ್ಟು ಕೇಳೋ । ರಾಮನ ಅವತರದೊಳಗ ಸೀತಾ ಪತಿವ್ರತಿ ॥ ಆತ ಘಾತ ಕೇಳ ರಾಮಾಪತಿ ಇನ್ನ ಮತ್ತ ಕೇಳಿದರ ಒತ್ತಿ ಹಾಕತೇನ ಲತ್ತಿ॥"[೭೨] ಬೆಳಗಾವಿ ಜಿಲ್ಲೆಯಲ್ಲಿ ಅನೇಕ ಲಾವಣಿಕಾರರ ಹಸ್ತಪ್ರತಿಗಳು ಅಜ್ಞಾತವಾಗಿವೆ. ಕೆಲವೊಂದು ಓದುಗ–ಆಸಕ್ತರ ಕೈಸೇರಿವೆ.

**ಪ್ರಕಟಿತ ಮತ್ತು ಅಪ್ರಕಟಿತ ಚಾರಿತ್ರಿಕ ಲಾವಣಿಗಳು :**

ಜನಪದ ಚರಿತ್ರೆಯ ಹಸ್ತಪ್ರತಿ ಲಾವಣಿಗಳನ್ನು ಗಮನಿಸಿದಂತೆ ಪ್ರಕಟಗೊಂಡಿರುವ ಮತ್ತು ಅಪ್ರಕಟಿತವಾಗಿ ವ್ಯಕ್ತಿ ಒಡೆತನದಲ್ಲಿ ಗುಪ್ತವಾಗಿವೆ. ಅಂಥ ಹಸ್ತಪ್ರತಿಗಳನ್ನು ಶೋಧಿಸಿ ಅವುಗಳಲ್ಲಿ ಹುದುಗಿಕೊಂಡಿರುವ ಚಾರಿತ್ರಿಕ ಮಹತ್ವವನ್ನು ಗುರುತಿಸುವ ಕಾರ್ಯ ಮಾಡಲಾಗಿದೆ. ಅನೇಕ ಲಾವಣಿಕಾರರ ಹಸ್ತಪ್ರತಿಗಳು ಅವರ ಮನೆಯಲ್ಲಿ ಅಥವಾ ಸಂಗ್ರಹಕಾರರ ಹತ್ತಿರ ಧೂಳು ತಿನ್ನುತ್ತ ಉಳಿದುಕೊಂಡಿವೆ. ಕೆಲವೊಂದು ಅಭ್ಯಾಸಪ್ರಿಯರು ಅವುಗಳನ್ನು ಸಂಪಾದಿಸಿ ಪ್ರಕಟಿಸುವ ಜವಾಬ್ದಾರಿ ಕಾರ್ಯ ಮಾಡಿದ್ದಾರೆ. ಸಾತು ಕಾಮಣ್ಣನ ಲಾವಣಿಗಳನ್ನು ಮತ್ತು ಲಾವಣಿಗಳಲ್ಲಿ ಸಂಗೊಳ್ಳಿ ರಾಯಣ್ಣ ಈ ಕೃತಿಗಳನ್ನು ನಿಂಗಣ್ಣ ಸಣ್ಣಕ್ಕಿಯವರು ಸಂಪಾದಿಸಿ ಪ್ರಕಟಿಸಿದ್ದಾರೆ. ಸಾತು ಕಾಮಣ್ಣನ ಲಾವಣಿಗಳಲ್ಲಿ ಸತ್ಯವತಿ ಲಾವಣಿ ಚರಿತ್ರೆಯ ಮೈಲುಗಲ್ಲಾಗಿದೆ.

"ದೇಶಕೊಬ್ಬ ದೇವರು ಇರತಾನು ಸಾವಿರಕ್ಕೊಬ್ಬ ಸಾದು ಇರತರಾ
ನೂರಕ್ಕ ಒಬ್ಬಕಿ ಇರತಾಳ ಪತಿವ್ರತಾ
ಸತ್ಯವತಿದ ಕೇಳಿರಿ ಚರಿತ್ರಾರ್ತಾ
ಆಕಿಮ್ಯಾಲ ಮನಸ್ಸಿಟ್ಟ ಹೊಲ್ಯಾ ಆದ ಕೃತಾರ್ತಾ
ಮಲಿಯಾಳ ದೇಶದ ದೊರಿ
ರಾಜಕೇಸರಿ ಅಂಬವ ಇದ್ದ ಶೂರಾ
ಅವನ ಮಗಳ ರೂಪದಲ್ಲಿ ಸುಂದರಾ
ಸತ್ಯವತಿ ಅಂಬುದ ಅಕಿ ಹೆಸರಾ
ದರ ಓದತಿದ್ದಳ ವೇದಾಂತ ಅನುಭವದ ಸಾರಾ॥
ಭೋಗ ಭಾಗ್ಯದ ಮ್ಯಾಲ ಇಲ್ಲ ಮನಾ
ಬ್ರಹ್ಮಚಿಂತನ ಮಾಡೋಳ ಅವೋರಾತ್ರಾ
ಬಡವರಿಗೆ ಮಾಡೋಳೋ ಉಪಕಾರ
ಹಸದವರಿಗೆ ಹಾಕ್ಯೋಳೋ ಅನ್ನ ನೀರಾ
ಸಾಧು ಜನರ ಮನಿಗಿ ಬಂದರ ಹಿಗ್ಗಿ ಮಾಡುಳ ಉಪಚಾರ
ಸತ್ಯವತಿ ಹಿಂಗ ಇರಿರತ ಬಂತ ಅನರ್ಥಕಾಲ ಸುಮಾರಾ
ಚಿತ್ತ ಇಟ್ಟ ಕೇಳಿರಿ ಯಲ್ಲಾರಾ
ಪತಿವ್ರತಿಯರ ಸುತ್ತು ಬಾಳ ಘೋರಾ
ದರ ಉಡಗತಿಳ್ಳ ಆಕಿ ಪಾಯಖಾನಿ ಹಲಾಲಕೋರ ತಾರಾ."[೭೩]

ಇದೇ ಲಾವಣಿಕಾರ ರಚಿಸಿದ ಲಾವಣಿಪದ ಪತಿವ್ರತಿಯಾಗಿ ನೀಲಾವತಿ ಲೋಕಕ್ಕೆ ಮಾದರಿಯಾದ ನಿದರ್ಶನವನ್ನು ತನ್ನ ಹಾಡಿನ ಮೂಲಕ ಅಭಿವ್ಯಕ್ತಿಗೊಳಿಸಿರುವುದು ಕಂಡುಬರುತ್ತದೆ.

"ಮೃತ್ಯದೊಳಗ ಎಷ್ಟೋ ಮಂದಿ ಪತಿವ್ರತಿಯರು
ತಮ್ಮ ಪತಿ ಸೇವಾ ಮಾಡಿ ಪಡದಾರ ಏಸಾ
ಅವರ ಪೈಕಿ ನೀಲಾವತಿ ದಿವ್ಯಚರಿತ್ರೆ ಹೇಳುವೆನು
ಸಾವಧಾನದಿಂದ ಕೇಳ್ರಿ ಸಾವಕಾಶ
ಮೇಲಗರ್ತಿ ನೀಲಾವತಿ ತೆಲಿ ಮೇಲೆ ವಾಳಿ
ಅತ್ತಿ ಹೊರಸಿದಾಳ ಹಾದರ ದೋಷಾ
ನೀಲಕಂಠನಿಂದ ಆದಾಳ ನಿರ್ದೋಷಾ
ಗಂಡ ಹೆಣತಿ ಭಾಳ ಪ್ರೀತಿ
ಉಂಡತಿಂದ ನೆಟಗಿದ್ರ ಕಂಡಾ ಪಟ್ಟಿ
ಬದುಕಿತ್ತ ಮನಿ ಒಳಗ
ಸತಿ ನೀಲಾವತಿ ತನ್ನ ಪತಿಪಾದ
ಪೂಜಾ ಮಾಡಿ ತೀರ್ಥಾ ತಗೋತಳ್ಳ
ಎರಡೂ ವ್ಯಾಳೆದಾಗ
ರಂಡಿ ಮುಂಡಿ ಅತ್ತಿ ಒಂದ
ತುಂಡನಂಗ ತಿರಗತಿತ್ತ ಕಂಡ ಮಂದಿ
ಕಿಲಾಪ ತಕ್ಕೂತ ಬೇಗು ಬೆಳಗ
ಉಂಡ್ರ ಸೇರಾಕಿಲ್ಲ ನೆರಮನೆವು ಕಮ್ಮಗ
ಒಂದು ದಿವಸ ಅವರ ಮನಿಗಿ ಬಂದ
ಒಬ್ಬ ಸಾಧು ಬಾವಾ ಭಿಕ್ಷಾದೇಹಿ
ಅಂತ ನಿಂತ ಬಾಗಿಲ್ಹೊದರಗ
ಪುಣೆವಂತಿ ನೀಲಾವತಿ ಉಣ್ಣೂದ
ಬಿಟ್ಟ ಓಡಿ ಹೋಗಿ ಅನ್ನಾ
ನೀಡಿದಾಳ ಆ ಸಾಧು ಬಾವಾಗ
ಕಣ್ಣ ನೂವ ಆಗಿ ಬಾವಾ ಅನ್ನೆವಿನ್ನೆ
ತಳಮಳಸ್ತಿದ್ದ ಸಣ್ಣರವದಿ
ಹಾರಿ ಬಿದ್ದಿತವನ ಕಣ್ಣಾಗ
ನೀಲಾವತಿ ನಾಲಿಗೆ ಹಾಕಿ ತಗದಾಳವಗ."[೭೪]

ರಾಯಬಾಗ ತಾಲೂಕಿನ ಹಾರೂಗೇರಿಯ ಅಲಭೈರಿ ಕವಿಯ ಕುರಿತು ಭಜನೆಯ ತತ್ವಪದಗಳನ್ನು ಆರ್. ಬಿ. ಚಿಲುಮಿ ಸಂಪಾದಿಸಿ ಪ್ರಕಟಿಸಿದ್ದಾರೆ. ಕಲಾವಿದನಾದ ಅಲಭೈರಿ ಸುಮಾರು ೨೦೦ಕ್ಕೂ ಹೆಚ್ಚು ರಿವಾಯತ, ಕರ್ಬಲ್, ಲಾವಣಿ ಪದಗಳನ್ನು ಬರೆದಿದ್ದಾನೆ. ತನ್ನ ನೆರೆಯ ಗ್ರಾಮ ಹನಗಂಡಿ ಊರಿನ ಮಹಾನ್ ಸಂತನಾದ ತುಕಾರಾಮ ಜನನ, ಹರಿನಾಮ ಸ್ಮರಣೆ, ಸತ್ಯದ ವ್ರತಗಳು, ತಪಸ್ಸು, ಮೋಕ್ಷಹೊಂದಿದ ಪ್ರಸಂಗವನ್ನು ಸಾಂದರ್ಭಿಕವಾಗಿ ಲಾವಣಿಕಾರ ಪದವನ್ನು ರಚಿಸಿದ್ದಾನೆ.

"ಗ್ರಾಮ ಹನಗಂಡಿಯೊಳಗ ಪೂರ್ವದಿ
ಶ್ರೀಸಂತ ತುಕಾರಾಮನುದರದಿ ಜನ್ಮತಾಳಿದಿ
ಕೋಮಲ ಬಾಲ್ಯಾವಸ್ಥೆಯೊಳು
ಭೂಮಿ ಹೇಮ ಕಾಮಿನಿಯರ
ಕಾಮನಳಿದು ಪ್ರೇಮದಿಂದಲಿ
ಸ್ವಾಮಿ ಶ್ರೀ ಹರಿನಾಮ ಸ್ಮರಿಸಿದ
ಛಂದ ಹುಲಗಬಾಳಿ ಪುರದೊಳು
ಮಾಡಿದ ಸದಾನಂದದಿಂದಲಿ
ಸತ್ಯವ್ರತಗಳು ಮುಂದೆ ತಪವು ಬಲಿದು
ಸಿದ್ಧಿಯ ಹೊಂದಿ ಬಳಿಕ ಕಿರಣಗಿಯ
ತಂದೆಯಾದ ಸಂಗಮೇಶನ ಕುಂದನಾಗಿ ಬಂದ ತೋರಿದ
ಪರಮ ವಿಶ್ವಕರ್ಮ ಬ್ರಾಹ್ಮಣರು
ಹಾರೂಗೇರಿಯೊಳು   ಹರುಷದಿಂದ ನಿನ್ನ ಪೊಗಳಿದರು
ಶರಣ ಜನರ ಕೀರ್ತಿ ಎಂಬುದು ಧರೆಯ ಮೇಲೆ
ಮರೆಯಲೆಂದು ಬರೆದ ಕವಿತೆಯ ರೂಪದಿಂದೆ
ಚರಣಕರ್ಪಿಸಿದಲಭೈರವನ."[೭೫]

ಕವಿ ಅಲಭೈರಿಯು ಕರ್ಬಲ್ ಪದಗಳನ್ನು ರಚಿಸಿರುವ ವಿಚಾರ ತಿಳಿಯುತ್ತದೆ. ಧಿನ್ ಕೆವರ್ಸ, ಭವರ್ಸ ಅಂಬುಮಂತ್ರ ಮೂರುಲೋಕದಲ್ಲಿ ಎಷ್ಟು ಪವಿತ್ರವಗಿದೆ. ಮಹಾಯೋಗಿಯ ಮೂರು ಲೋಕಗಳು, ವರ್ಣ ವ್ಯವಸ್ಥೆಯ ವಿಚಾರ, ದ್ವೈತ, ಅದ್ವೈತ ಸಿದ್ಧಾಂತದ ಮಹತ್ವವನ್ನು ಲಾವಣಿಕಾರ ಅಲಭೈರಿ ತುಂಬಾ ಮಾರ್ಮಿಕವಾಗಿ ನಿರೂಪಿಸಿದ್ದಾನೆ.

"ಧಿನ್ ಕೆವರ್ಸ ಭವರ್ಸ ಅಂಬುಮಂತ್ರ ಮೂರು
ಲೋಕದೊಳಗೆ ಮಹಾಪವಿತ್ರ ॥ಪಲ್ಲ॥
ಸ್ಥಿರವಾಗಿರುವ   ಮೆರೆವಾ ಪರಬ್ರಹ್ಮ

ಸಕಳಾತ್ಮಕ ಸೂತ್ರಾ
ಮೂರುಲೋಕದೊಳಗೆ ಮಹಾಪವಿತ್ರ ॥೧॥
ದೇವ ಭಕ್ತ ಭಾವುಕ ಪುಣ್ಯಗಾತ್ರಾ
ತಾನೊಬ್ಬನಾದಾಂವ ಮೂರು ನೇತ್ರಾ
ಆಗಮಾ ನಿಗಮಾ ಉಗಮಸ್ಥಾನ
ಮಹಾಯೋಗಿಯ ಮಿತ್ರಾ ಮೂರುಲೋಕ ॥೨॥
ನಾಲ್ಕು ವರ್ಣದವರ ಧರ್ಮ ಶಾಸ್ತ್ರಾ
ಏಕೋ ದೇವನ ಗೈದಾವೊ ಸ್ತೋತ್ರ
ದ್ವೈತ ಅದ್ವೈತಾರಹಿತಾಗಿರುವ
ಪರಮಚಿನ್ಮಯ ಗಾತ್ರಾ..... ಮೂರುಲೋಕ ॥೩॥
ಹಾರೂಗೇರಿಯ ಚಾರುಚರಿತ್ರಾ
ತುಂಬಿ ತುಳುಕಿದ್ದು ತಾನೆ ಸರ್ವತ್ರ"[೬೬]

ಫ್ಲೀಟರು ಸಂಗ್ರಹಿಸಿದ ಲಾವಣಿಗಳಲ್ಲಿ ಜಿಲ್ಲೆಯ ಕೆಲವು ಮಹತ್ವದ ಚಾರಿತ್ರಿಕ ಲಾವಣಿಗಳು ಸೇರಿವೆ. ೧೯೭೨ರಲ್ಲಿ ಕ್ಯಾತನಹಳ್ಳಿ ರಾಮಣ್ಣನವರು ಫ್ಲೀಟರು ಸಂಗ್ರಹಿಸಿದ ಲಾವಣಿಗಳನ್ನು ಸಮಗ್ರವಾಗಿ ಪರಿಶೀಲಿಸಿ ೧೭ ಲಾವಣಿಗಳನ್ನು ಆಯ್ಕೆಮಾಡಿಕೊಂಡು ವರ್ಗೀಕರಿಸಿದ್ದಾರೆ. ಜೋಗುಳಪದಗಳು, ದಂಡಕಗಳು, ಅನುಬಂಧಗಳು, ಮರಾಠಿ ಲಾವಣಿಗಳು ಹೀಗೆ ಪುಸ್ತಕದ ಶಿಲ್ಪರೂಪವನ್ನು ಸಿದ್ಧಗೊಳಿಸಿಕೊಂಡ ಕ್ಯಾತನಹಳ್ಳಿ ರಾಮಣ್ಣನವರು ಜಾನಪದ ಕ್ಷೇತ್ರಕ್ಕೊಂದು ಮಹತ್ತರವಾದ ಕೊಡುಗೆ ನೀಡಿದ್ದಾರೆ. ಅಪ್ರಕಟಿತ ಹಸ್ತಪ್ರತಿಗಳು ವಿಭಾಗದಲ್ಲಿ ಹಲವಾರು ಜಿಲ್ಲೆಯ ಕುರಿತು ಲಾವಣಿಗಳು ಪ್ರಕಟಗೊಂಡಿವೆ. ಈ ನಿಟ್ಟಿನಲ್ಲಿ ನೋಡಿದಾಗ ಕಿತ್ತೂರ ಚನ್ನವ್ವನ ಪದ ಚಾರಿತ್ರಿಕ ಅನನ್ಯತೆಯನ್ನು ಪ್ರತಿನಿಧಿಸುತ್ತದೆ.

"ಧೊರೀ ಚನ್ನವನ ಸೊಸೀ ಹೋದಳು ಶೆರೀ
ಕಿತ್ತೂರ ರಾಜ್ಯಕ ಇಲ್ಲ ದೊರಿಯೇ
ಸುಬೇಧಾರ ಬಂದಾನು ಹೊಂಗಲ ತಳಕೆ
ನಿಂತಾ ದಂಡ
ಕುಡಿಶ್ಯಾನೊಂದ್ವಿಪರೀತ ದಂಡಿಘೇಳತಾನ
ಬಾಳೆಚ್ಚರ ಇರಂತಾ
ರಾಯಣ್ಣ ರಾತ್ರಿ ಬರತಾನಂತಾ ಡಂಗುರ ಹೊಡಶ್ಯಾನ
ಅವನೂರ ನೋಡಿರೆಂತ
ನಾಳಿ ಹೋಗೂನು ಸೋಮಾರದೊತ್ತ

ಚವಕಿ ನಿಂತತಿ ಸವನೂರ ಕುದರಿ
ಕಿತ್ತೂರ ರಾಜಕೆ ಇಲ್ಲ ದೊರಿಯೆ ॥೧॥
ಸೋಮಾರದುದಿಯಕೆ ಮಸಲತ್ತ ಮಾಡ್ಯಾರಲ್ಲ
ಪಾಲಕೀ ಮಾಲಿಗೋದರಲ್ಲ
ದುಖಾ ಮಾಡ್ಯಾಳ ಶಿವ ಸಾವ ಕೊಡಲಿಲ್ಲ
ಎಡಾಬಲ ಮನಿ ಮಕ್ಕಳಿನ
ಹನ್ನೆರಡ ಸಾವಿರದರ್ಬಲಾ ಮಣಗಿತಲ್ಲ
ಶಿಲೀದಾರ ಸರದಾರ ಒಬ್ಬಲ್ಲ
ಮನಿಯ ದೇವರ ವೀರಭದ್ರ ಪರಬುನಲ್ಲ
ಆಕಿ ವೇಳ್ಯಕ ಯಾರ್‍ಯಾರ ದಿಕ್ಕಿಲ್ಲ
ದುಃಖಾ ಮಾಡ್ಯಾಳ ಅತ್ತಿಮಾವ ನೆನೆಸಿ ಭಾರಿ
ಕಿತ್ತೂರ ರಾಜ್ಯಕೆ ಇಲ್ಲ ದೊರೆಯೆ."[೭೭]

ಬೆಳಗಾವಿ ಜಿಲ್ಲೆಯ ತುಂಬೆಲ್ಲ ಲಾವಣಿ ಹಸ್ತಪ್ರತಿಗಳ ಶೋಧಕಾರ್ಯವನ್ನು ಮುಂದುವರಿಸಿದರೆ ಕಿತ್ತೂರು ಚನ್ನಮ್ಮ ಮತ್ತು ಸಂಗೊಳ್ಳಿ ರಾಯಣ್ಣರ ಕುರಿತು ಸುಮಾರು ಎರಡುನೂರು ಅಪ್ರಕಟಿತ ಲಾವಣಿಗಳು ದೊರೆಯಬಹುದು. ಅಷ್ಟು ಸಾಹಿತ್ಯ ನಿರ್ಮಾಣವಾಗಿದೆ. ಈ ಅಧ್ಯಾಯದಲ್ಲಿ ಉಲ್ಲೇಖಿಸಿದ ಲಾವಣಿಕಾರರಲ್ಲದೆ ಇನ್ನೂ ಅನೇಕ ಅಜ್ಞಾತ ಲಾವಣಿಕಾರರು ಉಳಿದುಕೊಂಡಿದ್ದಾರೆ. ಅವರನ್ನು ಗುರುತಿಸುವ ಕಾರ್ಯ ಇನ್ನೂ ನಡೆಯಬೇಕಾಗಿದೆ. ನನ್ನ ಕ್ಷೇತ್ರಕಾರ್ಯ ಅಧ್ಯಯನದ ಮಿತಿಯಲ್ಲಿ ನಾನು ಸಂಗ್ರಹಿಸಿದ ಮಾಹಿತಿಯನ್ನು ಇಲ್ಲಿ ನೀಡಿದ್ದೇನೆ.

ಗೋಕಾಕ ತಾಲೂಕಿನ ಹುನಕುಪ್ಪಿ ಗ್ರಾಮದ ಕೃಷ್ಣದೇವ ಭೀಮದೇವ ಪುಗಶೆಟ್ಟಿ ಎಂಬ ಕವಿ 'ಕೃಷ್ಣದಾಸ' ಎಂಬ ಕಾವ್ಯನಾಮದಿಂದ ತನ್ನನ್ನು ಗುರುತಿಸಿಕೊಂಡಿದ್ದಾನೆ. ಈತ ಅನೇಕ ಲಾವಣಿಗಳನ್ನು, ಅಭಂಗಗಳನ್ನು, ಕರ್ಬಲ್ ಪದಗಳನ್ನು ರಚಿಸಿದ್ದಾನೆ. ಸುಮಾರು ೭೨ ಅಪ್ರಕಟಿತ ಲಾವಣಿ ಹಸ್ತಪ್ರತಿಗಳಿವೆ. ಮಹಾತ್ಮಾ ಗಾಂಧೀಜಿಯವರನ್ನು ಕುರಿತು ಒಂದು ಚಾರಿತ್ರಿಕ ಲಾವಣಿಯನ್ನು ಕೃಷ್ಣದಾಸ ರಚಿಸಿದ್ದಾನೆ.

"ಎಂಥಾ ಶಹಣ್ಯಾ ಮಹತ್ಮಾ ಗಾಂಧಿ
ಹಿಂದುಸ್ತಾನಕವನೇ ತಂದಿ
ಖಾದಿಯ ಉಡಂದ । ಖಾದಿಯ ತೊಡೆಂದ
ಎಂಥಾ ಬುದ್ಧಿವಂತ ಗಾಂಧೀ
ಚಿಂತಾ ಬಯಲ ಮಾಡಿದ ಮೂರ್ತಿ
ರಾಟಿಯ ನೂಲಂದ ರಾಷ್ಟ್ರಾ ಗೆದಿರೆಂದ

ಮತಾ ತನ್ನದೆಲ್ಲ ತಿಳಿದಿ
ಮತಿ ಕೊಟ್ಟರೆಲ್ಲರ ಕರಿಸಿ
ಎಲ್ಲಾರೂ ಕೂಡ್ರೆಂದ ಎಲ್ಲಾರೂ ಬರ್ರೆಂದ
ಎಂಥಾ ಮೂರ್ಖತನವೊ ಅಂದಾ
ಪಂಥ ಎಲ್ಲ ಕೊಡಸರೆಂದಾ
ಹೊಲೆಯರು ನಮ್ಮವರಂದಾ । ಹರಿಜನರು ಬಂಧುಗಳೆಂದಾ
ಎಂಥಾ ಬುದ್ಧಿ ಗಾಂಧೀದವ್ವಾ
ಹಿಂತಾವರ್ನೆಲ್ಲಿ ನೋಡಲಿಲ್ಲವ್ವಾ
ಜಾತಿಭೇದ ಬಿಡಿರೆಂದ । ನೀತಿ ಮಾರ್ಗ ಹಿಡಿರೆಂದ
ಎಂಥಾ ಧೈರ್ಯವಂತ ಗಾಂಧೀ
ಹಿಂದುಸ್ತಾನ ಕೀರ್ತಿ ತಂದಾ."[೭೮]

ಮೈಮನಸ್ಸು ಬಿಟ್ಟು ವೈರಿಯನು ಚದುರಿಸಿರಿ ಎಂದು ಗಾಂಧಿ ಪದ್ಯದ ಮೂಲಕ ಜನರಿಗೆ ಕರೆ ನೀಡುತ್ತ ಕವಿ ಕೃಷ್ಣದಾಸ ಒಂದೇ ದಿನ ಎರಡು ಚಾರಿತ್ರಿಕ ಲಾವಣಿ ಬರೆದಿರುವುದು ಗಮನಾರ್ಹ ಸಂಗತಿಯಾಗಿದೆ. ಮುಂದಿನ ಪದ್ಯದಲ್ಲಿ 'ಯುದ್ಧಕ್ಕೆ ಸಿದ್ಧರಾಗಿರಿ' ಎಂದು ಹೊಸ ಸಂದೇಶ ನೀಡುವುದರ ಮೂಲಕ ಲಾವಣಿಕಾರ ದಿನಾಂಕ ೫–೧೦–೧೯೩೭ರಂದು ಗಾಂಧಿ ಪದ್ಯವನ್ನು ಮಧ್ಯಾಹ್ನ ೩–೧೫ಕ್ಕೆ ಬರೆದಿರುವುದಾಗಿ ಹೇಳುತ್ತಾರೆ. ಮತ್ತೊಂದು ಲಾವಣಿಯನ್ನು ಸಾಯಂಕಾಲ ೭–೩೦ರ ಹೊತ್ತಿಗೆ ಬರೆದಿರುವುದಾಗಿ ಕವಿಯ ಸ್ವಹಸ್ತಾಕ್ಷರದಿಂದ ಬರೆದಿರುವುದನ್ನು ಗಮನಿಸಬಹುದು. ಪ್ರಸ್ತುತ ಕವಿಯ ಲಾವಣಿಗಳನ್ನು ಬಿ.ಎ. ತರಗತಿ ಓದುವಾಗ ಮತ್ತು ಸ್ವಾತಂತ್ರ್ಯ ಚಳವಳಿಯಲ್ಲಿ ಸೆರೆಮನೆ ವಾಸದಲ್ಲಿದ್ದಾಗ ನಾನು ಲಾವಣಿಗಳನ್ನು ರಚನೆ ಮಾಡಿದ್ದೇನೆ. ಅಷ್ಟೇ ಅಲ್ಲದೆ ನನ್ನ ತಂದೆ ಭೀಮಪ್ಪ ಲಾವಣಿಗಳನ್ನು ಬರೆಯುತ್ತಿದ್ದರು. ಅವರ ಪ್ರಭಾವದಿಂದ ಲಾವಣಿ ಬರೆಯಲು ಪ್ರಾರಂಭಿಸಿದ್ದೇನೆ ಎಂದು ಕವಿ ಕೃಷ್ಣದಾಸ ತನ್ನ ಜೀವನ ಚರಿತ್ರೆಯಲ್ಲಿ ನಮೂದಿಸಿರುವುದು ಕೂಡಾ ಕಂಡುಬರುತ್ತದೆ.

"ಏಳಿರೇಳಿರಿ ಭಂಟರೆಲ್ಲರು
ಸಮರಭೂಮಿಗೆ ತೆರಳುವಾ
ಕಾಳಗದಿ ವೈರಿಯನು ಖಂಡಿಸಿ
ಧೂಳಿಯುಣ್ಣಿಸಿ ಮರುಳುವಾ
ಕಾಳೆಕೊಂಬು ತುತೂರಿ ತಮಟಿ
ಭೇಟಿ ದುಂದುಭಿ ನಾದವಾ
ಏಳು ನಮ್ಮಯ ನಾಡಗುಡಿಯದು

ಬಾನಬಯಲಲಿ ಬೆಳಗಿತ್ತು
ಎತ್ತ ನೋಡಿದರತ್ತ ತರುಣರು
ಸುತ್ತುಗಟ್ಟಿ ಬರುವರು
ಹೊತ್ತು ಅರವಿಯಿಂದ ಹೊರಗೆ
ಇತ್ತಲವರು ಬರುವರು
ನಮ್ಮ ತಾಯಿಯ ಇಚ್ಛೆಯಂತೆ
ನಮ್ಮ ಭೂಮಿ ಹೃದಯವ
ನಮ್ಮದ್ಯುತ್ಸವದಿಂದ ನಾವು
ಹೆಮ್ಮೆಯಿಂದ ಗೆದೆಯುವಾ."[೭೯]

ಲಾವಣಿಗಳು ಇಂದಿಗೂ ರಚನೆಗೊಳ್ಳುತ್ತಲೇ ಇವೆ. ಇದಕ್ಕೆ ಸಾಕ್ಷಿ ಎಂಬಂತೆ ಆಧುನಿಕ ಕವಿ ಎಸ್.ಡಿ. ಇಂಚಲ ಅವರು ಬರೆದ 'ಚೆನ್ನಮ್ಮನ ಲಾವಣಿ' ಅಪಾರ ಜನಪ್ರಿಯತೆಯನ್ನು ಪಡೆದಿದೆ. ಎಸ್.ಡಿ. ಇಂಚಲರು ಬೆಳಗಾವಿ ಕೆ.ಎಲ್.ಇ. ಸಂಸ್ಥೆ ಜಿ.ಎ.ಹೈಸ್ಕೂಲಿನಲ್ಲಿ ಪ್ರಾಧ್ಯಾಪಕರಾಗಿದ್ದರು. ಶ್ರೇಷ್ಠ ಶಿಕ್ಷಣ ತಜ್ಞರಾಗಿದ್ದರು. ಅಪ್ಪಟ ಗ್ರಾಮೀಣ ಹಿನ್ನೆಲೆಯಿಂದ ಬಂದ ಕವಿ ಎಸ್.ಡಿ. ಇಂಚಲರಿಗೆ ಜಾನಪದ ಹಾಡುಗಳೆಂದರೆ ಬಲುಇಷ್ಟ. ಜಾನಪದ ಸೊಗಡು ಸೊಗಸುಗಳಿಗೆ ಮಾರುಹೋದವರು. ಇಂಚಲದ ಕೆಂಚನಾಯಕ ಕವಿ ಇಂಚಲರ ಮನೆತನದಲ್ಲಿ ಆಗಿ ಹೋದ ಪ್ರಸಿದ್ಧ ಲಾವಣಿಕಾರ. ಆತ ಪೂರ್ಣ ಕುರುಡನಾಗಿದ್ದನಂತೆ. ಕೆಂಚನಾಯಕನ ಲಾವಣಿಗಳು ಆಗ ಪ್ರಚಲಿತವಾಗಿದ್ದವು. ಕೆಂಚನಾಯಕ ರಚಿಸಿದ ಮೌಖಿಕ ಲಾವಣಿಗಳು ಕೇಳಲು ಸಿಗುತ್ತವೆ.

"ಅಪ್ಪ ಧರ್ಮಜ ಕೇಳು
ಗಪ್ಯಾಕ ಕುಂತಿಯೋ
ಸಪ್ಪಕ್ಕೆ ಸರಿ ಕೌರವರು."[೮೦]

ಎಂದು ಮಹಾಭಾರತದ ಪ್ರಸಂಗವನ್ನು ಚಿತ್ರಿಸುವ ಲಾವಣಿ ಜನಜನಿತವಾಗಿದೆ. ಅದೇ ಕವಿತ್ವ ತಲೆಮಾರುಗಳ ನಂತರ ಎಸ್.ಡಿ. ಇಂಚಲ ಅವರಲ್ಲಿ ಇಳಿದುಬಂದುದು ಗಮನಾರ್ಹ. ಲಾವಣಿಯ ಲಾವಣ್ಯದ ಬಗೆಗೆ ಇಂಚಲರಿಗೆ ವಿಶೇಷ ಪ್ರೀತಿ. ಮಹಾರಾಷ್ಟ್ರದಲ್ಲಿ ಹೆಚ್ಚು ಪ್ರಚಾರದಲ್ಲಿರುವ ಲಾವಣಿ ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತ ಹಾಗೂ ಜನಪ್ರಿಯ ಗೀತಪ್ರಕಾರ. ವೀರ, ಅಧ್ಯಾತ್ಮ, ಶೃಂಗಾರಗಳ ಅಭಿವ್ಯಕ್ತಿಗೆ ಲಾವಣಿ ತುಂಬಾ ಅನುಕೂಲಕರವಾದುದು. ಅಂತೆಯೆ ಕವಿ ಇಂಚಲರು ಲಾವಣಿಯ ರಚನೆಗೆ ತೊಡಗಿದರು. ವೀರರಸಭರಿತ ಕಥೆ ಹೇಳಲು ಲಾವಣಿ ತುಂಬಾ ಸೂಕ್ತ ಹಾಗೂ ಪರಿಣಾಮಕಾರಿ. ಅಂತೆಯೆ ಕೇಳುಗರನ್ನು ಕಟ್ಟಿಕೂಡ್ರಿಸುವ ಲಾವಣಿಯನ್ನು ರಚಿಸಿದ ಇಂಚಲರು ಅದನ್ನು ಸ್ವತಃ ಹಾಡಿ ತೋರಿಸಿದರು. ಚೆನ್ನಮ್ಮನ ಶೌರ್ಯಗಾಥೆಯಿಂದ ಕೂಡಿದ ಈ ಲಾವಣಿಯನ್ನು ಅದೆಷ್ಟು ಬಾರಿ ಹಾಡಿದರೂ ಅವರಿಗೆ ತೃಪ್ತಿಯಿರಲಿಲ್ಲ. ಲಯಬದ್ಧವಾಗಿ

ಹಾಡಿದಷ್ಟೂ ಹಾಡುಗರನ್ನು ಹಾಗೂ ಜೊತೆಜೊತೆಗೆ ಕೇಳುಗರನ್ನು ಪುಳಕಗೊಳಿಸುವ ಶಕ್ತಿ ಲಾವಣಿಗಳಿಗಿದೆ.

ಕಿತ್ತೂರಿನ ಭವ್ಯ ಇತಿಹಾಸ, ಸಂಸ್ಕೃತಿ, ವೀರ ಪರಂಪರೆಗಳ ಬಗೆಗೆ ಅವರದು ಅಪ್ಪಟ ಹಾಗೂ ಅನುಪಮ ಅಭಿಮಾನ. ಇಂಚಲರ ಸಹಜ ಮಾತಿನಲ್ಲಿ, ಭಾಷಣದಲ್ಲಿ ಚೆನ್ನಮ್ಮನ ಪ್ರಸ್ತಾಪ ಇದ್ದೇ ಇರುತ್ತಿತ್ತು. ಬ್ರಿಟಿಷರೊಂದಿಗಿನ ಹೋರಾಟದಲ್ಲಿ ರಾಣಿ ಚೆನ್ನಮ್ಮ ತೋರಿದ ಧೈರ್ಯ, ಸ್ಥೈರ್ಯ ಅಪ್ರತಿಮವಾದುವು. ಚೆನ್ನಮ್ಮನ ಸ್ವಾಭಿಮಾನ, ಸ್ವಾತಂತ್ರ್ಯಪ್ರಿಯತೆಗಳು ಅಗಾಧವಾದುವು. ಚೆನ್ನಮ್ಮ ರಾಣಿಯ ಶೌರ್ಯಸಾಹಸದ ಕಥೆ ಅನೇಕರಿಗೆ ಸ್ಫೂರ್ತಿದಾಯಕ. 'ಹಿರೇಬಾಗೇವಾಡಿ ಘಡಿಬಸವತನಯ' ಎಂದು ಕರೆದುಕೊಂಡಿರುವ ಇಂಚಲರು ಎಂಟು ಚೌಕಗಳಲ್ಲಿ ಕಿತ್ತೂರು ಕ್ರಾಂತಿಯ ಚಿತ್ರವನ್ನು ಕಟ್ಟಿಕೊಟ್ಟಿದ್ದಾರೆ.

೧೯೫೭ರಲ್ಲಿ ಭಾರತದ ಸ್ವಾತಂತ್ರ್ಯ ಸಂಗ್ರಾಮದ ದಶಮಾನೋತ್ಸವವನ್ನು ಸಂಭ್ರಮದಿಂದ ಆಚರಿಸಲಾಯಿತು. ಆ ಸಂದರ್ಭದಲ್ಲಿ ಕವಿ ಇಂಚಲರು 'ಕಿತ್ತೂರು ಕ್ರಾಂತಿ' ಎಂಬ ಲಾವಣಿಯನ್ನು ರಚಿಸಿದರು. ಕಿತ್ತೂರಿನ ಚೆನ್ನಮ್ಮರಾಣಿ ಸ್ಮಾರಕೋತ್ಸವ ಸಮಿತಿಯವರು ೧೫-೮-೧೯೫೭ರಂದು ಅದನ್ನು ಪ್ರಕಟಿಸಿದರು. ಈ ಚಿಕ್ಕಹೊತ್ತಿಗೆಯ ಆರಂಭದಲ್ಲಿ ಇಂಚಲರು ಬರೆದ ಮೊದಲ ಮಾತು ಹೀಗಿದೆ.

"ನಾಡ ಬಿಡುಗಡೆಗಾಗಿ ಹೋರಾಡಿ ಮಡಿದ ವೀರರನೇಕರು ನಡೆದು ಬಂದ ದಾರಿ ಉಜ್ವಲವಾಗಿದೆ. ಆ ದಾರಿಯಲ್ಲಿ ಮುನ್ನಡೆದು ಹೋದ ಕನ್ನಡಿಗರಲ್ಲಿ ಕಿತ್ತೂರಿನ ಚನ್ನಮ್ಮ ರಾಣಿಯು ದೇಶಾಭಿಮಾನದ ಖಣಿಯಾಗಿದ್ದಾಳೆ. ಅಂದು ಅವಳು ತೋರಿಸಿದ ಧೈರ್ಯ, ಸ್ಥೈರ್ಯಗಳೂ, ಸ್ವಾತಂತ್ರ್ಯಪ್ರಿಯತೆ ಸ್ವಾಭಿಮಾನಗಳೂ ಅಪ್ರತಿಮವಾಗಿವೆ. ಅವಳ ದೇಶವಾತ್ಸಲ್ಯವು ನಮ್ಮ ಕನ್ನಡಿಗರಿಗೆ ನಿತ್ಯನೂತನವಾದ ಚೈತನ್ಯವನ್ನು ಬೀರುತ್ತದೆ. ಈ ನಾಡಕಣ್ಮಣಿ ಚನ್ನಮ್ಮ ರಾಣಿಯು ಆ ದಾರಿಯಲ್ಲಿ ಬಿಟ್ಟು ಹೋದ ಸಾಹಸದ ಹೆಜ್ಜೆಗಳನ್ನು ನಾವಿಂದು ಗುರುತಿಸಿಕೊಳ್ಳುವದವಶ್ಯ. ಅಂತೆಯೆ, ಕಿತ್ತೂರಿನ ಕ್ರಾಂತಿಯ ಕಥೆಯನ್ನು ಜನ ಸಾಮಾನ್ಯರಿಗೂ ಮನಂಬೊಗುವ ರೀತಿಯಲ್ಲಿ ಹೇಳಬೇಕೆಂಬ ಬಯಕೆಯೇ ಹಣ್ಣಿಸಿ ಈ ಲಾವಣಿಯಾಗಿ ರೂಪಗೊಂಡಿದೆ. ಹಳ್ಳಿಯ ಜನತೆಯ ಜೀವನ ಸೌಂದರ್ಯಕ್ಕೆ ಕನ್ನಡಿಯಾಗಿರುವ ಜನಪದ ಸಾಹಿತ್ಯದ ಬೆಳೆಯು ನಮ್ಮಲ್ಲಿ ಹುಲುಸಾಗಿ ಬೆಳೆದು ಬಂದಿದೆ. ಅದು ನಮ್ಮ ಹಳ್ಳಿಗರ ರಸಿಕತೆಯ ಜೀವಂತ ಝರಿ. ಅದರಲ್ಲಿ ಲಾವಣಿಯೂ ಒಂದು. ಅದು ವೀರರಸ ಪೋಷಣೆಗೆ ಅನುಕೂಲವಾಗಿದೆ. ಜೀವನದ ವಿವಿಧ ಸನ್ನಿವೇಶಗಳನ್ನು ಚಿತ್ರಮಯವಾಗಿ ಚಿತ್ರಿಸಿ, ಜನಸಾಮಾನ್ಯರಿಗೂ ಮನೋರಂಜನೆಯನ್ನೊದಗಿಸಿ, ಪ್ರಚೋದನೆಯನ್ನೂ ಪ್ರಮೋದವನ್ನೂ ನೀಡುವುದಕ್ಕೆ ಲಾವಣಿ ಮಟ್ಟವು ಒಂದು ಪರಿಣಾಮಕಾರಿಯಾದ ಸಾಧನವು. ಆದುದರಿಂದಲೇ 'ಕಿತ್ತೂರಿನ ಕ್ರಾಂತಿ'ಯನ್ನು ಈ ಲಾವಣಿಯ ರೂಪದಲ್ಲಿ ಬರೆಯಲು ಪ್ರಯತ್ನಿಸಲಾಗಿದೆ. ಅತುಲ ಸಾಹಸಿಯಾದ ವೀರರಾಣಿ ಚನ್ನಮ್ಮನ ಸಾಹಸದ ಕಥೆ ನಮ್ಮ ನಾಡಿನ

ಜನಸಾಮಾನ್ಯರ ಕಿವಿಗಳಿಗೂ ಹೋಗಿ ನಮ್ಮವರು ತುಳಿದು ಬಂದ ದಾರಿಯನ್ನು ಗುರುತಿಸಿಕೊಳ್ಳಲು ನೆರವಾಗಲೆಂಬ ಉದ್ದೇಶದಿಂದ ಈ ಚಿಕ್ಕ ಲಾವಣಿಯನ್ನು ಹಾಡಿದ್ದಾಗಿದೆ. ಅದನ್ನು ಹಳ್ಳಿಪಳ್ಳಿಗಳಲ್ಲಿ ಹಾಡಿ, ಹಾಡಿಸಿ, ಆನಂದಪಟ್ಟರೆ ನನ್ನ ಬಯಕೆ ಹಣ್ಣೆಸಿತೆಂದು ಭಾವಿಸುತ್ತೇನೆ. 'ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳಾದ' ಕನ್ನಡ ಸೋದರ ಸೋದರಿಯರು ಈ ಹಾಡುಗಬ್ಬವನ್ನು ಆದರದಿಂದ ಬರಮಾಡಿಕೊಳ್ಳುವರೆಂದು ಆಶಿಸುವೆ."[೮೧]

ಲಾವಣಿ ಇಂಚಲರಿಗೆ ತುಂಬ ಪ್ರಿಯವಾದ ಮಾಧ್ಯಮ. ಅವರಿಗೆ ಲಾವಣಿಯ ಚೌಕಟ್ಟಿನ ಬಗೆಗೆ ಚೆನ್ನಾಗಿ ತಿಳಿದಿತ್ತು. ಕವಿ ಇಂಚಲರು ರಚಿಸಿದ 'ಕಿತ್ತೂರ ಕ್ರಾಂತಿ' ಲಾವಣಿಯು ಆರಂಭವಾಗುವುದು ಹೀಗೆ.

"ನಿನ್ನ ಮುಂದ ಕಥೆಯೊಂದ
ಚಂದ ಮಾಡಿ ಹೇಳತೇನ
ಗಂಡನಾಡ ಕಿತ್ತೂರಿನ ಕ್ರಾಂತಿಯನ
ಮನಸಗೊಟ್ಟು ಕೇಳಿದವರ
ಮೈನವಿರೇಳುವಂಥ
ವೀರರಾಣಿ ಚೆನ್ನಮ್ಮ ಚರಿತೆಯನ!"[೮೨]

ಎನ್ನುವ ಇಂಚಲರು ಕಿತ್ತೂರ ಕ್ರಾಂತಿಯ ಸಮಗ್ರ ಕಥೆಯನ್ನು ಎಂಟು ಚೌಕಗಳಲ್ಲಿ ಕಟ್ಟಿಕೊಟ್ಟಿದ್ದಾರೆ. ಜಾನಪದ ಸೊಗಡಿನ ಸೊಗಸಾದ ಭಾಷೆಯಲ್ಲಿ ಮೂಡಿನಿಂತಿರುವ ಈ ಲಾವಣಿ ಭಾರೀ ಜನಪ್ರಿಯವಾಯಿತು. ಸ್ವತಃ ಇಂಚಲರು ಸ್ವರಚಿತ ಲಾವಣಿಯನ್ನು ತುಂಬ ಪ್ರಭಾವಿಯಾಗಿ ಹಾಡಿಹೇಳುತ್ತಿದ್ದರಿಂದ ಅದು ಅಸಂಖ್ಯಾತ ಅಭಿಮಾನಿಗಳ ಮನದಕದ ತಟ್ಟಿತು. ಇಂಚಲರ ಶಿಷ್ಯರಾದ ಉಗರಗೋಳದ ಡಿ.ಜೆ. ಬಡಿಗೇರ ಅವರು ಅದೇ ಲಾವಣಿಯನ್ನು ಆಕಾಶವಾಣಿಗಾಗಿ ಹಾಡಿದರು. ಧಾರವಾಡ ಆಕಾಶವಾಣಿ ಕೇಂದ್ರದವರು ಆ ಲಾವಣಿಯನ್ನು ನಿರಂತರ ಒಂದು ತಿಂಗಳು ಕಾಲ ಪ್ರಸಾರ ಮಾಡಿದರು.

"ಚನ್ನಮ್ಮ ರಾಣಿ ಕುದರಿ ಏರಿ
ಗರುಡನಂತೆ ಎರಗಿದಾಳ
ಥ್ಯಾಕರೇ ಸಾಬನೆದುರಿಗೆ ಹಾರಿ ಬಂದಾಳ
ಅಪ್ಪರೊಳಗ ಅಮಟೂರಿನ
ಬಾಳಪ್ಪನ ಗುಂಡ ತಾಕಿ
ಥ್ಯಾಕರೇ ಸಾಬ ಬೀಳತಾನ ಕುದರಿ ಕಾಲಾಗ."[೮೩]

ಎಂಬಲ್ಲಿ ಇಂಚಲರು ಬಳಸುವ ಉಪಮೆ ತುಂಬ ಪರಿಣಾಮಕಾರಿಯಾಗಿದೆ. ಕೆಲವು ಕವಿತೆಗಳನ್ನು ಇಂಚಲರು ತಮಗೆ ಪ್ರಿಯವಾದ ಲಾವಣಿ ನಡಿಗೆಯಲ್ಲೇ ರಚಿಸಿದ್ದಾರೆ. 'ಸ್ವಾತಂತ್ರ್ಯದ ಮುನ್ನಡೆ' ಎಂಬ ಕವನ ಅದಕ್ಕೆ ಉಜ್ವಲವಾದ ನಿದರ್ಶನ.

"ಭಾರತ ಸ್ವಾತಂತ್ರ್ಯದ ಸಿರಿದೇವಿಯ
ಬೆಳ್ಳಿಯ ಹಬ್ಬವು ಸಾಗಿಹುದು
ಭಾರತ ವೀರರ ವಿಜಯೋತ್ಸಾಹದ
ಮೆರವಣಿಗೆಯು ಮುಂದಾಗಿಹುದು."[೭೪]

ಎಂದು ಆರಂಭವಾಗುವ ಹಾಡಿನಲ್ಲಿ ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಮೊದಲಾದವರು ಅಂದು ನಡೆಸಿದ ಸ್ವಾತಂತ್ರ್ಯ ಹೋರಾಟದ ವಿವರಗಳನ್ನು ರೋಚಕವಾಗಿ ಕಟ್ಟಿಕೊಡುತ್ತಾರೆ. ಕಿತ್ತೂರಿನ ವೀರರಾಣಿ ಚೆನ್ನಮ್ಮಳ ಸಾಹಸ ಹೋರಾಟಗಳು ಅನೇಕ ಕವಿಗಳಿಗೆ ಸ್ಫೂರ್ತಿದಾಯಕ. ಕವಿ ಇಂಚಲರಂತೂ ಕಿತ್ತೂರು ಕರ್ನಾಟಕದವರು. 'ಸ್ವಾತಂತ್ರ್ಯ ಸೌದಾಮಿನಿ' ವೀರರಾಣಿ ಕಿತ್ತೂರು ಚೆನ್ನಮ್ಮನ ಬಗೆಗೆ ಅವರಿಗಿದ್ದ ಭಕ್ತಿ–ಗೌರವ ಅಭಿಮಾನ ಅಪರೂಪದ್ದು. ಆಂಗ್ಲರ ದರ್ಪದಬ್ಬಾಳಿಕೆಗಳ ವಿರುದ್ಧ ಹೋರಾಟಕ್ಕೆ ಅಣಿಯಾದ ಧೀರೆ ಮಾರಿರೂಪವನ್ನೇ ತಾಳಿದಳು.

"ಕಣ್ಣಿನಿಂದ ಕಿಡಿಯ ಬೀರುತ
ಟಣ್ಣನೆ ಜಿಗಿದೆದ್ದು ಗುಡುಗುತ
ಗಡನೆ ಖಡ್ಗವನ್ನು ಹಿರಿದಳು
ಮಿಂಚುವೇಗ
ದಿಂದ ಬೀಸಿ ಮುಂದೆ ಬಂದಳು."[೭೫]

ಎಂದು ಬಣ್ಣಿಸುವ ಕವನ ಕಿತ್ತೂರಿನ ದುರಂತ ಕಥೆಯನ್ನು ತಿಳಿಸುತ್ತದೆ. ಕಿತ್ತೂರಿನ ವೀರರಾಣಿ ಚೆನ್ನಮ್ಮ ಕವಿ ಇಂಚಲರನ್ನು ಗಟ್ಟಿಯಾಗಿ ಆವರಿಸಿಕೊಂಡಿದ್ದಾಳೆ. ಚೆನ್ನಮ್ಮನ ಸಮಾಧಿ ಬೈಲಹೊಂಗಲದಲ್ಲಿದೆ. ಭಕ್ತಿಗೌರವ ಅಭಿಮಾನಗಳನ್ನು ಮೂಡಿಸುವ ಸ್ಮಾರಕ ತಾಣವಾಗಬೇಕಿದ್ದ ಸಮಾಧಿಯ ದುಸ್ಥಿತಿ ಇಂಚಲರನ್ನು ಕಳವಳಕ್ಕೀಡು ಮಾಡುತ್ತದೆ.

"ಕಾರ್ಮೋಡದುಗ್ರ ಕೋಲ್ಮಿಂಚಿನಂತೆ
ಝಳಪಿಸಿದ ನಿನ್ನ ಖಡ್ಗ!
ಮರೆಯಾದುದೆತ್ತ ಸೆರೆಯಾದುದೆತ್ತ
ಮಸಿಯಾದುದೆಂಥ ಕೆಂಡ
ಮಾನ್ಯೆ! ನೀನು ನೆಲಸಿರುವ ತಾಣದಲಿ
ಇಂದು ಕಾಂಬುದೇನು!
ಹುಲ್ಲು ಹಣಜಿ ಬರಿ ಮುಳ್ಳುಗಳ್ಳಿಗಳ
ಕಾಡು ನೆರಳು ತಾನು!"[೭೬]

ಎಂದು ಹಳಹಳಿಸುತ್ತಾರೆ. ಅಂತರಾಳದ ತಳಮಳವನ್ನು ಹೊರಹಾಕುತ್ತಾರೆ. ಇದು ಕನ್ನಡಿಗರ ಕಥೆ–ವ್ಯಥೆ. ಚೆನ್ನಮ್ಮನಂಥ ವೀರವನಿತೆಯರ ಸ್ಮಾರಕಗಳಿಗೆ ಇದೇ ದುಸ್ಥಿತಿ. ಚರಿತ್ರೆಯ ಬಗೆಗಿನ

ಪ್ರಜ್ಞೆ, ಅಭಿಮಾನವಿಲ್ಲದೆ ಹೋದರೆ ಹೀಗೆಯೇ ಆಗುತ್ತದೆ ಎಂದು ವಿಷಾದಿಸುತ್ತಾರೆ. ತಮಗಾದ ಸಂಕಟವನ್ನು ಕವಿ ಬಹಳ ನೋವಿನಿಂದ ತೋರ್ಪಡಿಸಿದ್ದಾರೆ.

**ಕಿತ್ತೂರು ಸಂಸ್ಥಾನ ಕುರಿತು ಚಾರಿತ್ರಿಕ ಹಸ್ತಪ್ರತಿಗಳು :**

ಬೆಳಗಾವಿ ಜಿಲ್ಲೆಯ ಕಿತ್ತೂರು ಸಂಸ್ಥಾನ ಇಡೀ ಭಾರತದ ಗಮನ ಸೆಳೆದ ಸಂಸ್ಥಾನವಾಗಿದೆ. ಬ್ರಿಟಿಷರ ವಿರುದ್ಧ ಬಂಡೆದ್ದ ಮೊದಲ ಸಂಸ್ಥಾನ ಎಂಬ ಕೀರ್ತಿ ಕಿತ್ತೂರು ಸಂಸ್ಥಾನದ್ದು. ಕಿತ್ತೂರಿನಲ್ಲಿ ಶಿಕ್ಷಕರಾಗಿದ್ದ ವೀರಪ್ಪ ವೀರಭದ್ರಪ್ಪ ನಾಗಶೆಟ್ಟಿ ಅವರು ಕಿತ್ತೂರು ಸಂಸ್ಥಾನದ ಮೇಲಿನ ಅಭಿಮಾನಕ್ಕಾಗಿ ಸಂಸ್ಥಾನಕ್ಕೆ ಸಂಬಂಧಿಸಿದ ಅನೇಕ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದರು. ೧೯೨೯ರಿಂದ ೧೯೫೦ರ ಮಧ್ಯದಲ್ಲಿ ಅವರು ಕೆಲವು ಕೃತಿಗಳನ್ನು ಲಿಪಿಕರಣ ಮಾಡಿಕೊಂಡಿದ್ದರು. ಅನೇಕ ವರ್ಷಗಳ ಅಜ್ಞಾತವಾಗಿದ್ದ ಈ ಹಸ್ತಪ್ರತಿಗಳನ್ನು ಶೋಧಿಸಿದವರು ಎಂ. ಎಂ. ಕಲಬುರ್ಗಿ ಅವರು. ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ. ೧, ೨ ಮತ್ತು ೩ ಭಾಗಗಳಲ್ಲಿ ಸಂಪಾದಿಸಿ, ಗದುಗಿನ ತೋಂಟದಾರ್ಯ ಸಂಸ್ಥಾನ ಮಠದ ಲಿಂಗಾಯತ ಅಧ್ಯಯನ ಸಂಸ್ಥೆಯಿಂದ ಪ್ರಕಟಿಸಿದ್ದಾರೆ. ಸಂಸ್ಥಾನ ಕುರಿತು ಕೆಲವು ಚಾರಿತ್ರಿಕ ಕಾವ್ಯಗಳ ವಿವರ ಹೀಗಿದೆ.

**೧. ಮಲ್ಲೇಂದ್ರ ಭಕ್ತಿ ತರಂಗಿಣಿ :**

ಕಿತ್ತೂರು ದೊರೆಯಾಗಿದ್ದ ವೀರಭದ್ರ ಬಹದ್ದೂರ್ ದೇಸಾಯಿಯ ಮಗ ಮಲ್ಲಸರ್ಜ ಅಧಿಕಾರಕ್ಕೆ ಬಂದ. ರುದ್ರಮ್ಮನೊಂದಿಗೆ ಅವನ ಮದುವೆಯಾಯಿತು. ಈ ದಂಪತಿಗಳಿಗೆ ಇಬ್ಬರು ಗಂಡು ಮಕ್ಕಳು. ಒಬ್ಬ ರುದ್ರಸರ್ಜ ಮತ್ತೊಬ್ಬ ಶಿವಲಿಂಗ ಸರ್ಜ. ಶಿವಲಿಂಗಸರ್ಜನ ಮದುವೆಯನ್ನು ಅದ್ದೂರಿಯಾಗಿ ಮಾಡಲಾಯಿತು. ಈ ಸಂದರ್ಭದ ಸವಿನೆನಪಿಗಾಗಿ ಕಿತ್ತೂರಿನಲ್ಲಿ ಬಸವಪುರಾಣ ಪ್ರವಚನ ಏರ್ಪಡಿಸಲಾಯಿತು. ಧಾರವಾಡದ ವೃಷಲಿಂಗಾರ್ಯ ಎಂಬ ಪ್ರವಚನಕಾರನಿಂದ ಕ್ರಿ.ಶ. ೧೮೦೩ರಲ್ಲಿ ಅರಮನೆಯಲ್ಲಿ ಬಸವಪುರಾಣ ಪ್ರಾರಂಭವಾಯಿತು. ಸುಮಾರು ನಾಲ್ಕೂವರೆ ತಿಂಗಳ ಕಾಲ ಈ ಪ್ರವಚನ ಕಾರ್ಯಕ್ರಮ ಜರುಗಿತು. ಆರೇಳು ಸಾವಿರ ಜಂಗಮರನ್ನು ಅರಮನೆಗೆ ಬರಮಾಡಿಕೊಂಡು ಅವರ ಪಾದಪೂಜೆ ಮಾಡಿ ಪ್ರಸಾದ ಕಾಣಿಕೆಗಳಿಂದ ಅವರ ಮನಸಂತೃಪ್ತಗೊಳಿಸಲಾಯಿತು. ಸಾವಿರಾರು ಮಹಿಳೆಯರನ್ನು ಸೀರೆ ಕುಪ್ಪಸಗಳಿಂದ, ಮಕ್ಕಳನ್ನು ಬಣ್ಣ-ಬಣ್ಣದ ಬಟ್ಟೆಗಳಿಂದ ತಣಿಸಿ 'ಬಸವೇಶೋಪಮ'ನಾಗಿ ಮಲ್ಲಸರ್ಜ ದೊರೆ ಶೋಭಿಸಿದ. ಮುಂದೆ ಚೈತ್ರಮಾಸದ ಶುಕ್ಲಪಕ್ಷ ಚತುರ್ದಶಿಯಂದು ಈ ಪುರಾಣ ಮಂಗಲಗೊಂಡಿತು. ಬಸವಪುರಾಣವನ್ನು ಕಿತ್ತೂರಿನಲ್ಲಿ ಮೆರವಣಿಗೆ ಮಾಡಲಾಯಿತು. ಕಲ್ಮಠದಲ್ಲಿರುವ ಗುರುಸಿದ್ದೇಶ್ವರರ ದರ್ಶನ ಆಶೀರ್ವಾದ ಪಡೆಯಲಾಯಿತು. ನಂತರ ನಾಡಿನ ಪ್ರಮುಖ ಧಾರ್ಮಿಕ ಕ್ಷೇತ್ರಗಳಾದ ದುರದುಂಡೀಶ್ವರ ಕ್ಷೇತ್ರ, ಗುರುಸಿದ್ಧೇಶ್ವರ ಕ್ಷೇತ್ರ, ಹೊಂಡದ ಬಸವೇಶ್ವರ ಕ್ಷೇತ್ರ, ನಂದಿಹಳ್ಳಿಯ ನಂದೀಶಕ್ಷೇತ್ರ, ಬೆಳವಡಿ ವೀರೇಶನ ಕ್ಷೇತ್ರ, ಕಾದರವಳ್ಳಿಯ ಶಿವಕ್ಷೇತ್ರ, ತೇರದಾಳ, ಇಂಗಳೇಶ್ವರ, ಬಾಗೇವಾಡಿ, ಯಡೂರ ವೀರಭದ್ರಕ್ಷೇತ್ರ, ಗೋಕರ್ಣ, ಹಂಪಿಯ ವೀರೂಪಾಕ್ಷ ಕ್ಷೇತ್ರ, ನಂಜನಗೂಡಿನ

ನಂಜುಂಡೇಶ್ವರ ಕ್ಷೇತ್ರ, ಶ್ರೀಶೈಲ ಕ್ಷೇತ್ರಗಳಲ್ಲಿ ಮಲ್ಲಸರ್ಜ ಗಣಾರಾಧನೆ ಏರ್ಪಡಿಸಿದ. ಇದು ಮಲ್ಲಸರ್ಜ ದೊರೆಯ ಭಕ್ತಿಯ ಪರಾಕಾಷ್ಠೆಯನ್ನು ಎತ್ತಿತೋರಿಸುತ್ತದೆ.

"ಬಸವ ಪುರಾಣ ಶ್ರವಣಸುಖವನಾ
ನುಸರಲಾರೆ ವಸುಮತಿಯೊಳಗೆ
ರಸಿಕರಸಾಧಿಪ ಮಲ್ಲಸರ್ಜನೋ
ದಿಸಿದನು ಶ್ರೀ ಕಿತ್ತೂರೊಳಗೆ."[೮೭]

ಎಂದು ಪ್ರಾರಂಭವಾಗುವ ಈ ಕೃತಿಯಲ್ಲಿ ಒಟ್ಟು ೩೧೪ ಕಂದಪದ್ಯಗಳಿವೆ. ಕವಿ ತನ್ನ ಹೆಸರನ್ನು ಎಲ್ಲಿಯೂ ಹೇಳಿಕೊಂಡಿಲ್ಲ. ಕರ್ತೃನಿರಪೇಕ್ಷ ಪ್ರಜ್ಞೆಯಿಂದ ಈ ಕಾವ್ಯವನ್ನು ರಚಿಸಿದಂತೆ ತೋರುತ್ತದೆ.

**ಮಲ್ಲೇಂದ್ರ ಪೂಜಾವಿಲಾಸ :**

ಈ ಕೃತಿಯ ಕರ್ತೃ ಕೂಡ ಅಜ್ಞಾತವಾಗಿದ್ದಾನೆ. ೧೬೫ ಪರಿವರ್ಧಿನಿ ಷಟ್ಪದಿಗಳಲ್ಲಿ ಈ ಕಾವ್ಯ ವಿಸ್ತಾರಗೊಂಡಿದೆ. ಜನಪ್ರಿಯ ಷಟ್ಪದಿಗಳಾದ ಭಾಮಿನಿ ಮತ್ತು ವಾರ್ಧಕವನ್ನು ಹೊರತುಪಡಿಸಿ ಪರಿವರ್ಧಿನಿ ಷಟ್ಪದಿಯಲ್ಲಿ ಕಾವ್ಯ ರಚಿಸಿದ್ದು ಕವಿಯ ಕಾವ್ಯ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿ ಎನ್ನಬೇಕು. ಪ್ರಾಯಶಃ 'ಮಲ್ಲೇಂದ್ರ ಭಕ್ತಿ ತರಂಗಿಣಿ'ಯನ್ನು ಬರೆದ ಕವಿಯೇ ಈ ಕೃತಿಯನ್ನು ಬರೆದಿರಬಹುದೆಂಬುದು ನನ್ನ ಬಲವಾದ ನಂಬಿಕೆಯಾಗಿದೆ. ಯಾಕೆಂದರೆ ಪೂಜಾ ವಿವರಗಳೆಲ್ಲ ಭಕ್ತಿ ತರಂಗಿಣಿಯಲ್ಲಿ ಬಂದ ರೀತಿಯಲ್ಲಿಯೇ ಇರುವುದರಿಂದ ಈ ಎರಡೂ ಕೃತಿಗಳ ಕವಿ ಒಬ್ಬನೇ ಆಗಿರಬಹುದು.

"ಜಂಬೂದ್ವೀಪ ಮಧ್ಯದ ಕುಂತಳದೇಶದಲ್ಲಿ ಕಿತ್ತೂರು ಗ್ರಾಮ ಒಪ್ಪುತ್ತಿದೆ. ಕಲ್ಯಾಣ ಪಟ್ಟಣದಲ್ಲಿರುವ ಜನಕಲ್ಯಾಣಕಾರ್ಯ ಕೈಕೊಂಡ ಶರಣರು ಬಿಜ್ಜಳನ ಸೈನ್ಯದಿಂದ ತಪ್ಪಿಸಿಕೊಂಡು ಬರುವ ಮಾರ್ಗದಲ್ಲಿ ನಂದೀಹಳ್ಳಿ, ರಣಗಟ್ಟಿ, ಉಳುವಿಗಳೊಂದಿಗೆ ಕಿತ್ತೂರನ್ನೂ ಶಿವ ಸ್ಥಾಪಿಸಿದ. ಇಲ್ಲಿಯ ಅರಸು ಮುದಿಮಲ್ಲಸರ್ಜ, ಇವನ ಮಗ ರುದ್ರಸರ್ಜ, ಇವನ ಮಗ ವೀರಭದ್ರ, ಇವನ ಮಗ ಮಲ್ಲಸರ್ಜ. ಇವನ ಹೆಂಡತಿ ರುದ್ರಾಂಬೆ ಉದರದಲ್ಲಿ ಶಿವಲಿಂಗಸರ್ಜ, ವೀರಸರ್ಜರೂ, ಚೆನ್ನಮ್ಮನ ಉದರದಲ್ಲಿ ರುದ್ರಸರ್ಜನೂ ಉದಯಿಸಿದರು. ಈ ಮಲ್ಲಸರ್ಜನ ಜಂಗಮಾರ್ಚನೆಯ ವರ್ಣನೆ ನನ್ನಂಥ ಸಾಮಾನ್ಯ ಕವಿಯಿಂದ ಸಾಧ್ಯವಿಲ್ಲ. ಹರಿಹರ, ಪದ್ಮರಸ, ರಾಘವಾಂಕ, ಮಲುಹಣ, ನಿಜಗುಣ ಶಿವಯೋಗಿ, ಷಡಕ್ಷರಿಗಳಿಗೆ ಮಾತ್ರ ಸಾಧ್ಯ ಎಂದು ಕವಿ ವಿನಮ್ರವಾಗಿ ಹೇಳಿಕೊಳ್ಳುತ್ತಾನೆ. ಶ್ರಾವಣ ಮಾಸದಲ್ಲಿ ದೇಶಿಕರನ್ನು ಬರಮಾಡಿಕೊಂಡು, ವೀರಸಂಗತಾತನೆಂಬ ಸಚಿವನ ಮೇಲ್ವಿಚಾರಣೆಯಲ್ಲಿ, ಮಡಿವಾಳ ಶಾಸ್ತ್ರಿಗಳ ನೇತೃತ್ವದಲ್ಲಿ ಪಾದಪೂಜೆ ಮಾಡುತ್ತಿದ್ದನು. ಫಲ, ಪತ್ರ, ಪುಷ್ಪ, ಧೂಪ, ದೀಪ, ಮಂತ್ರ, ಕೀರ್ತನೆ, ನೈವೇದ್ಯಗಳಿಂದ ಈ ಪೂಜೆ ಜರುಗುತ್ತಿದ್ದಿತು. ೧೪ ಕರ್ಯಾತಗಳಲ್ಲಿರುವ ೩೬೦ ಹಳ್ಳಿಗಳ ಪ್ರಜೆಗಳನ್ನು ಈ ಪೂಜೆಗೆ

ಬರಮಾಡಿಕೊಳ್ಳುತ್ತಿದ್ದನು. ದೇಶಿಕರನ್ನು ಗಜಮಸ್ತಕದಲ್ಲಿ ಕುಳ್ಳಿರಿಸಿ ಮೆರೆಸುತ್ತಿದ್ದನು. ಗುರುವಾರದಂದು ಗುರುವಾರಪೇಟೆಯಲ್ಲಿರುವ ಗುರುಸಿದ್ಧೇಶ್ವರನ ಸ್ಥಾನಕ್ಕೆ ಬಂದು ವಂದಿಸಿ, ಆಶೀರ್ವಾದ ಪಡೆದು ಅರಮನೆಗೆ ಮರಳುತ್ತಿದ್ದನು. ಶಾಲಿವಾಹನ ಶಕ ೧೭೨೭ (ಕ್ರಿ.ಶ.೧೮೦೫) ಕ್ರೋಧನ ಸಂವತ್ಸರ ಭಾದ್ರಪದ ಶುದ್ಧ ಚೌತಿಯ ಬುಧವಾರ (ಪ್ರಾಲೀಯಾಂಶುತನಯ ವಾರ)ದಲ್ಲಿ ಈ ಕೃತಿ ಸಮಾಪ್ತಿಯಾಯಿತು."[೮೮]

**ಮಲ್ಲೇಂದ್ರ ಪೂಜಾವಿಲಾಸ ತಾರಾವಳಿ :**

ವೀರಣ್ಣ ರಾಜೂರ ಅವರು ಸಂಪಾದಿಸಿರುವ ಸಮಗ್ರ ವೀರಶೈವ ತಾರಾವಳಿ ಸಂಪುಟದಲ್ಲಿ ಮೊದಲ ಬಾರಿಗೆ ಬೆಳಕು ಕಂಡಿದ್ದ ಈ ತಾರಾವಳಿಯನ್ನು ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ–೧ರಲ್ಲಿ ಕಲಬುರ್ಗಿ ಅವರು ಬಳಸಿಕೊಂಡಿದ್ದಾರೆ. ಪಂಪಾತೀರದ ಪಶ್ಚಿಮಕ್ಕಿರುವ, ಕಲ್ಯಾಣಪಟ್ಟಣಕ್ಕೆ ಮಿಗಿಲಾಗಿರುವ ಕಿತ್ತೂರು ರಾಜಧಾನಿಯಲ್ಲಿ ಶಮಶರಜಂಗ ಬಹದ್ದೂರ ಮಲ್ಲಸರ್ಜನು ಮೆರೆಯುತ್ತಿದ್ದನು. ಆತನು ಶ್ರಾವಣಮಾಸದಲ್ಲಿ ನೂರಾರು ಜಂಗಮರನ್ನು ಅರಮನೆಗೆ ಬರಮಾಡಿಕೊಂಡು ತನ್ನ ಪತ್ನಿ ರುದ್ರಾಂಬೆಯೊಂದಿಗೆ ಪಾದಪೂಜೆ ನೆರವೇರಿಸುತ್ತಿದ್ದನು. ನಂತರ ತಮ್ಮ ಸಂಸ್ಥಾನದ ರಾಜಗುರುಗಳಾದ ಕಲ್ಮಠದ ಗುರುಸಿದ್ಧೇಶ್ವರರ ದರ್ಶನ ಪಡೆದು, ಅರಮನೆಗೆ ಮರಳುತ್ತಿದ್ದನು. ೧೮ ಪದ್ಯಗಳಿಂದ ಕೂಡಿದ ಈ ಕೃತಿಯಲ್ಲಿ ಮಲ್ಲಸರ್ಜನ ಭಕ್ತಿ–ನಿಷ್ಠೆಯ ಜೊತೆಗೆ ಆ ಕಾಲದ ಧಾರ್ಮಿಕ ಆಚರಣೆಗಳನ್ನು ತುಂಬಾ ಅರ್ಥವತ್ತಾಗಿ ಬಣ್ಣಿಸಲಾಗಿದೆ.

**ಮಲ್ಲೇಂದ್ರ ಮಾಲಸೋಲ್ಲಾಸ :**

ಚೌಪದಿ ಸಾಂಗತ್ಯದಲ್ಲಿರುವ ಈ ಕೃತಿಯನ್ನು ಬರೆದವನು ಅಣ್ಣಿಗೆರೆ ಅಮೃತೇಶನ ಭಕ್ತನಾದ ಕಾಶೀರಾಜನೆಂಬ ಕವಿ. ತೃತೀಯೊಲ್ಲಾಸ ಅಪೂರ್ಣವಾಗಿರುವ ಈ ಕೃತಿಯಲ್ಲಿ ಮಲ್ಲಸರ್ಜ ದೊರೆಯ ರಾಜ್ಯಾಡಳಿತ ಮತ್ತು ಭಕ್ತಿನಿಷ್ಠೆಯನ್ನು ತುಂಬಾ ಅರ್ಥವತ್ತಾಗಿ ಬಣ್ಣಿಸಲಾಗಿದೆ. ಕವಿಯ ಕಲ್ಪನೆಯಲ್ಲಿ ಕೈಲಾಸದ ನಂದಿಯ ಅವತಾರವೆನಿಸಿದ ಬಸವೇಶ್ವರನೆ ಶಿವನ ಆಜ್ಞೆಯಿಂದ ಮಲ್ಲಸರ್ಜನಾಗಿ ಈ ಭೂಮಿಯಲ್ಲಿ ಮತ್ತೆ ಅವತರಿಸಿದನು. ಇವನ ರಾಜಧಾನಿ ಕಿತ್ತೂರು. ೧೪ ಕರ್ಯಾತಗಳನ್ನು ೧೪ ಲೋಕಗಳೆಂಬಂತೆ ಆಳುತ್ತಿದ್ದನು. ಇವನ ಸಚಿವ ವೀರಸಂಗಪ್ಪನು ಶಿವನಿಗೆ ನಂದಿಯಂತೆ, ಅಚ್ಯುತಗೆ ಉದ್ಧವನಂತೆ ನಡೆದುಕೊಳ್ಳುತ್ತಿದ್ದನು. ರಾಜನ ಬೇಕು–ಬೇಡಗಳಿಗೆ ತಕ್ಷಣ ಸ್ಪಂದಿಸುತ್ತಿದ್ದನು. ಮಲ್ಲಸರ್ಜನು ಮಹಾಶಿವಭಕ್ತನಾಗಿದ್ದ, ಶ್ರಾವಣ ಮಾಸದಲ್ಲಿ ಮಹಾಶಿವಪೂಜೆಯನ್ನು ನೆರವೇರಿಸುತ್ತಿದ್ದನು. ಗಣಾಧೀಶರನ್ನು ಆನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆ ಮಾಡಿಸುತ್ತಿದ್ದನು. ಈ ಎಲ್ಲ ಸಂಗತಿಗಳು ಇಲ್ಲಿ ತುಂಬಾ ಸ್ವಾರಸ್ಯವಾಗಿ ಮೂಡಿಬಂದಿವೆ.

**ಮಲ್ಲೇಂದ್ರ ವಿಜಯ :**

ಮಲ್ಲೇಂದ್ರ ವಿಜಯ ಕೃತಿಯ ಕರ್ತೃ ಯಾರೆಂಬುದು ತಿಳಿದಿಲ್ಲ. ೪೫ ವಾರ್ಧಕ ಷಟ್ಪದಿಗಳಿರುವ ಈ ಚಿಕ್ಕಕಾವ್ಯದಲ್ಲಿ ಕೆಲವು ಐತಿಹಾಸಿಕ ಮತ್ತು ಚಾರಿತ್ರಿಕ ಘಟನೆಗಳ ವಿವರಗಳಿವೆ. ಸಾಕ್ಷಾತ್

ಪರಶಿವನ ಅಪ್ಪಣೆಯಂತೆ ನಂದೀಶನ ಅವತಾರ ಎತ್ತಿದ ಶಮಶರಜಂಗ ಬಹದ್ದೂರ ಮಲ್ಲೇಂದ್ರನು ಕಿತ್ತೂರು ರಾಜ್ಯವನ್ನು ಆಳುತ್ತಿದ್ದನು. ದಕ್ಷಿಣ ದೇಶದ ದುಷ್ಟಭೂಪಾಲನು (ಟಿಪ್ಪು ಸುಲ್ತಾನ) ಚಿತ್ರದುರ್ಗ, ಧಾರವಾಡಗಳನ್ನು ಗೆದ್ದುಕೊಂಡು, ಕಿತ್ತೂರು ಸಂಸ್ಥಾನದ ಮೇಲೆ ದಾಳಿ ಮಾಡಿ, ಮಲ್ಲಸರ್ಜನನ್ನು ಬಂಧಿಸಿ ಶ್ರೀರಂಗಪಟ್ಟಣಕ್ಕೆ ಒಯ್ದು ಸೆರೆಯಲ್ಲಿಟ್ಟನು. ಗಂಡನಿಗಾಗಿ ರುದ್ರಾಂಬೆ ಸೋಮವಾರ ವ್ರತಹಿಡಿಯುತ್ತಾಳೆ. ಅಲ್ಲಿ ಮಲ್ಲಸರ್ಜನು ಏಳುಸುತ್ತಿನ ಕೋಟೆಯನ್ನು ಭೇದಿಸಿ, ಐನೂರು ಖಡ್ಗಪಾಣಿಗಳನ್ನು ಸೋಲಿಸಿ, ಮಡಿವಾಳಪ್ಪನೆಂಬನೊಡನೆ ಹೊರಹೊರಟನು. ಬೆನ್ನಟ್ಟಿದ ನಾಲ್ಕು ಸಾವಿರ ಸೈನಿಕರನ್ನು ಲೆಕ್ಕಿಸದೆ ಕಿತ್ತೂರಿಗೆ ಬಂದು, ಸತಿ ರುದ್ರಾಂಬೆಯನ್ನು ಕೂಡಿಕೊಳ್ಳುತ್ತಾನೆ. ಕೆಲವು ದಿನ ಗತಿಸುವಲ್ಲಿ ರುದ್ರಾಂಬೆ 'ನನ್ನ ಇಬ್ಬರು ಮಕ್ಕಳನ್ನು ನೀನು ಮಕ್ಕಳೆಂದು ಸಲಹು' ಎಂದು ಚೆನ್ನವ್ವನಿಗೆ ಹೇಳಿ ತೀರಿಕೊಂಡಳು. ಕಿತ್ತೂರು ಎಂಬುದು ಎರಡನೆಯ ಕಲ್ಯಾಣನಗರ ಎನಿಸಿತು. ಮಲ್ಲಸರ್ಜ ಬಸವೇಶ್ವರನಂತೆ ಕಂಗೊಳಿಸಿದನು. ಮುದಿಮಲ್ಲಸರ್ಜ, ರುದ್ರಸರ್ಜರ ಪುಣ್ಯಪುಂಜವೇ ಗಟ್ಟಿಗೊಂಡಂತೆ ವೀರಭದ್ರನೃಪತಿಗೆ ಹುಟ್ಟಿದ ಮಲ್ಲೇಂದ್ರನನ್ನು ಪ್ರಜೆಗಳು ಬಸವೇಶನೆಂದೇ ಭಾವಿಸಿ, ರಾಜಧಾನಿ ಕಿತ್ತೂರಿಗೆ ಬರುತ್ತಿದ್ದರು. ಶೂನ್ಯಪೀಠದ ಮೊದಲ ಅಧಿಪತಿ ಅಲ್ಲಮಪ್ರಭುವೇ ಕರಸ್ಥಲದ ಲಿಂಗವಾಗಿ ಮಲ್ಲೇಂದ್ರನಿಂದ ಪೂಜೆಗೊಳ್ಳುತ್ತಿದ್ದನು. ಚಿತ್ರದುರ್ಗ ಮುರುಘಾಮಠದ ಮುರುಗೇಶನ ಕರಕಮಲ ಸಂಭೂತ ಅರಭಾವಿ ದುರದುಂಡೇಶನ ಕೃಪೆ, ಮನೆದೈವ ಬೆಳವಡಿಯ ವೀರೇಶನ ಕರುಣೆ, ಕಿತ್ತೂರಿನ ಗುರುಸಿದ್ಧೇಶ್ವರನ ಆಶೀರ್ವಾದಗಳಿಂದ ಮಲ್ಲೇಂದ್ರ ರಾಜ್ಯವಾಳುತ್ತಲಿದ್ದನು. ವಾರ್ಧಕ ಷಟ್ಪದಿಯಲ್ಲಿ ಈ ಚಿಕ್ಕಕಾವ್ಯ ಅನೇಕ ಚಾರಿತ್ರಿಕ ಸಂಗತಿಗಳನ್ನು ತಿಳಿಸಿಕೊಡುತ್ತದೆ. ಟಿಪ್ಪು ಸುಲ್ತಾನ ಮಲ್ಲಸರ್ಜನನ್ನು ಬಂಧಿಸಿದ ವಿಷಯ ಕಾವ್ಯದ ಮೂಲಕ ತಿಳಿಸಿದ ಮೊದಲ ಕೃತಿ ಇದು.

**ಗಣೇಶೋತ್ಸವ :**

ಕರ್ನಾಟದಲ್ಲಿ ಗಣೇಶ ಚತುರ್ಥಿಯು ಬಾಲಗಂಗಾಧರ ಟಿಳಕರಿಂದ ಚಾಲನೆಗೆ ಬಂದಿತು ಎಂದು ಅನೇಕರು ಹೇಳುತ್ತಾರೆ. ಆದರೆ ಕಿತ್ತೂರು ಸಂಸ್ಥಾನದಲ್ಲಿ ಎರಡನೂರು ವರ್ಷಗಳ ಹಿಂದೆಯೇ ಗಣೇಶ ಉತ್ಸವವನ್ನು ಆಚರಿಸುತ್ತಿದ್ದ ಬಗ್ಗೆ ಒಂದು ಚಾರಿತ್ರಿಕ ವಿಷಯ ತಿಳಿಸುವ ಚಿಕ್ಕಕಾವ್ಯ 'ಗಣೇಶೋತ್ಸವ'. ೩೩ ಕಂದಪದ್ಯಗಳಿಂದ ಕೂಡಿರುವ ಈ ಚಿಕ್ಕ ಕೃತಿಯಲ್ಲಿ ಭಾದ್ರಪದ ಶುದ್ಧ ಚತುರ್ಥಿಯಂದು ಕಿತ್ತೂರು ಅರಮನೆಯಲ್ಲಿ ಅತ್ಯಂತ ಅದ್ದೂರಿಯಿಂದ ಭಕ್ತಿ ಸಡಗರಗಳಿಂದ ಗಣೇಶೋತ್ಸವ ಆಚರಿಸುತ್ತಿದ್ದರು. ಸಿದ್ಧಿವಿನಾಯಕ ಪೂಜೆಯಿಂದ ಸಕಲ ಸಮೃದ್ಧಿಯಾಗುವುದೆಂದು ತಿಳಿದು ಸೋಮವಾರಪೇಟೆಯಿಂದ ಗಣೇಶನನ್ನು ಮೆರವಣಿಗೆಯಲ್ಲಿ ತಂದು ಅರಮನೆಯಲ್ಲಿ ಸ್ಥಾಪಿಸಿ, ೧೩ ದಿನಗಳವರೆಗೆ ಪೂಜೆ ಸಲ್ಲಿಸುತ್ತಿದ್ದರು. ವಾದ್ಯಘೋಷ, ಪೂಜೆ, ಸಂಗೀತ, ನರ್ತನಗಳು ಜರುಗಿದ, ಕೊನೆಯ ದಿನ ರಣಗಟ್ಟಿ ಕೆರೆಯಲ್ಲಿ ಗಂಗೆಗೆ ಅರ್ಪಿಸುತ್ತಿದ್ದರು.

**ಮಲ್ಲಸರ್ಜನ ಪದಗಳು :**

ಈ ಕೃತಿಯನ್ನು ಅಣ್ಣಿಗೆರೆ ಅಮೃತೇಶನ ಭಕ್ತ ಕಾಶೀರಾಜ ರಚಿಸಿದ್ದಾನೆ. ಇಲ್ಲಿ ಒಟ್ಟು ೨೮ ಪದಗಳ ಸಂಗ್ರಹವಿದೆ. ಅವುಳಲ್ಲಿ ೧೮ ಕನ್ನಡ ಪದಗಳು, ೧೦ ಮರಾಠಿ ಪದಗಳಿವೆ. ಇದರ ಕರ್ತೃ ಕಾಶೀರಾಜ ಕನ್ನಡ–ಮರಾಠಿ ಉಭಯ ಭಾಷಾ ಬಲ್ಲಿದವನಾಗಿದ್ದನೆಂದು ತಿಳಿದುಬರುತ್ತದೆ. ಇಲ್ಲಿಯ ಪ್ರತಿಯೊಂದು ಪದಗಳಿಗೆ ರಾಗ ನಿರ್ದೇಶನವಿದೆ. ಪ್ರಧಾನವಾಗಿ ಮಲ್ಲಸರ್ಜನ ಕುರಿತು ಶೃಂಗಾರನಿಷ್ಠ ಪದಗಳು ಇವಾಗಿದ್ದರೂ ಅಲ್ಲಲ್ಲಿ ಭಕ್ತಿಪ್ರದ ಹಾಡುಗಳು ಇರುವುದನ್ನು ಗಮನಿಸಬಹುದು.

ಮೇಲಿನ ಏಳು ಕಾವ್ಯಗಳು ಅಪ್ರಕಟಿತ ಮತ್ತು ಕಿತ್ತೂರು ಯುದ್ಧ ನಡೆಯುವ ಮೊದಲೆ ರಚನೆಗೊಂಡಿರುವ ಸಾಧ್ಯತೆಗಳಿವೆ. ಹೀಗಾಗಿ ಇಲ್ಲಿ ಎಲ್ಲಿಯೂ ಕಿತ್ತೂರು ಬಂಡಾಯದ ವಿಷಯವೇ ಪ್ರಸ್ತಾಪವಾಗುವುದಿಲ್ಲ.

**ಈರಪ್ಪ ದೇಸಾಯಿ ಕಾವ್ಯ :**

ಇದೊಂದು ಜಾನಪದ ಹಾಡು. ಇದನ್ನು ಹಳ್ಳಿಹಳ್ಳಿಗಳಲ್ಲಿ ಹಾಡುತ್ತಿದ್ದರು. ಬೆಳವಡಿಯಲ್ಲಿ ಮಲ್ಲಮ್ಮ ಪೂಜೇರಿ ಎಂಬುವಳು ಈ ಹಾಡನ್ನು ಹಾಡುತ್ತಿದ್ದಳು. ಇದೇ ಹಾಡನ್ನು ಮರಕುಂಬಿ ಹಿರೇಕೊಪ್ಪದಲ್ಲಿ ಹೆಣ್ಣುಮಕ್ಕಳು ಹಾಡುತ್ತಿದ್ದರು. ಈ ಹಾಡುಗಳನ್ನು ದೊಡ್ಡಭಾವೆಪ್ಪ ಮೂಗಿ ಅವರು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಗೋಕಾಕ ತಡಸಲದ ಮೇಲೆ ಮಹಾಲಿಂಗೇಶ್ವರನ ಸಣ್ಣ ಗುಡಿಯೊಂದು ಉತ್ತರ ಮುಖವಾಗಿ ಇದೆ. ಈರಪ್ಪ ದೇಸಾಯಿಗೂ ಪಟವರ್ಧನಿಗೂ ಇದೇ ಜಾಗದಲ್ಲಿ ಯುದ್ಧ ನಡೆದಿದೆ. ಆದ್ದರಿಂದ ಈ ಪದ್ಯ ಸಣ್ಣ ಸಣ್ಣ ಗಡಿಯ । ಸಣ್ಣ ಮಹಾಲಿಂಗಪ್ಪ' ಎಂಬ ಪಲ್ಲವಿಯಿಂದ ಆರಂಭವಾಗುತ್ತದೆ.

ಈರಪ್ಪ (ವೀರಭದ್ರ)ದೇಸಾಯಿ ಕಿತ್ತೂರ ದೊರೆಯಾಗಿದ್ದ ಮಲ್ಲಸರ್ಜನ ತಂದೆ. ಕ್ರಿ.ಶ. ೧೭೪೯ ರಿಂದ ೧೭೮೨ರ ವರೆಗೆ ಅಂದರೆ ೩೩ ವರ್ಷ ಕಿತ್ತೂರು ಸಂಸ್ಥಾನದ ಅಧಿಪತಿಯಾಗಿದ್ದನು. ಶೌರ್ಯ, ಸಾಹಸಗಳಿಗಾಗಿ ಖ್ಯಾತಿ ಪಡೆದಿದ್ದನು. ತನ್ನ ಸಂಸ್ಥಾನವನ್ನು ವಿಸ್ತಾರಗೊಳಿಸಿದನು. ತಾಸಗಾಂವದ ಪಟವರ್ಧನನ ವಶದಲ್ಲಿದ್ದ ಪರಸಗಡ, ಶಹಾಪೂರ, ಗೋಕಾಕ ತಾಲೂಕುಗಳನ್ನು ಗೆದ್ದುಕೊಂಡನು. ಮುಂದೆ ಪರಶುರಾಮಭಾವು ಪಟವರ್ಧನ ಎಂಬುವನು ಈರಪ್ಪ ದೇಸಾಯಿಯನ್ನು ಗೋಕಾಕ ಕಾಳಗದಲ್ಲಿ ಸೋಲಿಸಿ, ಅವನನ್ನು ಸೆರೆ ಹಿಡಿದುಕೊಂಡು ಹೋಗಿ, ಮಿರಜಿಯಲ್ಲಿ ವಿಷಹಾಕಿ ಕೊಂದ ಸಂಗತಿ ಈ ಪದ್ಯದಲ್ಲಿ ಬಂದಿದೆ.

**ಮಲ್ಲಸರ್ಜ ಕಾವ್ಯ :**

ಈ ಕಾವ್ಯದ ಕರ್ತೃವಿನ ಹೆಸರು ತಿಳಿದುಬಂದಿಲ್ಲವೆಂದು ಕಲಬುರ್ಗಿ ಅವರು ಹೇಳಿದ್ದಾರೆ. ಆದರೆ ಈ ಕೃತಿಯ ಇನ್ನೊಂದು ಹಸ್ತಪ್ರತಿಯ ಕೊನೆಯಲ್ಲಿ ಒಂದು ಪದ್ಯ ಇದೆ.

"ಧರಣಿಯೊಳಗೆ ಮಲ್ಲಸರ್ಜನೆ ಶ್ರೇಷ್ಠ
ಬರೆದು ಹೇಳಿದ ಶೀಗೀಹಳ್ಳಿಯ ಶೆಟ್ಟಿ
ನಿರಂಜನಪ್ಪ ಹೃದಯದಿ ಹುಟ್ಟಿ
ಬರೆದು ಹಾಕಿರಿ ಪ್ರಾಸ ಇದ್ದರ ಕೊಟ್ಟಿ."೪೯

ಈ ಕೊನೆಯ ಪದ್ಯ ಗಮನಿಸಿದರೆ ಕಿತ್ತೂರು ಸಮೀಪವಿರುವ ಸೀಗೀಹಳ್ಳಿ ಗ್ರಾಮದ ನಿರಂಜಪ್ಪ ಶೆಟ್ಟಿ ಎನ್ನುವನು ಈ ಕಾವ್ಯವನ್ನು ಬರೆದನೆಂದು ಹೇಳಬಹುದಾಗಿದೆ. ೧೭೯ ಕಂದ ಪದ್ಯಗಳಿಂದು ಕೂಡಿರುವ ಈ ಕೃತಿ ಒಂದು ಅದ್ಭುತ ಚಾರಿತ್ರಿಕ ಕಾವ್ಯವಾಗಿದೆ. ಈ ಕಾವ್ಯದಲ್ಲಿ ಬರುವ ವಿಷಯವನ್ನು ಹೀಗೆ ಗಮನಿಸಬಹುದು.

ಮಲ್ಲಸರ್ಜ ದೊರೆಯ ಖ್ಯಾತಿಯನ್ನು ಕೇಳಿದ ಪುಣೆಯ ಬಾಜೀರಾವ್ ಪೇಶ್ವೆ ಸಂಡೂರಿನ ಕಾರ್ತಿಕಸ್ವಾಮಿ ದರ್ಶನದ ನೆಪಮಾಡಿಕೊಂಡು, ತನ್ನ ಕಾರಭಾರಿ ಮಾಣಿಕೇಶ್ವರನ ಜೊತೆ ದಂಡುಸಹಿತ ಪ್ರಯಾಣ ಬೆಳೆಸಿದನು. ಪೇಶ್ವೆಗಳು ಬರುವ ವಿಷಯ ತಿಳಿದು ಪಟವರ್ಧನರೂ, ರಾಸ್ತೆ ಮಾಧವರಾಯ, ಚಿಂತಾಮಣಿರಾಯ, ನಿಪ್ಪಾಣಿ ದೇಸಾಯಿ ಮೊದಲಾದವರು ದಂಡು ಸೇರಿಕೊಂಡರು. ನಣದಿ ಗ್ರಾಮದ ಹಳ್ಳಕ್ಕೆ ದಂಡ ಬಂದು ವಸತಿ ಮಾಡಿತು. ನಣದಿಯ ಅಪ್ಪಾಸಾಹೇಬ ಪೇಶ್ವೆಗೆ ಕಪ್ಪಕಾಣಿಕೆ ನೀಡಿದನು. ಎಲ್ಲರೂ ಒಂದಾಗಿ ಘೋಡಗೇರಿ ಮಾರ್ಗವಾಗಿ ಬೈಲಹೊಂಗಲಕ್ಕೆ ಬಂದರು. ಅಲ್ಲಿಂದ ಸಂಡೂರಿಗೆ ಹೋಗಿ ಕಾರ್ತಿಕಸ್ವಾಮಿ ದರ್ಶನ ಪಡೆದುಕೊಂಡು ಹಂಪಸಾಗರ, ಕಡೂರ, ಕಂಪಲಿ, ಕನಕಗಿರಿ, ಹೊಸಪೇಟೆ, ಬಾಗಲಕೋಟೆ, ಬಾದಾಮಿ, ಬೂದಿಹಾಳ ಮೂಲಕ ಗುರ್ಲಹೊಸೂರಕ್ಕೆ ಬಂದನು. ಪೇಶ್ವೆ ಬಂದ ವಿಷಯ ತಿಳಿದ ಮಲ್ಲಸರ್ಜನು ಬಾಜಿರಾಯನಿಗೆ ಗೌರವ ಸಲ್ಲಿಸಬೇಕೆಂದು ಅತ್ತೆ ನೀಲವ್ವಗೆ ವಂದಿಸಿ, ಹಿರಿಯ ಮಗ ಬಾಪೂಸಾಹೇಬನಿಗೆ ರಾಜ್ಯದ ಕಡೆಗೆ ಗಮನ ಕೊಡಲು ತಿಳಿಸಿ, ತನ್ನ ನಡುವಿನ ಮಗ ವೀರಪ್ಪನನ್ನು ಕರೆದುಕೊಂಡು ಹೊಂಗಲದತ್ತ ಮಲ್ಲಸರ್ಜ ಹೊರಟ. ಮಧ್ಯದಲ್ಲಿ ಪೇಶ್ವೆ ದಂಡು ಮಲ್ಲಸರ್ಜನಿಗೆ ಭೇಟಿಯಾಯಿತು. ಆದರೆ ಬಾಜಿರಾಯನೇ ಭೇಟಿಯಾಗಲಿಲ್ಲ. ಬಾಜಿರಾಯ ಬೆಳಗಾವಿ ಎಡೂರ ದಾಟಿ ಪುಣೆಯ ಕಡೆಗೆ ಹೋಗಿದ್ದ. ಮಾರ್ಗಮಧ್ಯದಲ್ಲಿ ಶೇಗುಣಸಿ ಅಲ್ಲಪ್ಪಗೌಡ ಬಾಜೀರಾನಿಗೆ ಭೇಟಿಯಾಗಿ ಮಲ್ಲಸರ್ಜನ ಬಗ್ಗೆ ಇಲ್ಲ ಸಲ್ಲದ ಚಾಡಿ ಹೇಳಿದ. ಚಾಡಿ ಮಾತು ಕೇಳಿದ ಬಾಜಿರಾಯ ೪ ಲಕ್ಷರೂಪಾಯಿ ಕಪ್ಪಕಾಣಿಕೆಯ ಬಾಕಿ ತೋರಿಸಿ, ಮಲ್ಲಸರ್ಜನನ್ನು ಸೆರೆಹಿಡಿದು ಪುಣೆಯ ಮುಧೋಳಕರ ಮನೆಯಲ್ಲಿ ಬಂಧಿಸಿಟ್ಟನು.

ಇತ್ತ ಚಾಡಿ ಹೇಳಿದ ಅಲ್ಲಪ್ಪಗೌಡ ಶೇಗುಣಸಿ ಬರುವಾಗ ಗಂಡಮಾಲೆ ಹುಣ್ಣು ಹುಟ್ಟಿ ಮನೆಗೆ ಬರುತ್ತಲೇ ತೀರಿಕೊಂಡ. ಪುಣೆಯಲ್ಲಿ ಬಾಜಿರಾಯನಿಗೂ ಮಲ್ಲಸರ್ಜನಿಗೂ ಭೇಟಿಯಾಗಲೇ ಇಲ್ಲ. ಚಾಡಿ ಮಾತುಗಳಿಗೆ ಕಿವಿಗೊಟ್ಟ ಬಾಜಿರಾಯ ನಿಷ್ಕಾರಣವಾಗಿ ಮಲ್ಲಸರ್ಜನನ್ನು ಶಿಕ್ಷೆಯಲ್ಲಿಟ್ಟ. ಸೆರೆಯಲ್ಲಿದ್ದ ವಿಷಯ ತಿಳಿದ ಮಲ್ಲಸರ್ಜನನ ಅತ್ತೆ ನೀಲವ್ವ ಮಾನಸಿಕವಾಗಿ ನೊಂದು

ತೀರಿಕೊಂಡಳು. ಸೆರೆಮನೆಯಲ್ಲಿ ಸೊರಗಿ ಸಾಯುವ ಸ್ಥಿತಿಗೆ ಮಲ್ಲಸರ್ಜ ಬಂದ. ತನ್ನ ಉತ್ತರಾಧಿಕಾರವನ್ನು ಬಾಪೂಸಾಹೇಬನಿಗೆ ಬರೆದುಕೊಟ್ಟು, ಅವನ ತಮ್ಮಂದಿರಿಗೆ ತಿಗಡಿ, ಹೊಂಗಲ ಕೊಟ್ಟ ಬಗ್ಗೆ ಮೃತ್ಯುಪತ್ರ ಬರೆದು ರಾಮಲಿಂಗಪ್ಪನ ಜೊತೆಗೆ ಕಿತ್ತೂರಿಗೆ ಕಳಿಸಿದ. ಇದನ್ನು ನೋಡಿ ಅರಸು ಪರಿವಾರದವರು ಪುಣೆಗೆ ಧಾವಿಸಿ ಬಂದರು. ಮಲ್ಲಸರ್ಜನ ಆರೋಗ್ಯ ಸ್ಥಿತಿ ಗಮನಿಸಿದ ಬಾಜೀರಾಯ ಮಲ್ಲಸರ್ಜನನ್ನು ಬಿಡುಗಡೆ ಮಾಡಿದನು. ಮಲ್ಲಸರ್ಜನನ್ನು ಮೇಣೆಯಲ್ಲಿ ಕುಳ್ಳಿರಿಸಿಕೊಂಡು ಬರುವಾಗ ಅರಭಾವಿಗೆ ದುರದುಂಡೀಶ್ವರ ಸನ್ನಿಧಿಗೆ ಕರೆದುಕೊಂಡು ಬಂದರು. ಅಷ್ಟರಲ್ಲಿ ಮಲ್ಲಸರ್ಜನ ಮೂರು ಜನ ಮಕ್ಕಳು ಬಂದು ಸೇರಿಕೊಂಡರು. ನಂತರ ಕಿತ್ತೂರಿಗೆ ಕರೆದುಕೊಂಡು ಬಂದರು. ಬೆಳಗಿನ ಜಾವ ಮಲ್ಲಸರ್ಜ ಪ್ರಾಣಬಿಟ್ಟ, ಶವ ಸಿಂಗರಿಸಿದರು. ಕಲ್ಲುಮಠದ ಸ್ವಾಮಿಗಳು ಬಂದು ದುಃಖಿತರಿಗೆ ಸಾಂತ್ವನ ಹೇಳಿದರು. ದುಃಖದಿಂದ ಚೆನ್ನಮ್ಮ ಆರತಿ ಬೆಳಗಿದಳು. ಬಾಳಾಸಾಹೇಬನ ಮದುವೆ ಮಾಡದೆ ತೀರಿಕೊಂಡದ್ದನ್ನು ನೆನೆದು ಅತ್ತಳು. ಸೊಲ್ಲಾಪುರದಿಂದ ಸೊಸೆ ಗೊತ್ತುಮಾಡಿ, ಮಾರ್ಗಶಿರ ಮಾಸದಲ್ಲಿ ಮದುವೆ ಜರುಗದೇ ಹೋದದ್ದನ್ನು ನೆನೆದು ದುಃಖಿಸಿದಳು. ವಂಟಮುರಿ ದೇಸಾಯರ ಸಮ್ಮುಖದಲ್ಲಿ ಬಾಬಾಸಾಹೇಬನಿಗೆ ಹೊಂಗಲ, ಬಾಳಾಸಾಹೇಬನಿಗೆ ತಿಗಡಿ, ಬಾಪೂಸಾಹೇಬನಿಗೆ ನೇರ ವಾರಸುದಾರಿಕೆ ನಿರ್ದಿಷ್ಟಪಡಿಸಿ, ತನ್ನ ಕೈಯಿಂದ ರಾಜಮುದ್ರೆ ಹಾಕಿಸಿದುದನ್ನು ನೆನೆದು ಅತ್ತಳು. ಏಳು ಉಪ್ಪರಿಗೆ ವಿಮಾನದಲ್ಲಿ ಶವವನ್ನು ಕುಳ್ಳಿರಿಸಿ, ಕಲ್ಲುಮಠದಲ್ಲಿ ಸಮಾಧಿಗೊಳಿಸಿದರು. ಈ ವಿಷಯವನ್ನು ಗುರು ಶಾಂತವೀರರು ಹೇಳಿದರು. ಅದನ್ನು ಶಿಷ್ಯ ಶೀಗಿಹಳ್ಳಿಯ ನಿರಂಜಪ್ಪ ಶೆಟ್ಟಿ ಕಾವ್ಯವಾಗಿಸಿದನು.

**ಕಿತ್ತೂರ ಮಲ್ಲಸರ್ಜನ ಲಾವಣಿ :**

ಇದೊಂದು ೫೫ ಚೌಕಗಳ ಸುದೀರ್ಘ ಲಾವಣಿಯಾಗಿದೆ. ಈ ಲಾವಣಿಯನ್ನು ರುದ್ರಕವಿ ಬರೆದಿದ್ದಾನೆ. ಮೇಲೆ ಉಲ್ಲೇಖಿಸಿದ ಮಲ್ಲಸರ್ಜ ಕಾವ್ಯದ ಘಟನೆಗಳನ್ನು ಪ್ರಸ್ತಾಪಿಸಿ, ಅದರ ನಂತರ ನಡೆದ ಘಟನೆಗಳನ್ನು ಈ ಲಾವಣಿ ಹೇಳುವುದರಿಂದ, ಇದು ಅಪರೂಪದ ಚಾರಿತ್ರಿಕ ಲಾವಣಿಯಾಗಿದೆ.

ಮಲ್ಲಸರ್ಜನ ಸಮಾಧಿಕಾರ್ಯವನ್ನು ಮುಗಿಸಿ ಎಲ್ಲರೂ ಅರಮನೆಗೆ ಬಂದರು. ಚೆನ್ನಮ್ಮ ಬಾಪುಸಾಹೇಬನನ್ನು ಪಟ್ಟಕ್ಕೆ ಕುಳ್ಳಿರಿಸಿ ರಾಜ್ಯಕಾರ್ಯ ಮುಂದುವರಿಸಿದಳು. ಅಷ್ಟರಲ್ಲಿ ಬ್ರಿಟಿಷರು ಸಮಸ್ತ ಭಾರತವನ್ನು ತಮ್ಮ ಕೈಗೆ ತೆಗೆದುಕೊಂಡಿದ್ದರು. ಜಾನ್ ಮಂಡೇಲ್ ಸಾಹೇಬ ಬೆಳವಡಿಯಲ್ಲಿ ವಾಸ್ತವ್ಯ ಮಾಡಿದಾಗ, ಬಾಪೂಸಾಹೇಬ ಅವನನ್ನು ಭೇಟಿಯಾಗಿ ನಜರಾಣಿ ಸಲ್ಲುಸುತ್ತ ಆಳುವುದಕ್ಕೆ ಒಪ್ಪಿಕೊಂಡನು. ಏಳುವರ್ಷ ಬಾಪೂಸಾಹೇಬ ರಾಜ್ಯವನ್ನು ಮುನ್ನಡೆಸಿದನು. ಅಷ್ಟರಲ್ಲಿ ನಡುವಿನ ಮಗ ಬಾಬಾಸಾಹೇಬ ರೋಗ ಉಲ್ಬಣಿಸಿ ನಿಧನನಾದನು. ನಂತರ ಚನ್ನವ್ವನ ಮಗ ಬಾಳಾಸಾಹೇಬನೂ ಮಡಿದನು. ಕೆಲವು ದಿನಗಳಲ್ಲಿ ಹಿರಿಯ ಮಗ ಬಾಪೂರಾಯನು ವಿಧಿಯ ಬಾಯಿಗೆ ತುತ್ತಾದನು. ಕಿತ್ತೂರು ಸಂಸ್ಥಾನಕ್ಕೆ ಗಂಡು ವಾರಸದಾರರು ಯಾರೂ

ಇಲ್ಲವಾದರು. ಆಗ ಚೆನ್ನಮ್ಮ ತಾನೇ ರಾಜ್ಯಭಾರ ಕೈಗೆತ್ತಿಕೊಂಡಳು. ಇದರಿಂದ ಅತ್ತೆ ಸೊಸೆ (ವೀರವ್ವ)ಯರಲ್ಲಿ ಮನಸ್ತಾಪ ಹುಟ್ಟಿತು. ಅಪುತ್ರಕ ರಾಜ್ಯವನ್ನು ನುಂಗಲು ಬ್ರಿಟಿಷರು ಹೊಂಚುಹಾಕಿ 'ರಾಜ್ಯವನ್ನು ನಾವು ಆಳುತ್ತೇವೆ. ಅರಸು ಮನೆತನದವರು ಉಂಬಳಿ ಪಡೆದು ಸುಖವಾಗಿರಿ' ಎಂದು ತಿಳಿಸಿದರು. ಚೆನ್ನಮ್ಮ ಸರದಾರ ಅವರಾದಿ ವೀರಪ್ಪ ಮೊದಲಾದವರೊಂದಿಗೆ ಸಮಾಲೋಚಿಸಿ, ಬ್ರಿಟಿಷರ ಮಾತನ್ನು ನಿರಾಕರಿಸಿದಳು. ಇದರಿಂದ ಬ್ರಿಟಿಷರು ಕಿತ್ತೂರು ಮುತ್ತಿಗೆ ಹಾಕಿದರು. ಕಿತ್ತೂರು ಸೈನ್ಯದ ಎದುರು ಬ್ರಿಟಿಷ ಸೈನ್ಯ ಹೆದರಿ ಓಡಿ ಹೋಯಿತು. ಈ ಸುದ್ದಿ ಮುಂಬೈಗೆ ತಲುಪಿತು. ಆಂಗ್ಲ ಸೈನ್ಯ ಬೃಹತ್ ಪ್ರಮಾಣದಲ್ಲಿ ಕಿತ್ತೂರಿಗೆ ಬಂದು, ಕೋಟೆಯನ್ನು ಕೆಡವಿ ಅರಮನೆಯನ್ನು ಪ್ರವೇಶಿಸಿತು. ಅತ್ತೆ ಚೆನ್ನಮ್ಮ, ಸೊಸೆ ವೀರಮ್ಮನನ್ನು ಬೈಲಹೊಂಗಲದ ಸೆರೆಯಲ್ಲಿಟ್ಟರು. ಅರಮನೆಯ ಸಂಪತ್ತನ್ನು ತಿಂಗಳಾನುಗಟ್ಟಲೆ ಬೆಳಗಾವಿಗೆ ಸಾಗಿಸಿದರು. ಬ್ರಿಟಿಷರು ಕಿತ್ತೂರು ರಾಜ್ಯವನ್ನು ತಾಲೂಕು, ಮಹಲುಗಳೆಂದು ವಿಭಾಗಿಸಿ, ಮಹಲ್ಕರಿ ಅಮಲ್ದಾರ್ ನೇಮಿಸಿ ಆಳತೊಡಗಿದರು. ಇತ್ತ ಬೈಲಹೊಂಗಲದ ಅರಮನೆಯಲ್ಲಿ ಸೆರೆಯಾಳಾಗಿ ಅತ್ತೆ ಸೊಸೆಯರು ೬ ವರ್ಷ ಕಳೆದರು. ನಂತರ ವೀರಮ್ಮನನ್ನು ಧಾರವಾಡಕ್ಕೆ, ಅಲ್ಲಿಂದ ಕುಸುಗಲ್ಲಿಗೆ ಸಾಗಿಸಿದರು. ಇತ್ತ ಕುರುಬ ರಾಯಣ್ಣ ಚೆನ್ನಮ್ಮನ ಈ ಹೋರಾಟವನ್ನು ಮುಂದುವರೆಸಿದನು.

೯೩ ಪದ್ಯಗಳನ್ನು ಒಳಗೊಂಡ ಈ ಸುದೀರ್ಘ ಕಾವ್ಯವನ್ನು ಕೊನೆಯಲ್ಲಿ ಮಲ್ಲಸರ್ಜನ ದುಂದುಮಿ ಎಂದು ಕರೆಯಲಾಗಿದೆ.

**ಶಿವಲಿಂಗರುದ್ರಸರ್ಜ ಸೋಬಾನ ಪದ :**

ಶಿವಲಿಂಗರುದ್ರಸರ್ಜನು ದೊರೆ ಮಲ್ಲಸರ್ಜನನ ಮಗ. ೧೮೧೩ರಲ್ಲಿ ೨ನೆಯ ಬಾಜೀರಾಯನು ಸೊಂಡೂರಿನ ಕಾರ್ತಿಕಸ್ವಾಮಿಯ ದರ್ಶನ ತೆಗೆದುಕೊಂಡು ಮರಳಿ ಬೈಲಹೊಂಗಲಕ್ಕೆ ಬಂದು, ಮಲ್ಲಸರ್ಜನನ್ನು ಕರೆಸಿಕೊಂಡು ಪುಣೆಗೆ ಕರೆದುಕೊಂಡು ಹೋಗಿ, ಅಲ್ಲಿಯೇ ಅವನ ಮೇಲೆ ಕಾವಲಿಟ್ಟನು. ಮುಧೋಳಕರ ವಾಡೆಯಲ್ಲಿ ಮಲ್ಲಸರ್ಜನು ೩ ದಿನ ಕಳೆದನು. ಕಡೆಗೆ ಬಹಳ ಕೃಶನಾದ ಕಾರಣ ಪೇಶ್ವೆ ಮರಳಿ ಕಿತ್ತೂರಿಗೆ ಕಳಿಸುವ ಏರ್ಪಾಡು ಮಾಡಿದನು. ಆದರೆ ಬರುವಾಗ ದಾರಿಯಲ್ಲಿಯೇ ಮಲ್ಲಸರ್ಜ ಮರಣ ಹೊಂದಿದನು. ಮಲ್ಲಸರ್ಜನ ನಂತರ ಶಿವಲಿಂಗ ರುದ್ರಸರ್ಜ (ಬಾಪೂರಾಯ)ನು ಅಧಿಪತಿಯಾದನು. ಇವನು ಲಿಂಗಪೂಜಾ ನಿಷ್ಠನಾಗಿದ್ದನು. ಇವನು ಸಂಸ್ಕೃತ ಭಾಷೆಯಲ್ಲಿ ಪಾಂಡಿತ್ಯವನ್ನು ಗಳಿಸಿದ್ದನು. ಇವನು ಮೂರು ಗ್ರಂಥಗಳನ್ನು ರಚಿಸಿದ್ದಾನೆಂಬ ಪ್ರತೀತಿ ಇದೆ. ಆದರೆ ಅವು ಇಂದು ಉಪಲಬ್ಧವಿಲ್ಲ. ಶಿವಲಿಂಗ ರುದ್ರಸರ್ಜನನ್ನು ಬೇಟೆಗೆ ಕರೆದುಕೊಂಡು ಹೋಗಿ ಥ್ಯಾಕರೆಯು ವಿಷಪಾನ ಮಾಡಿಸಿದ ಸಂಗತಿಯು ಈ ಸೋಬಾನ ಪದದಲ್ಲಿ ಬಂದಿದೆ. ಶಿವಲಿಂಗ ರುದ್ರಸರ್ಜನ ಹೆಂಡತಿ ವೀರಮ್ಮ ರಾಣಿಯು ಹೈದರಾಬಾದ ಸಮೀಪದಲ್ಲಿದ್ದ ಶಮಶೇದಾಬಾದದ ಸಣ್ಣ ಸಂಸ್ಥಾನಿಕನ ಮಗಳು. ಆಕೆಯ ಪತಿನಿಷ್ಠೆ ಹಾಗೂ ಸೌಂದರ್ಯದ ವರ್ಣನೆಯು ಈ ಪದ್ಯದಲ್ಲಿರುವುದು ಗಮನಾರ್ಹ.

**ಕರಿಯಾತಿ ಕಾಳಗ :**

ಇದೊಂದು ಕೋಲು ಪದ. ಈ ಪದ್ಯದಲ್ಲಿ ಶಿವಲಿಂಗ ರುದ್ರಸರ್ಜನ ಮರಣದ ನಂತರ ಬಳ್ಳೋಡಿಯಲ್ಲಿ ತುರುಕಾರರು ದಂಗೆ ಹೂಡಿದರು. ಅವರನ್ನು ಸದೆಬಡೆಯಲು ಚೆನ್ನಮ್ಮ ರಾಣಿ ತನ್ನ ಸೇನಾಧಿಕಾರಿ ರಾಮಯ್ಯನನ್ನು ಕಳಿಸಿದಳು. ರಾಮಯ್ಯನನ್ನು ತುರುಕಾರರು ಸೆರೆ ಹಿಡಿದರು. ಅಲ್ಲಿಗೆ ಚೆನ್ನಮ್ಮ ರಾಣಿ ಸ್ವತಃ ಹೋಗಿ ಅವರನ್ನು ಸದೆಬಡೆದು ರಾಮಸ್ವಾಮಿಯನ್ನು ಬಿಡಿಸಿಕೊಂಡು ಬರುವಳು. ಇದಕ್ಕೆ 'ಕರಿಯಾತಿ ಕಾಳಗ' ಎನ್ನುವರು.

**ಚನ್ನಮ್ಮರಾಣಿ ಕೋಲಿನ ಪದ :**

೧೮೨೪ರಲ್ಲಿ ಮಗ ಶಿವಲಿಂಗರುದ್ರಸರ್ಜ ಲಿಂಗೈಕ್ಯನಾದ ನಂತರ, ಸಂಸ್ಥಾನದ ಸಮಸ್ತ ಅಧಿಕಾರವನ್ನು ಚನ್ನಮ್ಮರಾಣಿ ವಹಿಸಿಕೊಂಡಳು. ಆಗ ಚೆನ್ನಮ್ಮನಿಗೆ ೪೬ ವರ್ಷ ವಯಸ್ಸು. ಆಂಗ್ಲರು ಕಿತ್ತೂರು ಸಂಸ್ಥಾನವನ್ನು ವಶಪಡಿಸಿಕೊಳ್ಳಲು ಹವಣಿಸಿದರು. ಚನ್ನಮ್ಮ ರಾಣಿ ಇಂಗ್ಲಿಷ್‌ರನ್ನು ಹೊಡೆದೋಡಿಸುವ ಒಂದು ದೊಡ್ಡ ಸಾಹಸವನ್ನು ೧೮೨೪ರಲ್ಲಿ ಮಾಡಿ, ಸುತ್ತಲಿನ ರಾಜರಿಗೆಲ್ಲ ಪತ್ರ ಬರೆದಳು. ಈ ಕೋಲಿನ ಪದದಲ್ಲಿ ಹೆಗ್ಗೇರಿ ಮಾಳದ ಮೇಲೆ ಭೀಕರ ಕಾಳಗವಾದ ವರ್ಣನೆ ಇದೆ. ಕ್ಯಾಪ್ಟನ್ ಥ್ಯಾಕರೆನನ್ನು ಎದುರಿಸಿ ಅವನೊಡನೆ ಕೈ ಕೈ ಹೋರಾಡಿ ಅವನ ರುಂಡವನ್ನು ಹಾರಿಸಿದ ಸಂಗತಿ ಈ ಪದ್ಯದಲ್ಲಿದೆ. ಪುಣೆಯ ಇತಿಹಾಸಕಾರರೂ 'ಶೂರ ಅಬಲಾ ಚೆನ್ನಮ್ಮನೇ ಥ್ಯಾಕರೇನ ರುಂಡು ಹಾರಿಸಿದಳೆಂದು' ಅಭಿಪ್ರಾಯ ಪಟ್ಟಿದ್ದಾರೆ. ೧೮೨೪ರಲ್ಲಿಯೇ ಬ್ರಿಟಿಷರನ್ನು ಭಾರತದಿಂದ ಹೊರಗೆ ಹಾಕಲು ಹೋರಾಡಿದ ಪ್ರಥಮ ಮಹಿಳೆ ಚೆನ್ನಮ್ಮ. ಥ್ಯಾಕರೆನ ಮರಣದ ನಂತರ ಅವನ ಮಕ್ಕಳನ್ನು ಜಕಾತಿ ಬಸಲಿಂಗಪ್ಪನ ಹಿರಿತನದಲ್ಲಿ ಜೋಕೆ ಮಾಡಿದಳು. ಈ ಹಾಡಿನಲ್ಲಿ ಬರುವ ತೇಲಗಿ, ಹೆಗ್ಗೇರಿ. ಮರಿಕಟ್ಟಿ ಗೌಡರು, ಹುಣಸೀಕಟ್ಟಿ, ಜಮದರಖಾನೆ, ತಿಗಡಿ ಜಕಾತಿ, ಮಣ್ಣೂರ, ತಲ್ಲೂರ ದೇಸಾಯಿಯರು, ಮಾಸ್ತಮರಡಿ ಗೌಡರು ಕಿತ್ತೂರು ಸಂಸ್ಥಾನಕ್ಕೆ ತೀರ ಸಮೀಪದವರು. ಅವರ ಮನೆತನದ ಜನರು ಇಂದಿಗೂ ಇದ್ದಾರೆ. ಹೀಗಾಗಿ ಇದೊಂದು ಮಹತ್ವದ ಚಾರಿತ್ರಿಕ ಪದವಾಗಿದೆ. ಈ ಲಾವಣಿ ಪದವನ್ನು ಮಾಗಡಿ ಬಸವಕವಿ ರಚಿಸಿದ್ದಾನೆ.

**ಕಿತ್ತೂರಿನ ಮುತ್ತಿಗೆ :**

ಹೆಬ್ಬಳ್ಳಿಯ ಪುಂಡಬಸವನು ಈ ಲಾವಣಿಯನ್ನು ರಚಿಸಿದ್ದಾನೆ. ಥ್ಯಾಕರೆನ ಮರಣದ ನಂತರ ೧೦ ಸಾವಿರ ದಂಡು ಬಂದಿತು. ಮದನಭಾವಿ ಹತ್ತಿರ ಕಾಳಗ ನಡೆಯಿತು. ಚನ್ನಮ್ಮ ಅವರಾದಿ ಈರಪ್ಪನನ್ನು ಕರೆಸಿದಳು. ನಿಪ್ಪಾಣಿಗೆ ಪತ್ರ ಬರೆಸಿದಳು. ವಕ್ಕುಂಡ, ಬೆಳ್ಳೋಡಿ, ದೇಮಟ್ಟಿ, ಯಡಾಲ, ಸಾಣಿಕೊಪ್ಪ, ನಾವಲಗಟ್ಟಿ, ತಪರಗುಂದ, ಕಾದರೊಳ್ಳಿ, ಕರ್ಚಲಗಟ್ಟಿ, ಹಣ್ಣಿಕೇರಿ, ಬನ್ನಿಕೊಪ್ಪ, ಅಂಬಡಗಟ್ಟಿ, ಸವಣೂರ, ಶಿರಹಟ್ಟಿ, ಸೀಗಿಗಟ್ಟಿ, ಹೂಲಿಕಟ್ಟಿ, ಮೇಟ್ಯಾಲ, ದೇಮಟ್ಟಿ,

ಕೊದಾನಪುರ, ನಂದಿಹಳ್ಳಿ, ಬೆಳ್ಳಿಕಟ್ಟಿ, ಬೆಳವಡಿ, ಕರಿಯಾತಿ ಗ್ರಾಮಗಳ ದಂಡು ಬರಬೇಕೆಂದು ತಿಳಿಸಿದಳು. ಬಳ್ಳೋಡಿ ವೀರಣ್ಣನನ್ನು ಧ್ಯಾನಿಸಿ ಯುದ್ಧ ಮುಂದುವರಿಸಿದಳು ಎಂಬ ವಿಷಯವನ್ನು ಈ ಲಾವಣಿ ನಮಗೆ ತಿಳಿಸುತ್ತದೆ. ಈತನೆ ಬರೆದ ಇನ್ನೊಂದು ಕಿತ್ತೂರು ಚನ್ನವ್ವನ ಸೊಸಿ ಎಂಬುದು ಜನಪ್ರಿಯವಾಗಿದೆ. ಫ್ಲೀಟರು ಸಂಗ್ರಹಿಸಿದ ಲಾವಣಿಗಳಲ್ಲಿ ಇದು ಸೇರಿದೆ. ಕಿತ್ತೂರು ರಾಣಿಯ ಅಂತ್ಯ ಎಂಬ ಮತ್ತೊಂದು ಲಾವಣಿಯು ಜನಪ್ರಿಯವಾಗಿದೆ.

**ಈರವ್ವನ ದುರಂತ ಮರಣ :**

ಈ ಲಾವಣಿಯನ್ನು ಯಾರು ಬರೆದಿರುವುದು ತಿಳಿದಿಲ್ಲ. ಆದರೆ ಕಿತ್ತೂರು ಚೆನ್ನಮ್ಮನ ಸೊಸೆಯಾದ ಈರವ್ವನ ದುರಂತಮಯ ಸಾವನ್ನು ಕವಿ ಅತ್ಯಂತ ಭಾವನಾತ್ಮಕವಾಗಿ ಇಲ್ಲಿ ಚಿತ್ರಿಸಿದ್ದಾನೆ. ಅಷ್ಟೇಅಲ್ಲ, ಒಂದು ಮಹತ್ವದ ಚಾರಿತ್ರಿಕ ವಿಷಯವನ್ನು ಇಲ್ಲಿ ಮೊದಲ ಬಾರಿಗೆ ಪ್ರಸ್ತಾಪಿಸಿದ್ದಾನೆ. ಬ್ರಿಟಿಷರು ಈರವ್ವಳನ್ನು ಧಾರವಾಡಕ್ಕೆ ಸಾಗಿಸಿದರು. ಈರವ್ವ ಕಿತ್ತೂರನ್ನು ನೋಡಬೇಕೆಂದು ಬಯಸಿದಳು. ಧಾರವಾಡ ಉಳವಿ ಬಸಪ್ಪನ ಗುಡಿಗೆ ನಿಚ್ಚಣಿಕೆ ಜೋಡಿಸಿದರು. ಅವಳಿಗೆ ಬೇಬರ್ ಸಾಹೇಬ್ ಹಾಲಿನಲ್ಲಿ ವಿಷದ ಗುಳಿಗೆಗಳನ್ನು ಒಂದೊಂದು ಬೆರೆಸಿ ಕುಡಿಸಿದ್ದ. ಹೀಗಾಗಿ ನಿಚ್ಚಣಿಕೆ ಸಹಾಯದಿಂದ ಉಳವಿ ಬಸಪ್ಪನ ಗುಡ್ಡ ಏರಿ ಕಿತ್ತೂರು ಗ್ರಾಮವನ್ನು ಕಣ್ತುಂಬ ನೋಡಿ ಈರವ್ವ ಕಣ್ಣೀರು ಸುರಿಸಿದಳು. ಅವಳ ಮೈಯೆಲ್ಲ ವಿಷಬೆರೆತ ಕಾರಣವಾಗಿ ಗುಡಿ ಇಳಿದು ಬರುವಷ್ಟರಲ್ಲಿ ತೀರಿಕೊಂಡಳು. ಇಂಥ ದುರಂತಮಯ ಸಾವಾದಾಗ ಅವಳಿಗೆ ಕೇವಲ ೧೮ ವರ್ಷ ವಯಸ್ಸಾಗಿತ್ತು.

**ಕಿತ್ತೂರಿನ ಕೊನೆಯ ಕಾಳಗ :**

ಇದು ಸಂಗೊಳ್ಳಿ ರಾಯಣ್ಣ ಸಾಹಸಗಾಥೆಯನ್ನು ವಿವರಿಸುವ ಒಂದು ಚಾರಿತ್ರಿಕ ಲಾವಣಿಯಾಗಿದೆ. ಇದನ್ನು ಚೌಬಾರಿ ಅಡಿವೆಪ್ಪಗೌಡ ಬರೆದಿದ್ದಾನೆ. ನೇಸರಗಿ ಗ್ರಾಮದ ಈ ಅಡಿವೆಪ್ಪಗೌಡ ನೇರವಾಗಿ ಈ ಯುದ್ಧದಲ್ಲಿ ಭಾಗಿಯಾದವನು. ಹೀಗಾಗಿ ಈ ಲಾವಣಿ ಹೆಚ್ಚು ವಿಶ್ವಸನೀಯವೆನಿಸುತ್ತದೆ. ಮೌಖಿಕ ಪರಂಪರೆಯ ಈ ಕಾವ್ಯದಲ್ಲಿ ಕೆಲವು ಚರಣಗಳ ವ್ಯತ್ಯಾಸವಾಗಿದ್ದರೂ ಐತಿಹಾಸಿಕ ದೃಷ್ಟಿಯಿಂದ ಮಹತ್ವದ ಲಾವಣಿಯಾಗಿದೆ.

**ನಿರ್ಣಯ ಪುರಾಣ ಚಾರಿತ್ರಿಕ ಮಹಾಕಾವ್ಯ :**

ಎಂ.ಎಂ. ಕಲಬುರ್ಗಿ ಅವರು ಈ ಮಹಾಕಾವ್ಯವನ್ನು ಪರಿಶೀಲಿಸಿ, ಸುಮಾರು ಹನ್ನೊಂದು ಚಿಕ್ಕ ಸಂಶೋಧನಾತ್ಮಕ ಲೇಖನಗಳನ್ನು ಬರೆದು ಪ್ರಕಟಿಸಿದ್ದಾರೆ. ಸು. ೫೦೦೦ ಪದ್ಯಗಳನ್ನು ಒಳಗೊಂಡ ಈ ಕೃತಿ ಇನ್ನೂ ಅಪ್ರಕಟಿತವಾಗಿದೆ. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಭಂಡಾರದಲ್ಲಿ ಈ ಕೃತಿ ಲಭ್ಯವಿದೆ. ಈ ಹಸ್ತಪ್ರತಿ ಯಾರಿಂದ, ಯಾವ ಊರಿನಿಂದ ಕನ್ನಡ ಅಧ್ಯಯನ ಪೀಠ ಸೇರಿದ ಯಾವ ದಾಖಲೆಗಳು ಲಭ್ಯವಿಲ್ಲ. ೧೯೬೨ರಲ್ಲಿ ಕಲಬುರ್ಗಿ ಅವರು

ಸಹಾಯಕ ಸಂಶೋಧಕರಾಗಿದ್ದ ಕಾಲದಲ್ಲಿ ಈ ಹಸ್ತಪ್ರತಿಯ ಕೆಲವು ಪದ್ಯಗಳನ್ನು ನಕಲು ಮಾಡಿಕೊಂಡಿದ್ದರು. ಇಡೀ ಕಾವ್ಯ ವಾರ್ಧಕ ಷಟ್ಪದಿಯಲ್ಲಿದೆ. ಕಂಪನಿ ಸರಕಾರದ ವಿವರಗಳನ್ನು ಉಲ್ಲೇಖಿಸುವುದರಿಂದ ೧೯ನೇ ಶತಮಾನದ ಮೊದಲ ಪಾದದಲ್ಲಿ ಈ ಕೃತಿ ಹುಟ್ಟಿರಬಹುದೆಂದು ಕಲಬುರ್ಗಿ ಅವರು ಊಹಿಸಿದ್ದಾರೆ.[೯]

ಈ ಕಾವ್ಯದಲ್ಲಿ ಕಿತ್ತೂರು ದೊರೆ ಮಲ್ಲಸರ್ಜನ ಲಿಂಗಪೂಜಾ ನಿಷ್ಠೆ-ಜಂಗಮದಾಸೋಹದ ಮಹತ್ವದ ವಿಷಯಗಳು ತಿಳಿಯುತ್ತದೆ. ಈತನ ಕೊನೆಯ ದಿನಗಳನ್ನು ಕುರಿತು ಈ ಕಾವ್ಯ ಹೀಗೆ ವಿವರಿಸುತ್ತದೆ : 'ಪುಣೆಯ ಬಂಧನದಿಂದ ಬಿಡುಗಡೆ ಹೊಂದಿದ ಮಲ್ಲಸರ್ಜ ಅರಭಾವಿಯ ದುರುದುಂಡೇಶ್ವರ ಮಠಕ್ಕೆ ಬಂದು, ಅಲ್ಲಿಂದ ಕಿತ್ತೂರಿಗೆ ಆಗಮಿಸಿ ತೀರಿಕೊಂಡುದು ಈಗಾಗಲೇ ಗೊತ್ತಿರುವ ಸಂಗತಿ. ಇದನ್ನು ಇನ್ನಷ್ಟು ವಿವರವಾಗಿ ಈ ಕೃತಿ ಹೀಗೆ ತಿಳಿಸುತ್ತದೆ (೧೨೦೨-೯) : ಪರಸ್ಥಳದಲ್ಲಿ ಪ್ರಾಣ ಬಿಡಬಾರದೆಂದು ಬಗೆದು ಮಲ್ಲಸರ್ಜನು "ಧಣಿಯಿಂ ಬೀಳ್ಕೊಂಡು ತಾನು ಪುಣೆಯಿಂದ ತನ್ನ ಪುರಕೆ" ಬರುವಾಗ ಮಾರ್ಗಮಧ್ಯದಲ್ಲಿ "ದುರದುಂಡಿಯೊಡೆಯನಹ ಶಿವಲಿಂಗದೇವನುರುತರ ಗರ್ದುಗೆಯೊಳುರೆ ಗಣಾರಾಧನೆಯ ಮಾಡಿಸಿ"ದನು. ಹೀಗೆ ಗಣಾರಾಧನೆ ಮಾಡಿಸಿ, ಅಲ್ಲಿ ರಾತ್ರಿ ಮಲಗಿರಲು "ನೀನಿಲ್ಲಿಂದಲೇ (ಕೈಲಾಸಕ್ಕೆ) ಬರುವುದು" ಎಂದು ಶಿವಗಣಂಗಳು ಕನಸಿನಲ್ಲಿ ಸೂಚಿಸಿದರು. ಆಗ ಮಲ್ಲಸರ್ಜನು "ನಾನಿಲ್ಲಿಂದ ಬಾರೆನೆನ್ನಯ ಮನೆಗೆ ಪೋಗಿ ನಾನಲ್ಲಿಂದ ಬಹೆನು" ಎಂದು ನುಡಿದು, ಕಿತ್ತೂರಿಗೆ ಬಂದನು. "ಇಲ್ಲಿ ಎಸಗಿರ್ದ ದೋಷವನುರದೆ ಕಳೆಯಬೇಕಿಲ್ಲಿಯೇ" ಎಂದು "ತನ್ನೊಳಗೆ ತಾನೆ ತಿಳಿದು" ತನ್ನವರಾದ ಮಾಹೇಶ್ವರರನ್ನು (ಜಂಗಮರನ್ನು) ಅರಮನೆಗೆ ಆಮಂತ್ರಿಸಿದನು. ಎಲ್ಲರ ಪಾಪವನ್ನು ಕಳೆಯುವ "ಅಲ್ಲಮಪ್ರಭು ಸಂಪ್ರದಾಯಕರೆನಿಸುತಿಪ್ಪ ಬಲ್ಲಿದರು ನೀವು" ಎಂದು "ವಿರತರೆನಿಪರ ನುತಿಸಿದನು". ನನ್ನ ದೋಷಗಳನ್ನು ನಿಮ್ಮ ಪಾದಕ್ಕೆ ಅರ್ಪಿಸುವ ಸಲುವಾಗಿ ನಿಮ್ಮನ್ನೆಲ್ಲ ಬರಮಾಡಿಕೊಂಡಿದ್ದೇನೆ-ಎಂದು ನುಡಿದು, ತಾನು ಈ ವರೆಗೆ ಮಾಡಿರುವ ದೋಷಗಳನ್ನು ಪ್ರಕಟವಾಗಿ ಸಾರಿ, ಈ ದೋಷಗಳಿಗೆ ತಕ್ಕ ಪ್ರಾಯಶ್ಚಿತಗಳೇನು? ಎಂದು ಕೇಳಿ, ಅವುಗಳನ್ನು ಪೂರೈಸಿದನು.

"ಅಪ್ಪನವರೆಸಗಿದ ದೋಷವೆಮಗುರೆ ಬರಲಿ, ಅಪ್ಪನವರಿಗೆ ನಾವು ಲಿಂಗಮಂ ಬಿಡದೆ ಭಜಿಸಿಪ್ಪ ಪುಣ್ಯವದುರದೆ ತಾಗಿ ಅಪ್ಪನವರಿಗೆ ಕಲ್ಯಾಣವಾಗಲಿ" ಎಂದು ಮೂರು ಸಲ ನುಡಿದು, ಮರಣಹೊಂದಿದನು. ಇದನ್ನು ಗಮನಿಸಿ "ಇಂತಪ್ಪ ಜಾಣರ ಕಾಣೆನೀ ಕ್ಷೋಣಿಯೊಳು" ಎಂದು ಕವಿಯು ಮಲ್ಲಸರ್ಜನನ್ನು ಹೊಗಳಿದ್ದಾನೆ. (ಇಂಥ ನಡತೆ, ಇಂಥ ಮರಣ ಮಹಾನುಭಾವರಿಗೆ ಮಾತ್ರ ಸಾಧ್ಯ), ಕೇವಲ ಶಾಸ್ತ್ರಜ್ಞರಿಗೆ ಸಾಧ್ಯವಿಲ್ಲ. ಶಾಸ್ತ್ರಜ್ಞನಾದ ನರಗುಂದದ ಸಿದ್ಧರಾಮಶೆಟ್ಟಿ ಮನೆತನದ ಬಸವನೆಂಬವನು ಛಡಿ ಏಟಿನಿಂದ ಮಡಿದ (ಈತನಿಗೆ ಬೇಡಿ ಹಾಕಿದ ವಿಷಯವೂ ಇಲ್ಲಿದೆ ೧೯೯೯-೨೦೦೦). ಶಾಸ್ತ್ರಜ್ಞನಾದ ತಮ್ಮಯ್ಯನೆಂಬ ಬ್ರಾಹ್ಮಣನು ಶಸ್ತ್ರಘಾತದಿಂದ ಮಡಿದ. "ಶಾಸ್ತ್ರಜ್ಞರಿಗೆ ಈ ಜಾಣತನ ಬರಲಾರದು". ಉಳ್ಳಿಗಡ್ಡೆಗೆ ಉದ್ದಿನ ಸಂಡಿಗೆಯ ಗಳಿಸುವ

"ಮಲ್ಲಸರ್ಜನ ಮಹಾಜಾಣತನ" ಶ್ಲಾಘನೀಯವೆಂದು ಇಲ್ಲಿ ಹೇಳಲಾಗಿದೆ. ಇನ್ನೊಂದೆಡೆಯಲ್ಲಿ "ಕಾಲಮೃತ್ಯುವಿಗೆ ಮಲ್ಲಸರ್ಜ, ಅಕಾಲಮೃತ್ಯುವಿಗೆ ಶಿವಲಿಂಗರುದ್ರಸರ್ಜ" ತುತ್ತಾದರೆಂದು ತಿಳಿಸಲಾಗಿದೆ. (೪೨೩೩). ಹೀಗೆ, ಈ ಕೃತಿಯಲ್ಲಿ ಮಲ್ಲಸರ್ಜನಿಗೆ ಸಂಬಂಧಿಸಿದಂತೆ ಇಷ್ಟು ವಿಷಯಗಳು ಮಾತ್ರ ಕಾಣಿಸಿಕೊಂಡಿವೆ. ಇದು ಶಿವಲಿಂಗರುದ್ರಸರ್ಜನ ಕಾಲಾವಧಿಯಲ್ಲಿ ಹುಟ್ಟಿದ ಕೃತಿಯಾಗಿರುವ ಕಾರಣ, ತಂದೆ ಮಲ್ಲಸರ್ಜನ ವಿಷಯ ಇಲ್ಲಿ ಅಲ್ಪಪ್ರಮಾಣದಲ್ಲಿ ಸಿಗುವುದೆಂದೇ ಹೇಳಬೇಕು."[೧]

ಕಿತ್ತೂರ ಶಿವಲಿಂಗ ರುದ್ರಸರ್ಜನ ವಿಷಯವಾಗಿ ಈ ಕಾವ್ಯದಲ್ಲಿ ಬಹಳಷ್ಟು ಮಹತ್ವದ ವಿಷಯಗಳು ದಾಖಲಾಗಿವೆ. ಯಾಕೆಂದರೆ ಅವನ ಕಾಲಘಟ್ಟದಲ್ಲಿಯೇ ಈ ಕೃತಿ ರಚನೆಯಾಗಿರುವುದು. ಶಿವಲಿಂಗ ರುದ್ರಸರ್ಜ ಲಿಂಗಪೂಜಾನಿಷ್ಠನಾಗಿದ್ದ, ಜಂಗಮ ದಾಸೋಹಿಯಾಗಿದ್ದ. ಅತ್ಯುತ್ತಮ ರಾಜಾಡಳಿತ ನೀಡಿದ. ಆದರೆ ಅವನ ದೋಷಗಳನ್ನು–ಅವನ ಆಡಳಿತ ಕೆಟ್ಟ ರೀತಿಗಳನ್ನು ಈ ಕಾವ್ಯ ವರ್ಣಿಸುತ್ತದೆ: ಮಲ್ಲಸರ್ಜನು ಇವನಿಗೆ ಶಿವಲಿಂಗ ಎಂದು ಹೆಸರಿಡಲು ಕಾರಣ, ಅರಭಾವಿ ದುರದುಂಡೀಶ್ವರಮಠದ ಶಿವಲಿಂಗ ಸ್ವಾಮಿಗಳ ಆಶೀರ್ವಾದವೇ ಕಾರಣವೆಂದು ಈ ಪುರಾಣ ತಿಳಿಸುತ್ತದೆ. ಶಿವಲಿಂಗರುದ್ರಸರ್ಜನ ಆಳ್ವಿಕೆಯ ಅವಧಿಯಲ್ಲಿ ಹುಟ್ಟಿರುವ 'ನಿರ್ಣಯ ಪುರಾಣ' ಈ ದೊರೆಯನ್ನು ಮತ್ತು ಇವನ ಘಟನೆಗಳನ್ನು ಬಹಳಷ್ಟು ಸಲ ಪ್ರಸ್ತಾಪಿಸುತ್ತದೆ.

ಶಿವಲಿಂಗರುದ್ರಸರ್ಜನ ಗುಣಾವಗುಣಗಳ ಬಗ್ಗೆ ಈ ಕೃತಿ ಅನೇಕ ಉಲ್ಲೇಖಗಳನ್ನು ಹೀಗೆ ನೀಡುತ್ತದೆ: ಶಿವಲಿಂಗರುದ್ರಸರ್ಜನು ಪಂಚಾಂಗದ ವಿಷಯವಾಗಿ ಯಾವ ಭಾವನೆ ತಾಳಿದ್ದನೆಂಬುದನ್ನು

"ಊರಿಗುರೆ ಹೋಗುತಿಹ ಕಾಲದೊಳ್ ಕೇಳುತಿಹ
ನೋರೆಯಾಗದೆ ಮದುವೆ ಮೊದಲಾದ ಕಾರ್ಯದೊ
ಳಾರ್ಯೆದು ಕೇಳುತಿಹನೀ ನಾಡದೊರೆಯೆನಿಪ ಶಿವಲಿಂಗರುದ್ರಸರ್ಜಂ ।
ಊರುಕೆರೆ ಭಾವಿಗುಡಿ ಮನೆಗಳಂ ಮಠಗಳಂ
ಈ ರಸೆಯೊಳುರದೆ ಕಟ್ಟಿಸುವ ಕಾರ್ಯದಿ ಕೇಳ್ವ
ಓರಂತೆ ಲಿಂಗಾರ್ಚನಾದಿ ಕಾರ್ಯದಿ ಕೇಳನು....॥(೯೨೮)[೨]

ಎಂಬ ಪದ್ಯದಲ್ಲಿ ವಿವರಿಸಲಾಗಿದೆ. ಇದರ ಪ್ರಕಾರ ಈತನು ಪ್ರವಾಸ ಸಂದರ್ಭ, ಮದುವೆ ಮೊದಲಾದ ಶುಭಕಾರ್ಯ, ಊರು, ಕೆರೆ, ಭಾವಿ, ಗುಡಿ, ಮನೆ–ಮಠಗಳ ನಿರ್ಮಾಣ ಪ್ರಸಂಗದಲ್ಲಿ ಪಂಚಾಂಗ ಕೇಳುತಿದ್ದನೇ ಹೊರತು, ಲಿಂಗಾರ್ಚನೆ ಇತ್ಯಾದಿ ಪ್ರಸಂಗಗಳಲ್ಲಿ ಕೇಳುತ್ತಿರಲಿಲ್ಲವೆಂದು ತಿಳಿದುಬರುತ್ತದೆ.

ಈತನು ತುಂಬ ವಿದ್ವಾಂಸನಾಗಿದ್ದರೂ ಕೆಲವು ದೋಷಗಳು ಅವನಲ್ಲಿ ಮನೆಮಾಡಿರುವುದನ್ನು ಈ ಕೃತಿ ಉದ್ದಕ್ಕೂ ದಾಖಲಿಸುತ್ತ ಹೋಗಿದೆ. "ಶಿವಲಿಂಗರುದ್ರಸರ್ಜಾಹ್ವಯ ಮಹೀನಾಥಗೆ । ಇಲ್ಲಿಗುರೆ ಬರಿಸಿರ್ದುದಂ ತಿಳಿಸೆ, ಶಾಸ್ತ್ರಮಂ ಬಲ್ಲಾತ ನಾನೆಂಬ ಮದದಿಂದ ಉದಾಸಿಸಲ್.....

ತನ್ನ ತಮ್ಮನಂ ಕಳೆದಿರುವನೀಗ...."(೩೦೮೨), "ನಾನುರೆ ಪ್ರೌಢನೆಂದಿರ್ದ ಮೂಢತನದಿಂ....ನಾಡೆ ಕಳೆದಿಹ ತನ್ನ ತಮ್ಮನಂ ನಾಡದೊರೆ" (೨೯೪೧), "ಈ ನಾಡದೊರೆಯನುಜನಳಿಯೆ" (೧೯೨೧), "ತಮ್ಮನಳಿದನೆನುತ್ತ ಕಿತ್ತೂರ ದೊರೆ ಈಗ ಉಮ್ಮಳಿಸುತುರೆ ದುಃಖಿಸುತ್ತಿರ್ಪ೦" (೨೯೪೫) ಇತ್ಯಾದಿ ಹೇಳಿಕೆಗಳಲ್ಲಿ ಇವನು ವಿದ್ವಾಂಸನಾಗಿದ್ದನೆಂದೂ, ಈ ವಿದ್ವತ್ತು ಇತ್ಯಾದಿ ಅಹಂಕಾರ ಕಾರಣವಾಗಿ ತನ್ನ ತಮ್ಮ (ರುದ್ರಮ್ಮನ ಮಗ ಮತ್ತು ಚೆನ್ನಮ್ಮನ ಮಗ)ನನ್ನು ಕಳೆದುಕೊಂಡನೆಂದೂ ಇಲ್ಲಿ ಸೂಚಿಸಲಾಗಿದೆ. "ಈ ನಾಡನಾಳುವ ಧಣಿಯು ಬಲು ಜಾಣನ್ಯೆ" (೩೧೦೦), "ಮಾನನಿಧಿ ಶಿವಲಿಂಗರುದ್ರನೊಳಿರುವ ಜಾಣತನಮಂ ಪಸರಿಸುತ್ತ" (೩೧೦೧), "ತರ್ಕ ವ್ಯಾಕರಣಾದಿ ಶಾಸ್ತ್ರಗಳನುರೆ ಬಲ್ಲನರ್ಕಜಾರಾತಿ ಪೂಜಾಧುರಂಧರ, ಮರ್ಕಟಧ್ವಜನಂತೆ ಪರಸತಿಯ ನೆರೆಯದಿಹ ಶಿವಲಿಂಗರುದ್ರಸರ್ಜ೦" (೩೧೦೨) ಎಂಬ ಮಾತುಗಳು ಅವನ ವಿದ್ವತ್ತು, ಪೂಜಾಧುರಂಧರತೆ, ಪರನಾರೀ ಸೋದರತ್ವಗಳನ್ನು ಎತ್ತಿ ಹೇಳುತ್ತವೆ. ಆದರೆ ಸೂರ್ಯೋದಯ ಸಮಯದಲ್ಲಿ ನಿದ್ರಿಸುವನು, ಸೂರ್ಯಾಸ್ತ ಸಮಯದಿ ಶಿವನನ್ನು ಸ್ತುತಿಸನು. ಹೀಗಾಗಿ ತರ್ಕ ವ್ಯಾಕರಣಾದಿ ಶಾಸ್ತ್ರಗಳನೋದಿ ಫಲವೇನು? (೩೧೦೨), "ಓದಿ ಗಿಳಿ ತನ್ನ ಮಲವ ಭುಂಜಿಸಿದಂತೆ ಬಲುವೋದಿ ಜಾಣನೆನಿಸಿ" (೩೧೦೩) ಎಂದು ಅವನ ಅವಗುಣವನ್ನೂ ಇಲ್ಲಿ ಹೇಳಲಾಗಿದೆ. ಇದಲ್ಲದೆ "ಅಳತೆಯಿಲ್ಲದೆ ಭಜಿಸಿ, ಅಳತೆಯಿಲ್ಲದೆ ಉಣಿಸಿ, ಅಳತೆಯಿಲ್ಲದೆ ಕೊಟ್ಟು, ಅಳತೆಯಿಲ್ಲದೆ ಕೊಂಡು। ಅಳಿಸುತಿಹನೀಗ ರೈತರಂ" (೩೧೦೩)– ಈ ಹೇಳಿಕೆಯಂತೂ ಅವನ ಅವಿವೇಕತನಕ್ಕೆ ಸಾಕ್ಷಿಯಾಗಿದೆ. ಇನ್ನೊಂದೆಡೆ "ನಾಡೊಳಗಿರುವ ಲಿಂಗಜಂಗಮ ನಿಕರದಿಂದ ಕೈಮುಗಿಸಿಕೊಳುತಿರ್ಪ" (೨೯೪೭) ಎಂದು ಹೇಳಲಾಗಿದೆ."[೯೩]

ಇದಲ್ಲದೆ "ಲಿಂಗಪೂಜಾ ಕಾಲದೊಳ್ ಸಲ್ಲದ್ಯೆ ಕರ್ಣಾಟ ಭಾಷೆ" (೩೩೪೧) ಯೆಂದು ಕನ್ನಡಭಾಷೆಯ ಬಳಕೆಯನ್ನು ನಿಲ್ಲಿಸಿದನು. ಬಹುಶಃ ಸಂಸ್ಕೃತ ಭಾಷೆಯನ್ನು ರೂಢಗೊಳಿಸಿದನು. ಮತ್ತಂ ಮರೆವರಿವಿನನ್ಯಾಯನ್ಯಾಯದೆ ಮದಾಂಧನಾಗಿ ಬಾಗದೆ, ತನಗುರೆ ಬಾಗದಿರ್ದವರನುರೆ ಬಾಗಿಸುತ್ತಿರ್ದು ೧೭೪೬ನೆಯ ತಾರಣಾಹ್ವಯಹಾಯನದಲ್ಲಿ ಮಾಧವ ಜೇಷ್ಠಾಷಾಢ ಮಾಸಗಳೊಳ್ ಪೂರ್ವದುಷ್ಕರ್ಮ ದೊದವಿನಿಂದಾಮಯ (=ರೋಗ)ವಾವರಿಸಿ ಬಳಲುತ್ತಿರ್ಪುದಂ ಬಲ್ಲವರೆ ಬಲ್ಲರಲ್ಲದೆ ಅರಿಯದಧಮರರಿಯರು" (೪೮೪೯ ಗದ್ಯ)– ಎಂಬ ವಿವರಣೆ ಶಿವಲಿಂಗರುದ್ರಸರ್ಜನ ಅನ್ಯಾಯದ ಆಡಳಿತ, ಅನಾರೋಗ್ಯಗಳನ್ನು ಕಾಲಮಿತಿ ಸಹಿತವಾಗಿ ತಿಳಿಸುತ್ತದೆ. ಮಲತಾಯಿ ಚೆನ್ನಮ್ಮ, ಹೆಂಡತಿ ವೀರಮ್ಮ ಅರಮನೆಯಲ್ಲಿದ್ದರೂ ಶಿವಲಿಂಗರುದ್ರಸರ್ಜನು ದಾಸಿ ಗೆಜ್ಜಿಮಹಾಂತಮ್ಮನಿಂದ ಊಟ ನೀಡಿಸಿಕೊಳ್ಳುತ್ತಿದ್ದ (೩೧೦೫–೦೬)ನೆಂಬುದು ಇವನ ವಿಕ್ಷಿಪ್ತ ನಡತೆಗೆ ಉದಾಹರಣೆಯಾಗಿದೆ.

ಇನ್ನೊಂದು ಸಂದರ್ಭದಲ್ಲಿ "ದೊರೆಯೆನಿಪ ಶಿವಲಿಂಗರುದ್ರಸರ್ಜನ ಪುಣ್ಯಮುರೆ ತೀರಿತಿಲ್ಲಿಗೆ"(೩೪೯೭), "ಪುಣ್ಯಮುರೆ ಕ್ಷಯಿಸಿ ಕ್ಷಯಮನೊಂದುವನೀಗ" (೩೪೯೯) ಎಂಬ

ಮಾತುಗಳು ಕಾಣಿಸಿಕೊಂಡಿವೆ. ಅನ್ಯಾಯದಿಂ ಪುಣ್ಯಮುರೆ ಕ್ಷಯಿಸುವುದು” ಎಂದು ಗುರು ಹೇಳುವುದು, “ಅನ್ಯಾಯಮುಮನೇನನೆಸಗಿರ್ದನ್ಯೆ?” ಎಂದು ಶಿಷ್ಯ ಕೇಳುವುದು, ಆಗ ಗುರು “ಧೂಳಿ ಪಾದೋದಕವನುರೆ ನಂಬದೆ ಅನ್ಯರಿಂದೌಷಧವನುರೆ ಕೊಂಡುದನ್ಯಾಯ” (೩೪೯೮) ಎಂದು ಉತ್ತರಿಸುವುದು ಇಲ್ಲಿ ಗಮನಿಸಬೇಕಾದ ದಾಖಲೆಯೆನಿಸಿದೆ. ಮುಂದುವರಿದು ಹೇಳಿದ “ಶಿವಲಿಂಗರುದ್ರಸರ್ಜಂ ತಾನುರೆ ಲಿಂಗಾಂಗಿಯೆನಿಸಿ ಅಲಿಂಗಿಗಳೆಸಗಿರ್ದೌಷಧದ ಗುಳಿಗೆಗಳಂ ಗಳಗಳನೆ ಮುಕ್ಕುತನದಿಂ ತೆಕ್ಕೊಂಡು ತದೇವ ಸಂವತ್ಸರ ಭಾದ್ರಪದ ಸಂವತ್ಸರದೊಳಳಿದಿರ್ದುದಂ ಬಲ್ಲವರೆ ಬಲ್ಲರಲ್ಲದೆ ಅಧಮರರಿಯರು” (೪೮೬೯ ಗ) ಎಂಬ ಮಾತಿನಿಂದ, ಇವನ ನಿಧನಕ್ಕೆ ದೇಶಿ ಔಷಧ ಪಾದೋದಕಗಳನ್ನು ತ್ಯಜಿಸಿ, ವಿದೇಶೀ ಔಷಧ ಸೇವಿಸಿದುದೇ ಕಾರಣವಾಯಿತೆಂದು ಅಂದಿನ ಜನತೆ ನಂಬಿದ್ದಿತೆನಿಸುತ್ತದೆ. ಒಟ್ಟಾರೆ, ಶಿವಲಿಂಗರುದ್ರಸರ್ಜ ವಿದ್ವಾಂಸ, ಲಿಂಗಪೂಜಾ ಧುರಂಧರನಾಗಿದ್ದರೂ ಮದಾಂಧನಾಗಿದ್ದನೆಂಬ ಧ್ವನಿ ಈ ಕೃತಿಯಲ್ಲಿದೆ.”

ಈ ಕಾವ್ಯ ಗೆಜ್ಜಿ ಮಹಾಂತಮ್ಮ ಎಂಬುವಳು ಮೋಸದಿಂದ ಸಂಸ್ಥಾನವನ್ನು ಹೇಗೆ ಮಾಡಿದಳು ಎಂಬುದನ್ನು ತಿಳಿಸುತ್ತದೆ. ಮಹಾಂತಮ್ಮ ಎಷ್ಟು ಜನರಿಗೆ ವಿಷಪ್ರಾಶನ ಮಾಡಿ ಕೊಂದಳೆಂಬ ಘಟನೆಗಳನ್ನು ಇಲ್ಲಿ ನೋಡಬಹುದು. ಶಿವಲಿಂಗ ರುದ್ರಸರ್ಜ ತನ್ನ ತಾಯಿ ಹೆಂಡತಿಗಿಂತ ಇವಳನ್ನು ಬಹಳ ಹಚ್ಚಿಕೊಂಡಿದ್ದನೆಂಬ ವಿಷಯ ತಿಳಿಯುತ್ತದೆ. ಕೊನೆಗೆ ಸಂಸ್ಥಾನದ ಹಿರಿಯರು ಕೂಡಿಕೊಂಡು ಅವಳನ್ನು ಅರಮನೆಯಿಂದ ಹೊರಗೆ ಹಾಕುತ್ತಾರೆ. ಆಗ ಮಹಾಂತಮ್ಮ ಗುರುಮನೆಗೆ (ಕಲ್ಮಠ) ಬಂದು ಅಲ್ಲಿಯ ಸ್ವಾಮಿಯನ್ನು ತನ್ನ ಬುಟ್ಟಿಗೆ ಹಾಕಿಕೊಂಡು, ಸಂಸ್ಥಾನ ವಿರುದ್ಧ ಕಾರಸ್ಥಾನಗಳನ್ನು ಮಾಡುತ್ತಾಳೆ. ಎರಡನೆಯ ಬಾರಿ ಬ್ರಿಟಿಷ್ ಸೈನ್ಯ ಬಂದಾಗ ಮದ್ದು ಗುಂಡುಗಳಿಗೆ ಸೆಗಣಿ ಬೆರೆಸಿದವಳು ಈ ಮಹಾಂತಮ್ಮ. ಇವಳು ನೇಸರಗಿಯವಳು. ಗಂಡನ ಮನೆ ಕಿತ್ತೂರು. ಇಂಥ ಕುಟೀಲ ಹೆಂಗಸರು ಆ ಕಾಲದಲ್ಲಿ ಇದ್ದರು ಎಂಬುದನ್ನು ಈ ಕಾವ್ಯದಿಂದ ಅರಿತುಕೊಳ್ಳಬಹುದು. ಅಲ್ಲಲ್ಲಿ ಕಾಲಜ್ಞಾನ ವಚನ ನುಡಿಗಳು ಈ ಕಾವ್ಯದಲ್ಲಿವೆ. ಈ ಕಾವ್ಯ ಪ್ರಕಟವಾಗಬೇಕಾದ ಅನಿವಾರ್ಯತೆ ಬಹಳಷ್ಟಿದೆ. ಓದುಗರಿಗೆ ಸಂಶೋಧಕರಿಗೆ ಇದರಿಂದ ತುಂಬಾ ಸಹಾಯ ದೊರೆಯುತ್ತದೆ.

**ಮೋಡಿ ದಾಖಲೆಯಲ್ಲಿ ಕಿತ್ತೂರು ಸಂಸ್ಥಾನ ಸಾಹಿತ್ಯ :**

ಮೋಡಿಲಿಪಿ ಸಾಹಿತ್ಯದಲ್ಲಿ ಅನನ್ಯವಾದ ಸಾಧನೆ ಮಾಡಿದ ಸಂಗಮೇಶ ಕಲ್ಯಾಣಿ ಅವರು ‘ಮೋಡಿ ದಾಖಲೆಯಲ್ಲಿ ಕಿತ್ತೂರು’ ಎಂಬ ಅಪರೂಪದ ದಾಖಲು ಸಾಹಿತ್ಯವನ್ನು ಪುಣೆ ಪತ್ರಾಗಾರ ಇಲಾಖೆಯಿಂದ ಸಂಗ್ರಹಿಸಿ, ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ೧೮೨೩ರಿಂದ ೧೮೨೮ರವರೆಗಿನ ಕಾಲಾವಧಿಯಲ್ಲಿ ಕಿತ್ತೂರು ಸಂಸ್ಥಾನದಲ್ಲಿ ನಡೆದ ಘಟನಾವಳಿಗಳ ಸಮಗ್ರ ಚಿತ್ರಣವನ್ನು ಕಾಣಬಹುದು. ಮಲ್ಲಸರ್ಜನ ನಿಧನಾನಂತರ ಶಿವಲಿಂಗರುದ್ರ ಸರ್ಜ ಅಧಿಕಾರಕ್ಕೆ ಬಂದ. ಅಲ್ಪಾವಧಿಯಲ್ಲಿ ಆತ ತೀರಿಕೊಂಡ. ರುದ್ರವ್ವ ಮತ್ತು ಚೆನ್ನಮ್ಮನ ಮಕ್ಕಳಿಬ್ಬರು

ತೀರಿಕೊಂಡರು. ಆಗ ಸಂಸ್ಥಾನಕ್ಕೆ ಒಬ್ಬ ದತ್ತಕ ಪುತ್ರನನ್ನು ಆಯ್ಕೆ ಮಾಡಲು ಚೆನ್ನಮ್ಮ ನಿರ್ಧರಿಸಿದಳು. ನಾಲ್ಕು ಜನ ಮಕ್ಕಳಲ್ಲಿ ಮಾಸ್ತಮರ್ಡಿಯ ಗೌಡರ ಮಗನನ್ನು ಆಯ್ಕೆ ಮಾಡಿದಳು. ದತ್ತಕ ಕಾಯ್ದೆಯನ್ನು ರದ್ದುಗೊಳಿಸಿದ ಕಂಪನಿ ಸರಕಾರ ಚನ್ನಮ್ಮಳ ನಿರ್ಣಯಕ್ಕೆ ವಿರುದ್ಧವಾಗಿ ಯುದ್ಧ ಸಾರಿತು. ಈ ಎಲ್ಲ ಘಟನೆಗಳನ್ನು ಮೋಡಿ ಲಿಪಿಯ ಈ ದಾಖಲೆಗಳಲ್ಲಿ ಗುರುತಿಸಲು ಸಾಧ್ಯ. ಕಲ್ಯಾಣಿ ಅವರು ಸಂಗ್ರಹಿಸಿದ ಮೋಡಿ ಕಾಗದ ಪತ್ರಗಳು ಸಂಖ್ಯೆಯಲ್ಲಿ ಕಡಿಮೆ. ಇನ್ನು ಅಪ್ರಕಟಿತವಾಗಿ ಉಳಿದ ಮೋಡಿ ಲಿಪಿ ದಾಖಲೆಗಳನ್ನು ಸಂಗ್ರಹಿಸಿ ಅಧ್ಯಯನ ಮಾಡಬೇಕಾಗಿದೆ. ಇದರಿಂದ ವಿಸ್ಮೃತಿಗೆ ಸರಿದ ಇತಿಹಾಸದ ಅಸ್ಮಿತೆಯೊಂದು ಗೋಚರವಾಗುವುದು.

**ಬ್ರಿಟಿಷ್ ಆಡಳಿತದ ಚಾರಿತ್ರಿಕ ದಾಖಲೆಗಳು :**

ಕನ್ನಡ ನಾಡಿನ ಮುಕುಟಮಣಿಯಾಗಿರುವ ಬೆಳಗಾವಿಯನ್ನು ಕಸಿದುಕೊಳ್ಳುವ ಬಗ್ಗೆ ಮಹಾರಾಷ್ಟ್ರ ಹಲವು ವರ್ಷಗಳಿಂದಲೂ ನಡೆಸಿದ ಪ್ರಯತ್ನ ವಿಫಲವಾಗುತ್ತಲೇ ಬಂದಿದೆ. ಬೆಳಗಾವಿ ನಮ್ಮ ಸ್ವಂತ ತಾಯ್ನೆಲ ಎಂದು ಮನಗಾಣಿಸಿ ಕೊಡುವ ವಾತಾವರಣವನ್ನು ಕನ್ನಡಿಗರಿಗೆ, ಕರ್ನಾಟಕ ಸರಕಾರಕ್ಕೆ ಅನಿವಾರ್ಯವಾಗಿದೆ. ಬೆಳಗಾವಿ ಬ್ರಿಟಿಷರ ಆಡಳಿತದ ವೇಳೆ ಅಂದರೆ ೧೮೩೬ರಲ್ಲಿ ಒಂದು ಸ್ವತಂತ್ರ ಜಿಲ್ಲೆಯಾಗಿತ್ತು ಎಂಬುದು ಗಮನಾರ್ಹ. ಬ್ರಿಟಿಷ್ ದಾಖಲೆಗಳಲ್ಲಿ ಬೆಳಗಾವಿ ಅಚ್ಚಗನ್ನಡದ ಪ್ರದೇಶವೆಂದು ದಾಖಲಾಗಿದೆ. ಇಂಥ ಹತ್ತು ಸಾವಿರ ದಾಖಲೆಗಳು ಈವರೆಗೆ ದೊರೆತಿವೆ.

"ದಾಖಲೆಗಳನ್ನು ಹುಡುಕುತ್ತ ಹೋದಂತೆ, ಅನೇಕ ವಿಸ್ಮಯಕಾರಿ ವಿಷಯಗಳು ಹೊಸದಾಗಿ ಗೋಚರವಾದವು. ೧೮೨೪ರಲ್ಲಿ ಕಿತ್ತೂರಿನಲ್ಲಿ ಯುದ್ಧವಾಯಿತು. ಈ ಸಂದರ್ಭದಲ್ಲಿ ವಾಲ್ಟರ್ ಎಲಿಯಟ್ ಧಾರವಾಡ ಕಲೆಕ್ಟರ್‌ನಾಗಿದ್ದ ಥ್ಯಾಕರೆ ಕೈಕೆಳಗೆ ಅಧಿಕಾರಿಯಾಗಿದ್ದನು. ಇವನೊಂದಿಗೆ ಸ್ಟೀವನ್‌ಸನ್ ಕೂಡ ಕಿತ್ತೂರು ಕಾಳಗದ ಸಂದರ್ಭದಲ್ಲಿ ಆ ಸಂಸ್ಥಾನದ ನೇರ ಸಂಪರ್ಕದಲ್ಲಿದ್ದನು. ಕಿತ್ತೂರಿನ ಎರಡೂ ಯುದ್ಧಗಳನ್ನು ಕಣ್ಣಾರೆ ಕಂಡವನು. ಇಷ್ಟೇ ಏಕೆ, ಮೊದಲನೆಯ ಯುದ್ಧದಲ್ಲಿ ಸೋತ ಬ್ರಿಟಿಷರಲ್ಲಿ ಕೆಲವರನ್ನು ಕಿತ್ತೂರಿನವರು ಸೆರೆ ಹಿಡಿದಿದ್ದರು. ಇವರಲ್ಲಿ ಎಲಿಯಟ್ ಮತ್ತು ಸ್ಟೀವನ್‌ಸನ್ ಮುಖ್ಯರು. ಅಕ್ಟೋಬರ್, ನವೆಂಬರ್ ಈ ಎರಡೂ ತಿಂಗಳು ಕಿತ್ತೂರಿನಲ್ಲಿ ನಗರಬಂದಿಯಾಗಿದ್ದ ಎಲಿಯಟ್ ಈ ಎರಡೂ ಯುದ್ಧಗಳ ವಿವರವನ್ನು ಈ ಲೇಖನದಲ್ಲಿ ದಾಖಲಿಸಿದ್ದಾನೆ. ಕಂದಾಯ ಅಧಿಕಾರಿಯಾಗಿದ್ದರೂ ಈತನ ಶಿಕ್ಷಣ, ಇತಿಹಾಸಗಳ ಪ್ರೀತಿ ಅನನ್ಯವಾದುದು. ಈ ಪ್ರದೇಶದ ಭಾಷೆ ಮರಾಠಿಯಲ್ಲ, ಕನ್ನಡ. ಹೀಗಾಗಿ, ಇಲ್ಲಿ ಕನ್ನಡ ಶಾಲೆಗಳನ್ನು ಆರಂಭಿಸಬೇಕೆಂದು ಬ್ರಿಟಿಷ್ ಸರಕಾರವನ್ನು ಒತ್ತಾಯಿಸಿದ ಪ್ರಥಮ ವ್ಯಕ್ತಿ ಈತ. ಸರಕಾರದ ಭರವಸೆಯನ್ನು ನಂಬಿ ಕನ್ನಡ ಶಾಲೆಯನ್ನು ಆರಂಭಿಸಿ, ಕೆಲವು ತಿಂಗಳು ಸ್ವಂತ ಹಣದಿಂದಲೇ ಶಿಕ್ಷಕರ ಸಂಬಳ ನೀಡಿದುದು ಇವನ ಕನ್ನಡ ಪ್ರೀತಿಗೆ ನಿದರ್ಶನವೆನಿಸಿದೆ. ಇದಲ್ಲದೆ ಇತಿಹಾಸದ ಬಗ್ಗೆ ಅಪಾರ ಆಸಕ್ತಿ ಹೊಂದಿದ್ದ ಇವನು ಮುಂಬೈ ಕರ್ನಾಟಕ, ನಿಜಾಮ

ಕರ್ನಾಟಕದ ಪಶ್ಚಿಮ ಭಾಗ, ಹಳೆಯ ಮೈಸೂರು ಪ್ರಾಂತದ ಉತ್ತರ ಭಾಗಗಳಿಂದ ೧೩೦೦ ಶಾಸನಗಳನ್ನು ಸಂಗ್ರಹಿಸಿ ಇವುಗಳಲ್ಲಿ ೫೯೪ ಶಾಸನಗಳನ್ನು ಆರಿಸಿಕೊಂಡು 'ಕರ್ನಾಟಕ ದೇಶ್ ಇನ್‌ಸ್ಕ್ರಿಪ್ಷನ್ಸ್' ಹೆಸರಿನ ಸಂಪುಟವನ್ನು ಸಿದ್ಧಪಡಿಸಿದ್ದಾನೆ."[೫]

ಕಿತ್ತೂರು ಭಾಗದಲ್ಲಿ ಮೊದಲ ಕನ್ನಡ ಶಾಲೆ ಪ್ರಾರಂಭಿಸಿದ ವಿಷಯ ಕಲಬುರ್ಗಿ ಅವರ ಶೋಧದಿಂದ ನಮಗೆ ಮೊದಲ ಬಾರಿಗೆ ತಿಳಿಯುತ್ತದೆ. ಕಲಬುರ್ಗಿ ಅವರು ಇಂಗ್ಲೆಂಡಿನ ಬ್ರಿಟಿಷ್ ಲೈಬರ್ರಿಯಲ್ಲಿದ್ದ Miscellaneous Notes of Sir Walter Elliot ಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡು Sketch of the events in the Southern Maratha Country, Connected with the insurrection At Kittur Between Spetember and December ೧೮೨೪ ಎಂಬ ಭಾಗವನ್ನು 'ದಕ್ಷಿಣ ಮರಾಠಾ ದೇಶಕ್ಕೆ ಸೇರಿದ ಕಿತ್ತೂರಿನಲ್ಲಿ ೧೮೨೪ರ ಸಪ್ಟಂಬರ್ ಮತ್ತು ಡಿಸೆಂಬರ್ ನಡುವೆ ಜರುಗಿದ ಬಂಡಾಯಕ್ಕೆ ಸಂಬಂಧಿಸಿದ ಘಟನಾವಳಿಗಳು' ಎಂಬ ಹೆಸರಿನಲ್ಲಿ ಅನುವಾದಿಸಿ ಮೂಲದೊಂದಿಗೆ 'ಕಿತ್ತೂರ ಸಂಸ್ಥಾನ ಸಾಹಿತ್ಯ ಭಾಗ–೩' ಕೃತಿಯಲ್ಲಿ ಪ್ರಕಟಿಸಿದ್ದಾರೆ. (ತೋಂಟದಾರ್ಯಮಠದ ಪ್ರಕಟಣೆ ೨೦೧೫)

ಕ್ರಿ.ಶ. ೧೮೩೬ ಮೇ ೩ ರಂದು ಪ್ರಪ್ರಥಮ ಅಸಿಸ್ಟಂಟ್ ಕಲೆಕ್ಟರ್‌ರೆಂದು ಎ. ರೆವೆನ್ ಕ್ರಾಪ್ಟ್ ಅಧಿಕಾರ ವಹಿಸಿಕೊಂಡರು. ಮೊದಮೊದಲಿಗೆ ಜಿಲ್ಲೆಯ ಕೇಂದ್ರಸ್ಥಾನ ಗೋಕಾಕವಾಗಬೇಕೆಂದು ಸಲಹೆ ಸೂಚನೆಗಳಿದ್ದರೂ ಧಾರವಾಡದ ಮುಖ್ಯ ಕಲೆಕ್ಟರ್‌ರಾದ ಡನ್‌ಲಪ್ ಅವರು ಬೆಳಗಾವಿಯನ್ನೇ ಜಿಲ್ಲೆಯ ಕೇಂದ್ರಸ್ಥಾನವನ್ನಾಗಿ ಮಾಡಬೇಕೆಂದು ಆಗಿನ ಸರಕಾರದ ಮೇಲೆ ಒತ್ತಡ ಹೇರಿದರು. ಕ್ರಿ.ಶ. ೧೮೩೮ ಮಾರ್ಚ ೯ ರಂದು ಆಗಿನ ಸರಕಾರದ ಆಜ್ಞೆಯ ಮೇರೆಗೆ ಸಾಮಾನ್ಯ ಆಡಳಿತದ ಮುಖ್ಯ ಕಚೇರಿಯನ್ನಾಗಿ ಬೆಳಗಾವಿಯನ್ನೇ ಆಯ್ಕೆ ಮಾಡಲಾಯಿತು.

ಈ ದಿಶೆಯಲ್ಲಿ ಕ್ರಿ. ಶ. ೧೯೦೧ರಲ್ಲಿ ಕಲೆಕ್ಟರ್‌ರಾಗಿ ಎ. ಆರ್. ಬೋನಸ್ ಇವರು ಕಾರ್ಯನಿರ್ವಹಿಸಿದರು. ೧೮ನೇ ಜಿಲ್ಲಾಧಿಕಾರಿಯಾಗಿ ವಿ.ವಿ. ಮರಡಕರ ಅವರು ಪ್ರಪ್ರಥಮ ಭಾರತೀಯ ಬೆಳಗಾವಿ ಜಿಲ್ಲಾಧಿಕಾರಿಯಾಗಿ ಕಾರ್ಯನಿರ್ವಹಿಸಿದರು. ಬ್ರಿಟಿಷರ ಆಡಳಿತದಲ್ಲಿ ಹಲವು ಕಾರ್ಯ ಚಟುವಟಿಕೆಗಳು ಪ್ರಾರಂಭವಾದಾಗ ಅಂದಿನ ಆಡಳಿತ ಸುಧಾರಣೆಯ ಸಂದರ್ಭದಲ್ಲಿ ಬಹಳಷ್ಟು ದಾಖಲೆ ಪತ್ರಗಳು ಕನ್ನಡ–ಮರಾಠಿ ಮಿಶ್ರಿತ ಹಸ್ತಪ್ರತಿಗಳಾಗಿವೆ. ಕ್ಷೇತ್ರಕಾರ್ಯ ಕೈಕೊಂಡ ಪ್ರಯುಕ್ತ ಜಿಲ್ಲೆಯ ಕುರಿತು ಬ್ರಿಟಿಷ್ ಆಡಳಿತ ಕಾರ್ಯ ವೈಖರಿಯು ಕಾರ್ಯಾಲಯದಲ್ಲಿ ಅಧಿಕಾರಿಗಳು ಛಾಪಾಕಾಗದದ ಪ್ರತಿಗಳು ಮತ್ತು ನೋಟಿಸುಗಳು, ನೇಮಕಾತಿ ಆದೇಶ ಪತ್ರಗಳು ಮತ್ತು ಗಡಿ ಕುರಿತು ಪತ್ರಿಕೆಯಲ್ಲಿ ಪ್ರಕಟಗೊಂಡಿರುವ ಲೇಖನ ಹಾಗೂ ಬಾದಶಾಹಿ ಜಾಹೀರ್‌ನಾಮೆಗಳು ದೊರೆತಿರುವುದನ್ನು ಗಮನಿಸಬೇಕಾಗುತ್ತದೆ. ಈ ದಾಖಲೆಗಳ ಆಧಾರದಲ್ಲಿ ಬೆಳಗಾವಿ ಅಚ್ಚಗನ್ನಡ ಪ್ರದೇಶವೆಂದು ನಿಚ್ಚಳವಾಗಿ ಹೇಳಬಹುದಾಗಿದೆ.

ಜಾಹೀರ್‌ನಾಮೆ :

"ಇಂಗ್ಲೆಂಡಿನ ೫ನೇ ಜಾರ್ಜ್ ಬ್ರಿಟಿನ್ ಐರ್ಲೆಂಡ್ ಎಂಬ ಸಂಯುಕ್ತ ರಾಜ್ಯದ ಸಮುದ್ರಾಚೆಗಿರುವ ಬ್ರಿಟಿಷ್ ರಾಷ್ಟ್ರಗಳ ಅರಸರಾದ ೫ನೇ ಜಾರ್ಜ್ ತಮ್ಮ ವೈಸರಾಯ್ ಮತ್ತು ಗೌರ್‍ನರ್ ಜನರಲ್‌ರವರಿಗೂ ಹಿಂದೂಸ್ಥಾನದೊಳಗಿನ ಸಂಸ್ಥಾನಿಕರಿಗೂ ಎಲ್ಲ ಜಾತಿ-ಪಂಥಗಳು ಹಿಂದೂಸ್ಥಾನಗಳಗಿನ ಎಲ್ಲ ಪ್ರಜೆಗಳಿಗೂ ಅಭಿನಂದನ ಪೂರ್ವಕವಾಗಿ ತಿಳಿಸುವುದೇನಂದರೆ ಹಿಂದೂಸ್ಥಾನದ ಎಲ್ಲಾ ಆಡಳಿತ ಸುಖಮಯ ಸಮೃದ್ಧಿಯಿಂದ ಸಾಗಲಿ. ನನ್ನ ವತಿಯಿಂದ ಸಂಸ್ಥಾನಿಕರ ಹೊಸ ಸಭೆಯನ್ನು ಬ್ರಿಟಿಷ್ ಹಿಂದೂಸ್ಥಾನದೊಳಗಿ ರಾಜ್ಯಪದ್ಧತಿಯನ್ನು ಸುರುಮಾಡಲಿಕ್ಕಾಗಿ ಬರುವ ಛಳಿಗಾಲದಲ್ಲಿ ನನ್ನ ಪ್ರಿಯ ಪುತ್ರನಾದ ಪ್ರಿನ್ಸ್ ಆ ವೇಲ್ಸ್‌ನನ್ನು ಹಿಂದೂಸ್ಥಾನಕ್ಕೆ ಕಳುಹಿಸಬೇಕೆಂದು ನನ್ನ ಇಚ್ಛೆಯಿದೆ ಮತ್ತು ನನ್ನ ಎಲ್ಲ ಪ್ರಜೆಗಳೊಡನೆ ನಾನು ಸರ್ವಶಕ್ತನಾದ ಪರಮೇಶ್ವರನಿಗೆ ಪ್ರಾರ್ಥಿಸುವುದೇನೆಂದರೆ ಅವನ ಪ್ರೇರಣೆಯಿಂದ ಮತ್ತು ಅವನ ಸಹಾಯದಿಂದ ಹಿಂದೂಸ್ಥಾನವು ಹೆಚ್ಚೆಚ್ಚು ಸಮೃದ್ಧಿಯನ್ನು ಸಮಾಧಾನವನ್ನು ಪಡೆದು ಅದಕ್ಕೆ ಕ್ರಮೇಣ ಪೂರ್ಣ ರಾಜಕೀಯ ಸ್ವಾತಂತ್ರ್ಯವು ಪ್ರಾಪ್ತವಾಗಲಿ"[೬] ಎಂದು ಬಾದಶಾಹಿ ಜಾಹೀರ್‌ನಾಮೆ ಅತ್ಯಂತ ದೊಡ್ಡ ಹಾಳೆಯ ಮೇಲೆ ೮ ಅಂಶಗಳನ್ನು ಬಾದಶಾಹಿ ಇದರಲ್ಲಿ ಪ್ರಸ್ತಾಪಿಸಿದ್ದಾನೆ.

ಈ ಜಾಹೀರನಾಮೆಗೆ ಪೂರಕವಾದ ಇನ್ನೊಂದು ಚಿಕ್ಕದಾದ ಇಂಥ ಪ್ರತಿಯು ನನಗೆ ದೊರಕಿದೆ. ಅದು ಬಾದಶಾಹೀ ಜಾಹೀರನಾಮೆಯು ಎಂದು ಶೀರ್ಷಿಕೆಯನ್ನೊಳಗೊಂಡಿದೆ. ಬಾದಶಾಹೀ ರಾಜ್ಯಾರೋಹಣ ಮಹೋತ್ಸವ ಕಾರ್ಯಕ್ರಮದ ವಿಷಯವಿದೆ. 'ನಮ್ಮ ಬಾದಶಾಹೀ ರಾಜ್ಯಾರೋಹಣದ ಮಹೋತ್ಸವವನ್ನು ಸರ್ವಶಕ್ತನಾದ ಪರಮೇಶ್ವರನ ಅನುಗ್ರಹದಿಂದಲೂ ಕೃಪೆಯಿಂದಲೂ ಸನ್ ಸಾವಿರದಾ ಒಂಭಯಿನೂರ ಹನ್ನೊಂದನೇ ಇಸ್ವಿಯ ಜೂನ ತಿಂಗಳಿನ ಇಪ್ಪತ್ತೆರಡನೇ ತಾರೀಖಿನ ದಿನ ಮಾಡಬೇಕೆಂಬ ಇರಾದೆಯನ್ನು ನಮ್ಮ ಆಡಳಿತೆಯು ಮೊದಲನೆಯ ವರ್ಷದಲ್ಲಿ ನಮ್ಮ ಬಾದಶಾಹೀ ನಾಮೆಯನ್ನು ತಿಳಿಸಿರುತ್ತೇವೆ. ಗವರ್ನರರು ಇತರ ಅಮಲದಾರರು ಮತ್ತು ನಮ್ಮ ಸಂರಕ್ಷಣೆಯ ಕೆಳಗಿರುವ ದೇಶಿ ಸಂಸ್ಥಾನಗಳ ಅರಸರು, ಸರದಾರರು ದಿಲ್ಲಿಯಲ್ಲಿರುವ ಸರ್ವಜನರಿಗೂ ಜಾಹೀರನಾಮೆ ಮಾಡಿದ ಆದೇಶದ ಪತ್ರ'ವು ಒಂದು ಚಾರಿತ್ರಿಕ ದಾಖಲಾರ್ಹವಾಗಿದೆ. ಈ ಜಾಹೀರ ಪತ್ರವು ನಮ್ಮ ಜಿಲ್ಲೆಯ ಬಹುತೇಕ ಎಲ್ಲ ಸಂಸ್ಥಾನಿಕರಿಗೂ ಬಂದಿದೆ. ವಂಟಮುರಿ, ಶಿರಸಂಗಿ ಸಂಸ್ಥಾನಿಕರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರೆಂಬುದು ಗಮನಾರ್ಹ ಅಂಶವಾಗಿದೆ.

ಬ್ರಿಟಿಷರ ಆಡಳಿತದಲ್ಲಿ ಕನ್ನಡ ಬಳಕೆಯಾಗಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಕನ್ನಡದಲ್ಲಿಯೇ ಮುಂಬೈ ಹೈಕೋರ್ಟ ನೋಟೀಸ್ ಜಾರಿ ಮಾಡಿದೆ. 'ಮಹಾರಾಷ್ಟ್ರ ಸರಕಾರವು ಅತ್ತ ಬೆಳಗಾವಿ ಗಡಿ ಬಗ್ಗೆ ಇನ್ನೂ ಕ್ಯಾತೆ ತೆಗೆಯುತ್ತಿದ್ದರೆ, ಸ್ವಾತಂತ್ರ್ಯಪೂರ್ವದಲ್ಲೇ ಮುಂಬೈ ನ್ಯಾಯಾಧಿಕಾರದ ಹೈಕೋರ್ಟನಲ್ಲಿ ಕನ್ನಡ ಭಾಷೆ ೧೯೨೯ರಲ್ಲಿಯೇ ಬಳಕೆಯಾಗುತ್ತಿರುವ ಬಗ್ಗೆ ಒಂದೊಂದೇ ದಾಖಲೆಗಳು ಹೊರಬೀಳುತ್ತಿವೆ. ಬೆಳಗಾವಿ ಜಿಲ್ಲೆ ಭಾಷಾವಾರು ಪ್ರಾಂತಗಳ

ರಚನೆಯ ಪೂರ್ವದಲ್ಲಿ (೧೯೫೬) ಮುಂಬೈ ಪ್ರಾಂತದ ಆಡಳಿತಕ್ಕೆ ಒಳಪಟ್ಟಿತ್ತು. ಅಂದಿನಿಂದಲೂ ಇಲ್ಲಿ ಕನ್ನಡ ಪ್ರಮುಖ ಆಡಳಿತ ಭಾಷೆಯಾಗಿತ್ತು ಎಂಬುದಕ್ಕೆ ಮುಂಬೈ ಹೈಕೋರ್ಟಿನ ಆದೇಶ ದಾಖಲೆಗಳು ಖಚಿತಪಡಿಸುತ್ತವೆ. ದಿವಾಣಿ ಅರ್ಜಿ ನಂ. ೫೫೩ರಲ್ಲಿ ಅರ್ಜಿದಾರರಾದ ಜಿಲ್ಲೆಯ ವಂಟಮುರಿ ರಾಜಾ ಲಖಮಗೌಡ ಬಸವಪ್ರಭು ಅವರು ಪ್ರಿವಿ ಕೌನ್ಸಿಲ್‌ಗೆ ಅಪೀಲು ಮಾಡಲು ಪರವಾನಿಗೆ ಕೇಳಿದ್ದರು. ಪ್ರತಿವಾದಿಯಾದ ಹುಕ್ಕೇರಿ ತಾಲೂಕಿನ ವಂಟಮುರಿ ಅಪ್ಪಾಸಹೇಬ ಬಸವಂತರಾವ ಉರ್ಫ್ ಅಣ್ಣಾಸಾಹೇಬ ಸುಭೆದಾರ ಅವರಿಗೆ ಸಪ್ಟಂಬರ್ ೧೦, ೧೯೨೬ರಲ್ಲಿ ಮುಂಬೈ ಹೈಕೋರ್ಟ ಕನ್ನಡದಲ್ಲಿ ನೋಟಿಸ್ ಹೊರಡಿಸಿತ್ತು. ಇದರ ಮೂಲ ಪ್ರತಿಯನ್ನು ಸುಭೇದಾರ ಮನೆತನದ ರಾವಸಾಹೇಬ ಅಪ್ಪಾಸಾಹೇಬ ಸುಭೇದಾರರವರು ಬೆಳಗಾವಿ ವಕೀಲರಾದ ಎಸ್.ವಿ. ಪಾಟೀಲರಿಗೆ ಒಪ್ಪಿಸಿದೆ. (ಇದರ ಮೂಲ ಪ್ರತಿಯೊಂದು ನನ್ನ ಸಂಗ್ರಹದಲ್ಲಿದೆ)

ಬ್ರಿಟಿಷರ್ ಆಳ್ವಿಕೆಯಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು ಎನ್ನುವುದಕ್ಕೆ ಹಲವು ದಾಖಲೆಗಳು ದೊರೆಯುತ್ತವೆ. ಅಂದರೆ ಬೆಳಗಾವಿ ನ್ಯಾಯಾಲಯಕ್ಕೆ ಮುಂಬೈ ಹೈಕೋರ್ಟನಿಂದಲೂ ಸಮನ್ಸ್ ಜಾರಿ ಮಾಡುವಾಗಲೂ ಅಚ್ಚಕನ್ನಡದ ಅಂಕಿಸಂಖ್ಯೆಗಳನ್ನು ಕೂಡ ನಾವು ನೋಡಬಹುದು. "ಭಾರತ ಸ್ವತಂತ್ರವಾಗುವ ಪೂರ್ವದಲ್ಲಿ ಸಂಪೂರ್ಣ ಕನ್ನಡ ಭಾಗಗಳಲ್ಲಿ ಅದರಲ್ಲೂ ನ್ಯಾಯಾಲಯಗಳಲ್ಲಿ ಕನ್ನಡ ಭಾಷೆಯ ಬಳಕೆಯಾಗುತ್ತಿತ್ತೆಂದು ಸಾಕಷ್ಟು ಪುರಾವೆ ದಾಖಲೆಗಳ ಮೂಲಕ ತಿಳಿದುಬರುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಮುಂಬೈ ಕರ್ನಾಟಕ ಪ್ರದೇಶಗಳಲ್ಲಿ ಮುಂಬೈ ಉಚ್ಚನ್ಯಾಯಾಲಯ ಸಮನ್ಸ್ ಪ್ರತಿಗಳು ಬೆಳಗಾವಿ ವಿಭಾಗದಲ್ಲಿ ಜಾರಿ ಮಾಡುವ ಸಂದರ್ಭಗಳಲ್ಲಿ ಅವು ಅಚ್ಚಕನ್ನಡದಲ್ಲಿ ಜಾರಿಯಾಗುತ್ತಿದ್ದವು. ಅಂದರೆ ಬ್ರಿಟಿಷ್ ಆಡಳಿತದಲ್ಲಿ ಸಮನ್ಸ್ ಜಾರಿ ಮಾಡುವಾಗ ಅಚ್ಚ ಕನ್ನಡದಲ್ಲಿ ಅಷ್ಟೇಅಲ್ಲ ಅಚ್ಚ ಕನ್ನಡ ಅಂಕಿ ಅಂಶಗಳನ್ನು ಸಹ ಬಳಸಲಾಗುತ್ತಿತ್ತು. ನ್ಯಾಯಾಲಯದಲ್ಲಿ ಪ್ರಾದೇಶಿಕ ಭಾಷೆಗೆ ಹೆಚ್ಚಿನ ಪ್ರಾಧಾನ್ಯತೆ ಕೊಡುತ್ತಿದ್ದರು ಎಂದು ದಾಖಲೆಗಳ ಮೂಲಕ ತಿಳಿದು ಬರುತ್ತದೆ." [೯೭]

ಅಷ್ಟೇ ಅಲ್ಲದೆ ಬ್ರಿಟಿಷ್‌ರ ಆಡಳಿತಾವಧಿಯಲ್ಲಿ ನೌಕರಿಗೆ ತೆಗೆದುಕೊಂಡರೆ ನೇಮಕಾತಿ ಆದೇಶ ಕೂಡ ಕನ್ನಡದಲ್ಲಿ ಬರೆಯಲ್ಪಟ್ಟಿರುತ್ತಿತ್ತು. ಇಂಥದೊಂದು ಐತಿಹಾಸಿಕ ನೇಮಕಾತಿ ದಾಖಲೆ ಪತ್ರ ಇರುವುದು ಕಂಡು ಬಂದಿದೆ. ಇದು ಮೊದಲ ನೋಟಕ್ಕೆ ಮಕ್ಕಳು ಆಟವಾಡಲು ಮಾಡಿಕೊಂಡ ಮೊಟ್ಟೆ ಆಕಾರದ ಖಾಕಿ ಪತ್ರದಂತೆ ಕಂಡರೂ ಈ ಪತ್ರ ಅಮೂಲ್ಯ ಮತ್ತು ತೀರಾ ಅಪರೂಪವಾಗಿದೆ. ಇದು ಅಂತಿಂಥ ಪತ್ರವಲ್ಲ ಪೊಲೀಸ್ ಅಮಲ್ದಾರ್ ವೃತ್ತಿಗೆ ನೇಮಕಾತಿ ಪತ್ರ. ಖಾಕಿ ಅರಿವೆಯ ಮೊಟ್ಟೆ ಆಕಾರದ ಪತ್ರದಲ್ಲಿ ಒಂದು ಭಾಗದಲ್ಲಿ ಕನ್ನಡ ಮತ್ತು ಇನ್ನೊಂದು ಭಾಗದಲ್ಲಿ ಆಂಗ್ಲಭಾಷೆಯನ್ನು ಬಳಸಿದ ನೇಮಕಾತಿ ಪತ್ರವು ಮೊದಲ ನೋಟಕ್ಕೆ ಗಮನ ಸೆಳೆಯುತ್ತದೆ.

ಎರಡು ಪ್ರತ್ಯೇಕ ಹಾಳೆಯಲ್ಲಿ ಕನ್ನಡ ಮತ್ತು ಆಂಗ್ಲಭಾಷೆಯಲ್ಲಿ ಎರಡು ಪ್ರತ್ಯೇಕ ಪತ್ರಗಳು. ಇವುಗಳನ್ನು ಜೋಡಿಸಲು ಪತ್ರಕ್ಕೆ ಲೋಹದ ರಂಧ್ರ ಮಾಡಿ ಅದನ್ನು ಪರಸ್ಪರ ದಾರದಲ್ಲಿ ಜೋಡಿಸಿ ನೇಮಕಾತಿ ಪತ್ರವನ್ನು ಕಳುಹಿಸಿಕೊಡುವ ಪದ್ಧತಿ ಇತಿಹಾಸದ ಮುಖವನ್ನು ತೆರೆದಿಡುತ್ತದೆ.

ಆಂಗ್ಲಭಾಷೆಯಲ್ಲಿ ಗೋಲಾಕಾರದ ಮುದ್ರೆ ಇದ್ದು ಈ ಕೈಬರಹವನ್ನು ಕರಿಯ ಮಸಿಯಿಂದ ಹೆಸರು ಮತ್ತು ರುಜು ಬರೆಯಲಾಗಿದೆ. ಅಂಕಿಸಂಖ್ಯೆಗಳನ್ನು ವಿವಿಧ ಲೇಖನಗಳಿಂದ ಬರೆದಿರುವುದು ವಿಶಿಷ್ಟವಾಗಿದೆ. ಈ ನೇಮಕಾತಿ ಪತ್ರ ಬಂದಿರುವುದ ಬಾಬು ಶ್ರೀಶೈಲಪ್ಪ ಕೂಪಾಟಿ ಅವರಿಗೆ ೧೯೩೯ರಲ್ಲಿ ಪೊಲೀಸ್ ಅಮಲ್ದಾರರಾಗಿ ನೇಮಕಾತಿ ಆದೇಶಿಸಿ ಅವರಿಗೆ ಈ ಪತ್ರವನ್ನು ನೀಡಲಾಗಿದೆ. ಈ ಪತ್ರದಲ್ಲಿ ಅವರಿಗೆ ನೀಡಲಾದ ಅಧಿಕಾರ, ಅವರಿಗೆ ವಹಿಸಿಕೊಡಲಾದ ಕೆಲಸದ ವಿವರಗಳು ಇವೆ.

ಮುಂಬೈ ಹೈಕೋರ್ಟ ೧೯೪೩ರಲ್ಲಿ ನೀಡಿದ ಕನ್ನಡದ ಸಮನ್ಸ್ ಪ್ರತಿ ಚಾರಿತ್ರಿಕ ಅನನ್ಯತೆಗೆ ಸಾಕ್ಷಿಯಾಗಿದೆ. ಏಕೀಕರಣಕ್ಕೂ ಮುಂಚೆ ಬೆಳಗಾವಿಯನ್ನು ಮುಂಬೈ–ಕರ್ನಾಟಕ ಪ್ರದೇಶ ಎಂದು ಗುರುತಿಸಲಾಗಿತ್ತು. ಆ ಸಂದರ್ಭದಲ್ಲಿ ಕನ್ನಡ ಮುಂಬೈವರೆಗೂ ಪ್ರಚಲಿತದಲ್ಲಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿದೆ. ೧೯೪೩ ಮಾರ್ಚ ೨೯ರಂದು ಮುಂಬೈ ಹೈಕೋರ್ಟ ನ್ಯಾಯಾಧೀಶರಾಗಿದ್ದ ಸರ್ ಜೋನ್ ವಿಲ್ಯಂ ಫೀಷರ ಬೋಮಂಟನಾಯಿಟ್ ಅವರು ಈ ಅಚ್ಚಗನ್ನಡದ ಸಮನ್ಸ್ ನೀಡಿದ್ದಾರೆ. ಈ ಸಮನ್ಸ್ ಪ್ರತಿಯನ್ನು ಅಪರೂಪವಾಗಿರುವ ಕಾರಣಕ್ಕೆ ಮಾಧ್ಯಮದವರಿಗೆ ಮತ್ತು ಕರ್ನಾಟಕ ಸರಕಾರಕ್ಕೆ ನೀಡಲಾಗಿದೆ. ಹುಕ್ಕೇರಿ ತಾಲೂಕಿನ ನೆರಲಿ ಗ್ರಾಮದ ಶಂಕರೆಪ್ಪಾ ಶ್ರೀಶೈಲಪ್ಪ ಕುಪಾಟಿ ಅವರಿಗೆ ಪ್ರಕರಣವೊಂದಕ್ಕೆ ಸಂಬಂಧಿಸಿದಂತೆ ಹೊರಡಿಸಲಾದ ಈ ಸಮನ್ಸ್ ಸ್ವಾತಂತ್ರ್ಯಪೂರ್ವದಲ್ಲಿ ಅಚ್ಚಕನ್ನಡ ಬಳಕೆಯಾಗುತ್ತಿತ್ತು ಎಂಬುದಕ್ಕೆ ಸಮನ್ಸ್ ಪ್ರತಿಯಲ್ಲಿ ಬಳಸಿದ ಎಲ್ಲ ಪದ ಹಾಗೂ ಸಂಖ್ಯೆಗಳು ಸಹ ಅಚ್ಚಕನ್ನಡದಲ್ಲಿಯೇ ಇರುವುದು ಮತ್ತೊಂದು ವಿಶೇಷವಾಗಿದೆ.

"ಬೆಳಗಾವಿ ಕನ್ನಡಿಗರದ್ದು ಎನ್ನುವುದಕ್ಕೆ ಸಾಕಷ್ಟು ದಾಖಲೆಗಳು ಮೈಲುಗಲ್ಲಿನಂತೆ ನಿಂತಿವೆ. ೧೯೨೪ರಲ್ಲಿ ಮುಂಬೈ ಉಚ್ಚ ನ್ಯಾಯಾಲಯ ಕನ್ನಡ ಭಾಷೆಯಲ್ಲಿ ಸಮನ್ಸ್ ನೀಡುವ ಮೂಲಕ ಬೆಳಗಾವಿ ಕರ್ನಾಟಕಕ್ಕೆ ಸೇರಿದ್ದು ಎಂಬುದನ್ನು ಮತ್ತೊಮ್ಮೆ ಸಾಬೀತು ಪಡಿಸಿದಲ್ಲದೇ ೧೯೨೪ರಲ್ಲಿ ರಾಷ್ಟ್ರಪಿತ ಮಹಾತ್ಮಾ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ಬೆಳಗಾವಿಯಲ್ಲಿ ಜರುಗಿದ ೩೯ನೇ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಸಂಪೂರ್ಣ ಕನ್ನಡಮಯವಾಗಿತ್ತು. ಸಮಾರಂಭದ ಸ್ಥಳಕ್ಕೆ ಕನ್ನಡಿಗರ ಹೃದಯ ಸಾಮ್ರಾಜ್ಯ 'ವಿಜಯನಗರ' ಎಂದು ಹೆಸರಿಡಲಾಗಿತ್ತು. ಆ ಸಮಾರಂಭದ ವೇದಿಕೆ, ಬ್ಯಾನರ್‌ಗಳೆಲ್ಲ ಕನ್ನಡಮಯವಾಗಿದ್ದವು ಎಂಬುದನ್ನು ಇವತ್ತಿಗೂ ಬೆಳಗಾವಿ ಗಾಂಧಿ ಸ್ಮಾರಕ ಮಂದಿರದಲ್ಲಿ ಗಮನಿಸಬಹುದು.  ಅಷ್ಟೇ ಅಲ್ಲ 'ಮಹಾತ್ಮಾ ಗಾಂಧೀಜಿಯವರು ಬೆಳಗಾವಿ ಭಾಗದ ಅನುಯಾಯಿಗಳಿಗೆ ಕಾಗದ ಬರೆಯುತ್ತಿದ್ದಾಗ ಬೆಳಗಾವಿ ಕೆಳಗೆ 'ಕರ್ನಾಟಕ' ಎಂದು ವಿಳಾಸವನ್ನು ತಪ್ಪದೆ ಉಪಯೋಗಿಸುತ್ತಿದ್ದರು."[೮]

೧೯೧೬ರಲ್ಲಿ ಬಾಲಗಂಗಾಧರ ಟಿಳಕರು ಈಗಿನ ಸವದತ್ತಿ ತಾಲೂಕಿನ ಗುರ್ಲಹೊಸೂರ ಗ್ರಾಮಕ್ಕೆ ಬಂದು ಭಾಷಣ ಮಾಡಿದ್ದು, ಅಥಣಿ ಶಿವಯೋಗಿಗಳನ್ನು ಭೇಟಿಯಾಗಿದ್ದು ನೋಡಿದರೆ ಹೆಮ್ಮೆ ಎನಿಸುತ್ತದೆ. ಕರ್ನಾಟಕದ ಸಮೃದ್ಧ ನಾಡು ಎಂದರೆ ಬೆಳಗಾವಿ ಜಿಲ್ಲೆ, ಬೆಳಗಾವಿ ಕರ್ನಾಟಕ ಅವಿಭಾಜ್ಯ ಅಂಗ ಎಂದು ಟಿಳಕರು ಮಾತನಾಡುತ್ತ 'ಕರ್ನಾಟಕದ ಬೆಳಗಾವಿಯು ರಾಷ್ಟ್ರೀಯತೆಯ ಭದ್ರಕೋಟೆಯಿದ್ದಂತೆ' ಎಂದು ಸಾರ್ವಜನಿಕವಾಗಿ ಮಾತನಾಡಿದರು. ಇದು ಕೂಡ ದಾಖಲಾರ್ಹವಾದುದು.

**ಕ್ರಯಪತ್ರಗಳ ದಾಖಲೆಗಳು :**

ಸ್ಥಳೀಯವಾಗಿ ಬೆಳಗಾವಿಯಲ್ಲಿಯೇ ಬ್ರಿಟಿಷ್ ಆಡಳಿತದ ನೋಂದಣಿ ಕಾರ್ಯಾಲಯದಲ್ಲಿ ಕನ್ನಡ ಭಾಷೆಯನ್ನು ಬಳಸುತ್ತಿದ್ದರು. ಒಬ್ಬ ವ್ಯಕ್ತಿ ತನ್ನ ಆಸ್ತಿ ಮಾರಾಟ ಮಾಡಬೇಕಾದಾಗ ಅದನ್ನು ತೆಗೆದುಕೊಳ್ಳುವವನು, ಇಬ್ಬರ ಮಧ್ಯ ಒಂದು ಒಪ್ಪಂದದ ಪತ್ರ ಅಥವಾ ಹಕ್ಕನ್ನು ಬಿಟ್ಟುಕೊಡುವ ಕಾರ್ಯ ನಡೆಸಬೇಕಾದಾಗ ನೋಂದಣಿ ಕಾರ್ಯಾಲಯಕ್ಕೆ ಹೋಗಿ ಬ್ರಿಟಿಷ್ ಸರಕಾರದ ನಿಯಮದಂತೆ ತಮ್ಮ ಆಸ್ತಿಯನ್ನು ಕ್ರಯ ಮಾಡಿಸಬೇಕಾಗುತ್ತಿದ್ದ ನಿದರ್ಶನವನ್ನು ನಾವು ಗಮನಿಸಬಹುದು. "ಈ ಕ್ರಮ ಪತ್ರವನ್ನು ದಿನಾಂಕ ೨೮-೨-೧೯೩೩ರಂದು ರಾಮಸಿಂಗ್ ಠಾಕೂರಸಿಂಗ್ ಡಮೂನೆ-ರಜಪೂರ ಅಲಿಯಾಸ ಘೋರ ಇವರು ಕನಯ್ಯಸಿಂಗ ಲಾಲಸಿಂಗ್ ಡಮೂನೆ ರಜಪೂರ ಅಲಿಯಾಸ ಘೋರ ಇವರಿಗೆ ನೂರುರೂಪಾಯಿಗಳನ್ನು ಖರೀದಿ ಹಣಪಡೆದು ಚವಾಟಗಲ್ಲಿಯ ಸಿ.ಟಿ.ಎಸ್. ಸಂ. ೪೭೭೫/೨ ಇವುಗಳ ಬಗ್ಗೆ ದ್ತಾವೇಜು ಬೆಳಗಾವಿಯ ನೋಂದಣಿ ಅಧಿಕಾರಿಯ ಕಚೇರಿಯಲ್ಲಿ ನೋಂದ ಮಾಡಲಾಗಿದೆ."[೯]

ಇಂಥ ಮಹತ್ವದ ಛಾಪಾ ಕಾಗದವು ಕ್ಷೇತ್ರಕಾರ್ಯ ಕೈಕೊಂಡಾಗ ದೊರಕಿವೆ. ಬೆಳಗಾವಿಯಲ್ಲಿ ೧೯೩೩ರಲ್ಲಿ ನೋಂದಾದ ಕ್ರಯಪತ್ರಗಳು ಮರಾಠಿ ಭಾಷೆಯಲ್ಲಿ ಇದ್ದರು ಸಹ ಇಲ್ಲಿ ಗಮನಿಸಬೇಕಾದ ಮುಖ್ಯಅಂಶವೆಂದರೆ ಸದರಿ ಪತ್ರಗಳ ಮೇಲಿರುವ ಸರಕಾರದ ಮುದ್ರೆಯು ಕನ್ನಡ ಹಾಗೂ ಆಂಗ್ಲ ಭಾಷೆಗಳಲ್ಲಿವೆ. ಬ್ರಿಟಿಷ್ ಆಳ್ವಿಕೆ ಸಮಯದಲ್ಲಿ ಮೊಹರು ಮುದ್ರೆಗಳೆಲ್ಲವು ಬ್ರಿಟಿಷರು ಬಳಿಸುತ್ತಿದ್ದ ಆಂಗ್ಲ ಭಾಷೆಯಲ್ಲಿದ್ದರು ಕೂಡ ಇಲ್ಲಿಯ ತಾಯ್ನೆಲದ ಭಾಷೆಯಾದ ಕನ್ನಡವನ್ನೂ ಬಳಸಿದ್ದಾರೆ. ಅಂದಿನ ಬ್ರಿಟಿಷ್ ಸರಕಾರದ ಚಿಹ್ನೆ ಮೊಹರು ಗೋಲಾಕಾರವಾಗಿದೆ. ಮೊಹರದಲ್ಲಿ ದಿ. ಸೀಲ್ ಆಫ್ ದಿ ಸಬ್ ರಜಿಸ್ಟರ್, ಬೆಲಗಾಂ ಎಂದು ಆಂಗ್ಲ ಭಾಷೆಯಲ್ಲಿ ಹಾಗೂ ಸಬ್ ರಜಿಸ್ಟರ್ ಇವರ ಮುದ್ರೆ ಬೆಳಗಾವಿ ಎಂದು ಕನ್ನಡದಲ್ಲಿ ನಮೂದಿಸಲಾಗಿದೆ. ಈ ಪ್ರಸ್ತುತ ಕ್ರಯಪತ್ರವು ಒಂದು ರೂಪಾಯಿಯ ಛಾಪಾ ಕಾಗದದ ಮೇಲೆ ಬರೆಯಲಾಗಿದ್ದು, ಮೂರು ಚೌಕಾಕಾರದ ಮೋಹರುಗಳನ್ನು ಹಾಕಲಾಗಿದ್ದು ಅವುಗಳಲ್ಲಿ ದಸ್ತಾವೇಜುಗಳ ವಿವರವನ್ನು ನಮೂದಿಸಲಾಗಿದೆ.

“ಅದೇ ರೀತಿ ೧೯೪೮ರಲ್ಲಿ ಖಾನಾಪುರದಲ್ಲಿ ಕ್ರಯ ಪತ್ರವೊಂದನ್ನು ಶಂಕರ ವಿಠ್ಠಲ ಜೋಶಿ ಇವರು ಶ್ರೀಮತಿ ರಮಾ ನಾಗಪ್ಪ ಗಾವಡೆ ಇವರಿಗೆ ಮಾಡಿಕೊಟ್ಟಿರುತ್ತಾರೆ. ಈ ದಸ್ತವೇಜಿನ ಮೇಲೆ ಗೋಲಾಕಾರದ ಮುದ್ರೆಯಲ್ಲಿ ದಿ. ಸೀಲ್ ಆಫ್ ದಿ ಸಬ್ ರಜಿಸ್ಟ್ರಾರ್ ಆಫ್ ಖಾನಾಪುರ ಅಂತಾ ನಮೂದಿಸಿದೆ. ಹಾಗೂ ಕನ್ನಡದಲ್ಲಿ ‘ಸಬ್ ರಜಿಸ್ಟ್ರಾರ್ ಇವರ ಮುದ್ರೆಯು ಖಾನಾಪೂರ ಎಂದು ನಮೂದಿಸಲಾಗಿದೆ. ಅದರ ಮೇಲೆ ಬ್ರಿಟಿಷ್ ಸರಕಾರದ ಚಿಹ್ನೆ ಮಧ್ಯದಲ್ಲಿರುತ್ತಿದ್ದರು. ಕ್ರಯಪತ್ರ ಮರಾಠಿಯಲ್ಲಿದ್ದರೂ ಕೂಡ ಕನ್ನಡದ ಮುದ್ರೆಗಳನ್ನು ಕಾಣಬಹುದು. ಇದರಿಂದ ಖಾನಾಪೂರದಲ್ಲಿಯೂ ಕೂಡಾ ಆಡಳಿತ ಭಾಷೆ ಮೊದಲಿನಿಂದಲೂ ಕನ್ನಡವೇ ಆಗಿತ್ತು ಈ ಕ್ರಯಪತ್ರವನ್ನು ೧೨ ಆಣೆ ಕಾಗದದ ಮೇಲೆ ತಯಾರಿಸಿ ನೋಂದಾಯಿಸಲಾಗಿದೆ.”[೧೦೦]

ಜಿಲ್ಲೆಯ ಬೇರೆ ಬೇರೆ ತಾಲೂಕಿನಲ್ಲಿಯು ಕೂಡ ಬ್ರಿಟಿಷ್ ಅಧಿಕಾರಿಗಳು ಕನ್ನಡ ಬಳಸುತ್ತಿದ್ದರು. ದಿನಾಂಕ ೧೮-೩-೧೯೪೧ರಂದು ಬೆಳಗಾವಿ ನೋಂದಣಿ ಅಧಿಕಾರಿ ನೊಂದಾದ ಭಕ್ಷಿಸ್ ಪತ್ರವು ಸಂಪೂರ್ಣವಾಗಿ ಮರಾಠಿಯಲ್ಲಿ ಬರೆಯಲ್ಪಟ್ಟಿದ್ದರೂ ಅಂದಿನ ಅಧಿಕಾರಿಗಳು ಕನ್ನಡ ಭಾಷೆಯ ಮುದ್ರೆ ಮೊಹರುಗಳನ್ನು ಹಾಕಿದ್ದು ಕಾಣುತ್ತೇವೆ.

ದಿನಾಂಕ ೨೨-೧೦-೧೯೩೫ರಲ್ಲಿ ನೋಂದಣಿ ಅಧಿಕಾರಿ ಚಿಕ್ಕೋಡಿ ಇವರಲ್ಲಿ ನೋಂದಾದ ದತ್ತಕ ಪತ್ರವು ಮರಾಠಿ ಭಾಷೆಯಲ್ಲಿದ್ದರೂ ಸಹ ಕನ್ನಡ ಮೊಹರು ಮುದ್ರೆಗಳಿವೆ. ಈ ಪತ್ರವು ೨೦ ರೂಪಾಯಿ ಛಾಪಾ ಕಾಗದದ ಮೇಲೆ ಕೈಬರಹದಿಂದ ಬರೆಯಲ್ಪಟ್ಟಿದೆ.

೧೯೩೨ರಲ್ಲಿ ನೋಂದಣಿ ಅಧಿಕಾರಿ ಚಿಕ್ಕೋಡಿ ಎಂದು ಬರೆಯಲಾಗಿದ್ದು, ಕೈ ಬರಹದಿಂದ ತಯಾರಿಸಲಾದ ಕ್ರಯಪತ್ರವು ಅಚ್ಚಕನ್ನಡದಲ್ಲಿದ್ದು, ಮೋಹರು ಮುದ್ರೆಗಳು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿವೆ. ಈ ದಸ್ತಾವೇಜು ಎಂಟು ಆಣೆ ಕಾಗದದ ಮೇಲೆ ತಯಾರಿಸಿ ನೋಂದಾಯಿಸಲ್ಪಟ್ಟಿದೆ. ಹೀಗೆ ಬ್ರಿಟಿಷ್ ಆಡಳಿತದಲ್ಲಿ ಕನ್ನಡ ಮಾಯವಾಗಿರಲ್ಲವೆಂಬುದು ಈ ಕ್ರಯಪತ್ರಗಳು ಚಾರಿತ್ರಿಕವಾಗಿ ಮಾಹಿತಿ ಒದಗಿಸುತ್ತವೆ.

ಕ್ರಯಪತ್ರಗಳು ಮಾತ್ರವಲ್ಲದೆ ಭೂದಾಖಲೆಗಳು ಸಹ ಕನ್ನಡ ಭಾಷೆಯಲ್ಲಿರುವುದು ಮಹತ್ವದ ಸಂಗತಿಯಾಗಿದೆ. ಆಸ್ತಿ ತೆರಿಗೆ, ಮನೆ ತೆರಿಗೆಯನ್ನು ಸರಕಾರಕ್ಕೆ ನಿಗದಿಪಡಿಸಿದ ಹಣವನ್ನು ಸಕಾಲದಲ್ಲಿ ಪಾವತಿಸಬೇಕಾಗಿತ್ತು. ಸಂಬಂಧಪಟ್ಟ ವ್ಯಕ್ತಿಯು ತೆರಿಗೆ ಸಂದಾಯ ಮಾಡಿದಾಗ ಹಣ ಪಡೆದ ಬಗ್ಗೆ ರಶೀದಿಯನ್ನು ನೀಡಬೇಕಾಗುತ್ತಿತ್ತು. ಸರಕಾರದ ರಶೀದಿಗಳು ಅಧಿಕಾರಿಗಳ ಕೈಬರಹ ಅಚ್ಚಕನ್ನಡದಲ್ಲಿರುವುದು ಸಂತಸದ ವಿಷಯ. ಬೆಳಗಾವಿಯಲ್ಲಿಯೇ ಬ್ರಿಟಿಷ್‌ರ ಕಾಲದಲ್ಲಿ ಕನ್ನಡದಲ್ಲಿಯೇ ಪಹಣಿ ಪತ್ರಿಕೆಗಳನ್ನು ಬಹಳ ಹಿಂದಿನಿಂದಲೂ ಕೊಡಲಾಗುತ್ತಿತ್ತು. ಸಾಕಷ್ಟು ಹಕ್ಕು ದಾಖಲೆಗಳು ಸಹ ಕನ್ನಡದಲ್ಲಿಯೇ ರೂಪಿತವಾಗಿವೆ. ೧೯೨೮ರಲ್ಲಿಯೇ ಬೆಳಗಾವಿಯಲ್ಲಿ ಭೂ ಪರಿವೀಕ್ಷಣೆ ವಿಭಾಗ ಅಂದರೆ ಈಗಿನ ನಗರ ಮಾಪನ ಕಾರ್ಯಾಲಯವು ಪ್ರಾರಂಭವಾದಾಗಿನಿಂದ ಅಲ್ಲಿನ ಅಧಿಕಾರಿಗಳು ಮರಾಠಿಯಲ್ಲಿರುವ ಪಹಣಿಯನ್ನು ಕೈಬಿಟ್ಟು ಕನ್ನಡ ಭಾಷೆಯಲ್ಲಿಯೇ

ಅವುಗಳ ವಿಷಯ ಬರುವಂತೆ ನೋಡಿಕೊಂಡಿದ್ದಾರೆ.

ಬ್ರಿಟಿಷರ ಆಡಳಿತದಲ್ಲಿ ಕನ್ನಡವೇ ಆಡಳಿತ ಭಾಷೆಯಾಗಿತ್ತು ಎಂಬುದಕ್ಕೆ ಹಲವು ದಾಖಲೆಗಳು ದೊರೆಯುತ್ತವೆ. ಅಷ್ಟೇ ಅಲ್ಲದೆ ಕರ್ನಾಟಕ ಸರಕಾರವು ತನ್ನ ಕೈಫಿಯತ್‌ನ್ನು ಮೂರು ಹಂತದಲ್ಲಿ ೧೭೭ ಪುಟಗಳಷ್ಟು ಸರ್ವೋಚ್ಛ ನ್ಯಾಯಾಲಯಕ್ಕೆ ಸಲ್ಲಿಸಿದೆ. ಬೆಳಗಾವಿ ಜಿಲ್ಲೆಯನ್ನು ಕರ್ನಾಟಕದಿಂದ ಬೇರ್ಪಡಿಸಬಾರದು. ಅದು ಬ್ರಿಟಿಷ್ ಕಾಲದಿಂದಲೂ ಚಾರಿತ್ರಿಕವಾದ ಆಡಳಿತವನ್ನು ನಿರ್ವಹಿಸಿಕೊಂಡು ಬಂದಿರುವುದು ಸರ್ವವಿದಿತ ಎಂದು ಕರ್ನಾಟಕ ಸರಕಾರವೆ ಗಡಿ ಕುರಿತು ಭಾಷೆಯ ಬಳಕೆಗಿರುವ ಚರಿತ್ರೆಯನ್ನು ಅವಲಂಬಿಸಿ ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗವೆಂದು ಹೇಳುತ್ತ ಬರುತ್ತಿರುವುದು ಗಮನಾರ್ಹ ಸಂಗತಿಯಾಗಿದೆ. ಇದಕ್ಕೆ ಪೂರಕವೆಂಬಂತೆ ಮಹಾದೇವ ಬಣಕಾರ ಅವರು 'ಆಂಗ್ಲರ ಆಡಳಿತದಲ್ಲಿ ಕನ್ನಡ' ಎಂಬ ಬೃಹತ್ ಕೃತಿಯನ್ನು ಪ್ರಕಟಿಸಿದ್ದಾರೆ. ಅದರಲ್ಲಿ ಸುಮಾರು ಮೂರು ಸಾವಿರ ದಾಖಲೆಗಳ ವಿವರಗಳನ್ನು ನೀಡಿದ್ದಾರೆ.

ಒಂದು ನಾಡಿನ ಚರಿತ್ರೆಯನ್ನು ಅರಿಯಬೇಕಾದರೆ ಅಲ್ಲಿನ ಜನ ಸಮಾಜ, ಕಾಲವನ್ನು ಅಧ್ಯಯನಿಸಿದಾಗ ಲಿಖಿತ ಅಥವಾ ಅಲಿಖಿತವಾದ ಆಕರಗಳು ಮಹತ್ವವೆನಿಸುತ್ತವೆ. ಬೆಳಗಾವಿ ಜಿಲ್ಲೆಯ ನಾಯಕರ ಚರಿತ್ರೆ ಬಗ್ಗೆ ಅರಿಯುವಲ್ಲಿ ಇತಿಹಾಸ ಮತ್ತು ಪುರಾತತ್ವದಂತ ಕೃತಿ ಮಹತ್ವಪೂರ್ಣವಾಗಿದೆ. ವಕೀಲರಾದ ರವೀಂದ್ರ ತೋಟಿಗೇರ ಅವರು ಜಿಲ್ಲೆಗೆ ಸಂಬಂಧಿಸಿದಂತೆ ಹತ್ತು ಸಾವಿರ ದಾಖಲೆಗಳನ್ನು ಸಂಗ್ರಹಿಸಿದ್ದು ಅಭಿಮಾನದ ಸಂಗತಿಯಾಗಿದೆ. ಇಲ್ಲಿನ ಶಾಸನ, ಹಸ್ತಪ್ರತಿಗಳು ಚಾರಿತ್ರಿಕವಾಗಿ ರಾಜಾಡಳಿತ ಅವರ ವಂಶಾವಳಿ ಆಡಳಿತಾತ್ಮಕ ವಿಧಾನ, ಐತಿಹಾಸಿಕ ಘಟನೆ, ಆರ್ಥಿಕ, ಸಾಮಾಜಿಕ, ಸಂಘಟನೆ ರಾಜಕೀಯ ಸ್ವರೂಪ ಒಟ್ಟು ಸಂಸ್ಕೃತಿಯನ್ನು ಪುನರ್ ರೂಪಿಸಲು ಹಸ್ತಪ್ರತಿಗಳು ಮಹತ್ವದ ದಾಖಲೆಗಳಾಗುತ್ತವೆ ಎಂದರೆ ಅತಿಶಯೋಕ್ತಿಯಲ್ಲ.

**ಸೋದೆಯ ಸದಾಶಿವರಾಯನ ೧೮ ಕೃತಿಗಳು :**

ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದರೆ ಬಹುತೇಕ ಸಾಹಿತ್ಯ ರಾಜಾಶ್ರಯ ಸಾಹಿತ್ಯವೆ ಆಗಿದೆ. ಅರಸರ ಕನ್ನಡ ಪ್ರೀತಿ, ಸಾಹಿತ್ಯ ಪ್ರೇಮ, ಧರ್ಮದೃಷ್ಟಿ, ವಿದ್ಯಾ ಕಾಳಜಿ, ಕಾವ್ಯಪೋಷಣೆ ಕಳಕಳಿ ಅನನ್ಯ. ರಾಜರ ಆಶ್ರಯ ಪಡೆದ ಅನೇಕ ಕವಿಗಳು, ಶಾಸ್ತ್ರಜ್ಞರು ಅಧಿಕ ಪ್ರಮಾಣದ ಸಾಹಿತ್ಯ ರಚನೆ ಮಾಡಿದರು. ರಾಷ್ಟ್ರಕೂಟ ನೃಪತುಂಗ, ಗಂಗ ದುರ್ವಿನೀತ, ಶಿವಮಾರ ಮಂತ್ರಿ ಚಾವುಂಡರಾಯ, ಕಲ್ಯಾಣ ಚಾಲುಕ್ಯ ಮೂರನೆಯ ಸೋಮೇಶ್ವರ, ಪ್ರೌಢದೇವರಾಯನ ಮಂತ್ರಿ ಲಕ್ಕಣ್ಣ ದಂಡೇಶ, ಕೆಳದಿ ಭೂಪಾಲ ಬಸವರಾಜ ಮೊದಲಾದವರು ಉತ್ಕೃಷ್ಟ ಕೃತಿಗಳನ್ನು ಪ್ರಕಟಿಸಿ ವಿದ್ವತ್ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದಾರೆ. ಈ ದಿಶೆಯಲ್ಲಿ ಸೋದೆಯ ಸದಾಶಿವರಾಯನ ಕೊಡುಗೆಯೂ ಅಪಾರವಾಗಿದೆ. ವಿಜಯನಗರೋತ್ತರ ಕಾಲದದಲ್ಲಿ ರಾಜನೊಬ್ಬ ಮಹಾವಿದ್ವಾಂಸನಾಗಿ ಸಾಹಿತ್ಯ ರಚಿಸಿದ ವಿರಳ ಉದಾಹರಣೆಗಳಲ್ಲಿ ಸದಾಶಿವರಾಯನ ಹೆಸರು ಪ್ರಮುಖವಾಗಿದೆ. ಸದಾಶಿವರಾಯ ೧೮ ಕೃತಿಗಳ ಒಂದು ಕಟ್ಟು ಬೆಳಗಾವಿ ಪರಿಸರದಲ್ಲಿ

ದೊರೆಯಿತೆಂದು ಬಿ. ಆರ್. ಹಿರೇಮಠ ಅವರು 'ಸೋದೆ ಸದಾಶಿವರಾಯನ ಕೃತಿಗಳು' ಪ್ರಸ್ತಾವನೆಯಲ್ಲಿ ಹೇಳುತ್ತಾರೆ.

"ಶಿವಭಕ್ತನೂ ದಾರ್ಶನಿಕ ಕವಿಯೂ ಆದ ಒಂದನೆಯ ಸದಾಶಿವರಾಯ ವಿಪುಲವೂ ವೈವಿಧ್ಯಪೂರ್ಣವೂ ಆದ ವೀರಶೈವ ಸಾಹಿತ್ಯ ಸೃಷ್ಟಿ ಮಾಡಿದ್ದಾನೆ. ಹೀಗಿದ್ದರೂ ಈತ ಉಪೇಕ್ಷಿತ ಕವಿ. ಈತನದು ಅಜ್ಞಾತ ಸಾಹಿತ್ಯ. ಕಂದ, ವೃತ್ತಗಳಲ್ಲಿರುವ 'ಸದಾಶಿವ ನೀತಿ'ಯೊಂದೇ ಸದಾಶಿವರಾಯನ ಸಾಹಿತ್ಯಕೃತಿಯೆಂದೂ ಈ ಅರಸು ಮನೆತನದಲ್ಲಿ ಸೃಷ್ಟಿಯಾದುದೆಂದೂ ವಿದ್ವಾಂಸರು ಇಲ್ಲಿಯವರೆಗೆ ಭಾವಿಸುತ್ತ ಬಂದಿದ್ದಾರೆ. ಆದರೆ ಈತನ ಉಳಿದ ಸಾಹಿತ್ಯ ಕೃತಿಗಳ ಪರಿಚಯವಾಗಲೀ, ಸಂಖ್ಯೆಯಾಗಲಿ, ಸತ್ವವಾಗಲಿ ಇಲ್ಲಿಯವರೆಗೆ ಯಾರಿಗೂ ಗೊತ್ತಿರಲಿಲ್ಲ. ಆದರೆ ಇತ್ತೀಚೆಗೆ ಬೆಳಗಾವಿ ಪರಿಸರದಲ್ಲಿ ಲಭಿಸಿದ ಅಪೂರ್ವ ತಾಳೆಗರಿ ಪ್ರತಿ, ಈತನ ೧೮ ಹೊಸ ಸಾಹಿತ್ಯ ಕೃತಿಗಳನ್ನು ಪ್ರಥಮ ಬಾರಿಗೆ ತಿಳಿಸಿಕೊಡುತ್ತದೆ. ವೀರಶೈವ ಅರಸನೊಬ್ಬನ ಹೆಸರಿನಲ್ಲಿ, ಅದೂ ಇತಿಹಾಸಕಾರರ ಉಪೇಕ್ಷೆಯಿಂದ ಅಜ್ಞಾತವಾಗಿಯೇ ಉಳಿದಿರುವ ಅರಸುಮನೆತನದ ಅರಸನ ಹೆಸರಿನಲ್ಲಿ ಅಧಿಕ ಸಂಖ್ಯೆಯ ಹೊಸ ಕೃತಿಗಳು ಒಂದೇ ಹಸ್ತಪ್ರತಿ ಕಟ್ಟಿನಲ್ಲಿ ಲಭಿಸುತ್ತಿರುವುದು ವಿಶೇಷವೆಂದೇ ಹೇಳಬಹುದು. ಇದು ಇತ್ತೀಚಿನ ಗಮನಾರ್ಹ ಹಾಗೂ ಬೆಲೆಯುಳ್ಳ ಶೋಧವೆನಿಸಿದೆ. ಈ ಮೂಲಕ ಸ್ವಾದಿಯ ಅರಸು ಮನೆತನದ ರಾಜಕೀಯ, ಧಾರ್ಮಿಕ, ಸಂಗೀತ ಹಾಗೂ ಸಾಹಿತ್ಯಿಕ ವಿಷಯಗಳನ್ನು ಕುರಿತು ಹಲವಾರು ಹೊಸ ಅಂಶಗಳು ಪ್ರಪ್ರಥಮವಾಗಿ ಬೆಳಕು ಕಾಣುತ್ತಲಿವೆ. ಇದು ಅಪೂರ್ವ ಚಾರಿತ್ರಿಕ ದಾಖಲೆಯಾಗಿದೆ."[೧೦೧]

ಪಶ್ಚಿಮ ಕರ್ನಾಟಕದಲ್ಲಿ ೧೫ನೆಯ ಶತಮಾನದ ಹೊತ್ತಿಗೆ ಅಸ್ತಿತ್ವಕ್ಕೆ ಬಂದ ಸೋದೆಯ ಅರಸು ಮನೆತನ ಆಂಗ್ಲರ ಆಡಳಿತದ ಕಾಲಕ್ಕೆ ಗೋವೆಯ ಸಮೀಪದ ಬಾಂದೇವಾಡಿಗೆ ಸ್ಥಳಾಂತರವಾಯಿತು. ಕಾರಣ ಗೋವೆಯು ಆಗ ಪೋರ್ಚಗೀಸರ ಆಧೀನದಲ್ಲಿತ್ತು. ಸೋದೆ ರಾಜಮನೆತನದ ಒಂದನೆಯ ಮಧುಲಿಂಗನಾಯಕನು ೧೭ನೆಯ ಶತಮಾನದಲ್ಲಿ ವೀರಶೈವ ಧರ್ಮವನ್ನು ಸ್ವೀಕರಿಸಿದನು. ಹೀಗಾಗಿ ಸೋದೆ ಅರಸು ಮನೆತನ ವೀರಶೈವ ರಾಜ ಮನೆತನವಾಯಿತು. ಅರಸುರು ಐವತ್ತಕ್ಕೂ ಹೆಚ್ಚು ವೀರಶೈವ ಮಠಗಳ ಸ್ಥಾಪನೆಗೆ ಒತ್ತು ನೀಡಿದರು. ಸರ್ವಧರ್ಮ ಸಹಿಷ್ಣುಗಳಾಗಿದ್ದ ಅವರು ವೀರಶೈವ ಧರ್ಮಕ್ಕೆ ನೀಡಿದಷ್ಟೇ ಪ್ರಾಮುಖ್ಯತೆಯನ್ನು ಜೈನ, ಬ್ರಾಹ್ಮಣ ಧರ್ಮಗಳಿಗೆ ನೀಡಿದರು ಎಂಬುದು ಗಮನಿಸುವ ಅಂಶ. ಸೋಂದಾ ಸ್ವರ್ಣವಲ್ಲಿ ಸಂಸ್ಥಾನಮಠದ ಬೆಳವಣಿಗೆಗೆ ಈ ಅರಸು ನೀಡಿದ ಸಹಾಯ ಸಹಕಾರ ಅಪಾರ.

ಸ್ವಾದಿ ಅರಸು ಮನೆತನದ ಅರಸರಲ್ಲಿ ಅತ್ಯಂತ ಸುಪ್ರಸಿದ್ಧನಾದವನು ಒಂದನೆಯ ಸದಾಶಿವ. ಶಿವಭಕ್ತ ಧುರಂಧರನೆನಿಸಿದ ಇವನು ವ್ಯವಹಾರ ಚತುರನೂ ದಕ್ಷಆಡಳಿತಗಾರನೂ ಪ್ರಜಾಪರಿಪಾಲಕನೂ ಆಗಿದ್ದಂತೆ ವಿದ್ಯಾಪಕ್ಷಪಾತಿಯೂ ಕಾವ್ಯಪೋಷಕನೂ ಆಗಿದ್ದನು. ವೀರಶೈವ ಧರ್ಮ ಸಾಹಿತ್ಯ

ಸಂಸ್ಕೃತಿಗಳ ಆರಾಧಕನೂ ಸಂರಕ್ಷನೂ ಆದ ಸದಾಶಿವರಾಯನು ವಿಜಯ ನಗರ ಅರಸ ಪ್ರೌಢದೇವರಾಯನ ಮಾದರಿಯಲ್ಲಿ ಅವುಗಳ ಪುನರುತ್ಥಾನಕ್ಕೆ ಪ್ರೇರಣೆ–ಪ್ರೋತ್ಸಾಹ ನೀಡಿದನು. ರಾಜರ್ಷಿ ಎನಿಸಿಕೊಂಡಿದ್ದ ಸದಾಶಿವರಾಯನು ಶರಣಧರ್ಮದ ಸನ್ಮಾರ್ಗದಲ್ಲಿ ಮುನ್ನಡೆದು, ತನ್ನ ಬದುಕಿನಲ್ಲಿ ಶರಣ ಸಿದ್ಧಾಂತವನ್ನು ಅಳವಡಿಸಿಕೊಂಡಿದ್ದ. ಸದಾಶಿವ ರಾಯನಿಗೆ ಶರಣಧರ್ಮವೇ ಪ್ರಾಣವಾಗಿತ್ತು. ಇವನಿಗೆ ಶರಣಧರ್ಮವೇ ಪ್ರಮುಖವಾಗಿತ್ತು. ಶರಣ ಜೀವನವನ್ನು ನಡೆಸಿದ ಸದಾಶಿವರಾಯ ಒಬ್ಬ ಶ್ರೇಷ್ಠ ಶಿವಕವಿ, ಭಕ್ತಕವಿ, ಅನುಭಾವಿಕವಿ.

ಸದಾಶಿವರಾಯನು ಸುಮಾರು ೧೮ ಕೃತಿಗಳನ್ನು ರಚಿಸಿದ್ದು, ಅವು ಕಾಲಗರ್ಭದಲ್ಲಿ ಮರೆಯಾಗಿ ಹೋಗಿದ್ದವು. ಆ ಎಲ್ಲ ಕೃತಿಗಳನ್ನು ಮೊದಲ ಬಾರಿಗೆ ಶೋಧಿಸಿ, ಪರಿಷ್ಕರಿಸಿ, ಸಂಪಾದಿಸಿ ಪ್ರಕಟಿಸಿದ ಶ್ರೇಯಸ್ಸು ಬಿ.ಆರ್. ಹಿರೇಮಠ ಅವರಿಗೆ ಸಲ್ಲುತ್ತದೆ. ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ವಿಭಾಗ ಮುಖ್ಯಸ್ಥರಾಗಿ ಬಿ.ಆರ್. ಹಿರೇಮಠ ಅವರು ಮಾಡಿದ ವಚನ ಸಾಹಿತ್ಯ ಸೇವೆ ಸ್ಮರಣೀಯವಾದುದು. ಸಮಗ್ರ ವಚನ ಸಂಪುಟಗಳಲ್ಲಿ ಮೂರು ಸಂಪುಟಗಳನ್ನು ಸಂಪಾದಿಸಿದ್ದು ಅವರ ವಿಚಕ್ಷಣೆಗೆ ಹಿಡಿದ ಕನ್ನಡಿಯಾಗಿದೆ. 'ಶಾಸನಗಳಲ್ಲಿ ವರ್ತಕರು' ಎಂಬ ವಿಷಯ ಕುರಿತು ಮಹಾಪ್ರಬಂಧ ಬರೆದು ಪಿಎಚ್.ಡಿ. ಪದವಿ ಪಡೆದ ಬಿ.ಆರ್. ಹಿರೇಮಠ ಅವರು ೨೦೦ಕ್ಕೂ ಮಿಕ್ಕಿ ಸಂಶೋಧನ ಲೇಖನಗಳನ್ನು ಬರೆದು ಹೊಸ ಹೊಸ ವಿಚಾರಗಳನ್ನು ಶೋಧಿಸಿದ್ದಾರೆ. ಹಸ್ತಪ್ರತಿಗಳ ನಿರಂತರ ಶೋಧ ಅವರ ಹವ್ಯಾಸವಾಗಿತ್ತು. ಹೀಗಾಗಿ ಯಾರ ಕಣ್ಣಿಗೂ ಬೀಳದೆ ತಪ್ಪಿಸಿಕೊಂಡಿದ್ದ ಸೋದೆಯ ಸದಾಶಿವರಾಯನ ಹದಿನೆಂಟು ಕೃತಿಗಳ ತಾಡವೋಲೆ ಕಟ್ಟು ಬೆಳಗಾವಿ ಪ್ರದೇಶದ ಹಸ್ತಪ್ರತಿ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಿ.ಆರ್. ಹಿರೇಮಠ ಅವರಿಗೆ ದೊರೆಯಿತು.

ಶಿವಭಕ್ತನೂ ದಾರ್ಶನಿಕ ಕವಿಯೂ ಆದ ಸದಾಶಿವರಾಯ ವಿಪುಲವೂ ವೈವಿಧ್ಯಪೂರ್ಣವೂ ಆದ ಸಾಹಿತ್ಯ ಸೃಷ್ಟಿ ಮಾಡಿದ್ದಾನೆ. ಹೀಗಿದ್ದೂ ಅವನೊಬ್ಬ ಉಪೇಕ್ಷಿತ ಕವಿಯಾಗಿದ್ದ. ಹೀಗಾಗಿ ಈತನದು ಅಜ್ಞಾತ ಸಾಹಿತ್ಯವಾಗಿತ್ತು. 'ಸದಾಶಿವ ನೀತಿ'ಯೊಂದೇ ಅವನ ಕೃತಿಯೆಂದು ವಿದ್ವಾಂಸ ವಲಯ ಗುರುತಿಸಿತ್ತು. ಆದರೆ ಅವನ ಬೆಲೆಯುಳ್ಳ ೧೮ ಕೃತಿಗಳನ್ನು ಮೊಟ್ಟ ಮೊದಲ ಬಾರಿಗೆ ಬಿ.ಆರ್. ಹಿರೇಮಠರು ಶೋಧಿಸಿ ಪ್ರಸ್ತುತ ಕೃತಿಯಲ್ಲಿ ಪ್ರಕಟಿಸಿ ವಿದ್ವಾಂಸ ವಲಯದಲ್ಲಿ ಅಚ್ಚರಿ ಮೂಡಿಸಿದರು. ಅವನ ಕೃತಿಗಳ ಸ್ಥೂಲರೂಪವನ್ನು ಹೀಗೆ ಗುರುತಿಸಬಹುದು.

**೧. ಸ್ವರವಚನಗಳು :** ಸದಾಶಿವರಾಯನ ಒಟ್ಟು ೧೬೨ ಸ್ವರವಚನಗಳನ್ನು ಇಲ್ಲಿ ಗುರುತಿಸಿದ್ದಾರೆ. 'ಮಳೆಯ ಗುರು ನಂದೀಶ' ಅಥವಾ 'ಗುರು ನಂದಯ್ಯ' ಅಂಕಿತದಲ್ಲಿರುವ ಅವನ ಸ್ವರವಚನಗಳಲ್ಲಿ ಆತ್ಮನಿವೇದನೆ, ಧರ್ಮ, ಮೋಕ್ಷ, ಸಂಸಾರ–ಸಂಕಷ್ಟ, ನೀತಿ ಬೋಧೆ, ಸಮಾಜ ವಿಮರ್ಶೆ, ಶಿವಶರಣರ ಸ್ತೋತ್ರ ಮೊದಲಾದ ಹಲವಾರು ಮಹತ್ವದ ವಿಷಯಗಳನ್ನು ಒಳಗೊಂಡ ಈ ಸ್ವರವಚನಗಳು ಅತ್ಯಂತ ಮೌಲಿಕವಾಗಿವೆ. ಸಾಹಿತ್ಯಿಕ ಮೌಲ್ಯಗಳಿಂದ ಸಂಗೀತದ ಲಯಗಳಿಂದ

ಕೂಡಿರುವ ಈ ಸ್ವರವಚನಗಳು ಸಾಂಸ್ಕೃತಿಕ ಮತ್ತು ಚಾರಿತ್ರಿಕ ಸಂಗತಿಗಳನ್ನು ತಿಳಿಸುವ ಅಮೂಲ್ಯ ರಚನೆಗಳಾಗಿವೆ.

**೨. ಸಮಸ್ಯಾಪೂರ್ಣ ವೃತ್ತ–ಕಂದ** : ಇದರಲ್ಲಿ ಒಟ್ಟು ೨೪ ಪದ್ಯಗಳಿವೆ. ಶ್ಲೋಕ, ವೃತ್ತ, ಕಂದ, ಮಣಿಪ್ರವಾಳ, ಷಟ್ಪದಿಗಳಿಂದ ಕೂಡಿದ ಕೃತಿಯಲ್ಲಿ ವರದಾನದಿಯ ಮಹಾತ್ಮೆ, ಬನವಾಸಿಯ ಮಧುಕೇಶ್ವನಿಗೆ ಮಾಡಿಸಿಕೊಟ್ಟ ಶಿಲಾಮಂಟಪ, ಹರಳಯ್ಯ ತೀರ್ಥಗಳ ಉಲ್ಲೇಖವಿದ್ದರೂ ಮುಖ್ಯವಾಗಿ ಸ್ತೋತ್ರ ಕೃತಿಯಾಗಿದೆ.

**೩. ರಾಗಮಾಲಿಕೆ** : ಸದಾಶಿವರಾಯನ ಸಂಗೀತಜ್ಞಾನ ಅಪಾರವಾಗಿತ್ತು ಎಂಬುದಕ್ಕೆ ಪ್ರಸ್ತುತ ರಾಗಮಾಲಿಕೆ ಕೃತಿ ಸಾಕ್ಷಿಯಾಗಿದೆ. ಸುದೀರ್ಘವಾದ ಮೂರು ನುಡಿಗಳಲ್ಲಿರುವ ಈ ಕೃತಿಯಲ್ಲಿ ಗೌಳ, ವರಾಳಿ, ಗುಮ್ಮ, ಕಾಂಬೋದಿ, ಶಂಕರಾಭರಣ, ಕಲ್ಯಾಣಿ, ಸಾರಂಗ, ಭೈರವಿ, ಮೋಹನ, ಮಾಧವಿ, ನಾದರಾಮಕ್ರೀ, ವಸಂತ ಮೊದಲಾದ ಲಲಿತರಾಗಗಳನ್ನು ಕುರಿತು ವಿವರಿಸಲಾಗಿದೆ.

**೪. ಪಂಚವಿಂಶತಿ ಲೀಲೆಯ ರಗಳೆ** : ಹರಿಹರನ ತರುವಾಯ ರಗಳೆ ಪ್ರಕಾರ ನೇಪಥ್ಯಕ್ಕೆ ಸೇರಿದಂತಾಗಿತ್ತು. ಪರಶಿವನ ೨೫ ಲೀಲೆಗಳನ್ನು ಅತ್ಯಂತ ಭಕ್ತಿಭಾವದಿಂದ ನಿರೂಪಿಸುವ ಒಂದು ರಗಳೆ ಸದಾಶಿವರಾಯನಿಂದ ರಚಿತಗೊಂಡಿದೆ. ಸೋಮಧರ ಲೀಲೆಯಿಂದ ಲಿಂಗೋದ್ಭವಲೀಲೆಯವರೆಗೆ ಎಲ್ಲ ಇಪ್ಪತ್ತೈದು ಲೀಲೆಗಳನ್ನು ತುಂಬಾ ಅರ್ಥಪೂರ್ಣವಾಗಿ ಆದಿಪ್ರಾಸದಲ್ಲಿ ರಚಿಸಿರುವುದು ಕೃತಿಯ ವೈಶಿಷ್ಟ್ಯವಾಗಿದೆ.

**೫. ತ್ರಿವಿಧಿ** : ಸದಾಶಿವರಾಯನು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿಯೂ ಕೃಷಿ ಮಾಡಿದ್ದಾನೆ. ಪ್ರಸ್ತುತ ಕೃತಿಯಲ್ಲಿ ೨೭ ತ್ರಿಪದಿಗಳನ್ನು ರಚಿಸಿ ಶಿವಸ್ತೋತ್ರ ಮಾಡಿದ್ದಾನೆ. ಪ್ರತಿಯೊಂದು ತ್ರಿಪದಿಯು 'ದಯಮಾಡು' ಎಂಬ ಪದದಿಂದ ಅಂತ್ಯಗೊಳ್ಳುತ್ತದೆ.

**೬. ಉಳುವೆಯ ಮಹಾತ್ಮೆ** : ಸದಾಶಿವರಾಯನ ಒಂದು ಐತಿಹಾಸಿಕ ಚಾರಿತ್ರಿಕ ಕೃತಿಯಿದು. ೭೩ ಪದ್ಯಗಳನ್ನು ಒಳಗೊಂಡಿರುವ ಇವುಗಳಲ್ಲಿ ೬೦ ಕಂದಪದ್ಯ, ೫ ಶ್ಲೋಕ, ೨ ವಾರ್ಧಕ ಷಟ್ಪದಿ, ೫ ಮಲ್ಲಿಕಾಮಾಲಾ ವೃತ್ತ, ೧ ತ್ರೋಟಕ ವೃತ್ತಗಳಿವೆ. ಕಲ್ಯಾಣ ಕ್ರಾಂತಿಯ ನಂತರ ಶರಣರು ಉಳವಿಯತ್ತ ಸಾಗಿದರು. ಅವರು ಕಲ್ಯಾಣದಿಂದ ಉಳವಿ ವರೆಗೆ ಬಂದ ದಾರಿ ಬಗ್ಗೆ ನಮ್ಮ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿದ್ದವು. ಆರ್.ಸಿ. ಹಿರೇಮಠ ಮತ್ತು ಎಚ್. ತಿಪ್ಪೇರುದ್ರಸ್ವಾಮಿ ಅವರು ಎರಡು ಮಾರ್ಗಗಳನ್ನು ಸೂಚಿಸಿದ್ದರು. ಆದರೆ ಸದಾಶಿವರಾಯನ ಈ ಕೃತಿಯಿಂದ ಉಳವಿಯ ದಾರಿ ಸ್ಪಷ್ಟವಾಗಿ ತಿಳಿದುಬಂದಿರುವುದು ಸಂತಸದ ಸಂಗತಿಯೇ ಸರಿ.

ಸದಾಶಿವರಾಯನ ಪ್ರಕಾರ ಚನ್ನಬಸವಣ್ಣನವರ ನೇತೃತ್ವದಲ್ಲಿ ಶರಣರ ತಂಡವು ಕಲ್ಯಾಣದಿಂದ ಗುಲಬರ್ಗಾ ತಾಲೂಕಿನ ಪರವತಾಬಾದ, ಫಿರೋಜಾಬಾದ, ಕೊಳಕೂರು (ಜೇವರಗಿ ತಾಲೂಕು), ಬಡದಳ, ಸತ್ತಿಗರೆ (ಸವದತ್ತಿ ತಾಲೂಕು), ಮುರುಗೋಡ (ಸವದತ್ತಿ ತಾಲೂಕು), ಹುಬ್ಬಳ್ಳಿ,

ಬಂಕಾಪುರ, ಹಾನಗಲ್ಲು, ಮಳಿಗೆ (ಮಳಗಿ, ಮುಂಡಗೋಡ ತಾಲೂಕು), ಜಾಂಗಲಕ್ಷೇತ್ರ (ಜಗಳಬೆಟ್ಟ, ಸುಪಾ ತಾಲೂಕು) ಅಲ್ಲಿ ರಾಮೇಶ್ವರನ ದರ್ಶನ ಪಡೆದು, ಘಟ್ಟವನ್ನಿಳಿದು ಸೋದೆಯಪುರ (ಸಿರ್ಸಿ ತಾಲೂಕು)ವನ್ನು ಪ್ರವೇಶಿಸಿ ಅಲ್ಲಿಂದ ತುಂಬೆಯಬೀಡಿನ (ಯಲ್ಲಾಪುರ ತಾಲೂಕು) ಸದಾಶಿವಲಿಂಗವನ್ನು ಭಕ್ತಿಯಿಂದ ಕಂಡು, ಬೆನಕನಘಟ್ಟ, ಅಂಜನಾನದಿ (=ಕರಿಹೊಳೆ=ಕಾಳಿನದಿ), ಬಿಲ್ವವನಗಳನ್ನು ದಾಟಿ ಯಲ್ಲಾಪುರಕ್ಕೆ ಆಗಮಿಸುತ್ತದೆ. ಅಲ್ಲಿಂದ ಉಳವಿಯನ್ನು ತಲುಪುತ್ತದೆ ಶರಣರ ತಂಡ. ಉಳವಿಯಲ್ಲಿರುವ ಮಹಾಮನೆ, ಮಡಿವಾಳಯ್ಯನ ತೀರ್ಥ, ಅಕ್ಕನಾಗಮ್ಮನ ಗವಿಗಳ ಕುರಿತು ಸುದೀರ್ಘವಾಗಿ ಸದಾಶಿವರಾಯ ವಿವರಿಸುತ್ತಾನೆ. ಚೆನ್ನಬಸವಣ್ಣನವರು ಉಳವಿಯಲ್ಲಿ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರಿಗೆ ನಿತ್ಯ ದಾಸೋಹ ನಡೆಸುತ್ತಿದ್ದರೆಂದು ಮತ್ತು ಮಾಘ ಶುದ್ಧ ಹುಣ್ಣಿಮೆಯಂದು ಉಳವಿಯ ರಥೋತ್ಸವ ಜರುಗುತ್ತದೆ ಎಂದು ತಿಳಿಸಿದ್ದಾನೆ. ಒಟ್ಟಾರೆ ಸದಾಶಿವರಾಯನು ಉಳವಿಯ ಮಹಾತ್ಮೆಯನ್ನು ಹೃದಯತುಂಬಿ ವರ್ಣಿಸಿದ್ದಾನೆ, ಮನತುಂಬಿ ಹಾಡಿದ್ದಾನೆ.

**೭. ಜೋಗುಳ ಪದಗಳು :** ಹೆಣ್ಣುಮಕ್ಕಳು ಹಾಡುವ ಜೋಗುಳ ಪದಗಳ ೨೫ ನುಡಿಗಳನ್ನು ಸದಾಶಿವರಾಯ ಇಲ್ಲಿ ರಚಿಸಿದ್ದಾನೆ.

**೮. ನವರಸ ಜಕ್ಕಿಣಿ :** ಸಂಗೀತ ಪ್ರಧಾನವಾದ ಈ ಕೃತಿಯ ಆದಿ ಅಂತ್ಯಗಳಲ್ಲಿ ಕಂದಪದ್ಯಗಳಿದ್ದು ಮಧ್ಯದಲ್ಲಿ 'ರಾಗತಾಳದಿ ಪೇಳಿದ' ೯ ಹಾಡುಗಳಿವೆ. ಎಲ್ಲ ಪದಗಳಿಗೂ ರಾಗ ತಾಳಗಳ ಪ್ರಸ್ತಾರ ಹಾಕಲಾಗಿದೆ. ಇದೊಂದು ಕನ್ನಡದಲ್ಲಿ ವಿಶೇಷ ಪ್ರಯೋಗ ಕೃತಿಯೆನಿಸಿದೆ.

**೯. ಪಂಚವಿಂಶತಿಲೀಲೆಯ ಮೂಲಪದ್ಯಗಳು :** ಈ ಕೃತಿಯಲ್ಲಿ ಒಟ್ಟು ೩೦ ಪದ್ಯಗಳಿವೆ. ೨೨ ಕಂದಪದ್ಯ, ೮ ವೃತ್ತಗಳನ್ನು ಒಳಗೊಂಡಿದೆ. ಶಿವನ ಸೋಮಧರ, ವೃಷಭಾರೂಢ, ಭಿಕ್ಷಾಟನ, ಕಾಮಹರ, ಕಿರಾತ, ಅರ್ಧನಾರಿ, ಮೊದಲಾದ ೨೫ ಲೀಲೆಗಳನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ.

**೧೦. ಜಾವಡಿ :** ದಾಸರ ಕೀರ್ತನಗಳಲ್ಲಿ, ಶ್ರೀಕೃಷ್ಣಪಾರಿಜಾತ ಮೊದಲಾದ ನಾಟಕಗಳಲ್ಲಿ ಜಾವಳಿ ಹಾಡುಗಳಿರುತ್ತವೆ. ಆ ಪ್ರಕಾರದ ಆದಿಪ್ರಾಸಯುಕ್ತ ಎರಡು ಸಾಲಿನ ಹಾಡುಗಳ ಸಂಗ್ರಹ ಇಲ್ಲಿದೆ. ಇದರಲ್ಲಿ ಕೆಲವು ಸಲ ಅನುಪ್ರಾಸ, ವಡಿಗಳೂ ಕಂಡುಬರುತ್ತವೆ. ಈ ಪದಗಳಲ್ಲಿಯೂ ಶಿವನ ಇಪ್ಪತ್ತೈದು ಲೀಲೆಗಳನ್ನು ವರ್ಣಿಸಲಾಗಿದೆ.

**೧೧. ಭಿಕ್ಷಾಟನ ಲೀಲೆಯ ಕಂದ :** ಭಿಕ್ಷಾಟನ ಲೀಲೆ ಶಿವನ ಇಪ್ಪತ್ತೈದು ಲೀಲೆಗಳಲ್ಲಿ ಒಂದು. ೧೯ ಕಂದಪದ್ಯ, ೨ ಶ್ಲೋಕಗಳಲ್ಲಿ ಈ ಲೀಲೆಯನ್ನು ಹೇಳಲಾಗಿದೆ. ಶಿವನ ಕೈಲ್ಲಿರುವ ಬ್ರಹ್ಮಕಪಾಲಕ್ಕೆ ಭಕ್ತಿಯಿಂದ ಭಿಕ್ಷೆ ನೀಡಿದರೆ ಮೋಕ್ಷಸಿದ್ಧಿ, ಕಾಮಿತಫಲ ಸಾಧ್ಯ ಎಂದು ಕವಿ ಆತ್ಮವಿಶ್ವಾದಿಂದ ನಿವೇದಿಸಿದ್ದಾನೆ.

**೧೨. ಖಡ್ಗ ಪ್ರಬಂಧ :** ೩೮ ಪದ್ಯಗಳಲ್ಲಿ ಖಡ್ಗಪ್ರಬಂಧ ಕೃತಿಯನ್ನು ಸದಾಶಿವರಾಯ ರಚಿಸಿದ್ದಾನೆ. ಇಲ್ಲಿ ಸಾಹಿತ್ಯದ ಪ್ರಕಾರಗಳಾದ ಸ್ವರಗೀತ, ಶ್ಲೋಕ, ಕಂದ, ವೃತ್ತ, ದ್ವಿಪದಿ, ಹಾಡು, ಪ್ರಬಂಧ, ಷಟ್ಪದಿ ಎಲ್ಲವನ್ನೂ ಈ ಕೃತಿ ಒಳಗೊಂಡಿದೆ. ನಾಟ್ಯಪ್ರಿಯ ಶಿವನಲ್ಲಿ ಭಕ್ತಿಯಿಂದ ಮಾಡಿಕೊಂಡ ಆತ್ಮನಿವೇದನ ಇಲ್ಲಿ ಪ್ರಮುಖವಾಗಿದೆ. ಈ ಕೃತಿಯಲ್ಲಿ ಬಳಕೆಯಾಗಿರುವ ಸಂಗೀತಕ್ಕೆ ಸಂಬಂಧಿಸಿದ ಪಾರಿಭಾಷಿಕ ಪದಗಳನ್ನು ಸಂಗೀತ ವಿಶೇಷವಾಗಿ ಅಧ್ಯಯನ ಮಾಡಬೇಕಾಗಿದೆ. ಸದಾಶಿವರಾಯನ ಪ್ರಯೋಗ ಪ್ರಜ್ಞೆ ಇಲ್ಲಿ ಅದ್ಭುತವಾಗಿ ಮೂಡಿಬಂದಿದೆ.

**೧೩. ಅಷ್ಟಕಗಳು :** ಶರಣ ಸಾಹಿತ್ಯವನ್ನು ಅಷ್ಟಕ, ದಂಡಕ, ತಾರಾವಳಿ ಮಾಧ್ಯಮಗಳಲ್ಲಿ ಪ್ರಸಾರ ಮಾಡುತ್ತ ಬರಲಾಗಿದೆ. ಸದಾಶಿವರಾಯನು ಮೂರು ಅಷ್ಟಕಗಳನ್ನು ರಚಿಸಿದ್ದಾನೆ. ತನ್ನ ಆರಾಧ್ಯ ಗುರು ನಂದೀಶ್ವರನ ಹೆಸರಿನಲ್ಲಿ ರಚಿಸಿ ಗುರುಭಕ್ತಿಯನ್ನು ಸಲ್ಲಿಸಿದ್ದಾನೆ. ಒಂದು ಮಂಗಲಾಷ್ಟಕ, ಇನ್ನೆರಡು ನಂದೀಶ್ವರ ಅಷ್ಟಕಗಳು ಇಲ್ಲಿ ಅಡಕವಾಗಿವೆ.

**೧೪. ಪ್ರಭುಲಿಂಗಲೀಲೆಯ ಜಾವಡಿ:** 'ಶಿವಸೂತ್ರ ಬೊಂಬೆಯ ನೃತ್ಯದ ನವನೂತನ ಲೀಲೆಯನು ನೋಡಿದ ಜನರ್ಗಂ' ಎಂಬ ನುಡಿಯಿಂದ ಇದು ದೃಶ್ಯ ಪರಂಪರೆಯ ಸೂತ್ರದ ಗೊಂಬೆಯಾಟದ ಕೃತಿಯೆಂದು ತಿಳಿದುಬರುತ್ತದೆ. ಚಾಮರಸನ ಪ್ರಭುಲಿಂಗ ಲೀಲೆಯನ್ನು ಸದಾಶಿವರಾಯ ಅತ್ಯಂತ ಸಂಕ್ಷಿಪ್ತಗೊಳಿಸಿ ರಾಗ, ತಾಳ, ಸಂಗೀತ, ಹಾಡು, ಗದ್ಯಗಳ ಮೂಲಕ ಈ ಜಾವಡಿಯನ್ನು ರಚಿಸಿದ್ದಾನೆ.

**೧೫. ಮಹಾಚದುರಂಗ ಲಕ್ಷಣ :** ರಾಜಮಹಾರಾಜರ ಕಾಲದಿಂದ ಇಂದಿಗೂ ಚಲಾವಣೆಯಲ್ಲಿರುವ ಒಂದು ಆಟ ಚದುರಂಗದಾಟ. ಈ ಆಟಕ್ಕೆ ಮಹಾಭಾರತದಷ್ಟು ಪ್ರಾಚೀನತೆಯಿದ್ದರೂ ಇಂದಿಗೂ ಈ ಆಟ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿದೆ. ರಾಜರು ಆಡುತ್ತಿದ್ದ ಚದುರಂಗದಾಟದ ಕ್ರಮಗಳನ್ನು ಗದ್ಯದಲ್ಲಿ ವಿವರಿಸಿ ನಂತರ ವಾರ್ಧಕ ಷಟ್ಪದಿಯಲ್ಲಿ ತಿಳಿಸುವ ಪ್ರಯತ್ನವನ್ನು ಸದಾಶಿವರಾಯ ಇಲ್ಲಿ ಮಾಡಿದ್ದಾನೆ. ಚದುರಂಗ ದಾಟದ ಲಕ್ಷಣಗಳನ್ನು ಲಾಕ್ಷಣಿಕವಾಗಿ ವಿವರಿಸಿದ ಸದಾಶಿವರಾಯ ಕನ್ನಡ ಅರಸರಲ್ಲಿ ವಿಶಿಷ್ಟನಾಗಿದ್ದಾನೆ.

**೧೬. ಕಲಹಕೇತಯ್ಯಗಳ ಲಕ್ಷಣ :** ದೇವತೆಗಳಿಗೆ ಕಂಟಕಪ್ರಾಯನಾಗಿದ್ದ ಮೇಘಾಸುರನ ಅಹಂಕಾರವನ್ನು ಪರಶಿವನು ನಿರಸನಗೊಳಿಸುತ್ತಾನೆ. ಇದರಿಂದ ಜ್ಞಾನೋದಯ ಪಡೆದ ಮೇಘಾಸುರನು ರುದ್ರವೇಷದಿಂದ ಶಿವನ ಸಭೆಗೆ ಬಂದು ತಾಂಡವನೃತ್ಯ ಮಾಡುತ್ತಾನೆ. ಈ ನೃತ್ಯದಿಂದ ಹದಿನಾಲ್ಕು ಲೋಕಗಳು ತಲ್ಲಣಗೊಳ್ಳುತ್ತವೆ. ಕೈಲಾಸದಲ್ಲಿ ಶಿವನ ಸೇವೆಯಲ್ಲಿದ್ದ ಎಕ್ಕಮಲ್ಲಯ್ಯನೆಂಬ ಶರಣನು ಮೇಘಾಸುರನ ಮಹಾತಾಂಡವ ನೃತ್ಯವನ್ನು ತನಗೆ ದಯಪಾಲಿಸಬೇಕೆಂದು ಶಿವನಲ್ಲಿ ಬೇಡಿಕೊಳ್ಳುತ್ತಾನೆ. ಶಿವನು ದಯಪಾಲಿಸಿದ ನಂತರ ಭೂಲೋಕಕ್ಕೆ ಬಂದು ಈ ನೃತ್ಯದಿಂದ ಶಿವಭಕ್ತಿಯ ಬೆಳೆಯನ್ನು ಬೆಳೆಸುತ್ತಾನೆ. ಭೂಲೋಕದಲ್ಲಿದ್ದ ಕಲಿಕೇತ ಬ್ರಹ್ಮಯ್ಯನೆಂಬ ಶರಣನಿಗೆ ಈ ವಿದ್ಯೆಯನ್ನು ಕಲಿಸುತ್ತಾನೆ. ಇದು ಈ ಕೃತಿಯ ಸಾರ.

**೧೭. ಕಂದಪದ್ಯ :** ಇಲ್ಲಿ ನಾಲ್ಕು ಕಂದಪದ್ಯಗಳಿದ್ದು ಜಂಗಮರು ಧರಿಸುವ ಕಾವಿ ಬಟ್ಟೆಯ ಪಾವಿತ್ರ್ಯತೆ ಮತ್ತು ಶ್ರೇಷ್ಠತೆಯನ್ನು ವರ್ಣಿಸಲಾಗಿದೆ.

**೧೮. ಸದಾಶಿವನೀತಿ :** ಇದು ಕನ್ನಡದಲ್ಲಿಯೇ ಒಂದು ವಿಶಿಷ್ಟ ಕೃತಿಯಾಗಿದೆ. ರಾಜನೊಬ್ಬ ನೀತಿಸಂಹಿತೆಯನ್ನು ಕಾವ್ಯಮಯವಾಗಿ ಹೇಳಿದ ವಿಶೇಷ ಪ್ರಯೋಗವಿದು. ರಾಜನೀತಿ, ಧರ್ಮನೀತಿ, ಸಮಾಜನೀತಿ, ಯುದ್ಧನೀತಿಗಳಲ್ಲದೆ ಕಾವ್ಯ-ವ್ಯಾಕರಣಕ್ಕೆ ಸಂಬಂಧಿಸಿದ ಮೌಲ್ಯಗಳನ್ನು ೫೧೬ ಪದ್ಯಗಳಲ್ಲಿ ಅತ್ಯಂತ ಸುಂದರವಾಗಿ ನಿರೂಪಿಸುವ ಪ್ರಯತ್ನ ಮಾಡಿದ್ದಾನೆ ಸದಾಶಿವರಾಯ. ಇದು ಪ್ರತಿಯೊಬ್ಬ ವಿದ್ಯಾರ್ಥಿಯು ಅವಶ್ಯವಾಗಿ ಓದಬೇಕಾದ ಮೌಲಿಕ ಕೃತಿಯಾಗಿದೆ. ಸದಾಶಿವರಾಯನ ಜೀವನಾನುಭವ ಮತ್ತು ಲೋಕಾನುಭವಗಳ ಅಮೃತಫಲದ ಸಾಕಾರರೂಪವಾಗಿ ಈ ಕೃತಿ ಹೊರಹೊಮ್ಮಿದೆ.

ಒಟ್ಟಾರೆ, ಸದಾಶಿವರಾಯನ ಕೃತಿಗಳಲ್ಲಿ ಕನ್ನಡ ಸಾಹಿತ್ಯದ ಕಂದ, ವೃತ್ತ, ರಗಳೆ, ಷಟ್ಪದಿ ಮೊದಲಾದ ಪ್ರಾಚೀನ ಪ್ರಕಾರಗಳು ಬಳಕೆಯಾಗಿವೆ. ಹೀಗೆ ಛಂದೋ ಪ್ರಕಾರ ಮತ್ತು ಸಾಹಿತ್ಯ ಪ್ರಕಾರಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ. ಈ ಅವಧಿಯಲ್ಲಿ ಸ್ವರವಚನ ಸಾಹಿತ್ಯ ಮಾತ್ರ ಅಧಿಕ ಪ್ರಮಾಣದಲ್ಲಿ ಸೃಷ್ಟಿಯಾಗಿದೆ. ರಾಗಮಾಲಿಕೆ, ನವರಸ, ಜಕ್ಕಿಣಿ, ಸಮಸ್ಯಾಪೂರ್ಣ ವೃತ್ತ-ಕಂದ, ಖಡ್ಗಪ್ರಬಂಧಗಳಂಥ ಸಂಗೀತಪ್ರಧಾನವಾದ ವಿಶಿಷ್ಟ ಹಾಗೂ ವಿನೂತನ ಪ್ರಯೋಗಶೀಲ ಕೃತಿಗಳೂ ಹೊರಬಂದಿವೆ. ಉಳುವೆಯ ಮಹಾತ್ಮೆಯಂಥ ಶುದ್ಧ ಚಾರಿತ್ರಿಕ ಕಾವ್ಯ, ಪ್ರಭುಲಿಂಗಳಿಕೆ ಜವಾಡಿಯಂಥ ಸೂತ್ರದ ಗೊಂಬೆಯಾಟದ ದೃಶ್ಯಕಾವ್ಯ, ಮಹಾಚದುರಂಗ ಲಕ್ಷಣದಂಥ ಮನರಂಜನ ಆಟದ ಕೃತಿ, ಸದಾಶಿವ ನೀತಿಯಂಥ ನೀತಿ ಸಾಹಿತ್ಯ ಮೊದಲಾದ ಕೃತಿಗಳಲ್ಲಿ ಸದಾಶಿವರಾಯನ ಪ್ರಯೋಗಶೀಲತೆಗಳು ದಟ್ಟವಾಗಿ ಕಂಡುಬರುತ್ತವೆ.

'ಸೋದೆಯ ಸದಾಶಿವರಾಯನ ಈ ಸಾಹಿತ್ಯ ಶಿವಭಕ್ತಿಯ, ಶಿವದರ್ಶನದ ಸಾಹಿತ್ಯವಾಗಿದೆ. ಈ ಸಮಯದಲ್ಲಿ ಸಂಸ್ಕೃತಭಾಷೆಯಲ್ಲಿ ರಚಿತವಾದ ಯಾವ ಕೃತಿಗಳೂ ಸಧ್ಯ ದೊರೆಯುವುದಿಲ್ಲ. ಕನ್ನಡ, ವೀರಶೈವರ ಮಾತೃಭಾಷೆ ಮತ್ತು ಧರ್ಮಭಾಷೆ ಯಾಗಿರುವುದರಿಂದ ಈ ಕಾಲದ ವೀರಶೈವ ಕವಿಗಳು ತಮ್ಮ ಕೃತಿಗಳನ್ನು ಕನ್ನಡ ಭಾಷೆಯಲ್ಲಿಯೇ ರಚಿಸಿದ್ದಾರೆ. ಸೋದೆಯ ಸದಾಶಿವರಾಯನ ಈ ಕೃತಿಗಳಿಗೆ ಸಾಹಿತ್ಯಿಕ, ಸಂಗೀತಮಯ, ಚಾರಿತ್ರಿಕ, ಸಾಂಸ್ಕೃತಿಕ ಮುಖಗಳಿದ್ದರೂ ಇವುಗಳಲ್ಲಿ ಸಂಗೀತಮಯ, ಚಾರಿತ್ರಿಕ ಹಾಗು ಸಾಂಸ್ಕೃತಿಕ ಮುಖಗಳೇ ಅಧಿಕವಾಗಿ ಕಂಡುಬರುತ್ತವೆ' ಎಂಬ ಬಿ.ಆರ್. ಹಿರೇಮಠ ಅವರ ಮಾತುಗಳು ಅಕ್ಷರಶಃ ನಿಜ. ಬಿ.ಆರ್. ಹಿರೇಮಠ ಅವರು ಅಪಾರ ಶ್ರಮವಹಿಸಿ ಹಸ್ತಪ್ರತಿಯನ್ನು ಪರಿಷ್ಕರಿಸಿ, ಸಂಪಾದಿಸಿ ಒಂದು ಶುದ್ಧ ಕೃತಿಯನ್ನು ಸಾರಸ್ವತಲೋಕಕ್ಕೆ ನೀಡಿದ್ದಾರೆ.

## ಕೊನೆ ಟಿಪ್ಪಣಿಗಳು

೧. ಬೆಳಗಾವಿ ಬೆಳಕು ಸ್ಮರಣ ಸಂಪುಟ ಸಂ: ಎಸ್. ಆರ್. ಗುಂಜಾಳ ಪು. ೩೯ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೩

೨. ಎಂ. ಎಂ. ಕಲಬುರ್ಗಿ : ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ–೩ ಪು. ೨ ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ, ೨೦೧೪

೩. ಬೆಳಗಾವಿ ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ ಸಂ: ಆರ್. ಗೋಪಾಲ್ ಪು. ೫೧, ಪ್ರಾಚ್ಯ ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೨೦೧೦

೪. ಬೆಳಗಾವಿ ಜಿಲ್ಲೆಯ ವಿದ್ವತ್‌ಪರಂಪರೆ ಸಂ: ಗುರುಪಾದ ಮರಿಗುದ್ದಿ ಪು. ೨೮, ಲಿಂಗಾಯತ ಅಧ್ಯಯನ ಅಕಾಡೆಮಿ, ಬೆಳಗಾವಿ ೨೦೦೭

೫. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂ. ೧೦ ಸಂ: ಎಂ. ಎಂ. ಕಲಬುರ್ಗಿ, ವೀರಣ್ಣ ರಾಜೂರ ಪು. ೪೨, ಕರ್ನಾಟಕ ವಿ.ವಿ. ಧಾರವಾಡ ೧೯೯೨

೬. ಎ ಡಿಸ್ಕರಿಪಟಿವ್ಹ್ ಕ್ಯಾಟಲಾಗ್ ಆಫ್ ಮ್ಯಾನ್ಯುಸ್ಕ್ರಿಪ್ಟ್ ಸಂ: ಬಿ. ಎಸ್. ಕುಲಕರ್ಣಿ ಪು. ೮೧, ಕೆ. ಆರ್. ಐ ಧಾರವಾಡ ೧೯೫೭

೭. ಪ್ರಭುದೇವರ ಯಕ್ಷಗಾನ ಸಂ: ಎಂ. ಎಸ್. ಲಠ್ಠೆ ಗುಲಬರ್ಗಾ ೧೯೯೨, ಪು. ೨೧

೮. ಬೆಳಗಾವಿ ಜಿಲ್ಲೆಯ ವಿದ್ವತ್‌ಪರಂಪರೆ ಸಂ: ಗುರುಪಾದ ಮರಿಗುದ್ದಿ ಪು. ೪೩

೯. ಬೆಳಗಾವಿ ಜಿಲ್ಲೆಯ ವಿದ್ವತ್‌ಪರಂಪರೆ ಸಂ: ಗುರುಪಾದ ಮರಿಗುದ್ದಿ ಪು. ೧೬೩

೧೦. ಪಿ. ಜಿ. ಕೆಂಪಣ್ಣವರ : ರಾಜರಶ್ಮಿ – ರಾಜಶೇಖರ ಇಚ್ಚಂಗಿ ಅಭಿನಂದನ ಗ್ರಂಥ ಪು. ೩೫೬ ನಿವೇದಿತಾ ಪ್ರಕಾಶನ, ಬೆಂಗಳೂರು, ೨೦೧೭

೧೧. ಬೆಳಗಾವಿ ಜಿಲ್ಲೆಯ ವಿದ್ವತ್‌ಪರಂಪರೆ ಸಂ: ಗುರುಪಾದ ಮರಿಗುದ್ದಿ ಪು. ೧೬೪

೧೨. ಸಂ. ಶಿ. ಭೂಸನೂರಮಠ : ಗುರುರಾಜ ಚಾರಿತ್ರ ಪ್ರಸ್ತಾವನೆ ಪು. ೩೦ ಮುರುಘಾಮಠ ಧಾರವಾಡ, ೧೯೬೦

೧೩. ತೋಂಟದ ಸಿದ್ಧೇಶ್ವರ ಭಾವರತ್ನಾಭರಣ ಸಂ: ಎಂ.ಎಂ.ಕಲಬುರ್ಗಿ ಪ್ರಸ್ತಾವನೆ ಪು. ೨, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ, ೧೯೯೪

೧೪. ಸಂ. ಶಿ. ಭೂಸನೂರಮಠ : ಗುರುರಾಜ ಚಾರಿತ್ರ ಪು. ೧

೧೫. ರಾಘವಾಂಕ ಚಾರಿತ್ರ : ಸಂ: ಸ.ಸ.ಮಾಳವಾಡ ಸಂಧಿ–೧, ಪದ್ಯ ೧೦, ಮುರುಘಾಮಠ, ಧಾರವಾಡ, ೧೯೬೦

೧೬. ಸಾವಳಗಿ ಶಿವಲಿಂಗೇಶ್ವರ ಪುರಾಣ ಪ್ರಸ್ತಾವನೆ ಪು. ೧೫ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೭. ಅದೇ ಪು. ೧೭

೧೮. ಡಾ. ಎಸ್. ವಿದ್ಯಾಶಂಕರ : ಸಾವಳಗಿ ಶಿವಲಿಂಗೇಶ್ವರ ಪುರಾಣದ ಪ್ರಸ್ತಾವನೆ ಪು. ೨೫

೧೯. ಗೋಕಾವಿ ಸಿರಿ ಸಂಪದ ಸಂ: ಸಿ. ಡಿ. ಅಕ್ಕಿ, ಮಹಾಲಿಂಗ ಮಂಗಿ ಪು. ೨೫ ಕ್ರಿಯಾಶೀಲ ಸಾಹಿತ್ಯ ವೇದಿಕೆ, ಗೋಕಾಕ ೨೦೦೬

೨೦. ಕನ್ನಡ ವಿ.ವಿ. ಹಸ್ತಪ್ರತಿ ಸೂಚಿ ಸಂ. ೨ ಸಂ: ಡಾ. ವೀರೇಶ ಬಡಿಗೇರ, ಎಸ್. ಆರ್. ಚನ್ನವೀರಪ್ಪ ಪು. ೨

೨೧. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು

೨೨. ಅದೇ–

೨೩. ಅದೇ–

೨೪. ಅದೇ–

೨೫. ಅದೇ–

೨೬. ಅದೇ–

೨೭. ಅದೇ–

೨೮. ಅದೇ–

೨೯. ಅದೇ–

೩೦. ವೇಣು ಸಂಪದ ಸಂ: ಪಿ. ಕೆ. ಭಾಗೋಜಿ ಪು. ೪೭ ಬೆಳಗಾವಿ ೧೯೮೦

೩೧. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು

೩೨. ಅದೇ–

೩೩. ಅದೇ–

೩೪. ಸುರೇಶ ಹನಗಂಡಿ ಅವರ ಸಂಗ್ರಹದಿಂದ ಆಯ್ದುಕೊಂಡಿದ್ದು

೩೫. ಅದೇ–

೩೬. ಅದೇ–

೩೭. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು

೩೮. ಅದೇ–

೩೯. ಅದೇ–

೪೦. ಅದೇ–

೪೧. ಅದೇ–

೪೨. ಅದೇ–

೪೩. ಅದೇ–

೪೪. ಅದೇ–

೪೫. ಹುಲಕುಂದ ಭೀಮಕವಿ ಲಾವಣಿಗಳು ಸಂ: ಚನ್ನಕ್ಕ ಪಾವಟೆ ಪು. ೫೪ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೪೬. ಅದೇ ಪು. ೬೦

೪೭. ಅದೇ– ಪು. ೪೫

೪೮. ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು

೪೯. ಬಸವರಾಜ. ಮಲಶೆಟ್ಟಿ :'ಮರಿಕಲ್ಲ ಕವಿಯ ಗೀಗೀ ಪದಗಳು,' ಪು. ೫೦ ಬಸವೇಶ್ವರ ಪ್ರಕಾಶನ, ತಿಗಡೊಳ್ಳಿ ೨೦೦೧

೫೦. ಅದೇ ಪು. ೪

೫೧. ಅದೇ ಪು. ೬

೫೨. ಅದೇ ಪು. ೮

೫೩. ಅದೇ ಪು. ೪೦

೫೪. ಅದೇ– ಪು. ೫೧

೫೫. ಅದೇ ಪು. ೫೬

೫೫. ಸಿ. ಕೆ. ನಾವಲಗಿ ಸಂ: ಸೋಮಲಿಂಗಕವಿಯ ಲಾವಣಿಗಳು ಪ್ರಸ್ತಾವನೆ ಪು. ೧೨ ಬೈಲಹೊಂಗಲ, ೨೦೧೨

೫೬. ಅದೇ–ಬೆನ್ನುಡಿ

೫೭. ಅದೇ ಪು. ೫

೫೮. ಅದೇ ಪು. ೬

೫೯. ಅದೇ ಪು. ೮

೬೦. ಅದೇ ಪು. ೧೦

೬೧. ಅದೇ ಪು. ೧೧

೬೨. ಅದೇ ಪು. ೧೩

೬೩. ಅದೇ ಪು. ೧೫

೬೪. ಅದೇ ಪು. ೧೬

೬೫. ಅದೇ ಪು. ೧೮

೬೬. ಅದೇ ಪು. ೨೦

೬೭. ಅದೇ ಪು. ೨೨

೬೮. ಅದೇ ಪು. ೨೫

೬೯. ಅದೇ ಪು. ೩೦

೭೦. ಅದೇ ಪು. ೪೮

೭೧. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿ ಸಂ. ೨ ಪು. ೨೯೬ ಕನ್ನಡ ವಿ.ವಿ. ಹಂಪಿ ೨೦೦೬

೭೨. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿ ಸಂ. ೨ ಪು. ೨೯೮ ಕನ್ನಡ ವಿ.ವಿ. ಹಂಪಿ ೨೦೦೬

೭೩. ಸಾತು ಕ್ಯಾಮಣ್ಣನ ಲಾವಣಿಗಳು ಸಂ: ನಿಂಗಣ್ಣ ಸಣ್ಣಕ್ಕಿ ಪು. ೧೮, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೪

೭೪. ಅದೇ ಪು. ೬೮

೭೫. ಅಲಭ್ಯೆರಿ ಕವಿ ವಿರಚಿತ ಭಜನೆಯ ತತ್ವಪದಗಳು ಸಂ: ಆರ್. ಬಿ. ಚಿಲುಮಿ ಪು. ೪೧ ಪದ್ಮರಾಜ ಕರ್ಣವಾಡಿ ಹಾರೂಗೇರಿ, ೨೦೦೭

೭೬. ಅದೇ ಪು. ೭೯

೭೭. ಫ್ಲೀಟರು ಸಂಗ್ರಹಿಸಿದ ಲಾವಣಿಗಳು ಸಂ: ಕ್ಯಾತನಳ್ಳಿ ರಾಮಣ್ಣ ಪು. ೧೫೩

೭೮. ನನ್ನ ಸಂಶೋಧನ ಕಾರ್ಯಕ್ಷೇತ್ರದಲ್ಲಿ ದೊರೆತ ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡದ್ದು

೭೯. ಅದೇ–

೮೦. ಇಂಚರ– ಎಸ್. ಡಿ. ಇಂಚಲ ಸಮಗ್ರ ಕಾವ್ಯ ಪು. ೨೫೧, ಕನ್ನಡ ಜಾಗೃತಿ ಮಾಲೆ, ಚಿಂಚಣಿ, ೨೦೦೭

೮೧. ಕಿತ್ತೂರು ಕ್ರಾಂತಿ : ಎಸ್. ಡಿ. ಇಂಚಲ ಪ್ರಸ್ತಾವನೆ ಪು. ೧, ಬೆಳಗಾವಿ ೧೯೭೬

೮೨. ಅದೇ ಪು. ೩

೮೩. ಅದೇ ಪು. ೪

೮೪. ಇಂಚರ– ಎಸ್. ಡಿ. ಇಂಚಲ ಸಮಗ್ರ ಕಾವ್ಯ ಪು. ೨೪೦ ಕನ್ನಡ ಜಾಗೃತಿ ಮಾಲೆ, ಚಿಂಚಣಿ, ೨೦೦೭

೮೫. ಅದೇ ಪು. ೨೩೫

೮೬. ಇಂಚರ– ಎಸ್. ಡಿ. ಇಂಚಲ ಸಮಗ್ರ ಕಾವ್ಯ ಪು. ೨೫೭

೮೭. ಕಿತ್ತೂರ ಸಂಸ್ಥಾನ ಸಾಹಿತ್ಯ–೧ ಸಂ: ಎಂ. ಎಂ. ಕಲಬುರ್ಗಿ ಪು. ೧, ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ, ೧೯೯೮

೮೮. ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ–೧, ಸಂ: ಎಂ. ಎಂ. ಕಲಬುರ್ಗಿ ಪ್ರಸ್ತಾವನೆ ಪು. ೧೩

೮೯. ಅದೇ ಪು. ೧೬೪

೯೦. ಕಿತ್ತೂರು ಸಂಸ್ಥಾನ ಸಾಹಿತ್ಯ–೩ ಸಂ: ಎಂ. ಎಂ. ಕಲಬುರ್ಗಿ ಪು. ೧, ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ,೨೦೧೫

೯೧. ಎಂ. ಎಂ. ಕಲಬುರ್ಗಿ– ಕಿತ್ತೂರು ಸಂಸ್ಥಾನ ಸಾಹಿತ್ಯ ಭಾಗ–೩ ಪು. ೧೨ ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ,೨೦೧೫

೯೨. ಅದೇ ಪು. ೫

೯೩. ಅದೇ ಪು. ೧೪–೧೫

೯೪. ಎಂ. ಎಂ. ಕಲಬುರ್ಗಿ : ಕಿತ್ತೂರು ಸಂಸ್ಥಾನ ಸಾಹಿತ್ಯ ಭಾಗ–೩ ಪು. ೬–೭ ಲಿಂಗಾಯತ ಅಧ್ಯಯನ ಸಂಸ್ಥೆ, ಗದಗ,೨೦೧೫

೯೫. ನನ್ನ ಸಂಗ್ರಹದಲ್ಲಿರುವ ‘ಬಾದಶಾಹಿ ಜಾಹೀರ್‌ನಾಮೆ’ ಪ್ರಕಟನೆಯ ಪ್ರತಿಯಿಂದ

೯೬. ಬೆಳಗಾವಿ ಕರ್ನಾಟಕದ ಸ್ವತ್ತು– ರವೀಂದ್ರ ತೋಟಿಗೇರ ಪು. ೧೦೧ ಭುವನ ಪ್ರಕಾಶನ, ಬೆಳಗಾವಿ ೨೦೧೪

೯೭. ಅದೇ ಪು. ೭೮

೯೮. ಅದೇ ಪು. ೧೦೪

೯೯ ಅದೇ ಪು. ೧೦೪

೧೦೦. ಅದೇ ಪು. ೧೦೬

೧೦೧. ಸೋದೆಯ ಸದಾಶಿವರಾಯನ ಕೃತಿಗಳು ಸಂ: ಬಿ. ಆರ್. ಹಿರೇಮಠ ಪ್ರಸ್ತಾವನೆ, ಪು. ೧೭–೧೮, ವೀರಶೈವ ಅಧ್ಯಯನ ಸಂಸ್ಥೆ, ತೋಂಟದಾರ್ಯಮಠ, ಗದಗ, ೨೦೦೦

# ಅಧ್ಯಾಯ – ನಾಲ್ಕು

## ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಮಾಜಿಕ ಆಯಾಮ

ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಾವಿರಾರು ವರ್ಷಗಳ ಸುದೀರ್ಘವೂ ಸಮೃದ್ಧವೂ ಆದ ಇತಿಹಾಸವಿದೆ. ಇಡೀ ದೇಶದ ಸಾಹಿತ್ಯಿಕ ಇತಿಹಾಸದಲ್ಲಿ ಸಂಸ್ಕೃತ ದೇವಭಾಷೆಯಾಗಿ ಮೆರೆದಿದೆ. ಆದರೆ ಕನ್ನಡದಂಥ ಒಂದು ಪ್ರಾದೇಶಿಕ ಭಾಷೆ ಎರಡು ಸಾವಿರ ವರ್ಷಗಳ ಹಿಂದೆಯೇ ತನ್ನ ಸಮೃದ್ಧವಾದ ಸಾಹಿತ್ಯ ನಿರ್ಮಾಣದಿಂದ ಸಂಸ್ಕೃತಕ್ಕೆ ಪರ್ಯಾಯವಾಗಿ ನಿಂತಿತು ಎಂಬುದು ಸೋಜಿಗದ ಸಂಗತಿಯಾಗಿದೆ. ಸಂಸ್ಕೃತದ ದಟ್ಟಪ್ರಭಾವದಿಂದ ತಪ್ಪಿಸಿಕೊಳ್ಳಲಾಗದ ಪಂಪ ರನ್ನರ ಕಾಲಾನಂತರ ಬಂದ ವಚನಕಾರರು, ಹರಿಹರ ರಾಘವಾಂಕರು, ಹರಿದಾಸರೂ ಅಚ್ಚಗನ್ನಡದ ಶುದ್ಧದೇಶಿಯ ಪ್ರಯೋಗದಲ್ಲಿ ಯಶಸ್ಸು ಕಂಡರು. ವಿವಿಧ ಧರ್ಮದ ಕವಿಗಳು ಸಮನ್ವಯದ ದೃಷ್ಟಿಯ ಸಾಹಿತ್ಯ ನಿರ್ಮಾಣ ಮಾಡಿದರು. "ಪಂಪ ಜೈನನಾದರೂ 'ಲೌಕಿಕ' 'ಆಗಮಿಕ'ಗಳೆಂಬ ಎರಡೂ ಕೃತಿಗಳನ್ನು ರಚಿಸಿದ್ದು, ರಾಘವಾಂಕ ಶರಣಧರ್ಮದ ಸೆಳವಿಗೆ ಸಿಕ್ಕಿದ್ದರೂ 'ಹರಿಶ್ಚಂದ್ರ ಕಾವ್ಯ'ದಂಥ ಸರ್ವಧರ್ಮೀಯರಿಗೆ ಸಮ್ಮತವಾದ ಕಾವ್ಯರಚಿಸಿದ್ದು, ಹರಿದಾಸರು ಹರಿಯನ್ನೇ ಸರ್ವೋತ್ತಮ ಎಂದು ಸಾರಿದರೂ ಸಮಾನತಾದೃಷ್ಟಿ ಪ್ರಚಾರ ಮಾಡಿದ್ದು, ಲಿಂಗಾಯತ ಕವಿಗಳ ಮೇಲೆ ವೈಷ್ಣವ ಪ್ರಭಾವ, ಜೈನಕವಿಗಳ ಮೇಲೆ ಲಿಂಗಾಯತ ಪ್ರಭಾವ ಬಿದ್ದಿದ್ದು, ರತ್ನಾಕರನಂಥ ಜೈನಕವಿ 'ಭೋಗ–ಯೋಗ'ದ ಜೈನಧರ್ಮಕ್ಕೆ ವಿರೋಧಿಯಾದ ದರ್ಶನವೊಂದನ್ನು ಭರತೇಶ ವೈಭವದಲ್ಲಿ ಪ್ರತಿಪಾದಿಸಿದ್ದು ಇವೆಲ್ಲ ಸಾಮಾಜಿಕ ಸಮನ್ವಯ ದೃಷ್ಟಿಯ ಪರಿಣಾಮಗಳಾಗಿವೆ. ಇದರ ಪರಿಣಾಮವಾಗಿ ಕನ್ನಡಸಾಹಿತ್ಯದಲ್ಲಿ ಹೊಸಗಾಳಿ ಹೊಸ ಸಾಹಿತ್ಯ ನಿರ್ಮಾಣವಾಗಲು ಸಾಧ್ಯವಾಯಿತು. ತ್ರಿಪದಿ, ರಗಳೆ, ಸಾಂಗತ್ಯ, ವಚನ, ಕೀರ್ತನೆಗಳ ರೂಪಗಳು ಸಂಪೂರ್ಣವಾಗಿ ಕನ್ನಡ ಕಾವ್ಯದ ವೈಶಿಷ್ಟ್ಯಗಳೇ ಆಗಿವೆ. ಅದರಲ್ಲಿಯೂ ವಚನ ಸಾಹಿತ್ಯವಂತೂ ತನ್ನ ರೂಪ ಹಾಗೂ ಸತ್ವಗಳಿಂದ ವಿಶ್ವಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯಾಗಿದೆ ಎಂದು ಧೈರ್ಯವಾಗಿ ಹೇಳಬಹುದು."[1]

ಹೀಗೆ ಸಮೃದ್ಧವಾಗಿ ಬೆಳೆದ ಕನ್ನಡ ಸಾಹಿತ್ಯವು ಸಾಮಾಜಿಕ ಸಾಮರಸ್ಯಕ್ಕಾಗಿ ನಿರಂತರವಾಗಿ ತುಡಿಯುತ್ತ ಬಂದಿರುವುದನ್ನು ಕಾಣಬಹುದು. ಸಮಾಜ ಎಂದರೆ ಹಲವು ಜಾತಿಮತ ಪಂಗಡಗಳ ಒಂದು ಕುಟುಂಬ. ಇಲ್ಲಿ ಎಲ್ಲರೂ ಸಮಾನತೆ–ಸಾಮರಸ್ಯದ ಬದುಕನ್ನು ಬದುಕಬೇಕೆಂಬುದು ಸಾಹಿತ್ಯದ ಮೂಲಆಶಯ. 'ಜನ ಬದುಕಬೇಕೆಂದು ಕಾವ್ಯ ರಚಿಸಿದೆನೆಂದು' ರಾಘವಾಂಕ ಹೇಳಿದಂತೆ, ಜನಮುಖಿಯಾದ ಸಾಹಿತ್ಯದಿಂದಲೇ ಸಾಮಾಜಿಕ ಮೌಲ್ಯಗಳು ಇಂದಿಗೂ ಜೀವಂತವಾಗಿ ಉಳಿದುಕೊಂಡಿವೆ ಎಂದು ಹೆಮ್ಮೆಯಿಂದ ಹೇಳಬಹುದು.

ಸಾಹಿತ್ಯದ ವಿವಿಧ ಪ್ರಕಾರಗಳು ಹಸ್ತಪ್ರತಿಗಳ ಮೂಲಕ ನಮಗೆ ಇಂದಿಗೂ ಹೊಸ ಹೊಸ ಚಿಂತನೆಗಳನ್ನು, ಆಲೋಚನೆಗಳನ್ನು ರೂಪಿಸುತ್ತಿರುವುದು ಗಮನಾರ್ಹ ಅಂಶ. ಈ ಹಸ್ತಪ್ರತಿಗಳನ್ನು ವಿವಿಧ ಆಯಾಮಗಳಿಂದ ಅಧ್ಯಯನ ಮಾಡಿದಾಗ ಕಂಡುಬರುವ ಅಂಶಗಳನ್ನು ಸಾಮಾಜಿಕ–ಧಾರ್ಮಿಕ–ಚಾರಿತ್ರಿಕ ಅನನ್ಯತೆಯ ಅನೇಕ ಹೊಸ ವಿಚಾರಗಳು ಮೊದಲ ಬಾರಿಗೆ ಹೊಳೆಯುತ್ತವೆ ಎಂಬುದಕ್ಕೆ ಪ್ರಸ್ತುತ ಈ ಅಧ್ಯಾಯ ಸಾಕ್ಷಿಯಾಗಿದೆ. ಮಠ–ಬಸದಿಗಳಲ್ಲಿ ನಿರ್ಮಾಣಗೊಳ್ಳುತ್ತಿದ್ದ ಹಸ್ತಪ್ರತಿಗಳು ಒಂದು ರೀತಿಯ ಪೂಜ್ಯತೆಯ ಸ್ಥಾನದಲ್ಲಿರುತ್ತಿದ್ದವು. ಅವುಗಳನ್ನು ಸಾಮಾನ್ಯ ಜನರ ಕೈಗೆ ಕೊಡುತ್ತಿರಲಿಲ್ಲ. ಆದರೆ ಆ ಹಸ್ತಪ್ರತಿಗಳಲ್ಲಿ, ಸರ್ವಧರ್ಮ ಸಮಭಾವದ ಸಾರ್ವತ್ರಿಕ ಮೌಲ್ಯಗಳು ಅಡಕವಾಗಿದ್ದವು. ಕಾಲ ಬದಲಾದಂತೆ ರಾಜಾಶ್ರಯದಿಂಗ ಜನಸಾಮಾನ್ಯರ ಆಶ್ರಯಕ್ಕೆ ಸಾಹಿತ್ಯ ಬಂದಾಗ ಅದರ ಚಲನಶೀಲತೆ ಇನ್ನಷ್ಟು ವಿಸ್ತಾರಗೊಂಡಿತು.

ವಚನ ಕಟ್ಟುಗಳನ್ನು ಯಾರು ಬೇಕಾದರೂ ಬರೆದುಕೊಳ್ಳುತ್ತಿದ್ದರು. ಹೀಗಾಗಿ ಜನಸಾಮಾನ್ಯರಿಗೂ ಸಾಹಿತ್ಯದ ಅರಿವು ಉಂಟಾಯಿತು. ವಚನಗಳಲ್ಲಿ ಪ್ರಸ್ತಾಪಿತವಾದ ಸಾಮಾಜಿಕ ಮೌಲ್ಯಗಳ ಅರಿವಾಯಿತು. ಅಂತೆಯೇ ಇಂದಿಗೂ ಗ್ರಾಮೀಣ ಪ್ರದೇಶದ ನಿರಕ್ಷರಿ ಲಿಂಗಾಯತ ಸಮುದಾದವರೂ ಸಹಿತ ನಮಗೆ ಪಂಚಸೂತಕಗಳಿಲ್ಲ ಎಂದು ಹೇಳುವುದನ್ನು ಕೇಳಿದರೆ ಈ ವಿಷಯ ಸ್ಪಷ್ಟವಾಗುತ್ತದೆ. ಸಮಾಜದ ಸಾಮರಸ್ಯವನ್ನು ಹಾಳುವ ಮಾಡುವ ಏಕೈಕ ಸಾಧನ ಜಾತಿವ್ಯವಸ್ಥೆ. ಈ ಜಾತಿವ್ಯವಸ್ಥೆಯ ವಿರುದ್ಧವೇ ಶರಣರು ಸಮರ ಸಾರಿದರು. ಜಾತಿ–ಮತಗಳನ್ನು ಮೀರಿ ಮನುಜಮತ–ವಿಶ್ವಪಥ ಎಂಬುದನ್ನು ಶರಣರು ತಮ್ಮ ವಚನಗಳಲ್ಲಿ ಪ್ರಸ್ತಾಪಿಸಿದರು. ಆದರೆ ೧೫–೧೬ನೇ ಶತಮಾನದ ಹೊತ್ತಿಗೆ ಇಡೀ ದೇಶದಲ್ಲಿ ರಾಜಕೀಯ ಸ್ಥಿತಿಗತಿಗಳು ಬದಲಾದವು. ಅನ್ಯಧರ್ಮೀಯರ ಆಕ್ರಮಣ ಮಿತಿಮೀರಿತು. ಆಗ ಈ ಸಾಹಿತ್ಯವನ್ನು ಉಳಿಸಿಕೊಳ್ಳುವುದು ನಮ್ಮ ಜನರಿಗೆ ತುಂಬಾ ಕಷ್ಟವಾಯಿತು. ಇಂಥ ಸಂದರ್ಭದಲ್ಲಿ ವಚನಸಾಹಿತ್ಯವನ್ನು ಮತ್ತೆ ಧಾರ್ಮಿಕ ಪಠ್ಯ ಮಾತ್ರವೆಂಬಂತೆ ಪರಿಭಾವಿಸಿ, ವಚನಗಳನ್ನು ಧಾರ್ಮಿಕ ನೆಲೆಯಲ್ಲಿ ಸಂಕಲನ–ಸಂಪಾದನ–ಸಂಗ್ರಹ–ಪರಿಷ್ಕರಣ ಕಾರ್ಯವನ್ನು ಮಾಡುತ್ತ ಬಂದರು. ಹೇಗಾದರೂ ನಮ್ಮ ಸಾಹಿತ್ಯ ಉಳಿಯಲಿ, ಮುಂದಿನ ಪೀಳಿಗೆಗೆ ದೊರೆಯಲಿ ಎಂಬ ಸದಾಶಯ ಮತ್ತು ಇಚ್ಛಾಶಕ್ತಿ ನಮ್ಮ ಹಿರಿಯ ಜೀವಿಗಳಿಗೆ ಇರುವುದು ಗಮನಾರ್ಹ.

ಹೀಗಾಗಿ ಮಠಾಧೀಶರು ಲಿಪಿಕಾರರನ್ನು ನಿಯುಕ್ತಿಗೊಳಿಸಿ ಅಪಾರ ಪ್ರಮಾಣದ ಶರಣಸಾಹಿತ್ಯವನ್ನು ಲಿಪಿಕರಣಗೊಳಿಸಿದರು. ತಮ್ಮ ಶಿಷ್ಯ-ಪ್ರಶಿಷ್ಯರಿಗೆ ಓದಲು ಕೊಟ್ಟರು. ಇದರ ಪರಿಣಾಮವಾಗಿ ಸಾಹಿತ್ಯದ ಹರವು ವಿಸ್ತಾರಗೊಳ್ಳುವುದರೊಂದಿಗೆ ಸಾಮಾಜಿಕ ಮೌಲ್ಯಗಳವರ್ಧನೆಗೂ ಸಹಾಯಕವಾಯಿತು. ಬಸವಪುರಾಣ, ಪ್ರಭುಲಿಂಗಲೀಲೆ ಮೊದಲಾವುಗಳನ್ನು ಜನಸಾಮಾನ್ಯರಿಗೆ ರೋಚಕವಾಗಿ ರಂಜನೀಯವಾಗಿ ಮನಮುಟ್ಟುವಂತೆ ಹೇಳುವ ಒಂದು ಪುರಾಣಿಕರ ಪಡೆಯೇ ಸಿದ್ಧವಾಯಿತು. ಹಳ್ಳಿ ಪಟ್ಟಣಗಳಲ್ಲಿ ಶ್ರಾವಣ ಮಾಸ, ಜಾತ್ರೆ ಉತ್ಸವಗಳ ಸಂದರ್ಭದಲ್ಲಿ ಈ ಪುರಾಣ ಪ್ರವಚನಗಳು ನಿರಂತರವಾಗಿ ನಡೆಯುತ್ತ ಬಂದವು. ಹಸ್ತಪ್ರತಿಗಳು ಹೆಚ್ಚಾದಂತೆ, ಅವುಗಳನ್ನು ಪ್ರತಿ ಮಾಡಿ ಪ್ರವಚನ ಹೇಳುವ ಪುರಾಣಿಕರ ಮನೆತನಗಳು ಹೆಚ್ಚಾದವು. ಇಂದಿಗೂ ಹಸ್ತಪ್ರತಿಯನ್ನು ಮುಂದಿಟ್ಟುಕೊಂಡು ಪುರಾಣ ಹೇಳುವ ಪರಂಪರೆ ಬೆಳಗಾವಿ ಜಿಲ್ಲೆಯ ಕೆಲವು ಕಡೆ ಇರುವುದನ್ನು ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿರುವೆ. (ಬೆಳಗಾವಿ ಶಹಪುರದ ದಾನಮ್ಮ ಗುಡಿಯಲ್ಲಿ ಗುರುಸಿದ್ಧ ಕವಿಯ ಗುಡ್ಡಾಪುರ ದಾನಮ್ಮ ಪುರಾಣದ ಹಸ್ತಪ್ರತಿಯನ್ನು ಇಟ್ಟುಕೊಂಡೆ ಪ್ರವಚನ ಮಾಡುತ್ತಾರೆ) ಪ್ರತಿವರ್ಷ ಶ್ರಾವಣ ಮಾಸದಲ್ಲಿ ಪುರಾಣಗಳ ಮೂಲಕ ಸಾಮಾಜಿಕ ಚಿಂತನೆಗಳನ್ನು ಜನರ ಮನಸ್ಸಿಗೆ ಮುಟ್ಟುವಂತೆ ಮಾಡಲಾಯಿತು. ಅದಕ್ಕಾಗಿ ಲಿಪಿಕಾರರು-ಪುರಾಣಿಕರು ಮಾಡಿದ ಸೇವೆಯನ್ನು ಮರೆಯುವಂತಿಲ್ಲ. ಹೀಗಾಗಿ ಈ ಮನೆತನಕ್ಕೆ ಪುರಾಣಿಕ, ಪುರಾಣಿಕಮಠ ಎಂದು ನಾಮಕರಣದಿಂದ ಜನ ಕರೆಯುತ್ತಾರೆ.

ಹಸ್ತಪ್ರತಿ ಲಿಪಿಕಾರರು ಬರೆದಿರುವ ಅಂತ್ಯಪ್ರಶಸ್ತಿಗಳಿಂದ ನಾವು ಆಯಾ ಕಾಲದ ಸಾಮಾಜಿಕ ಸ್ಥಿತಿಗತಿಗಳನ್ನು ಅರಿತುಕೊಳ್ಳಬಹುದು. ಆಗಿನ ಕಾಲದ ಒಟ್ಟು ಚಿತ್ರಣ ನಮಗೆ ದೊರೆಯುತ್ತದೆ. ಸ್ಥಳನಾಮಗಳು, ಕುಲನಾಮಗಳು, ವೃತ್ತಿನಾಮಗಳು ಮೊದಲಾದವುಗಳ ಇತಿಹಾಸದ ಅರಿವು ಮೂಡುತ್ತದೆ. ಬೆಳಗಾವಿ ಜಿಲ್ಲೆಯ ಹಸ್ತಪ್ರತಿ ಲಿಪಿಕಾರರ ಬರವಣಿಗೆಯ ವೈಶಿಷ್ಟ್ಯಗಳನ್ನು ಕಾಣಬಹುದು. ಲಿಪಿಕಾರರು ಉಲ್ಲೇಖಿಸಿದ ಬಹುತೇಕ ಮಠಗಳು ಇಂದು ನಾಮಾವಶೇಷವಾಗಿವೆ. ಕಾಲಗರ್ಭದಲ್ಲಿ ಲೀನವಾದ ಮಠಗಳ ಹೆಸರುಗಳಾದರೂ ಇಂದು ನಮಗೆ ದೊರೆಯುತ್ತವೆ. ಬೆಳಗಾವಿ ನಗರ ಒಂದರಲ್ಲಿಯೇ ಚಂದ್ರಶೇಖರಮಠ, ಕಾರಂಜಿಮಠ, ಗಣಾಚಾರಿಮಠ, ಕಲ್ಮಠ ಮೊದಲಾದ ಹದಿನೈದು ಲಿಂಗಾಯತ ಮಠಗಳಿದ್ದವು. ಚಂದ್ರಶೇಖರಮಠದ ಚಂದ್ರಶೇಖರದೇವರು ಕಾಶಿಯಲ್ಲಿ ಅಧ್ಯಯನ ಮಾಡಿ, 'ವೀರಶೈವಾನಂದಚಂದ್ರಿಕೆ' ಎಂಬ ಅಮೂಲ್ಯ ಸಂಸ್ಕೃತ ಗ್ರಂಥವನ್ನು ಸಂಪಾದಿಸಿ ಕಾಶಿಯಿಂದ ಪ್ರಕಟಿಸಿದ್ದರು. ಕೊನೆಯಲ್ಲಿ ಕೆಲವು ಕನ್ನಡಪುಸ್ತಕಗಳ ಹೆಸರು ಹಾಕಬೇಕಾದ ಸಂದರ್ಭ ಬಂದಾಗ, ಬೆಳಗಾವಿ ಪ್ರಸಿದ್ಧ ಮಹಾವೀರ ಮುದ್ರಣಾಲಯದಿಂದ ಕನ್ನಡ ಅಕ್ಷರಗಳನ್ನು ಪಡೆದುಕೊಂಡು ಕಾಶಿವರೆಗೆ ತೆಗೆದುಕೊಂಡು ಹೋಗಿ ಕನ್ನಡದಲ್ಲಿಯೇ ಅವುಗಳ ಹೆಸರು ಬರುವಂತೆ ಮಾಡಿದ್ದು ಸಣ್ಣ ಸಾಧನೆಯೇನಲ್ಲ. ಇಂಥ ಚಂದ್ರಶೇಖರದೇವರು ನಂತರ ವಂಟಮುರಿಯ ಸಂಪಾದನಮಠಕ್ಕೆ, ದುಧನಿಯ ಶಾಂತಲಿಂಗೇಶ್ವರಮಠಕ್ಕೆ ಅಧಿಪತಿಗಳಾದರು.

ಮುಂದೆ ನಿಡಸೋಸಿ ದುರದುಂಡೀಶ್ವರ ಮಠದ ಅಧಿಪತಿಗಳಾದರು. ಇಂದು ಚಂದ್ರಶೇಖರಮಠ ಅವರ ಕುಟುಂಬವರ್ಗದವರ ಪಾಲಾಗಿ, ಮಠದ ಅಸ್ತಿತ್ವ ಹೋಗಿ ಈಗ ಬೆಳಗಾವಿಯಲ್ಲಿ ಮಠವಿದ್ದ ಜಾಗದಲ್ಲಿ ಔಷಧಿ ಅಂಗಡಿ ತಲೆಎತ್ತಿದೆ ಎಂಬುದನ್ನು ನಾನು ಕಣ್ಣಾರೆ ನೋಡಿಬಂದೆ. ಹದಿನೈದು ಮಠಗಳಲ್ಲಿ ಈಗ ಕಾರಂಜಿಮಠ ಮಾತ್ರ ಉಳಿದುಕೊಂಡಿದೆ. ಕಾರಂಜಿಮಠದ ಮೂಲ ಶಹಾಪುರದಲ್ಲಿತ್ತು. ಅದು ಪಟ್ಟಭದ್ರರ ಕೈವಶವಾಗಿ, ಅಲ್ಲಿ ದಾನಮ್ಮಮಂದಿರ, ಕಲ್ಯಾಣ ಮಂಟಪ ನಿರ್ಮಾಣವಾಗಿ ಹಣ ಮಾಡುವ ಸಾಧನಗಳಾಗಿವೆ. ಹೀಗಾಗಿ ಕಾರಂಜಿಮಠದ ಈಗಿನ ಶ್ರೀಗಳು ಶಿವಬಸವನಗರದಲ್ಲಿ ಹದಿನೈದು ವರ್ಷಗಳ ಹಿಂದೆ ಹೊಸಮಠ ನಿರ್ಮಾಣ ಮಾಡಿಕೊಂಡು, ಹಳೆಯಮಠದ ಸಂಬಂಧ ಕಡಿದುಕೊಂಡಿದ್ದಾರೆ.

ಅಧ್ಯಯನದ ಫಲವಾಗಿ ಇಂಥ ಅನೇಕ ಹೊಸ ವಿಚಾರಗಳನ್ನು ಈ ಅಧ್ಯಾಯದಲ್ಲಿ ಪ್ರಸ್ತಾಪಿಸಿರುವೆ.

ಹುಬ್ಬಳ್ಳಿ ಮೂರುಸಾವಿರಮಠದ ಹಸ್ತಪ್ರತಿ ಭಂಡಾರದಲ್ಲಿರುವ 'ಅನುಭವ ಶಿಖಾಮಣಿ' ಎಂಬ ಹಸ್ತಪ್ರತಿ ಅಂತ್ಯ ಪ್ರಶಸ್ತಿ ಹೀಗಿದೆ: "ಈ ಪುಸ್ತಕವುದಾರದು ಅಂದರೆ ಸಂಪಗಾವಿ ತಾಲೂಕದೊಳಗಿನ ನಾಗನೂರು ರುದ್ರಾಕ್ಷಿಮಠದ ಶಿದ್ರಾಮಸ್ವಾಮಿಯವರದು । ಶ್ರೀ ಶಾಲಿವಾಹನ ಶಕ ೧೭೭೦ ಸರ್ವಧಾರಿನಾಮ ಸಂವತ್ಸರ ನಿಜಚೈತ್ರ ಶುದ್ಧ ೧ ಬಿದಗಿ ಅಶ್ವಿನಿ ನಕ್ಷತ್ರದಲ್ಲಿ ಮುಗದಿರುತ್ತದೆ. ಮಂಗಳ ಮಹಾಶ್ರೀ ಶ್ರೀ ಶ್ರೀ ಯಿ ಪುಸ್ತಕ ಬರದ ಗೊತ್ತು ಮೋಜೆ ಬಾಳೇಕುಂದ್ರಿಗ್ರಿಯಲ್ಲಿ ಯಿರುವಂಥಾ ಹೊಸಮಠ ವಿರೂಪಾಕ್ಷಯ್ಯಾ ಯಿರಯ್ಯಾ ಶೇವಕನಾದಂಥವನು ಬರೆದಿರುತ್ತಾನೆ. ಶ್ರೀ ಶ್ರೀ ಶ್ರೀ ಅಧಿಕ ಕೃಷ್ಣ ಪಕ್ಷ ಚೈತ್ರ ತಿಂಗಳು ೩ ದಿ। ತಾ ೩೦ ದಿವಸ ಹೊದದ್ದು."[೨] ಈ ಅಂತ್ಯಪ್ರಶಸ್ತಿಯಿಂದ ನಮಗೆ ತಿಳಿದುಬರುವ ಮಹತ್ವದ ಸಂಗತಿಯೆಂದರೆ ಆ ಕಾಲದಲ್ಲಿ ಬ್ರಿಟಿಷ್ ಸರಕಾರವಿದ್ದ ಕಾರಣ ಸಂಪಗಾವಿ ತಾಲೂಕು ಕೇಂದ್ರವಾಗಿತ್ತು. (ಈಗ ಬೈಲಹೊಂಗಲ ತಾಲೂಕು ಇದೆ) ಎಂಬ ವಿಷಯದ ಬಗ್ಗೆ ನಮ್ಮ ಗಮನ ಸೆಳೆಯುತ್ತದೆ. ಕ್ರಿ.ಶ. ೧೭೮೮ರಲ್ಲಿ ಇನ್ನೂ ಲಾರ್ಡ ಮೆಕಾಲೆಯ ಆಂಗ್ಲ ಶಿಕ್ಷಣ ಪದ್ಧತಿ ಜಾರಿಗೆ ಬಂದಿರಲಿಲ್ಲ. ಹೀಗಾಗಿ ಪಾರಂಪರಿಕ ಶಿಕ್ಷಣ ಪಡೆದ ಒಬ್ಬ ಸೇವಕ ಈ ಕೃತಿಯನ್ನು ಲಿಪಿಕರಣ ಮಾಡಿದ್ದು ವಿಶೇಷ. 'ಇ' 'ಈ' ಕಾರ ಪ್ರತ್ಯಯಕ್ಕೆ 'ಯಿ' ಕಾರ ಬಳಸಿರುವುದನ್ನು ಗಮನಿಸಬಹುದು. ಈ ಹಸ್ತಪ್ರತಿ ಲಿಪಿಮಾಡಲು ಎಷ್ಟುತಿಂಗಳು ಎಷ್ಟುದಿನ ವ್ಯಯವಾಯಿತೆಂಬುದನ್ನು ಇಲ್ಲಿ ಗಮನಿಸಬಹುದು.

"ಶ್ರೀನೃಪ ಶಾಲಿವಾಹನ ಶಕೆ ೧೭೮೮ ಕ್ಷಯನಾಮ ಸಂವತ್ಸರ ಆಷಾಢ ಬಹುಳ ೩ ಚಂದ್ರವಾರ ದಿವಸ ಸವದತ್ತಿ ಹೊಸಮಠದಲ್ಲಿ ಗಿರಿಜಾ ಕಲ್ಯಾಣ ಸಂಪೂರ್ಣವಾದುದು. ಈ ಗಿರಿಜಾ ಕಲ್ಯಾಣ ಪುಸ್ತಕ ದೊಡವಾಡದ ಸಿದ್ರಾಮಯ್ಯನದು ಇರುತ್ತದೆ."[೩]

"ಸ್ವಸ್ತಿಶ್ರೀ ವರುಷ ೧೫೫೭ನೆ ಭಾವ ಸಂವತ್ಸರದ ಜೇಷ್ಠ ಶುದ್ಧ ಪಂಚಮೀ ಬುಧವಾರದಲ್ಲೂ ಕೆರೆಯೂರಪುರದ ವೀರಣ್ಣವೊಡೆಯರ ದೇವರ ಮಕ್ಕಳು ಕಿತ್ತೂರು ಗುರುದೇವರು ಚಿಕ್ಕವೀರಶೆಟ್ಟಿಯವರ ಮಕ್ಕಳು ಸಾವಂದಿಶಟ್ಟರಿಗೆ.... ಹರಸಿ ಬರೆದ ಗುರುಬೋಧಾಮೃತ"[೪].

ಈ ಹಸ್ತಪ್ರತಿಗಳಿಂದ ಸ್ಥಳನಾಮಗಳನ್ನು ಅಧ್ಯಯನ ಮಾಡಲು ತುಂಬಾ ಅನುಕೂಲವಾಗುವುದು ಎಂಬುದನ್ನು ನಾನು ಈ ಅಧ್ಯಯನದಿಂದ ಕಂಡುಕೊಂಡಿರುವೆ. ಬೈಲಹೊಂಗಲ ಪಟ್ಟಣವನ್ನು ಪ್ರಾಚೀನ ಕಾಲದಲ್ಲಿ ಕನಕಕಂಠ ಗ್ರಾಮ ಎಂದು ಒಂದು ಹಸ್ತಪ್ರತಿಯಲ್ಲಿ, ಮತ್ತೊಂದು ಹಸ್ತಪ್ರತಿಯಲ್ಲಿ ಸುವರ್ಣ ಕಂಠಾಕ್ಯ ಗ್ರಾಮ ಎಂಬ ಎರಡು ಹೆಸರುಗಳಿರುವುದನ್ನು ಗಮನಿಸಬಹುದು.

'ಇತಿ ತಿರುನೀಲಕಂಠೈಯ್ಯನವರ ಚಾರಿತ್ರಂ ಪರಿ ಸಮಾಪ್ತಮಂಗಳ ಮಸ್ತು ಶ್ರೀ ಶ್ರೀ । ಭಾಮಿನಿ ।

'ಕನಕಕಂಠಗ್ರಾಮ ಸಂಸ್ಥಿತ
ವಿನುತನ ಮಠ ಪಾರಾಣಿ ಶಿವಬಸ
ವನಿಪ ಶಿವಯೋಗೀಶ್ವರನ ತನುಜಾತನೆಂದೆನಿಪ
ಅನಘ ದುರದುಂಡೀಶ ಕವಿತಾ
ನನುವಿನಿಂದೀ ಯಕ್ಷಗಾನಂ
ದೆನಿಪ ಸತ್ಕವಿತಾಮೃತವನನುವರಿದು ವಿರಚಿಸಿದಂ।'[೫]

ದುರದುಂಡಪ್ಪ ಈತನ ತಂದೆ **ಸುವರ್ಣ ಕಂಠಾಖ್ಯ** ಗ್ರಾಮದ ಪೌರಾಣಿಕ ಶಿವಬಸವ. ಶಕೆ. ೧೭೫೨ ವಿಕೃತನಾಮ ಸಂವತ್ಸರ ವೈಶಾಖಮಾಸ ಶುಕ್ಲಪಕ್ಷೆ ಏಕಾದಸ್ಯ ಮಿಂದುವಾಸರೆ ತೃತಿಯಾಪ್ರಹರೆ ವುತ್ರಿನಕ್ಷತ್ರೆ ಶ್ರೀಪತಿಯೋಗೆ ಸಮಯ (೯.೪.೧೮೩೦)ದಲ್ಲಿ ಸಿದ್ಧೇಶ್ವರ ಪುರಾಣವನ್ನು ಲಿಪಿಗೈದಿರುತ್ತಾನೆ. "ಯಾದೃಶ್ಯಂ ಪುಸ್ತಕಂ ಮಯ ತಾದೃಶ್ಯಂ ಅಬದ್ಧೋವ ಸುಬದ್ಧೋವ ಮಮದೋಷೋ ನವಿದ್ಯತೇ' ಎಂಬ ಉಲ್ಲೇಖವು ದುರದುಂಡಪ್ಪನ ಪ್ರಾಮಾಣಿಕತೆಗೆ ನಿದರ್ಶನವಾಗಿದೆ"[೬].

ಬಸವಕವಿ ಎಂಬುವನು ಬೈಲಹೊಂಗಲ ಗ್ರಾಮವನ್ನು 'ಹೇಮಗಲಾಖ್ಯ' ಎಂದು ಕರೆದಿದ್ದಾನೆ. ಹೀಗೆ ಮೂರು ಹೆಸರುಗಳು ಒಂದೇ ಊರಿಗೆ ಇರುವುದು ವಿಶೇಷವೆನ್ನಬೇಕು.

ಹುಮನಾಬಾದು ಈರಭದ್ರಯ್ಯನ ಮಗ ಕುಮಾರ ಚೆನ್ನಬಸವಯ್ಯ ಎಂಬುವನು ಬೆಂಗಳೂರಿನ ಅಮೃತಸಾಗರದ ಅರಳೇಪೇಟೆಯಲ್ಲಿದ್ದುಕೊಂಡು "ಸ್ವಸ್ತಿ ವಿಜಯಾಭ್ಯುದಯ ಶಾಲಿವಾಹನ ಶಕಾಬ್ಧ ೧೭೬೩ನೇ ಸನ್ ೧೮೪೧ ನೇ ಪರಾಭವನಾಮ ಸಂ. ವೈಶಾಖ ಶು. ೧೪ ಸ್ಥಿರವಾದ (ಶನಿವಾರ)ದಿವಸ ಸುಮಾರು ಎರಡು ಗಂಟೆ ವ್ಯಾಳ್ಯಕ್ಕೆ" ನಿಜಗುಣ ಶಿವಯೋಗಿಯ ವಿವೇಕ ಚಿಂತಾಮಣಿ ಕೃತಿಯನ್ನು ಪ್ರತಿ ಮಾಡಿ ಹುಬ್ಬಳ್ಳಿ ಸ್ವಾಮಿಗಳ (ಸಿದ್ಧಾರೂಢ ಸ್ವಾಮಿಗಳು)ವರಿಗೆ ಬರೆದು ಕೊಟ್ಟಿದ್ದಾರೆ. ಈಗಿನ ಬೆಂಗಳೂರು ಮೆಜಿಸ್ಟಿಕ್, ಅರಳೇಪೇಟೆ ಪ್ರದೇಶವನ್ನು ಹಿಂದೆ ಅಮೃತ ಸಾಗರ ಎಂದು ಕರೆಯುತ್ತಿದ್ದರು. ಈ ಮಾಹಿತಿಯನ್ನು ಹಸ್ತಪ್ರತಿ ಪ್ರಶಸ್ತಿ ಮೂಲಕ ಲಿಪಿಕಾರ ಚೆನ್ನಬಸಯ್ಯನು ದಾಖಲಿಸಿದ್ದಾನೆ."[೭]

ಚರಲಿಂಗಯ್ಯ ಎಂಬ ಲಿಪಿಕಾರನೊಬ್ಬ ಎಂಟು ಮಠಗಳಿಗೆ ಪಟ್ಟದ್ದೇವರಾಗಿದ್ದರು ಎಂಬ ವಿಷಯ ಪ್ರೌಢರಾಯನ ಕಾವ್ಯ ಎಂಬ ಹಸ್ತಪ್ರತಿಯ ಅಂತ್ಯಪ್ರಶಸ್ತಿಯಿಂದ ತಿಳಿದುಬರುತ್ತದೆ.

'ಪರಗಣಿ ತಾಳಿಕೋಟಿ ಸೀಮೆ ತುಂಬಿಗಿ ಕೆಸರಟಿ ವಾಸತ್ಯಾಪುರ ಹೂವ್ವಿನಹಳ್ಳಿ ಹೊಸಳ್ಳಿ ವಾಕ ಕ್ಯಾದಿಗ್ಗೇರಿ ಮೂಟೂರು ಕುರುಡಿ ಅಷ್ಟಗ್ರಾಮದ ರಾಚೋಟಯ್ಯನವರ ಹೃದಯದಲ್ಲಿ ಉದ್ಭವಿಸಿದ ಚರಲಿಂಗಯ್ಯನು ೧೭೩೫ ಪಾರ್ತೀವ್ಯನಾಮ ಸಂವತ್ಸರ ಬಹುಳ ೧೦ ಇಂದುವಾರ ಪ್ರಥಮ ಜಾವದೊಳಗೆ ಅದೃಶ್ಯ ಕವಿಯ ಪ್ರೌಢರಾಯನ ಕಾವ್ಯ ಸಮಾಪ್ತ ಮಂಗಳ ಮಹಾಶ್ರೀ ಶ್ರೀ' ಚರಲಿಂಗಯ್ಯನ ತಂದೆ ರಾಚೋಟಯ್ಯನು ತಾಳಿಕೋಟಿ ಸೀಮೆಯ ತುಂಬಿಗಿ (ಮುದ್ದೇಬಿಹಾಳ ತಾ) ಕೆಸರಟ್ಟಿ (ಸಿಂದಗಿ ತಾ.) ವಾಸತ್ಸಾಪುರ, ಹೂವಿನಹಳ್ಳಿ, ಹೊಸಳ್ಳಿ (ಮುದ್ದೇಬಿಹಾಳ ತಾ.), ಕ್ಯಾದಿಗ್ಗೇರಿ (ಹುನಗುಂದ ತಾ.), ಮುಷ್ಠೂರು ಮತ್ತು ಕುರುಡಿ ಎಂಬ ಎಂಟು ಗ್ರಾಮಗಳ ಮಠಾಧಿಕಾರಿಯಾಗಿದ್ದನೆಂಬುದು ಇದರಿಂದ ಸ್ಪಷ್ಟವಾಗುತ್ತದೆ ಈ ಹಸ್ತಪ್ರತಿಯು ತಾಳಿಕೋಟಿ ಸೀಮೆಯ ವಾಸರೆ ನಾಡಗೌಡ ಸರ್ಜನಪ್ಪನವರ ಮಗ ಸಿದ್ಧಕಾಡಪ್ಪ, ಆತನ ಮಗ ಬಸವಲಿಂಗಪ್ಪನದೆಂದು ಚರಲಿಂಗಯ್ಯ ಹೇಳಿರುವನು. ಊರ ಗೌಡರಿಗೂ ಇಂಥ ಪಟ್ಟದ್ದೇವರು ಹಸ್ತಪ್ರತಿಗಳನ್ನು ಲಿಪಿಕರಣಗೈದು ನೀಡುತ್ತಿದ್ದರು. ಇವರು ಒಂದು ರೀತಿಯಲ್ಲಿ ಹವ್ಯಾಸಿ ಮತ್ತು ನಿಯುಕ್ತಿ ಎರಡೂ ಬಗೆಯ ಲಿಪಿಕಾರವೃತ್ತಿಯನ್ನು ಮಾಡುತ್ತಿದ್ದರೆಂಬುದು ಗೊತ್ತಾಗುತ್ತದೆ.

ಜವಳಿ ಸಂಗನಬಸವ ಎಂಬ ಲಿಪಿಕಾರನು ಈತನ ಊರು ಬೆಳಗಾವಿ ಜಿಲ್ಲೆಯ ಖಾನಾಪುರ. ಇಲ್ಲಿಯ ಸಿದ್ಧಬಸವನ ಮಠದ ಸಿದ್ಧಬಸವಯ್ಯ ಸ್ವಾಮಿಗಳಿಗಾಗಿ ಅನುಭವ ಮುದ್ರೆ ಗ್ರಂಥವನ್ನು ಶಕೆ ೧೭೮೨ ರೌದ್ರಿನಾಮ ಸಂವತ್ಸರದ ಪುಷ್ಯ ಶು. ೧೪ ಸೋಮವಾರ ಅಂದರೆ ೧, ಜುಲೈ ೧೮೬೦ ರಂದು ಬರೆದು ಸಮರ್ಪಿಸಿ ನಮಸ್ಕರಿಸಿದನು.

ನಾನು ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ಖಾನಾಪುರದಲ್ಲಿ ಇಂದು ಸಿದ್ಧಬಸವನಮಠದ ಯಾವ ಅಸ್ತಿತ್ವಗಳೂ ಇಲ್ಲ. ಕೇವಲ ೧೫೦ ವರ್ಷಗಳ ಹಿಂದೆ ಇದ್ದ ಮಠವೊಂದು, ಮಠಾಧೀಶರ ಸಂಸಾರವ್ಯಾಮೋಹಕ್ಕೆ ಬಲಿಯಾಗಿ ನಾಮಾವಶೇಷವಾಗಿರುವುದನ್ನು ಇದರಿಂದ ಗುರುತಿಸಬಹುದು. "ಕರ್ನಾಟಕದಲ್ಲಿ ೫೦೦೦ ಲಿಂಗಾಯತ ಮಠಗಳಿದ್ದವು ಎಂಬ ಅಂದಾಜು ಇದೆ. ಆದರೆ ಉಳಿದಿರುವುದು ಕೇವಲ ೧೦೦೦ ಮಠಗಳೆಂದು" ಎಂ. ಎಂ. ಕಲಬುರ್ಗಿ ಅವರು ಹೇಳುತ್ತಾರೆ".[೮]

ಮುರಗೋಡ ದುರದುಂಡೀಶ್ವರಮಠದ ಹಸ್ತಪ್ರತಿ 'ವರ್ಣಾಂಶಪದ ವ್ಯಾಖ್ಯಾನ' ಎಂಬ ಕೃತಿಯಲ್ಲಿ ಮಳೆಗಾಲ, ಕಾಂತಾರ, ಆಲದವೃಕ್ಷ, ಅಂಗಡಿಗಳು, ವಚ, ರಾಜನ ವರ್ಣನೆ, ಹಾಗೂ ಸೂಳೆಯ ಮಗಳಿಗೆ ಬುದ್ಧಿ ಹೇಳಿದ ವಿಷಯವನ್ನೊಳಗೊಂಡ ಪದ್ಯಗಳಿಗೆ ಟೀಕೆ ಬರೆಯಲಾಗಿದೆ. ಇದೊಂದು ಅಪರೂಪದ ಹಸ್ತಪ್ರತಿಯಾಗಿದೆ. ಆದರೆ ಅಪೂರ್ಣವಾಗಿದೆ. ಇಲ್ಲಿ ಸಾಮಾಜಿಕ ವಿಷಯಗಳನ್ನು ಕುರಿತು ವಿವರಿಸಲಾಗಿದೆ.

ಲಿಪಿಕಾರನೊಬ್ಬ ತನ್ನ ಕೃತಿಯನ್ನು ಓದುವವರಿಗೆ ಮೋಕ್ಷ ಸಿಗಲೆಂಬ ಆಶಯದಿಂದ ಪದ್ಯರೂಪದಿಂದಲೇ ಹೀಗೆ ಹಾರೈಸಿದ ಅಂತ್ಯಪ್ರಶಸ್ತಿಯೊಂದು ಹೀಗಿದೆ:

"ಉಕ್ಷವಾಹನ ಗೆರಗಲೀಕ್ಷಿಸಿ
ಪಕ್ಷದಿಂ ಶಿರದಡವಿ ಮಂನಿಸಿ
ತ್ರೇಕ್ಷನಾ ವೀರೇಶ್ವರಗೆ ಮಾಡಿಸಿದ ಶಾಂತಿಯನೂ
ದಕ್ಷಕಾಂಡವ ಕೇಳಿದವರಿಗೆ
ಮೋಕ್ಷಮಹುದೆನೆ ಸೂತ ಮುನಿಪಂ
ಕಕ್ಷೆಯಂ ಯತಿವರರು ಮಾಡುವೆವೆನತಿರಳ್ಸಂಧಿ ॥
ಇತಿ ದಕ್ಷಕಾಂಡ ಪರಿ ಸಮಾಪ್ತವು ಶ್ರೀ ಶ್ರೀ ಗುರುಪ್ರಸನ್ನ."

ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರದಲ್ಲಿರುವ ಹಸ್ತಪ್ರತಿ ಪ್ರಶಸ್ತಿಗಳನ್ನು ಅಧ್ಯಯನ ಮಾಡಿದರೆ, ಅವರಲ್ಲಿ ಬಹುಸಂಖ್ಯಾತರು ಮಠಾಧೀಶರಾಗಿದ್ದರು. ಸು. ೧೬ ಜನ ಮಠಾಧೀಶರು ಲಿಪಿಕಾರರಾಗಿ, ಹಸ್ತಪ್ರತಿ ಬರೆಯಿಸಿಕೊಂಡವರಾಗಿ ನಮಗೆ ಗೋಚರಿಸುತ್ತಾರೆ. ಈ ಮಠಾಧೀಶರು ಬಹುತೇಕ ಆಧ್ಯಾತ್ಮಿಕ ಕಾವ್ಯಗಳನ್ನು ಪ್ರತಿಮಾಡಿಕೊಂಡ ವಿವರಗಳು ದೊರೆಯುತ್ತವೆ. ಗೋಕಾಕ ತಾಲೂಕಿನ ಯಾದವಾಡ ಗ್ರಾಮದ ಅಗಡಿಮಠದ ಚೆನ್ನಬಸಯ್ಯ ಎನ್ನುವನು ಪ್ರೌಢರಾಯನ ಕಾವ್ಯ, ಸಿದ್ಧನಂಜೇಶನ ರಾಘವಾಂಕ ಚರಿತ್ರೆ, ಸಿದ್ಧೇಶ್ವರ ಪುರಾಣ, ಉದ್ಭಟದೇವರ ಕಾವ್ಯ, ಭಿಕ್ಷಾಟನ ಕಾವ್ಯ ಮತ್ತು ಹಮ್ಮೀರ ಕಾವ್ಯ ಕೃತಿಗಳನ್ನು ಲಿಪಿಗೈದಿರುವನು. ೧೮೬೬ರ ಸುಮಾರಿಗೆ ಯಾದವಾಡ ಗ್ರಾಮದಲ್ಲಿ ಅಗಡಿಮಠ ಎಂಬ ಒಂದು ಮಠ ಇತ್ತೆಂದು ಕಾಲಮಾನಕ್ಕೆ ತಕ್ಕಂತೆ ಈಗ ಸಂಸಾರಸ್ಥರ ಮನೆಯಾಗಿ ಮಾರ್ಪಟ್ಟಿದೆ ಎಂಬುದನ್ನು ನನ್ನ ಕ್ಷೇತ್ರಕಾರ್ಯ ಅಧ್ಯಯನದಲ್ಲಿ ಕಂಡುಬಂದಿದೆ.

ಬೀಳಗಿಮಠದ ಹಿರೇಮಠದ ಪೀಠಾಧಿಪತಿಯಾಗಿದ್ದ ಈರಸಂಗಯ್ಯ ಎಂಬವರು ಕ್ರಿ.ಶ. ೧೬೫೦ರಲ್ಲಿ ಮಹಾಕವಿ ಷಡಕ್ಷರದೇವನ ರಾಜಶೇಖರವಿಳಾಸವನ್ನು ಪ್ರತಿಮಾಡಿಕೊಂಡಿರುತ್ತಾರೆ. ಷಡಕ್ಷರದೇವನ ಸಮಕಾಲೀನರಾದ ಇವರು ರಾಜಶೇಖರವಿಳಾಸ ರಚನೆಗೊಂಡ ಮೂರೇ ವರ್ಷದಲ್ಲಿ ಪ್ರತಿಮಾಡಿಕೊಂಡಿದ್ದಾರೆ. ದಕ್ಷಿಣ ಕರ್ನಾಟಕದಲ್ಲಿದ್ದ ಷಡಕ್ಷರದೇವನ ಕೃತಿ ಕೇವಲ ಮೂರು ವರ್ಷಗಳಲ್ಲಿ ಉತ್ತರ ಕರ್ನಾಟಕದಲ್ಲೂ ಪ್ರಸಿದ್ಧಿ ಪಡೆದಿತ್ತು ಎಂಬುದಕ್ಕೆ ಈ ಘಟನೆ ಸಾಕ್ಷಿಯನ್ನು ಒದಗಿಸುತ್ತದೆ. ಕವಿ ಬರೆದದ್ದು 'ಕೃತಿ'ಯಾಗಿ ಮೂಲಪಠ್ಯವಾದರೆ, ಇವರು ಬರೆದುಕೊಂಡದ್ದು 'ಪ್ರತಿ' ಆಗಿದೆ.

ರಾಮದುರ್ಗ ತಾಲೂಕಿನ ಮುದೇನೂರ ಗ್ರಾಮದ 'ಓದಿಸುವ ಬಸಯ್ಯ' ಎಂಬುವನು ೧೮೭೧ರ ಸುಮಾರಿಗೆ ಚೆನ್ನಪ್ಪ ಕವಿಯ ಶರಣಲೀಲಾಮೃತ ಮಹಾಕಾವ್ಯವನ್ನು ಪ್ರತಿಮಾಡಿಕೊಂಡಿದ್ದಾನೆ. 'ಓದಿಸುವ' ಎಂಬುದು ಬಸಯ್ಯನ ವೃತ್ತಿನಾಮದ ವಿಶೇಷತೆಯನ್ನು ತೋರಿಸುತ್ತದೆ. ಪಾಠ–ಪ್ರವಚನ ಮಾಡುತ್ತ, ಜನರಲ್ಲಿ ಓದಿನ ಅಭಿರುಚಿ ಹುಟ್ಟಿಸುವ ಕಾಯಕ ಮಾಡುತ್ತಿದ್ದ ಕಾರಣವಾಗಿ ಈತನಿಗೆ 'ಓದಿಸುವ ಬಸಯ್ಯ' ಎಂಬ ಹೆಸರು ಬಂದಿದೆ ಎಂದು ಹೇಳಬಹುದು. ಈತ ಕೇವಲ

ಓದಿಸುವನಾಗಿರದೆ, ಸುಂದರ ಬರಹವನ್ನು ಬರೆಯುವ ಲಿಪಿಕಾರನೂ ಆಗಿದ್ದನು. ಅದಕ್ಕಾಗಿ ಯಾದವಗಿರಿ ಶಿವಾನುಭವಿಗಳಾದ ಕರಿವೃಷಭೇಂದ್ರ ಸ್ವಾಮಿಗಳ ಕರಸಂಜಾತನಾದ ಶಿರಗುಪ್ಪಿ ಪಂಚಾಕ್ಷರಿ ಮರಿದೇವರು ಓದಿಸುವ ಬಸಯ್ಯನಿಂದ ಶರಣಲೀಲಾಮೃತ ಕಾವ್ಯವನ್ನು ಲಿಪಿಕರಣಗೊಳಿಸಿದ್ದಾರೆ. ಸ್ವಾಮಿಗಳಾದವರು ಸದಾವಕಾಲ ಆಧ್ಯಾತ್ಮ ಚಿಂತನೆ, ಪೂಜೆ ಜಪ–ತಪಗಳೊಂದಿಗೆ ಇಂಥ ಧಾರ್ಮಿಕ ಗ್ರಂಥಗಳನ್ನು ನಿರಂತರ ಅಧ್ಯಯನ ಮಾಡುತ್ತಿದ್ದರು ಎಂಬುದಕ್ಕೆ ನಿದರ್ಶನವಾಗಿದೆ.

ದೀಪದ ಕಲಿಯಾರ ಕಾವ್ಯವನ್ನು ಕ್ರಿ.ಶ. ೧೮೭೧ರಲ್ಲಿ ಪ್ರತಿ ಮಾಡಿದ ಬಳ್ಳಾರಿ ಜಿಲ್ಲೆಯ ಕಂಪ್ಲಿ ಹನುಮಂತಪ್ಪ ನಮ್ಮ ಗಮನ ಸೆಳೆಯುತ್ತಾನೆ. ದೂರದ ಕಂಪ್ಲಿ ಹನುಮಂತಪ್ಪ ಪ್ರತಿಮಾಡಿದ ದೀಪದ ಕಲಿಯಾರ ಕಾವ್ಯ ಬೆಳಗಾವಿಗೆ ಬಂದುದು ವಿಶೇಷ. ಹುಕ್ಕೇರಿ ಸಮೀಪವಿರುವ ಮದಮಕ್ಕನಹಾಳ ಎಂಬ ಗ್ರಾಮದ ಕಾಳಗೌಡರ ಅನ್ನದಾನಪ್ಪ ಗುರುಸಿದ್ಧಪ್ಪ ಎಂಬುವರಿಗೆ ಓದಿಕೊಳ್ಳುವ ಸಲುವಾಗಿ ಈ ಕೃತಿಯನ್ನು ಬರೆದುಕೊಟ್ಟಿದ್ದಾನೆ. ಕಂಪ್ಲಿ ಹನುಮಂತಪ್ಪ ನಿಯುಕ್ತ ಲಿಪಿಕಾರನಾಗಿದ್ದನೆಂದು ಇದರಿಂದ ತಿಳಿದುಬರುತ್ತದೆ. ಹಸ್ತಪ್ರತಿ ಲಿಪಿಕಾರರು ಬಹುತೇಕ ಮೇಲ್ವರ್ಗದವ ರಾಗಿರುತ್ತಾರೆ. ಕೆಳವರ್ಗದವರು ಇಂಥ ಕೆಲಸ ಮಾಡುತ್ತಿರಲಿಲ್ಲ ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಹನುಮಂತಪ್ಪ ಎಂಬ ಹೆಸರು ಮೇಲ್ವರ್ಗದವರಲ್ಲ ಎಂದು ಗೊತ್ತಾಗುತ್ತದೆ. ಹನುಮಂತಪ್ಪ ಕೃತಿಯ ಕೊನೆಯಲ್ಲಿ "ಯೀ ಪುಸ್ತಕದೊಳಗೆ ಮರತು ಮತಿಭ್ರಮಣೆಯಾಗಿದ್ದರೆ ಅಕ್ಷರಗಳು ಒಂದೆರಡು ಮರತಿದ್ದರೆ ಗುಡುಸುಕೊಂಬು ಯತ್ವ ಸೊನ್ನಿ ದೀರ್ಘ ಮರತಿದ್ದ ಕಾಲಕ್ಕೆ ಬಲ್ಲಂತ ಪ್ರಾಜ್ಞರು ತಿದ್ದಿವೋದಿಕೊಂಡು ಕಥೆಯ ಸಾಗಿಸಬೇಕು. ಬೈಲುಬೇಡಂ ಪಂಚಾಮೃತದೊಳು ಸ್ವಲ್ಪ ಕಪ್ಪುಯಿದ್ದರೆ ತಗದು ಊಟ ಮಾಡಬೇಕು ಬಲ್ಲಂಥ ಸಂಗಡಿಗರು" ಎಂದು ವಿನಂತಿ ಮಾಡಿಕೊಂಡಿದ್ದಾನೆ. ಇಲ್ಲಿ ಆತನ ನಯವಿನಯ ಸೌಜನ್ಯಗಳು ಎದ್ದು ಕಾಣುತ್ತವೆ.

ಮಹಾಲಿಂಗಪುರದ ಕಂಬಿ ಮಹಾಲಿಂಗಯ್ಯ ಎಂಬುವನು ೬೩ ಜನ ಪುರಾತನರ ಪುರಾಣ ಕೃತಿಯನ್ನು ರಬಕವಿ ಗ್ರಾಮದ ಹತ್ತಪಾಕಿ ಸಂಗನಬಸಪ್ಪ ಬಿನ್ ಚೆನ್ನಬಸಪ್ಪ ಎಂಬುವರಿಗೆ ಕ್ರಿ.ಶ. ೧೮೯೦ರಲ್ಲಿ ಪ್ರತಿ ಮಾಡಿಕೊಟ್ಟಿದ್ದಾನೆ. ಈತನ ಹೆಸರಿನ ಹಿಂದೆ 'ಕಂಬಿ' ಎಂಬುದು ಆತನ ಅಡ್ಡಹೆಸರಾಗಿರಬಹುದು. ಅಲ್ಲದೆ ಮಹಾಲಿಂಗಪುರದ ಸುತ್ತಮುತ್ತಲಿನ ಹಳ್ಳಿಗರು ಪ್ರತಿವರ್ಷ ಶ್ರೀಶೈಲಕ್ಕೆ ನಡೆದುಕೊಂಡು 'ಕಂಬಿ' ಒಯ್ಯುತ್ತಾರೆ. 'ಕಂಬಿ' ಎಂಬುದು ದೈವವಾಚಕ ಶಬ್ದವಾಗಿದೆ.

ಅದೃಶ್ಯಕವಿಯ ಪ್ರೌಢದೇವರಾಯನ ಕಾವ್ಯವನ್ನು ಪ್ರತಿಮಾಡಿಕೊಂಡ ಕೆಂಚೀರಪ್ಪ ಎಂಬುವನು ಐನೂರು ಮಾಗಣಿ ಸೀಮೆಯೊಳಗಿರುವ ಬಿಲ್ಲುಗುಣಿ ಲಿಪಿಕಾರನೆಂದು ಪ್ರಸಿದ್ಧನಾದವನು. ಈತನ ತಂದೆ ಹೊಳೆಹೊನ್ನೂರು ರುದ್ರಪ್ಪ. ಬಿಲ್ಲುಗುಣಿ ಎಂಬುದು ಆತನ ವೃತ್ತಿಪದವನ್ನು ಸೂಚಿಸುತ್ತಿರಬಹುದು.

ಭೂಸರೂರು ಗ್ರಾಮದ ಗುರುಬಸಯ್ಯ ಎಂಬುವನು ಹಿರೇಮ್ಯಾಗೇರಿ ಗ್ರಾಮದ ಗುರಿಕಾರ ಗವಿಯಯ್ಯನ ಮಗ ದೊಡ್ಡಬಸವನಿಗೆ ಶಂಕರ ಕವಿಯ ಚೋರಬಸವ ಚಾರಿತ್ರವನ್ನು ೨೧.೧೦.೧೮೪೯ರಂದು ಬರೆದುಕೊಟ್ಟಿದ್ದಾನೆ. ಈತನು ನಿಯುಕ್ತ ಲಿಪಿಕಾರನಾಗಿದ್ದಾನೆ.

ಶಿವಾಧಿಕ್ಯ ಪುರಾಣವನ್ನು ಶಕೆ ೧೭೩೦ ಪ್ರಭವನಾಮ ಸಂವತ್ಸರ ಕಾರ್ತಿಕಮಾಸ (ಕ್ರಿ.ಶ. ೧೮೦೮)ದಲ್ಲಿ ಪ್ರತಿ ಮಾಡಿದ ಗುರುಸಿದ್ಧಪ್ಪ ಎಂಬುವನು ನಿರಪೇಕ್ಷಪ್ರಜ್ಞೆಯಿಂದ ತನ್ನ ಯಾವ ವಿವರಗಳನ್ನು ನೀಡಿಲ್ಲ. ಕೃತಿ ಬರೆದವರಿಗೆ ಕರ್ತೃನಿರಪೇಕ್ಷ ಪ್ರಜ್ಞೆ ಇರುವಂತೆ, ಲಿಪಿಕಾರರಿಗೂ ನಾಮನಿರಪೇಕ್ಷ ಪ್ರಜ್ಞೆ ಇರುವುದನ್ನು ಇಲ್ಲಿ ಗಮನಿಸಬಹುದು.

ಖಾನಾಪೂರ ತಾಲೂಕಿನ ಇಟಗಿ ಗ್ರಾಮದ ಗುರುಸಿದ್ಧದೇವರು ಹರಿಹರನ ಗಿರಿಜಾ ಕಲ್ಯಾಣ ಮತ್ತು ಷಡಕ್ಷರದೇವನ ಶಬರಶಂಕರ ವಿಳಾಸ ಎರಡು ಹಸ್ತಪ್ರತಿಗಳನ್ನು ೧೬ ಜನೆವರಿ ೧೯೨೯ರಲ್ಲಿ ಪ್ರತಿ ಮಾಡಿಕೊಂಡಿದ್ದಾರೆ. ಇಂದು ಇಟಗಿ ಗ್ರಾಮದಲ್ಲಿ ಯಾವುದೇ ಮಠವಿಲ್ಲ. ಗುರುಸಿದ್ಧದೇವರು ಬೈಲಹೊಂಗಲದ ನಿವಾಸಿಯಾಗಿರಬೇಕು. ಇಟಗಿ ಗ್ರಾಮದಲ್ಲಿದ್ದುಕೊಂಡು ಈ ಪ್ರತಿಗಳನ್ನು ಮಾಡಿಕೊಂಡು ಹೋಗಿರಬಹುದು ಎಂಬುದು ನನ್ನ ಅನಿಸಿಕೆಯಾಗಿದೆ.

ವಿಜಾಪುರ ಜಿಲ್ಲೆಯ ಮುಧೋಳ ತಾಲೂಕಿನ ಮಾಚಕನೂರು ಪಡದಯ್ಯನ ಊರು. ತಂದೆ ಕರಬಸಪ್ಪನು ಮಾಚಕನೂರು ಮಠದ ಮಠಾಧಿಪತಿ. ದುರ್ಮತಿನಾಮ ಸಂವತ್ಸರದ ಜೇಷ್ಠ ಬಹುಳ ಏಕಾದಶಿ ಸೋಮವಾರ (೧೫.೬.೧೮೦೧)ದಂದು ಪ್ರೌಢರಾಯನ ಕಾವ್ಯವನ್ನು ಲಿಪ್ಯಂತರಗೊಳಿಸಿದ್ದಾನೆ. ಈ ಕೃತಿಯನ್ನು ಬರೆಸಿದವರಾರೆಂದರೆ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಯಾದವಾಡ ಅಗಡಿ ನಿರಂಜನ ಜಂಗಮಾವತಾರ ಪರಶಿವನ ಅವತಾರ ಪರಂಜ್ಯೋತಿ ಸ್ವರೂಪರಾದ ಶಕ್ತಜ್ಞಾನ ವೈರಾಗ್ಯ ಶಿವಪೂಜಾದುರಂಧರರಾದ ಗುರುಸಿದ್ಧಸ್ವಾಮಿಗಳು.

ಇಂದು ಯಾದವಾಡದಲ್ಲಿ ಅಗಡಿಮಠದ ಅಸ್ತಿತ್ವವೇ ಇಲ್ಲವಾಗಿದೆ. ಪ್ರಾಯಶಃ ಕಾಲಕ್ಕೆ ತಕ್ಕಂತೆ ಈ ಮಠಗಳೆಲ್ಲ ಸಂಸಾರಸ್ಥರ ಮಠಗಳಾಗಿ ಪರಿವರ್ತನೆಯಾಗಿವೆ ಎಂಬುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದ ಅಂಶವಿದು.

ಮಹಾರಾಜ ಪೂಜಿತ ರಾಜಶ್ರೀ ಬಾಳೆಹಳ್ಳಿ ಸಿಂಹಾಸನಕ್ಕೆ ಕರ್ತರಾದಂಥ ಭೂಸರೂರ ಕೆಂಜಡಪ್ಪನವರ ಪಾದ ಕಮಲೋದ್ಭವನಾದ ಗುರುಸಿದ್ಧದೇವರು ಬೆಳಗಾವಿ ಜಿಲ್ಲೆಯ ಹೊಂಗಲ ನಿವಾಸಿ. ಸ್ವಸ್ತಿಶ್ರೀ ಮನ್ನೃಪ ಶಾಲಿವಾಹನ ಶಕ ೧೭೪೮ ವ್ಯಯನಾಮ ಸಂವತ್ಸರ ಆಷಾಡ ಶುದ್ಧ ೯ ಗುರುವಾರ ಮಧೆನ ಕಾಲ ಅನುರಾಧ ನಕ್ಷತ್ರ (೧೩.೭.೧೮೨೬)ದಲ್ಲಿ ಬ್ರಹ್ಮೋತ್ತರ ಕಾಂಡ (ಶೌನಕ ಸಂವಾದೆ ಪುರಾಣ) ಕೃತಿಯನ್ನು ಲಿಪಿಕಾರ್ಯವನ್ನು ಪೂರ್ಣಗೊಳಿಸಿದ್ದಾನೆ. ಯಕ್ಕುಂಡಿ ಶಿವಲಿಂಗಪ್ಪನವರ ಪಾದಕಮಲೋದ್ಭವನಾದ ಶಿವಲಿಂಗಪ್ಪನವರಿಗೆ ಹೊಸೂರು ಮಠದ ಯಿರುಪಾಕ್ಷಪ್ಪ ಸಾಹಯಿತ್ಯ ಮಾಡಿ ಬರೆಸಿಕೊಟ್ಟರು ಎಂದು ಗುರುಸಂಗಯ್ಯನು ಹೇಳಿಕೊಂಡಿರುವನು. ಪುರಾಣಗಳನ್ನು

ಅಧ್ಯಯನ ಮಾಡುವುದು ಆಗಿನ ಅಧ್ಯಾತ್ಮಜೀವಿಗಳ ತೀವ್ರವಾದ ಹಂಬಲವಾಗಿತ್ತು. ಬೆಳಗಾವಿ ಪರಿಸರದಲ್ಲಿ ಶೈವ-ವೈಷ್ಣವ ಪುರಾಣಗಳನ್ನು ಪ್ರತಿಮಾಡಿಕೊಂಡ ವಿವರಗಳು ಹೀಗೆ ಕ್ವಚಿತ್ತಾಗಿ ಸಿಗುತ್ತವೆ. ಇಲ್ಲಿನ ಬಹುತೇಕ ಹಸ್ತಪ್ರತಿಗಳ ವಿಷಯ ಶರಣರ ವಚನ-ವಚನೇತರ ಸಾಹಿತ್ಯವಾಗಿರುವುದನ್ನು ಗಮನಿಸಬಹುದು. ಸಿದ್ಧಾರೂಢರ ಪ್ರಭಾವ ಕಾರಣವಾಗಿ, ಬೆಳಗಾವಿ ಜಿಲ್ಲೆಯಲ್ಲಿ ಆರೂಢ ಸಂಪ್ರದಾಯದ ಅನೇಕ ಮಠಗಳು ಹುಟ್ಟಿಕೊಂಡಿವೆ. ಈ ಮಠಗಳ ಪೀಠಾಧಿಪತಿಗಳು ನಿಜಗುಣರ ವೇದಾಂತ ಕೃತಿಗಳನ್ನಷ್ಟೇ ಹೆಚ್ಚಾಗಿ ಪ್ರತಿಮಾಡಿಕೊಂಡಿದ್ದಾರೆಂಬ ವಿಷಯ ತಿಳಿಯುತ್ತದೆ. ಬ್ರಿಟಿಷರ ಆಡಳಿತ ಕಾಲದಲ್ಲಿ ಶರಣರ ವಚನ ಕೃತಿಗಳಿಗಿಂತ, 'ನಿಜಗುಣರ ವೇದಾಂತ ಗ್ರಂಥಗಳಾದ ಕೈವಲ್ಯ ಪದ್ಧತಿ, ಪರಮಾನುಭವ ಬೋಧೆ, ಪರಮಾರ್ಥಗೀತೆ, ಅನುಭವ ಸಾರ, ವಿವೇಕ ಚಿಂತಾಮಣಿ' ಮೊದಲಾದ ಷಟ್‌ಶಾಸ್ತ್ರ ಕೃತಿಗಳೇ ಹೆಚ್ಚು ಪ್ರಕಟವಾಗಿವೆ.

**ವಂಶಾವಳಿ ಕಥನ :**

ಶೃಂಗೇರಯವನಾದ ನಾಗಪ್ಪನ ಕುಲದೈವ ಸಾಲೇಶ್ವರದೇವರು. ಇದು ಪಟಸಾಲೆಗಿರಿ ಎಂಬಲ್ಲಿದೆ. ಮನೆದೈವ ಧಾರೇಶ್ವರ. ಪಂಪಗೊಂಡ, ರಘುನಾಥ, ಲಕ್ಷ್ಮಣ, ನಾಗಪ್ಪ ಹೀಗೆ ನಾಲ್ಕು ತಲೆಮಾರಿನ ವಂಶಾವಳಿಯನ್ನು ಈತ ದಾಖಲಿಸಿರುವನು. ಪ್ರಭವನಾಮ ಸಂವತ್ಸರದ ಭಾದ್ರಪದ ಮಾಸ ಜೋಕುಮಾರ ಹುಣಿಮೆಯ ಏಕಾದಶಿ ಶುಕ್ರವಾರ ಅಂದರೆ ಸೆಪ್ಟಂಬರ್ ೯, ೧೮೯೭ ರಂದು ಚಂದ್ರದೇವಿಯ ಚರಿತೆಯನ್ನು ಲಿಪಿಮಾಡಿದ್ದಾನೆ.

ಜೊತೆಗೆ ವಿಕ್ರಮನಾಮ ಸಂವತ್ಸರ ಮಾರ್ಗಶಿರ ಮಾಸ ತದಿಗಿ ಬುಧವಾರದಿ ದಶಮಿ ಉತ್ರಾಷಾಢ ನಕ್ಷತ್ರದಲ್ಲಿ ಅಂದರೆ ಸನ್ ೧೭೪೧ ರಲ್ಲಿ ಬತ್ತೀಸಪುತ್ಥಳಿ ಕಥೆಯನ್ನು ಪ್ರತಿಮಾಡಿಕೊಂಡಿರುತ್ತಾನೆ. ಕುಲದೈವ ಸಾಲೇಶ್ವರದೇವರು, ಮನೆದೈವ ಧಾರೇಶ್ವರನ ಕೃಪೆಯಿಂದ ಬರೆದಿದ್ದೆನಂದು ಲಿಪಿಕಾರ ಉಲ್ಲೇಖಿಸಿರುವನು.

ಬೆಳಗಾವಿ ಜಿಲ್ಲೆಯ ಮುರುಗೋಡು ಗ್ರಾಮದ ನಿವಾಸಿ ಪಟದಯ್ಯನು ವಿಭೂತಿಮಠದ ಪರಂಪರೆಗೆ ಸೇರಿದವನು. ಈತ ಶಕ ೧೬೮೦ ಸರ್ವಧಾರಿನಾಮ ಸಂವತ್ಸರ ಜೇಷ್ಠಮಾಸ ಬಹುಳ ೧೪ ಸೋಮವಾರ ಮೃಗಶಿರ ನಕ್ಷತ್ರ ಆನಂದಯೋಗ ಅಮೃತವ್ಯಾಳ್ಯೆದಲ್ಲಿ ಶೀಲವಂತಯ್ಯನ ತ್ರಿವಿಧ ಎಂಬ ಕಿರುಕೃತಿಯನ್ನು ಪ್ರತಿಮಾಡಿಕೊಂಡಿದ್ದಾನೆ.

ಹಳ್ಳಿಕೇರಿ ಅವರು ಹೇಳಿದಂತೆ 'ವಿಭೂತಿಮಠ' ಯಾವುದು ಎಂಬುದು ತಿಳಿಯುದಿಲ್ಲ. ಬೆಳಗಾವಿ ಜಿಲ್ಲೆಯಲ್ಲಿ 'ವಿಭೂತಿಮಠ' ಹೆಸರಿನ ಯಾವ ಮಠಗಳು ಇಲ್ಲ. ಬೆಂಗಳೂರಿನಲ್ಲಿ ಒಂದು 'ವಿಭೂತಿಪುರ ಮಠ' ಎಂಬ ಒಂದು ಮಠವಿದ್ದ ಉಲ್ಲೇಖ ನಮಗೆ ದೊರೆಯುತ್ತದೆ.

ಸಂಪಗಾವಿ ಕಸಬೆದೊಳಗಿನ ನಾಗನೂರ ಉದಾಸ್ತಿ ಹಿರೇಮಠದ ಗುರುಬಸಪ್ಪದೇವರ ಪುತ್ರನಾದ ಮುದಿಬಸವದೇರಾತ್ಮಜ ಗುರುಬಸವೇಶ್ವರನ ತನುಜ ಗುರುನಾಥನ ಅಣುಗನಾದ ರಾಚೋಟಿದೇವರು

ಒಬ್ಬ ಹವ್ಯಾಸಿ ಲಿಪಿಕಾರ. ಈತನ ವಂಶಾವಳಿ ಹೀಗಿದೆ. ಹಿರೇಮಠದ ಗುರುಬಸಪ್ಪದೇವರು> ಮುದಿಬಸಪ್ಪದೇವರು> ಗುರುಬಸವೇಶ್ವರ> ಗುರುನಾಥ> ರಚೋಟಿದೇವರು.

ಈತ ಪ್ರೀತಿಗೋಸ್ಕರವಾಗಿ ಅನುಭವ ಶಿಖಾಮಣಿ ಕೃತಿಯ ಬರವಣಿಗೆಯನ್ನು ಶಾಲಿವಾಹನ ಶಕೆ ೧೭೩೮ ವರ್ಷ ಧಾತುನಾಮ ಸಂವತ್ಸರದ ಶ್ರಾವಣ ಬಹುಳ ಚತುರ್ಥಿ ಸೋಮವಾರ ಪೈಲೆ ಪ್ರಹರದಿ ಪ್ರಹರ ದೀಡತಾಸಿನಲ್ಲಿ ಉತ್ತರಾಷಾಢ ನಕ್ಷತ್ರ (೧೨.೮.೧೮೧೬)ದಲ್ಲಿ ಮುಕ್ತಾಯಗೊಳಿಸಿದ್ದಾನೆ. ಸಂಬರಗಿ ಕಸಬೆಯೊಳಗಿನ ಮದಗಿಮಠದಲ್ಲಿರುವ ಜಂಗಮಪ್ರೇಮಿಗಳಾದ ಶಿವಪ್ಪ ಚೌಲಗಿ ಸುಪುತ್ರ ಚೆನ್ನಪ್ಪನ ಮನೆಯಲ್ಲಿದ್ದುಕೊಂಡು ಬರೆದಿರುವನು. ಇಲ್ಲಿ ಮರಾಠಿ ಅಕ್ಷರಗಳೂ ಸೇರಿಕೊಂಡಿರುವುದು ವಿಶೇಷ.

ಇಲ್ಲಿಯ ವಂಶಪಾರಂಪರೆಯನ್ನು ಕೆ. ರವೀಂದ್ರನಾಥ ಅವರು ಹೀಗೆ ವಿವರಿಸಿದ್ದಾರೆ:

“ನಾಗನೂರು ಉದಾಸ್ತಿಮಠದ ಗುರುಬಸವದೇವರು
ಮುದಿಬಸಪ್ಪದೇವರು (ಮಗ)
ಗುರುಬಸವೇಶ್ವರರು (ಮಗ)
ಗುರುನಾಥಪ್ಪ (ತಮ್ಮ)
ರಾಚೋಟಿ ದೇವರು (ಮಗ)”[೧೦]

ಹೀಗೆಯೇ

“ಅಗಡಿಮಠದ ಗುರುಸಿದ್ಧಯ್ಯ
ಅಗಡಿಮಠದ ಮಠದ ಚನ್ನಬಸಯ್ಯ (ಪ್ರೌಢರಾಯನ ಕಾವ್ಯ)
ಅಗಡಿ ಮಠದ ತಿಂಕಣ್ಣ (ಪ್ರೌಢದೇವರಾಯನ ಕಾವ್ಯ)

ಜವಳಿ ಸಣ್ಣಬಸಪ್ಪ (ತಂದೆ)
ಜವಳಿ ಸಂಗನಬಸಪ್ಪ (ಮಗ)

ಬೈಲಹೊಂಗಲ ಪೌರಾಣಿ ಶಿವಬಸವ
ದುರದುಂಡಪ್ಪ (ಮಗ)

ಸತ್ತಿಗೇರಿ ಮಠದ ಪಟ್ಟದ ಸಿದ್ಧಲಿಂಗ ಸ್ವಾಮಿ
ಪಟ್ಟಣಶೆಟ್ಟಿ ಪಟ್ಟೆಪ್ಪ (ಶಿಷ್ಯ)

ರುದ್ರಪ್ಪ (ಮಗ)

ವೀರಪ್ಪ (ಮಗ)"

"ಹೀಗೆ ಕೌಟುಂಬಿಕ ಪರಂಪರೆಯನ್ನು ವಿಶೇಷವಾಗಿ ಇಲ್ಲಿಯ ಪ್ರತಿಕಾರರು ಸೂಚಿಸಿದ್ದಾರೆ. ಇದೊಂದು ವಂಶಾವಳಿ ಅಧ್ಯಯನಕ್ಕೆ ಮಹತ್ವದ ಮಾಹಿತಿಯಾಗುತ್ತದೆ."[೧೧] ಇವರೆಲ್ಲ ತಂದೆ ಮಕ್ಕಳಾಗಿ, ಗುರು ಶಿಷ್ಯರಾಗಿ ಹಸ್ತಪ್ರತಿ ಉತ್ಪಾದನೆಯಲ್ಲಿ ಕೌಟುಂಬಿಕ ಪರಂಪರೆಯನ್ನು ಮೆರೆದವರು.

"ಚೆನ್ನಬಸವೇಶ್ವರ ಪುರಾಣ ಬರಸಿದವರು ಆರುಯೆಂದರೆ ಶ್ರೀಕುಮಾರ ಸಮಯಕ್ಕೆ ಕರ್ತೃಗಳಾದ ಶ್ರೀ ಭೂಪುರದ ತ್ರಿಸಹಸ್ರ ಮಠಾಧಿಕಾರಗಳಾದ ಹುಚ್ಚುಗುರುಸಿದ್ಧ ಸ್ವಾಮಿಯವರ ಕರಕಂಜೋದ್ಭವರಾದ ಸಿದ್ಧಲಿಂಗಸ್ವಾಮಿಯವರ ಪಾಣಿವಾರಿಜೋದ್ಭವರಾದ, ಶಾಂತವೀರಸ್ವಾಮಿಯವರ ಕರಕಮಲ ಸಂಜಾತರಾದ ಗಂಗಾಧರ ಸ್ವಾಮಿಯವರ ಹಸ್ತಪದ್ಮಭವರಾದ ಗುರುಸಿದ್ಧಸ್ವಾಮಿಯವರು ಸರ್ವರುದ್ಧಾರ ಆಗಲಿ ಅಂತಾ ಕಸಬೆ ಧಾರವಾಡ ಮಂಗಳವಾರಪೇಟ ವಿರಕ್ತಮಠದಲ್ಲಿ ಬರಸಿದ ಪುರಾಣವು ಸಮಾಪ್ತವಾಯಿತು. ಮಂಗಳ ಮಹಾಶ್ರೀ ಶ್ರೀ ಬರದವರು ಆರುಯೆಂದರೆ ತೊರಗಲ್ಲ ಗಚ್ಚಿನ ಹಿರೇಮಠದ ಪಟ್ಟದಾರ್ಯರ ಶಿಷ್ಯೋತ್ತಮರಾದ ನಿಡುಮಾಮಿಡಿ ಕರಿಬಸವ ಸ್ವಾಮಿಯವರ ಅಂಶೋದ್ಭವರಾದ ಬಸಪ್ಪನವರ ಆತ್ಮಜರಾದ ಶಂಕ್ರಪ್ಪನವರ ಗರ್ಭವಾರಿಧಿಚಂದ್ರ ಪಡ್ವಿಡೀಸೂತ್ರದ ವೀರೇಶ್ವರಗೋತ್ರದ ಶ್ರೀರೇವಣಸಿದ್ಧೇಶ್ವರರ ಸಾಂಪ್ರದಾಯಿಕರಾದ ಬೈಲಹೊಂಗಲ ಮಠದ ಬಾಲಕನಾದ ಷಣ್ಮುಖಯ್ಯನು ಬರಕೊಟ್ಟ ಸಿದ್ಧಾಂತವು."[೧೨]

ಈ ಒಂದು ಪ್ರಶಸ್ತಿಯಲ್ಲಿ ನಾವು ಗುರು–ಶಿಷ್ಯ ಪರಂಪರೆ– ಶಿಷ್ಯ–ಪ್ರಶಿಷ್ಯ ಪರಂಪರೆಯನ್ನು ಗಮನಿಸಬಹುದು. ಇಲ್ಲಿಯ ಪಾರಿಭಾಷಿಕ ಪದಗಳನ್ನು ಸಾಮಾಜಿಕ ನೆಲೆಯಲ್ಲಿ ಇನ್ನಷ್ಟು ವಿಶ್ಲೇಷಣೆ ಮಾಡಬೇಕಾದ ಅವಶ್ಯಕತೆ ಇದೆ. ಕರಕಂಜೋದ್ಭವ, ಪಾಣಿವಾರಿಜೋದ್ಭವ, ಕರಕಮಲ ಸಂಜಾತ, ಅಂಶೋದ್ಭವ, ಗರ್ಭವಾರಿಧಿ ಚಂದ್ರ ಈ ಪಾರಿಭಾಷಿಕ ಪದಗಳೆಲ್ಲವು ಧಾರ್ಮಿಕ ಮತ್ತು ಸಾಮಾಜಿಕ ಅರ್ಥಛಾಯೆಗಳನ್ನು ಹೊರಡಿಸುತ್ತವೆ. ಭೂಪುರ ಎಂಬುದು ಹುಬ್ಬಳ್ಳಿ ನಗರದ ಸ್ಥಳನಾಮವನ್ನು ತಿಳಿಸುತ್ತದೆ. ತೊರಗಲ್ಲ ಗಚ್ಚಿನಮಠ ಇಂದು ರಾಮದುರ್ಗ ತಾಲೂಕಿನಲ್ಲಿದೆ. ಇಲ್ಲಿ ಇನ್ನೂ ಒಂದು ವಿಶೇಷವನ್ನು ಗಮನಿಸುವುದೆಂದರೆ– ಗುರುಪೀಠದ (ಪಂಚಾಚಾರ್ಯಪೀಠದ ಶಾಖಾಮಠ ಗಚ್ಚಿನಮಠ) ಶಿಷ್ಯರ ಮಗ ಬೈಲಹೊಂಗಲದ ಷಣ್ಮುಖನು ವಿರಕ್ತಪೀಠದ ಸ್ವಾಮಿಗಳಿಗೆ ಈ ಕೃತಿಯನ್ನು ಪ್ರತಿ ಮಾಡಿಕೊಟ್ಟದ್ದು ಆ ಕಾಲದಲ್ಲಿ ಗುರು–ವಿರಕ್ತರಿಗೆ ಯಾವುದೇ ಮನಸ್ತಾಪವಿರಲಿಲ್ಲ. ಅವರೆಲ್ಲ ಸೌಹಾರ್ದತೆಯಿಂದ ಬದುಕುತ್ತಿದ್ದರು ಎಂಬ ಸಾಮಾಜಿಕ ಸಾಮರಸ್ಯದ ಒಂದು ಸಂದೇಶವನ್ನು ಇಲ್ಲಿ ಕಾಣಬಹುದು. ಒಂದೇ ಒಂದು ಅಂತ್ಯಪ್ರಶಸ್ತಿ ಸಾಮಾಜಿಕ ನೆಲೆಯ ಅನೇಕ ಆಯಾಮಗಳನ್ನು ನಮಗೆ ತಿಳಿಸಿಕೊಡುತ್ತದೆ.

ಸಂಗಯ್ಯ ದೇವರು ತನ್ನ ವಂಶಾವಳಿಯನ್ನು 'ವಿಜಾಪುರ ಸೀಮೆಯ ವನದುರ್ಗಲಿಂಗದಹಳ್ಳಿಯ ಮಠದ ದೇವರು ಗುರುಬಸಪ್ಪನು ಆತನ ಉದರದಲ್ಲಿ ಉತ್ಪತ್ಯನಾದ ರುದ್ರಯ್ಯನು ಆತನ

ಉದರದಲ್ಲಿ ಉತ್ಪತ್ಯನಾದ ಸಂಗಯ್ಯ ದೇವರು' ಎಂದು ಹೇಳಿಕೊಂಡಿರುವನು. ಹರಳಯ್ಯನ ಚರಿತೆ ಎಂಬ ಕೃತಿಯನ್ನು ಚೈತ್ರಭಾನು ಸಂವತ್ಸರ ಆಶ್ವೀಜ ಶುದ್ಧ ಗುರುವಾರ ಪುಷ್ಯಾನಕ್ಷತ್ರದಲ್ಲಿ ಲಿಪಿಮಾಡಿಕೊಂಡಿರುವನು.

ಅಲ್ಲದೇ ವಿಕ್ರಮನಾಮ ಸಂವತ್ಸರದ ಆಶ್ವೀಜ ಮಾಸ ಶುದ್ಧ ಬಹುಳ ಪಂಚಮಿ ಮಂಗಳವಾರ ನಕ್ಷತ್ರ ಮೃಗಶಿರಾ ಚಂದ್ರನಹಾರ್ಯ ಶುಕ್ಲಪಕ್ಷ ೪ ತಾಸಿನೊಳಗೆ ರಟ್ಟಮತಶಾಸ್ತ್ರವನ್ನು ಮಲ್ಲಾಪುರದ ಕೆಂಚಣ್ಣ ನೇಸರಗಿ ಎಂಬಾತನಿಗೆ ಪ್ರೀತಿಯಿಂದ ಬರೆದುಕೊಟ್ಟಿದ್ದಾನೆ.

**ತಿಥಿ, ವಾರ ಮತ್ತು ನಕ್ಷತ್ರ ನೋಡಿ ಹಸ್ತಪ್ರತಿಗಳನ್ನು ರಚನೆ ಮಾಡುತ್ತಿದ್ದರು.**

ಬರಡೂರು ಜಿಗಜಿಣಗಿಮಠದ ವಿಸರಪ್ಪಯ್ಯನವರ ಮರಿಮಗ ಮಗನ ಮೊಂಮಗನಾದ ಚನ್ನಬಸವೇಶ್ವರದೇವರು ಎರಡು ಕೃತಿಗಳ ಲಿಪಿಕಾರ್ಯವನ್ನು ಪೂರೈಸಿದ್ದಾನೆ. ಶಕೆ ೧೭೧೦ ಕೀಲಕನಾಮ ಸಂವತ್ಸರ ಜೇಷ್ಠ ಸಂಚ್ರ ೨ ರ ಮುಂಜಾನೆ ಶುಭದಿನ ಶುಬತಿತಿ ಶುಭನಕ್ಷತ್ರ ಶುಭಯೋಗ ಕರಣದಲ್ಲಿ ರೇವಣಸಿದ್ಧೇಶ್ವರ ಪುರಾಣವನ್ನೂ ಶಕೆ ೧೭೧೦ ಕೀಲಕನಾಮ ಸಂವತ್ಸರ ವೈಶಾಖ ಶುದ್ಧ ೧೧ ಯೆಕಾದಶಿ ಗುರುವಾರ ಉತ್ತಿನಕ್ಷತ್ರ ಚಂದ್ರಶೋಭನ (೧೬.೫.೧೭೮೮)ದಲ್ಲಿ ಸಿದ್ಧರಾಮಯ್ಯನ ಕಾವ್ಯವನ್ನೂ ಬರೆದು ಮುಗಿಸಿದ್ದಾನೆ. ಈ ಕೃತಿಗಳನ್ನು ಕಸ್ಬೆ ಬರಡೂರು ವೊಗ್ಗೈರೆ ಹಾಡಲಸಂಗ ಪರಗಣೆ ಹೊರ್ತಿ ಸಂಗಪ್ಪನವರ ಪುತ್ರನಾದಂತ ಸಿದ್ಧಪ್ಪನು ಪ್ರೀತಿಯಲ್ಲಿ ವೋದಿ ಪರಿಣಾಮಿಸಿಕೊಳಬೇಕಂತ ಬರೆಸಿಕೊಂಡನು.

ರಣಗಟ್ಟಿಮಠದ ರಾಚಪ್ಪನವರ ಪುತ್ರನಾದ ಚನ್ನಮಲ್ಲಪ್ಪನ ಊರು ಬೆಳಗಾವಿ ಜಿಲ್ಲೆ ಕಿತ್ತೂರು. ನಂದನನಾಮ ಸಂವತ್ಸರ (ಶಕೆ ೧೭೫೪) ಕಾರ್ತಿಕ ಬಹುಳ ೧೨ ಸೋಮವಾರ ಪ್ರಥಮ ಚರಣ ಮೂರುತಾಸು ಅಮೃತವೇಳೆ ಗುರುವಿನ ಹೋರ್‍ಯ (೧೯.೧೧.೧೮೩೨)ದೊಳಗೆ ಲಕ್ಷ್ಮೀಶನ ಜೈಮಿನಿ ಭಾರತವನ್ನು ಈತ ಬರೆದು ಮುಗಿಸಿರುವನು. ಬೆಳಗಾವಿಯ ಗುಂಡಪ್ಪನು ತನ್ನ ಓದಿಗಾಗಿ ಜೈಮಿನಿ ಭಾರತವನ್ನು ಚನ್ನಮಲ್ಲಪ್ಪನಿಂದ ಬರೆಯಿಸಿಕೊಂಡಿರುವನು.

ಚನ್ನಮಲ್ಲಿಕಾರ್ಜುನ ದೇವರು ಎಂಬ ಲಿಪಿಕಾರನು ಈಶ್ವರನಾಮ ಸಂವತ್ಸರದ ವೈಶಾಖ ಮಾಸ ಶುದ್ಧ ಪಂಚಮಿಯಲಿ ಬುಧವಾರದಲು ಅಂದರೆ ೧೮೭೭, ಮೇ ೨ ರಂದು ಚಾಮರಸನ ಪ್ರಭುಲಿಂಗ ಲೀಲೆಯನ್ನು ಲಿಪಿಗೊಳಿಸಿರುವನು. ಮೂಲತಃ ಈತ ಬಟ್ಟಕೆರೆಯ ಮಠದದೇವರು.

ಜವಳಿ ಸಂಗನಬಸವನ ಊರು ಬೆಳಗಾವಿ ಜಿಲ್ಲೆಯ ಖಾನಾಪುರ. ಇಲ್ಲಿಯ ಸಿದ್ಧಬಸವನ ಮಠದ ಸಿದ್ಧಬಸವಯ್ಯ ಸ್ವಾಮಿಗಳಿಗಾಗಿ ಅನುಭವ ಮುದ್ರೆ ಗ್ರಂಥವನ್ನು ಶಕೆ ೧೭೮೨ ರೌದ್ರಿನಾಮ ಸಂವತ್ಸರದ ಪುಷ್ಯ ಶು. ೧೪ ಸೋಮವಾರ ಅಂದರೆ ೧, ಜುಲೈ ೧೮೬೦ ರಂದು ಬರೆದು ಸಮರ್ಪಿಸಿ ನಮಸ್ಕರಿಸಿದನು.

ಜವಳಿ ಸಂಗನಬಸವನ ಮಗ ಜವಳಿ ಸಣ್ಣಬಸಪ್ಪ : ಕೈವಲ್ಯ ಪದ್ಧತಿ ಬರದದ್ದು ಜವಳಿ ಸಣ್ಣಬಸಪ್ಪ. ಶಕೆ ೧೭೭೯ ಕೀಲಕನಾಮ ಸಂವತ್ಸರದ ಮಾರ್ಗಶಿರ ಶುಕ್ಲಪಕ್ಷ ೧೫ ದಿನ

ಶುಭವ್ಯಾಳ್ಯ ಮೂಲಾನಕ್ಷತ್ರ ಭಾನುವಾಸರೆ (೧೦.೧೨.೧೮೪೮) ಮುಗಿತು. ಎಂದು ಲಿಪಿಕಾರ ಜವಳಿ ಸಣ್ಣಬಸಪ್ಪ ಪ್ರಶಸ್ತಿಯಲ್ಲಿ ಹೇಳಿಕೊಂಡಿದ್ದಾನೆ.

ಅದೃಶ್ಯ ಕವಿ ವಿರಚಿತ ಪ್ರೌಢರಾಯನ ಕಾವ್ಯವನ್ನು 'ಶಾಲಿವಾಹನ ಶಕೆ ೧೭೮೬ ನೆ ಪ್ರವರ್ತಮಾನಕ್ಕೆ ಸಲುವ ರುಧಿರೋದ್ಗಾರಿನಾಮ ಸಂವತ್ಸರದ ಕಾರ್ತೀಕ ಬಹುಳ ಸೋಮವಾರ ಪುಷ್ಯ ನಕ್ಷತ್ರ (ಕ್ರಿ.ಶ. ೧೮೬೪)ದಲ್ಲಿ ಅಗಡಿ ಬಸಪ್ಪನ ಸುಕುಮಾರ ತಿರಕಣ್ಣ ಬರೆದಿರುತ್ತಾನೆ.

ಬೆಳಗಾವಿ ಜಿಲ್ಲೆಯ ಮುರುಗೋಡು ಗ್ರಾಮದ ನಿವಾಸಿ ಪಟದಯ್ಯನು ವಿಭೂತಿಮಠದ ಪರಂಪರೆಗೆ ಸೇರಿದವನು. ಈತ ಶಕ ೧೬೯೦ ಸರ್ವಧಾರಿನಾಮ ಸಂವತ್ಸರ ಜೇಷ್ಠಮಾಸ ಬಹುಳ ೧೪ ಸೋಮವಾರ ಮೃಗಶಿರ ನಕ್ಷತ್ರ ಆನಂದಯೋಗ ಅಮೃತವ್ಯಾಳ್ಯೆದಲ್ಲಿ ಶೀಲವಂತಯ್ಯನ ತ್ರಿವಿಧ ಎಂಬ ಕಿರುಕೃತಿಯನ್ನು ಪ್ರತಿಮಾಡಿಕೊಂಡಿದ್ದಾನೆ. ಸ್ವಸ್ತಿಶ್ರೀ ಜಯಾಭ್ಯುದಯ ವಿರೋಧಿ ಸಂವತ್ಸರದ ಪುಷ್ಯಮಾಸದ ಬಿದಿಗಿ ಬುಧವಾರ (೨೦.೧.೧೬೫೪)ದಲು ಬಸವೇಶ್ವರದೇವರ ಪುರಾಣ ಸಂಪೂರ್ಣ ಮಂಗಳಮಹಾಶ್ರೀ. ಪರಮೇಶ್ವರದೇವರು ಬರೆದ ಪುಸ್ತಕ.

ಮಹಾಲಿಂಗರಂಗನ ಅನುಭವಾಮೃತವನ್ನು 'ನೃಪಶಾಲಿವಾಹನ ಸಕೆ ೧೭೬೮ ಪ್ರವರ್ತಮಾನೆ ಪರಾಬವನಾಮ ಸಂವತ್ಸರ ಕಾರ್ತಿಕ ಶುದ್ಧ ೧ ಪ್ರತಿಪದ ಬುಧವಾರ ದಿವಸ ಸ್ವಾತಿ ನಕ್ಷತ್ರ ಯರಡನೆ ಪ್ರಹರ (೪.೧೧.೧೮೪೬)ದಲ್ಲಿ ಅಸೂಟಿ ಸಾಲಿಮಠದ ಬಸವಲಿಂಗಪ್ಪನು ಬರೆದು ಮುಗಿಸಿರುತ್ತಾನೆ. ನೀಲಕಂಠಾರಾಧ್ಯ ವಿರಚಿತ ಆರಾಧ್ಯ ಚರಿತೆ ಎಂಬ ವಾರ್ಧಕ ಷಟ್ಪದಿಯ ಗ್ರಂಥವನ್ನು ಅಂಗೀರಸ ಸಂವತ್ಸರ (ಶಕೆ. ೧೭೩೪)ದ ಮಾರ್ಗಶೀರ ಶುಕ್ಲಪಕ್ಷದ ೧೧ ಏಕಾದಶಿ ಸೋಮವಾರ (೧೪.೧೨.೧೮೧೨) ದಲು ಭಮಕಾಪುರದ ವಿರಕ್ತಮಠದಲಿ ಪುಟ್ಟಬಸವಲಿಂಗದೇವರು ತಮಗಾಗಿ ಬರೆದುಕೊಂಡರು.

ಚಿದಾನಂದಾವಧೂತರು ರಚಿಸಿದ ಜ್ಞಾನಸಿಂಧು ಕೃತಿಯನ್ನು ಪುರಾಣಿಕ ಬಸಪ್ಪನು ಲಿಪಿಮಾಡಿರುತ್ತಾನೆ. ಅನುಭವ ಶಿಖಾಮಣಿಯನ್ನು ಶಕೆ ೧೭೯....ಪಿಂಗಳನಾಮ ಸಂವತ್ಸರ ಕಾರ್ತಿಕವಧಿ ೫ ಪಂಚಮಿ ಶುಕ್ರವಾರ ಕೃಷ್ಣಪಕ್ಷ, ಪುಷ್ಯನಕ್ಷತ್ರ (೨೩.೧೧.೧೮೭೭)ದಲ್ಲಿ ಶಿವಬಸಪ್ಪನ ಮಗ ಬಸವಪ್ರಭು ಲಿಪಿಗೊಳಿಸಿರುವನು. ಆದರೆ ಕಾರ್ತಿಕ ಪಂಚಮಿ ಕೃಷ್ಣಪಕ್ಷವು ಶುಕ್ರವಾರದ ಬದಲಾಗಿ ಗುರುವಾರ ಬರುತ್ತದೆ.

ಶಾಲಿವಾಹನ ಶಕೆ ೧೫೭೮ ನೆಯ ಮನ್ಮಥ ಸಂವತ್ಸರದ ವೈಶಾಖ ಬಹುಳ ದಶಮಿಯ ಆದಿತ್ಯವಾರ ರೇವತಿ ನಕ್ಷತ್ರ (೨೦.೫.೧೬೫೫)ದಲ್ಲಿ ರಾಜಶ್ರೀ ಹಂಸಭಾವಿಯ ಸ್ಥಲದಲ್ಲಿ ಆಚಾರ್ಯಗುರು ಬಸವರಾಜದೇವರಿಗೆ ಬರೆದ ಬಸವಲಿಂಗದೇವರು ಪ್ರಭುದೇವರ ಟೀಕಿನ ವಚನಗಳ ಕಟ್ಟೊಂದನ್ನು ಬರೆದುಕೊಟ್ಟಿದ್ದಾರೆ. ಹಂಸಭಾವಿ ಗ್ರಾಮವು ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲೂಕಿನಲ್ಲಿದೆ. ಲಿಪಿಕಾರರು ಹೇಳಿದಂತೆ ಶಾ.ಶ. ೧೫೭೮ನೇ ವರ್ಷ ಮನ್ಮಥ ಸಂವತ್ಸರ ಆಗುವುದಿಲ್ಲ. ಬದಲಾಗಿ ಶಕೆ ೧೫೭೭ ಒಂದು ವರ್ಷ ಮೊದಲೇ ಬರುತ್ತದೆ.

ಬಾಗಿಲಕೋಟೆ ತಾಲೂಕಿನ ಇಲಾಳು ಬಸವಲಿಂಗಯ್ಯನ ಊರು. ಈತ ಸಕೆ ೧೭೫೮ ಮನ್ಮಥನಾಮ ಸಂವತ್ಸರದಾ ಆಶ್ವೀಜ ಶುದ್ಧ ನವಮಿ ಗುರುವರಾ ಮೂರು ತಾಸಿಗೆ ನಕ್ಷತ್ರ ಉತ್ತರಾಷಾಢ (೭.೭.೧೮೩೬)ದಲ್ಲಿ ಅನುಭವ ಶಿಖಾಮಣಿ ಗ್ರಂಥವನ್ನು ಲಿಪಿಗೊಳಿಸಿರುವನು. ಶಕೆ ೧೭೫೮ ಮನ್ಮಥನಾಮ ಸಂವತ್ಸರವಾಗುವುದಿಲ್ಲ. ಬದಲಾಗಿ ಅದು ದುರ್ಮುಖ ಸಂವತ್ಸರಕ್ಕೆ ಸರಿಹೊಂದುತ್ತದೆ.

ಮೇಲಿನ ಮೂವರು ಲಿಪಿಕಾರರ ಮರೆವಿನಿಂದ ವರ್ಷ–ತಿಂಗಳುಗಳು ಅಲ್ಲಲ್ಲಿ ಬದಲಾವಣೆಯಾಗಿರುವುದನ್ನು ಹಳ್ಳಿಕೇರಿ ಅವರು ಗುರುತಿಸಿದ್ದಾರೆ.

ಬೆಳಗಾವಿ ಜಿಲ್ಲೆಯ ನಾಗನೂರು ರುದ್ರಾಕ್ಷಿಮಠ ಸಾಹಿತ್ಯ ಸಂಸ್ಕೃತಿಯ ಪೋಷಣೆಗೆ ನಿರಂತರವಾಗಿ ಪ್ರೋತ್ಸಾಹ ನೀಡುತ್ತ ಬಂದಿದೆ. ಈ ಮಠದಲ್ಲಿದ್ದ ಮುಗಡ ಶಿವಲಿಂಗಯ್ಯನು ಪ್ರಮಾಥಿ ನಾಮ ಸಂವತ್ಸರದ ಬಹುಳ ಬನದ ಹುಣಿವಿ ಬೃಹಸ್ಪತಿವಾರ ಪುಷ್ಯ ನಕ್ಷತ್ರ ಮೂರು ಜವ (೮.೧.೧೮೭೯) ದೊಳಗೆ ದೀಪದ ಕಲಿಯಾರ ಕಾವ್ಯವನ್ನು ಲಿಪಿಮಾಡಿದ್ದಾನೆ. ಸುಖಸಂತೋಷದಿಂದ ಓದಿಕೊಳ್ಳಬೇಕೆಂದು ನಾಗನೂರಿನ ಗುರಪ್ಪ ಎಂಬಾತನು ಶಿವಲಿಂಗಯ್ಯನಿಂದ ಬರೆಯಿಸಿಕೊಂಡಿರುತ್ತಾನೆ. ಶಿವಲಿಂಗಯ್ಯ ಎಂಬ ಲಿಪಿಕಾರ ನಿಯುಕ್ತ ಬರಹಗಾರನಾಗಿದ್ದನೆಂಬುದು ಇದರಿಂದ ತಿಳಿದುಬರುತ್ತದೆ.

ಜಮಖಂಡಿಯ ಬಲ್ಲಮಠದ ಮುರಿಗೆಪ್ಪನು ವಿರೋಧಿನಾಮ ಸಂವತ್ಸರದ ಶಕೆ ೧೭೫೦ ಪುಷ್ಯಮಾಸ ಶುಕ್ಲ ೫ ಶುಕ್ರವಾರ ಶತತಾರಾ ನಕ್ಷತ್ರ ನಲ್ಕನೇ ಚರಣ (೧೦.೧.೧೮೭೯)ದಲ್ಲಿ ಚೇರಮಾಂಕ ಕವಿಯ ಭಾವಚಿಂತಾರತ್ನ ಕೃತಿಯನ್ನು ಮನ್ನಿಹಟ್ಟಿ ಗ್ರಾಮದಲ್ಲಿದ್ದುಕೊಂಡು ಬರೆದಿದ್ದಾನೆ. ಇದನ್ನು ಮುನ್ನೋಳಿಯ ಹುಲಿಬೆಳಪ್ಪನು ಪ್ರೀತಿಗೋಸ್ಕರ ಲಿಪಿಕಾರ ಮುರಿಗೆಪ್ಪನಿಂದ ಬರೆಯಿಸಿಕೊಂಡಿದ್ದಾನೆ. ಈ ಪುಸ್ತಕವನ್ನು "ಯಾರೂ ತಕ್ಕೋಳ್ಳಿಕ್ಕಾಗದು ತಕ್ಕೊಂದರೆ ಓದಿಕೊಡಬೇಕು ತಪ್ಪುದೋಷವಿದ್ದರೆ ಬಲ್ಲಂಥ ಶಾಸ್ತ್ರಜ್ಞರು ತಿದ್ದಿ ಓದುವುದು. ಬಯ್ಯಲಿಕ್ಕಾಗದು ನಿಮ್ಮ ಬಾಲಕನು ನಾನು" ಎಂಬ ಹೇಳಿಕೆ ಲಿಪಿಕಾರನ ಪುಸ್ತಕ ಸಂರಕ್ಷಣೆ, ವಿನಯ, ಪ್ರಾಮಾಣಿಕತೆಯನ್ನು ತಿಳಿಸುತ್ತದೆ."[೧೩]

ಇಂದು ಜಮಖಂಡಿಯಲ್ಲಿ ಬಲ್ಲಮಠ ಎಂಬುದು ಯಾವುದು ಅಸ್ತಿತ್ವದಲ್ಲಿಲ್ಲ. ಓಲೆಮಠ, ಕಲ್ಯಾಣಮಠಗಳಿವೆ.

ಚನ್ನಪ್ಪ ಕವಿಯ ಶರಣಲೀಲಾಮೃತದ ಬರವಣಿಗೆ ಕಾರ್ಯವನ್ನು ಶಕೆ ೧೭೪೬ ತಾರಣನಾಮ ಸಂವತ್ಸರದ ಚೈತ್ರ ಶುದ್ಧ ಶುಕ್ಲಪಕ್ಷದ ಬುಧವಾರ ಮಾಘನಕ್ಷತ್ರ ೯ ತಾಸಿ (೭.೪.೧೮೨೪)ನಲ್ಲಿ ರುದ್ರಯ್ಯನು ಮುಕ್ತಾಯಗೊಳಿಸಿರುವನು. ನಾರಾಯಣಪೇಟೆಯ ಹಿರೇಮಠಕ್ಕೆ ಕರ್ತೃವಾದ ಪಟ್ಟದ ಚನ್ನಬಸವದೇವರ ಕರಕಮಲೋದ್ಭವನಾದ ರುದ್ರಯ್ಯನು ಬೀಳಗಿ ನಿವಾಸಿ ಪ್ಯಾಟೆ ಬಸಪ್ಪನ ಆದೇಶದ ಮೇರೆಗೆ ಬರೆದುಕೊಟ್ಟಿದ್ದಾನೆ. ತಪ್ಪಂ ಬರೆದಾತಂ...., ಪುಸ್ತಕಂ ವನಿತಾ ವಿತ್ತಂ ಪರಹಸ್ತ ಗತಂ ಗತಂ.......... ಎಂಬ ಉಲ್ಲೇಖಗಳು ಲಿಪಿಕಾರನ ಪ್ರಾಮಾಣಿಕತೆಗೆ ನಿದರ್ಶನವಾಗಿವೆ.

ಸೋಭನಕೃತುನಾಮ ಸಂವತ್ಸರ ಚೈತ್ರಶುದ್ಧ ೧ ಬುಧವಾರ ಪೂರ್ವಭಾದ್ರಪದ (೨೧.೪.೧೯೪೩) ತಾಸು ೫ ಚೋರರ ವ್ಯಾಳ್ಯೆದಲ್ಲಿ ಸವದತ್ತಿ ಸ್ವಾದಿಮಠದ ರುದ್ರಯ್ಯನು ಅದೃಶ್ಯಕವಿಯ ಪ್ರೌಢದೇವರಾಯನ ಕಾವ್ಯವನ್ನು ತನ್ನ ಮನಃಪೂರ್ವಕದಿಂದ ಬರೆದುಕೊಂಡಿದ್ದಾನೆ. ಕೊನೆಯಲ್ಲಿ 'ಯಿದರೊಳು ಹಸ್ತದೋಷಯಿದ್ದರೆ ತಂಮ ಬಾಲಕ ಸಮಾನವೆಂದು ತಿದ್ದಿಕೊಂಡು ಬುದ್ಧಿವಂತರು ನಡಸುವುದು' ಎಂಬ ವಿನಂತಿ ಮಾತುಗಳಿವೆ. ಚಾಮರಸ ಕವಿಯ ಪ್ರಭುಲಿಂಗಲೀಲೆಯನ್ನು ಶಾಲಿವಾಹನ ಶಕೆ ೧೬೬೫ ರುಧಿರೋದ್ಗಾರಿನಾಮ ಸಂವತ್ಸರದ ಕಾರ್ತಿಕಮಾಸ ಬಹುಳ ದಶಮಿ ಸೋಮವಾರ ೧೦ನೇ ತಾಸು ಉತ್ರಿನಕ್ಷತ್ರದಲ್ಲಿ ಅಂದರೆ ಅಕ್ಟೋಬರ್ ೧೦, ೧೭೪೩ ರಂದು ಮುರುಗೋಡು ಗ್ರಾಮದ ವಾಲಿ ಬಸಪ್ಪನು ಬರೆದುಕೊಂಡಿರುತ್ತಾನೆ.

ಸತ್ತಿಗೇರಿಮಠದ ಪಟ್ಟದ ಸಿದ್ಧಲಿಂಗ ಸ್ವಾಮಿಗಳ ಶಿಷ್ಯರಾದ ಪಟ್ಟಣಶೆಟ್ಟಿ ಪಟ್ಟೆಪ್ಪನ ಮಗ ರುದ್ರಪ್ಪ, ಆತನ ಮಗ ವೀರಪ್ಪನು ಸಿದ್ಧನಂಜೇಶನ ರಾಘವಾಂಕ ಚರಿತ್ರೆಯನ್ನು ಶ್ರೀಮತು ಸುಭಾನುನಾಮ ಸಂವತ್ಸರ ಕಾರ್ತೀಕ ಶುದ್ಧ ದಶಮಿ ಬುಧವಾರ ಆಸ್ಯಮಾನಯೋಗ ಭದ್ರಕರ್ಣ ಕುಂಭಲಗ್ನ ಚಂದ್ರಹೋರಯ್ಯ (೧೭.೧೧.೧೮೧೩)ದಲ್ಲಿ ಬರೆದು ಮುಕ್ತಾಯಗೊಳಿಸಿದನು. ಹಿರೇಕುರಿಬೆಟ್ಟದ ಮಠದ ವೀರಸಂಗಪ್ಪದೇವರು ಯೀಶ್ವರನಾಮ ಸಂವತ್ಸರ (ಶಕೆ ೧೮೫೯) ಉತ್ರಿ ನಕ್ಷತ್ರ ಆಯಿತವಾರ ಪೈಲೆ ತಾಸಿನಲ್ಲಿ ಬಸವ ಶಿಖಾಮಣಿ ಕೃತಿಯ ಬರವಣಿಗೆ ಕಾರ್ಯವನ್ನು ಸಮಾಪ್ತಗೊಳಿಸಿದ್ದಾನೆ. ತಿಗಡಿ ಗೊರವರ ನಿಂಗಪ್ಪ, ನವಲಿ ಸಿರಿಮಲ್ಲಪ್ಪನು ತಮಗೆ ಓದಿಕೊಳ್ಳಲಿಕ್ಕೆಂದು ವೀರಸಂಗಪ್ಪ ದೇವರಿಂದ ಬರಸಿಕೊಂಡಿರುವರು.

ಶ್ರೀಮದನೇಕ ಬ್ರಹ್ಮಾಂಡ ಗರ್ಭಗರ್ಭಿ ಸಚ್ಚಿದಾನಂದರಾದಂತ ಐಮಂಗಳದ ಕಲ್ಯಾಣ ಸ್ವಾಮಿಗಳ ಪಾದದಲ್ಲಿ ಉದ್ಭವಿಸಿದ ಮೊಳೆಬಗೆ ಕಲ್ಲಪ್ಪದೇವರವರ ಶಿಷ್ಯ ಶಂಕರದೇವರು. ಇವರು ಸ್ವಸ್ತಿಶ್ರೀಮತು ವಿಜಯಭ್ಯು ಶಾಲಿವಾಹನ ಶಖಾ ವರುಷಂಗಳು ೧೭೧೨ ಸಾದಾರಣನಾಮ ಸಂವತ್ಸರ ಚೈತ್ರ ಬಹುಳ ೩ ಶುಕ್ರವಾರ (೧೯.೩.೧೭೯೦) ರಂದು ಖಾನಾಪುರದ ಷಡುಸ್ಥಳದ ಚನ್ನವೀರದೇವರ ಮಠದಲ್ಲಿ ಶರಣಲೀಲಾಮೃತ ಕೃತಿಯನ್ನು ಲಿಪಿ ಮಾಡಿದ್ದಾರೆ. ಖಾನಾಪುರದ ಶೆಟ್ಟರಾದಂತಹ ಹಾವಳಗಿ ನಾಗಪ್ಪಶೆಟ್ಟರ ಗರ್ಭೋದಯರಾದಂತ ಶಾಂತಮಲ್ಲಪ್ಪನಿಗೆ ಓದಿಕೊಳಲಿ ಯೆಂದು ಈ ಕೃತಿಯನ್ನು ಪ್ರೀತಿಯಿಂದ ಶಂಕರದೇವರು ಬರಕೊಟ್ಟಿರುವರು.

ಮೇಲಿನ ಎರಡು ಉಲ್ಲೇಖಗಳನ್ನು ನೋಡಿದಾಗಮಠಾಧೀಶರು ಕೂಡ ಲಿಪಿಕಾರರಾಗಿ ತಮ್ಮ ಭಕ್ತ ವರ್ಗಕ್ಕೆ ಪ್ರಾಚೀನ ಕಾವ್ಯಗಳನ್ನು ಓದಲು ಪ್ರತಿ ಮಾಡಿಕೊಡುತ್ತಿದ್ದರೆಂಬುದನ್ನು ಇದರಿಂದ ಗುರುತಿಸಬಹುದು.

ಗಂಗೆಗೌರಿ ಸಂವಾದ ಎಂಬ ದೇಶಿ ಕೃತಿಯನ್ನು ಸಿದ್ಧದೇವರು ಪ್ರತಿಮಾಡಿಕೊಂಡಿರುವರು. ನೇಸರಗಿ ಗೌಡನಾದ ಚೆನ್ನಬಸಪ್ಪನು ಈ ಪುಸ್ತಕವನ್ನು ಸಿದ್ಧದೇವರಿಂದ ಬರೆಸಿರುತ್ತಾರೆ. ಇತ ನೇಮಿತ ಲಿಪಿಕಾರನಾಗಿದ್ದಂತೆ ತೋರುತ್ತದೆ.

ಹರಳಯ್ಯ ಮದುವಯ್ಯಗಳ ಸಾಂಗತ್ಯ ಕೃತಿಯ ಬರವಣಿಗೆಯು ಸೆಕೆ ೧೫೮೩ ವಿಜಯನಾಮ ಸಂವತ್ಸರ ಕಾರ್ತೀಕ ಮಾಸ ತಿಥಿ ದಚ್ಚಿ ವಾರ ಗುರುವಾರ ನಕ್ಷತ್ರ ಅಶ್ವೀನಿ ಸಿದ್ಧಿಯೋಗ ೯ ತಾಸು ವ್ಯಾಳ್ಯೆ ಚಂದ್ರ ಹೋರ್‍ಯೆಯಲ್ಲಿ ಮುಕ್ತಾಯವಾಯಿತು. ಇದನ್ನು ಬರದವರಾರೆಂದರೆ ಪ್ರಾಂತ ಬಿಜಾಪುರ ಪರಗಣೆ ಕೊಕಟನೂರ ಹಿರೇಮಠದ ಹದಡಿಯಲ್ಲಿ ಹುಟ್ಟಿದ ಬಳವಾಡಮಠದ ಗೋಹೇಶ್ವರಲಿಂಗಯ್ಯನವರ ಪುತ್ರ ಸಿದ್ಧರಾಮಯ್ಯ.

ಮುಧೋಳದ ಶಂಕಿನ ಮಲ್ಲಯ್ಯನ ಸುಪುತ್ರ ಸೊಲಬಯ್ಯ. ಶಕೆ ೧೬೧೭ ಪ್ರವರ್ತಮಾನೆ ಯಿವನಾಮ ಸಂವತ್ಸರ ಶ್ರಾವಣಮಾಸ ಬಹುಳ ಹೊಳದಮಾಸಿಯಕಾದಶಿ ಆದಿತ್ಯವಾರ ನಕ್ಷತ್ರವು ಮಗಿನಕ್ಷತ್ರ ಯೋಗ ಶುಕ್ಲನಾಮಯೋಗ ಆಶ್ವಿನ್ನ ಶುಭದಿವಸ (೨೪.೮.೧೬೯೫)ದಂದು ನನ್ನಯ್ಯನ ಚಾರಿತ್ರ ಕೃತಿಯ ಬರವಣಿಗೆಯನ್ನು ಈತ ಪೂರ್ಣ ಗೊಳಿಸಿದ್ದಾನೆ. ಬಿಜಾಪುರ ಬಾಜಾರ ಆನಿಕಿಂಡಿಯ ಮುತಾಲಿಕ ರಾಚಪ್ಪ ಬಿನ್ ಸಣ್ಣಪ್ಪ ಎಂಬಾತನು ಸೊಲಬಯ್ಯನಿಂದ ಈ ಕೃತಿಯನ್ನು ಬರೆಸಿರುವನು.

ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ ಕೃತಿಯನ್ನು ರಕ್ತಾಕ್ಷಿ ಸಂವತ್ಸರದ ಚೈತ್ರಶುದ್ಧ ದಶಮಿ ಸೋಮವಾರದಂದು ಗುರುಪಾದಸ್ವಾಮಿಯವರ ಕರಕಮಲೋದ್ಭವರಾದಂಥ ಹರೀಶ್ವರದೇವರು ಸಂಪಾದನೆಯ ಬಸವಲಿಂಗಸ್ವಾಮಿಯವರಿಗೆ ಪ್ರತಿಮಾಡಿಕೊಟ್ಟಿದ್ದಾರೆ. ಗ್ರಂಥದ ಕೊನೆಯಲ್ಲಿ 'ಬರೆದೆನು ನಾನು ಕಥೆಯನು ಬರಹದಿ ತಪ್ಪುಂಟೆಂದು ಬಯ್ಯಲ್ಬೇಡಂ ವರನಿರ್ಮಲಾಂಗ ಮೂರ್ತಿಗೆ ಮಾ ಬಲ್ಲ ತೆರದಿ ನಿಮ್ಮಯ ಪುತ್ರಂ' ಎಂಬ ವಿನಯಪೂರ್ವಕ ಮಾತುಗಳನ್ನು ಲಿಪಿಕಾರ ಹೇಳಿದ್ದಾನೆ.

ಕೃಷ್ಣಾತೀರದ ಚಕ್ರಾವತಿ ಹಿರೇಮಠದ ರುದ್ರಯ್ಯನು ಶಕೆ ೧೭೮೩ ದುರ್ಮತಿನಾಮ ಸಂವತ್ಸರ ಮಾಘ ಮೂಲಾನಕ್ಷತ್ರ ಆದಿತ್ಯವಾರ ಸಾಯಂಕಾಲ (೩.೩.೧೮೬೧)ದಲ್ಲಿ ಶಿವರಾತ್ರಿ ಕಥೆ ಎಂಬ ಕೃತಿಯನ್ನು ಪ್ರತಿಮಾಡಿರುತ್ತಾನೆ.

ಸ್ವಸ್ತಿಶ್ರೀ ನೃಪಶಾಲಿವಾಹನ ಶಕೆ ೧೭೬೯ ಪ್ಲವಂಗನಾಮ ಸಂವತ್ಸರ ಮಾಘಮಾಸ ಶುದ್ಧ ೭ ಸಪ್ತಮಿ ಗುರುವಾರ ದಿವಸ ಆರಿದ್ರಾ ನಕ್ಷತ್ರ ೬ ಗಳಿಗಿ ಫಳ ೩೨ ದಿನದಂದು ಷಡಕ್ಷರದೇವನ ರಾಜಶೇಖರನ ವಿಳಾಸವನ್ನು ಹುಲಿಸಾಂಬಯ್ಯನಮಠದ ಪಟ್ಟದೇವಯ್ಯನು ಬರೆದುಕೊಂಡಿರುವನು. ಹೂಲಿಮಠದ ಪೀಠಾಧಿಕಾರಿಗಳೆಲ್ಲರೂ ಹಸ್ತಪ್ರತಿ ಮಾಡುವ ಕಾರ್ಯವನ್ನು ಮಾಡುತ್ತಿದ್ದರು. ಈ ಹೂಲಿ ಮಠದಲ್ಲಿಯೇ ಕೃತಕ ಸಿದ್ಧರಾಮ ಚಾರಿತ್ರ ಕೃತಿಯ ರಚನೆಯಾಗಿರುವುದನನು ಗಮನಿಸಬಹುದು.

**ಅನುಕ್ತ ಲಿಪಿಕಾರರು :**

ಕೆಲವು ಲಿಪಿಕಾರರು ತಮ್ಮ ಹೆಸರನ್ನು ಹೇಳಿಕೊಳ್ಳದೇ ಬರೀ ಕೃತಿಗಳನ್ನು ಬರೆದ ಸಮಯ, ಬರೆಯಿಸಿದವರ ವಿವರಗಳನ್ನು ಮಾತ್ರ ದಾಖಲಿಸಿದ್ದಾರೆ. ಆ ವಿವರಗಳು ಹೀಗಿವೆ.

"ಸೃಷ್ಟಿವೇಣಿ ಹಿರಿಹೊಳೆಯ ಸ್ಥಾನದಲ್ಲಿ ಮಳೆಯ ಸ್ವಾಮಿಗಳು ಷಟ್‌ಸ್ಥಲದ ವಿರಕ್ತಮೂರ್ತಿಗಳು ಬೆಳುಬಿಸ್ಥಾನಕ್ಕೆ ನೆಲೆಯಾಗಿಯಿರುವಂತ ಮೂರ್ತಿಗಳು ಅವರ ಪಾದದಲ್ಲಿ ಉದ್ಭವವಾದ ಬೆಳುಬಿಮಠದದೇವರು ಶಾಂತದೇವರು ಅರ್ಧಾಂಗಿ ನೀಲವ್ವಳು ಅವರ ಉದರಾಬ್ದಿಯಲ್ಲಿ ಹುಟ್ಟಿದ ಕುಮಾರ ಫಕೀರಸ್ವಾಮಿಗಳು ಆತನ.....ಹುಟ್ಟಿದರು ಯಾರೆಂದರೆ ಸಿದ್ಧೇಶ್ವರನದಯವುಳ್ಳ ಸಿದ್ಧವ್ವಳು ಅನೇಕ ಪ್ರೀತಿಯಿಂದ ಪುಂಣ್ಯವಾಗಬೇಕೆಂದು ತಿಳಿದು ಶಿವತತ್ವಚಿಂತಾಮಣಿ' ಕೃತಿಯನ್ನು ಬರೆಸಿದ್ದಾಳೆ. ಇದು 'ಸ್ವಸ್ತಿಶ್ರೀ ನೃಪ ಶಾಲಿವಾಹನ ಶಕ ವರುಷನೆಯ ಪ್ರವರ್ತಮಾನೆ ಯಿಶ್ವರನಾಮ ಸಂವತ್ಸರ ಬ್ರಂಹ್ಮ ಬಿಸಿಕೆ ಅಧಿಕಮಾಸ ಕೃಷ್ಣಪಕ್ಷ ಸೃಷ್ಟಿ ಸೋಮವಾರ ಶುಭಯೋಗ ಶುಭನಕ್ಷತ್ರದಲ್ಲಿ ಸೋಮವಾರ ಬೇಗಿನ ಸಾಯಂಕಾಲ ತಾಸು ಹತ್ತು ತಾಸಿನಲ್ಲಿ' ಬರೆಯಲ್ಪಟ್ಟಿತು. ಆದರೆ ಲಿಪಿಕಾರ ತನ್ನ ಹೆಸರನ್ನಾಗಲಿ ಇತರೆ ವಿವರಗಳನ್ನಾಗಲಿ ಹೇಳಿಕೊಂಡಿಲ್ಲ. ಒಬ್ಬ ಮಹಿಳೆ ಈ ಪುಸ್ತಕವನ್ನು ಬರೆಸಿರುವುದು ವಿಶೇಷವೆನಿಸುತ್ತದೆ.

ಮಲಯತಿಪುರದ ನೀಲಕಂಠೇಶನ ಪುತ್ರನು ಪ್ರಮಾಥಿನಾಮ ಸಂವತ್ಸರ ಶಾಲಿವಾಹನ ಶಕ ೧೭೪೧ ಕಾರ್ತೀಕ ಶುದ್ಧ ಪಾಡ್ಯ ಬುಧವಾರ ೧ರಂದು ಚಾಮರಸ ಪ್ರಭುಲಿಂಗಲೀಲೆಯ ಬರವಣಿಗೆಯನ್ನು ಪೂರ್ಣಗೊಳಿಸಿದ್ದಾನೆ. ಇದನ್ನು ಬರಸಿದವರು ಮುನವಳ್ಳಿ ಡ್ಯಾಂ ಸಣ್ಣಪ್ಪ.

ಕಿತ್ತೂರು ಸಂಸ್ಥಾನದ ನಿಸ್ಪತಪಾರುಪತ್ಯಗಾರ ಕನ್ನೂರ ವೀರಸಂಗಪ್ಪನ ಪುತ್ರನಾದ ಶಿವಲಿಂಗಪ್ಪನು ತಮ್ಮ ಮನೋಪ್ರೀತಿಯಿಂದ ಹರಿಹರನ ಗಿರಿಜಾ ಕಲ್ಯಾಣ ಕೃತಿಯನ್ನು ಲಿಪಿಕಾರನೊಬ್ಬನಿಂದ ಬರೆಯಿಸಿ ಕೊಂಡಿರುವರು.

ಶಕೆ ೧೭೭೪ ಪರಿಧಾವಿ ಸಂವತ್ಸರ ಚೈತ್ರ ಬಹುಳ ಪ್ರತಿಪದ ಯಿಂದುವಾಸರ ಶುಭಮುಹೂರ್ತದಲ್ಲಿ ಭೀಮಕವಿಯ ಬಸವಪುರಾಣವು ಬರೆಯಲ್ಪಟ್ಟಿತು. ನೀಲಾಪುರದ ಗೌಡ ಪರಮಶಿವಭಕ್ತಾಚರಣ ಗುರುವರನ ಚರಣ ಪರಿಚರಣ ಸಂತತ ಹರಣ ಸಿದ್ಧನಗೌಡನೆಂಬನು ಹರುಷ ಚಿತ್ತದಿಂದಲಿ ಈ ಕೃತಿಯನ್ನು ಬರೆಯಿಸಿದ್ದಾನೆ. ಕೊನೆಯಲ್ಲಿ ಲಿಪಿಕಾರನು ಹೀಗೆ ಬಿನ್ನವಿಸಿಕೊಂಡಿರುವನು.

"ತರುಳ ಬರೆದಿಹನೀ ಚರಿತ್ರವ
ನಿರದೆ ಪ್ರಾಜ್ಞರು ನಿಮ್ಮ ಜಾಣ್ಮೆಯ
ಮೆರೆದು ವಾಚಿಸಿಕೊಂಬುವುದು ಇದು ಕಾರಣದಿ ನಿಮ್ಮ
ಚರಣ ಸರಸಿಜಯುಗಕೆ ನಮಿಸುವೆ
ಶರಣರಕ್ಷಕರೆಂಬ ನಿಮ್ಮಯ
ಬಿರಿದು ಪರಿಪಾಲಿಪುದು ಕರುಣಕಟಾಕ್ಷದಾವದಲಿ."[೧೪]

ಚಾಮರಸನ ಪ್ರಭುಲಿಂಗಲೀಲೆಯನ್ನು ಮೇಧಾವಿ ಚರಮೂರ್ತಿ ಮುದುಗಲ್ಲ ಸೀಮೆ ಕರಿಬಸಪ್ಪನವರ ಆತ್ಮಜ ಸಂಗಪ್ಪನವರು ಬರೆಯಿಸಿದ್ದಾರೆ. ಇದು ೧೭೪೪ ಜಯನಾಮ ಸಂವತ್ಸರದ ಶ್ರಾವಣ ಶುದ್ಧ ೧೧ ಶುಕ್ರವಾರ ಹತ್ತು ತಾಸು ಅಮೃತಸಿದ್ಧಿಯೋಗದಲ್ಲಿ ಬರವಣಗೆಯು ಮುಕ್ತಾಯಗೊಂಡಿದೆ.

**ಲಿಪಿಕಾರರ ವೃತ್ತಿನಾಮಗಳು :**

ಚರಲಿಂಗಯ್ಯ ಎಂಬ ಲಿಪಿಕಾರ ಪ್ರೌಢರಾಯನ ಕಾವ್ಯವನ್ನು ಪ್ರತಿಮಾಡಿ ಕೊನೆಯಲ್ಲಿ ಹೀಗೆ ಹೇಳುತ್ತಾನೆ. 'ಯಿದರೊಳಗೆ ಹಸ್ತದೋಷಯಿಕ ಬುದ್ದುಯಿದ್ದರೆ ತಿದ್ದಕೊಂಡು ವೋದುವುದು ನಿಂಮ ಬಾಲಕನ ಸಮಾನಯಂದು ಅರಿವುದು ಚಿಕ್ಕವರಿಗೆ ಎಯೆ ಹೇಳುತ್ತ ಬರದುಹಿನಿ ಪ್ರಹುಡರು ತಿದ್ದಿ ವೋದುವುದು' ಎಂಬ ಮಾತನ್ನು ಗಮನಿಸಿದರೆ ಚರಲಿಂಗಯ್ಯನು ಒಬ್ಬ ಶಾಲಾ ಶಿಕ್ಷಕನಾಗಿದ್ದುಕೊಂಡು ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುವ ಸಂದರ್ಭದಲ್ಲಿ ಪ್ರೌಢರಾಯನ ಕಾವ್ಯವನ್ನು ಬರೆದುಕೊಂಡಿದ್ದನೆಂಬುದು ತಿಳಿದುಬರುತ್ತದೆ.

ಟೆಂಗಿನಮಠದ ಬಸವಲಿಂಗಮರಿ ಎಂಬ ಲಿಪಿಕಾರ ಕಲ್ಲುಮಠದ ಕರವೀರಪ್ಪನಿಗೆ ಕರ್ನಾಟಕ ಶಬ್ದಮಂಜರಿ ಗ್ರಂಥವನ್ನು ಪ್ರತಿಮಾಡಿ ಕೊಟ್ಟಿರುವನು. ಬಾಗಲಕೋಟೆಯಲ್ಲಿರುವ ಟೀಕಿನಮಠಕ್ಕೆ ಟೆಂಗಿನಮಠವೆಂತಲೂ ಕರೆಯುತ್ತಿದ್ದರು. ವಚನಗಳಿಗೆ ಟೀಕೆ, ವ್ಯಾಖ್ಯಾನ ಬರೆಯುತ್ತಿದ್ದ ಮಠಾಧೀಶರ ಕಾರಣವಾಗಿ ಟೀಕಿನಮಠವೆಂದು ಹೆಸರು ಬಂದಿತ್ತೆಂದು ಹೇಳಲಾಗುತ್ತದೆ. ನಾನು ಈ ಹಸ್ತಪ್ರತಿಯನ್ನು ಗಮನಿಸಿದಾಗ ಬಾಗಲಕೋಟ ಜಿಲ್ಲೆಯ ಬೀಳಗಿ ಕಲ್ಮಠದಿಂದ ನಾಗನೂರು ಮಠಕ್ಕೆ ಹಸ್ತಾಂತರವಾಗಿದೆ ಎಂಬ ಸಂಗತಿ ಅಲ್ಲಿನ ಶ್ರೀಗಳಿಂದ ತಿಳಿದು ಬಂದಿತು. ಹೀಗಾಗಿ ಇದು ಬಾಗಲಕೋಟ ನಗರದಲ್ಲಿರುವ ಟೀಕಿನಮಠದ ಮರಿದೇವರು ಬರೆದ ಪ್ರತಿ ಎಂಬುದನ್ನು ನಿಸ್ಸಂದೇಹವಾಗಿ ಹೇಳಬಹುದು.

ಬಹುಧ್ಯಾನ ಸಂವತ್ಸರದ ಅಶ್ವೀಜ ಬಹುಳ ಚತುರ್ದಶಿ ಚಿತ್ರ್ವರದ ಅರುಣೋದಯ (೨೨.೧೦.೧೯೩೮)ದಲ್ಲಿ ಮುಗಿಯಿತು. ಕಾಶಿ ಸಂಗಪ್ಪ ಸ್ವಾಮಿಗಳ ಕರಕಮಲೋದ್ಭವರಾದಂಥ ಕಾಶಿ ಶಿವಲಿಂಗಸ್ವಾಮಿಗಳ ಸೇವಾನುಸೇವಕರಾದ ಗೌಡಿಮಗ ಗೌಡಿಗನಾದಂತೆ ತೊತ್ತಿನಮಗ ತೊತ್ತಾದಂತೆ ತೋಂಟದ ಮರಿದೇವರು ತನ್ನ ಸ್ವಹಸ್ತದಿಂದ ಬರೆದ ಷಟ್ಕಾವ್ಯ ಪುಸ್ತಕವು. ಷಟ್ಕಾವ್ಯವೆಂದರೆ ಆರು ಕೃತಿಗಳು. ಕವಿ ಗುರುಬಸವನು ಸ್ವರೂಪಾಮೃತ, ವೃಷಭಗೀತೆ, ಕಲ್ಯಾಣೇಶ್ವರ, ಯೋಗಾಂಗ ವಿಭೂಷಣ, ಸದ್ಗುರು ರಹಸ್ಯ, ಅವಧೂತಗೀತೆ ಮತ್ತು ಮನೋವಿಜಯಕಾವ್ಯ ಎಂಬ ಏಳು ಕೃತಿಗಳನ್ನು ರಚಿಸುವುದರ ಮೂಲಕ 'ಸಪ್ತಕಾವ್ಯದ ಗುರುಬಸವನೆಂದು ಸಾಹಿತ್ಯದಲ್ಲಿ ಪರಿಚಿತನಾಗಿದ್ದಾನೆ. ಆದರೆ ತೋಂಟದ ಮರಿದೇವರು ಗುರುಬಸವನ ಮೊದಲ ಆರುಕೃತಿಗಳನ್ನು ಮಾತ್ರ ಲಿಪಿ ಮಾಡಿದ್ದರಿಂದ ಷಟ್ಕಾವ್ಯವೆಂದು ಇಲ್ಲಿ ಕರೆದಿರುವನು. ಸುವರ್ಣ ಕಂಠಾಖ್ಯ ಗ್ರಾಮದ (ಬೈಲಹೊಂಗಲ ಗ್ರಾಮದ) ಪೌರಾಣಿಕ ಶಿವಬಸವ. ಶಕೆ. ೧೭೫೨ ವಿಕೃತನಾಮ ಸಂವತ್ಸರ ವೈಶಾಖಮಾಸ ಶುಕ್ಲಪಕ್ಷೆ ಏಕಾದಸ್ಯ ಮಿಂದುವಾಸರೆ ತೃತಿಯಾಪ್ರಹರೆ ವುತ್ರಿನಕ್ಷತ್ರೆ ಶ್ರೀಪತಿಯೋಗೆ ಸಮಯ (೧೯.೪.೧೮೩೦)ದಲ್ಲಿ ಸಿದ್ಧೇಶ್ವರ ಪುರಾಣವನ್ನು ಲಿಪಿಗೈದಿರುತ್ತಾನೆ. ಈ ಅಂತ್ಯಪ್ರಶಸ್ತಿಯಿಂದ ಈತ ಪುರಾಣಿಕ ವೃತ್ತಿಯನ್ನು ಕೈಕೊಂಡಿದ್ದನೆಂಬ ಸಂಗತಿ ತಿಳಿದುಬರುತ್ತದೆ.

ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಯಾದವಾಡ ಗ್ರಾಮದ ಪರವಯ್ಯನ ತಂದೆ ಓದಿಸೋ ಪುರಾಣದ ಲಿಂಗಯ್ಯ. ಬಸವ ಶಿಖಾಮಣಿ ಎಂಬ ಗ್ರಂಥವನ್ನು "ಪ್ರಮಾಥಿನಾಮ ಸಂವತ್ಸರದಲು ಆಶ್ವೀಜ ಮಾಸದ ಸಿರಿ ರವಿವಾರ ನಕ್ಷತ್ರ ಶತತಾರಿಯಾಯಿತ್ತು. ಆಯಿತ್ಯವಾರ ಸಂಜೆ ಆಯಿದು ತಾಸು ವೇಳ್ಯೆದಲ್ಲಿ ಮುಗಿಯಿತು. ಸ್ವಸ್ತಿಶ್ರೀ ನೃಪ ಶಾಲಿವಾಹನ ಶಕೆ ೧೬೬೨ ಅಂದರೆ ಜುಲೈ ೧, ೧೭೪೯ ರಲ್ಲಿ ಪರವಯ್ಯನು ಬಸವಶಿಖಾಮಣಿ ಕೃತಿಯನ್ನು ಲಿಪಿಗೈದಿದ್ದಾನೆ. ಚಿಕ್ಕೊಪ್ಪದ ಪೊತ್ತರ ರುದ್ರಪ್ಪನ ಪುಂಣ್ಯಾತ್ಮದಲ್ಲಿ ಪುಟ್ಟಿದ ಮಗ ಗೌಡಚಪ್ಪನು ಇದನ್ನು ಪರವಯ್ಯನಿಂದ ಬರೆಸಿರುವನು. ಲಿಪಿಕಾರನು ಶಕೆ ೧೬೮೨ಕ್ಕೆ ಪ್ರಮಾಥಿನಾಮ ಸಂವತ್ಸರ ಆಶ್ವಿಜ ಮಾಸ ರವಿವಾರ ಎಂದು ದಾಖಲಿಸಿದ್ದಾನೆ. ಆದರೆ ಶಕೆ ೧೬೮೨ ವಿಕ್ರಮನಾಮ ಸಂವತ್ಸರ ಪ್ರಮಾಥಿಯು ಶಕೆ ೧೬೮೧ ಅಂದರೆ ಒಂದು ವರ್ಷ ಮೊದಲೇ ಬರುತ್ತದೆ.

ಇಲ್ಲಿ ಓದಿಸೋ ಪುರಾಣದ ಲಿಂಗಯ್ಯ ಎಂಬುದು ಆತನ ವೃತ್ತಿನಾಮವಾಗಿತ್ತು ಎಂಬುದು ಗಮನಕ್ಕೆ ಬರುತ್ತದೆ.

ಮಹಾಲಿಂಗರಂಗನ ಅನುಭವಾಮೃತವನ್ನು 'ನೃಪಶಾಲಿವಾಹನ ಸಕೆ ೧೭೬೮ ಪ್ರವರ್ತಮಾನೆ ಪರಾಬವನಾಮ ಸಂವತ್ಸರ ಕಾರ್ತಿಕ ಶುದ್ಧ ೧ ಪ್ರತಿಪದ ಬುಧವಾರ ದಿವಸ ಸ್ವಾತಿನಕ್ಷತ್ರ ಯರಡನೆಪ್ರಹರ (೪.೧೧.೧೮೪೬)ದಲ್ಲಿ ಅಸೂಟಿ ಸಾಲಿಮಠದ ಬಸವಲಿಂಗಪ್ಪನು ಬರೆದು ಮುಗಿಸಿರುತ್ತಾನೆ. ಬಿಜಾಪುರ ಜಿಲ್ಲೆಯ ಬೀಳಗಿಯ ಅಕ್ಕಸಾಲೇರ ಜೀವಣ್ಣನಿಗೆ ಈ ಕೃತಿಯನ್ನು ಬರೆದು ಕೊಟ್ಟಿರುವನು. ಮೊದಲ ಪ್ರತಿಯಿದ್ದಂತೆ ಬರದುಯಿಧನೆ ಬುದ್ಧಿವಂತರಾದವರು ವಂದು ತಪ್ಪಿದ್ದ ಕಾಲಕ್ಕು ತಿದ್ದಿವೋದುವುದು ಬಯ್ಯಲಾಗದು' ಎಂದು ತನ್ನ ವಿನಯ ಪ್ರಾಮಾಣಿಕತೆಯನ್ನು ಮುಕ್ತವಾಗಿ ಲಿಪಿಕಾರ ಹೇಳಿಕೊಂಡಿದ್ದಾನೆ. ಇಲ್ಲಿಯ ಅಕ್ಕಸಾಲೇರ ಜೀವಣ್ಣ ಎಂಬುದು ಆತ ಪಾಂಚಾಳವೃತ್ತಿಯ ವ್ಯಕ್ತಿ ಎಂಬುದನ್ನು ತೋರಿಸಿಕೊಡುತ್ತದೆ.

ಚಿದಾನಂದಾವಧೂತರು ರಚಿಸಿದ ಜ್ಞಾನಸಿಂಧು ಕೃತಿಯನ್ನು ಪುರಾಣಿಕ ಬಸಪ್ಪನು ಲಿಪಿ ಮಾಡಿರುತ್ತಾನೆ. ಈತನ ವೃತ್ತಿ ಪುರಾಣ ಹೇಳುವುದಾಗಿತ್ತು ಎಂಬುದನ್ನು ಮನಗಾಣಬಹುದು. ಚಿಗಮಾರ್ಪನಹಳ್ಳಿ ಮಠಕ್ಕೆ ಕಾರಣಕರ್ತನಾಗಿದ್ದ ಮಲ್ಲಪ್ಪದೇವರು ವಿಕೃತನಾಮ ಸಂವತ್ಸರ (ಶಾ.ಶ.೧೮೭೨)ದ ಭಾದ್ರಪದ ಶುದ್ಧ ೧೧ ಏಕಾದಶಿ ಸುಕ್ರವಾರ ದಿವಸ (೨೭.೯.೧೯೫೦) ಕ್ಕೆ ಭೀಮಕವಿಯ ಬಸವಪುರಾಣವನ್ನು ಬರೆದು ಮತ್ತೋಡುವಿನ ಚಿತ್ರಮಠದ ಚನ್ನಬಸವಪ್ಪ ಸ್ವಾಮಿಯವರಿಗೆ ಸಮರ್ಪಿಸಿದ್ದಾನೆ. ಕೊನೆಯಲ್ಲಿ ಉಲ್ಲೇಖಗೊಂಡ ಸಂಪಾದನಾ ಗುರುಪಾದಯ್ಯನ ಪಾದಾರವಿಂದವೇ ಗತಿ ಎಂಬ ಹೇಳಿಕೆಯು ಮಲ್ಲಪ್ಪದೇವರು ಸಂಪಾದನಾ ಸಮಯದ ಗುರುಪಾದಯ್ಯನವರ ಬಗೆಗೆ ಗೌರವವನ್ನು ಹೊಂದಿದ್ದರೆಂಬುದು ಗೊತ್ತಾಗುತ್ತದೆ. ಲಿಂಗಾಯತ ಮಠಪರಂಪರೆಯಲ್ಲಿ ಸಂಪಾದನಾ ಸಮಯ ಎಂಬ ಭೇದವೊಂದು ಕವಲೊಡೆದಿದೆ. ಸಂಪಾದನ ಸಮಯದ ಪೀಠಾಧಿಪತಿಗಳ ವೃತ್ತಿಯು ವಚನ ಕಟ್ಟುಗಳನ್ನು ಪ್ರತಿಲಿಪಿ ಮಾಡುವುದೇ ಆಗಿತ್ತು ಎಂಬುದು ಗಮನಿಸುವ ಅಂಶವಾಗಿದೆ.

ಕೊಲ್ಲಗುಣಿ ಗ್ರಾಮದ ಗಣಾಚಾರಿ ಬಸವಯ್ಯನವರ ಮಗನಾದ ಮಹದೇವಯ್ಯನು ಸನ್ ೧೮೮೫ ಸಂವತ್ಸರದ ಮಾರ್ಚ ತಿಂಗಳು ೫ ತೇದಿಗೆ ಸರಿಯಾದ ತಾರಣ ಸಂವತ್ಸರ (೧೯.೩.೧೮೨೪)ದ ಫಾಲ್ಗುಣ ಬಹುಳ ೫ ಶುಕ್ರವಾರ ಹಗಲು ಒಂಭತ್ತು ತಾಸಿಗೆ ಷಡಕ್ಷರ ಕವಿಯ ಶಬರಶಂಕರ ವಿಳಾಸ ಕೃತಿಯ ಲಿಪಿಕಾರ್ಯವನ್ನು ಪೂರೈಸಿರುವನು.

ಗಣಾಚಾರಿ ಎಂಬುದು ಲಿಂಗಾಯತ ಜಂಗಮಜಾತಿಯ ಅನುಶ್ರೇಣಿಯಲ್ಲಿ ಬರುವ ಒಂದು ಉಪಪಂಗಡ. ಲಿಂಗಾಯತ ಪರಿಭಾಷೆಯಲ್ಲಿ ಪಂಚಾಚಾರಗಳು ಬರುತ್ತವೆ. ಅವುಗಳಲ್ಲಿ ಗಣಾಚಾರವೂ ಒಂದು. ಗಣಾಚಾರ ನಿಷ್ಠೆಯನ್ನು ಹೊಂದಿರುವ ವ್ಯಕ್ತಿಗಳು ಧಾರ್ಮಿಕ ವ್ಯವಸ್ಥೆಗೆ ಧಕ್ಕೆಬಂದ ಸಂದರ್ಭದಲ್ಲಿ ತಮ್ಮ ಧಿರೋಧಾತ್ತ ನಿಲುವಿನಿಂದ ಹೋರಾಡುವ ಮನೋಭಾವ ಹೊಂದಿರುತ್ತಾರೆ. ಗಣಾಚಾರ ತತ್ವವನ್ನು ಪರಿಪಾಲಿಸುವವರೇ ಗಣಾಚಾರಿ ಮನೆತನದವರಾಗಿದ್ದಾರೆ. ಇದು ಒಂದು ವೃತ್ತಿ ಸ್ವರೂಪ ಪಡೆದುಕೊಂಡುದ್ದು ಗಮನಿಸವ ಅಂಶವಾಗಿದೆ.

"ರಾಚೋಟಯ್ಯ ಎಂಬ ಲಿಪಿಕಾರ ಈತ ಬೆಳಗಾವಿ ಜಿಲ್ಲೆ ಸವದತ್ತಿ ತಾಲೂಕಿನ ಮುನವಳ್ಳಿಯ ಚಂದ್ರಶೇಖರಮಠದ ಅಧಿಷ್ಠಾನ ಕರ್ತೃವಾಗಿದ್ದನು. ಶಕ. ೧೭೮೬ ರಕ್ತಾಕ್ಷಿನಾಮ ಸಂವತ್ಸರ ಪುಷ್ಯ ಶುದ್ಧ ೩ ಶನಿವಾರ ದಿವಸ ಅಂದರೆ ಜನೇವರಿ ೨೭, ೧೮೬೪ ರಲ್ಲಿ ಶೀಲವಂತಯ್ಯನ ತ್ರಿವಿಧಿಯನ್ನು ನಾಗನೂರಿನಲ್ಲಿರುವ ಶ್ರೀ ರುದ್ರಾಕ್ಷಿಮಠದ ಅಲ್ಲಪ್ಪಸ್ವಾಮಿಯವರಿಗೆ ರಾಚೋಟಯ್ಯನು ಪ್ರೀತಿಯಿಂದ ಬರೆದು ಕಳುಹಿಸಿದ್ದಾನೆ."[೧೫]

ಹಳ್ಳಿಕೇರಿ ಅವರು ಉಲ್ಲೇಖಿಸಿದ ಚಂದ್ರಶೇಖರಮಠವನ್ನು ಇಂದು ಸೋಮಶೇಖರಮಠವೆಂದು ಕರೆಯಲಾಗುತ್ತದೆ. ನೂರೈವತ್ತು ವರ್ಷಗಳ ಕಾಲಘಟ್ಟದಲ್ಲಿ ಹೇಗೆಲ್ಲ ಹೆಸರುಗಳು ಬದಲಾವಣೆಯಾಗುತ್ತವೆ ಎಂಬುದಕ್ಕೆ ಈ ಹಸ್ತಪ್ರತಿ ನಮಗೆ ಸಾಕ್ಷಿಯನ್ನು ಒದಗಿಸುತ್ತದೆ. "ರಾಚೋಟಾರ‍್ಯ ಎಂಬ ಲಿಪಿಕಾರ ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಶಾಹಪೂರಿನ ಕಾಜಿಮಠದ ಗುರು ವೃಷಭೇಂದ್ರರ ಶಿಷ್ಯನಾಗಿದ್ದವನು, ರಾಚೋಟಾರ‍್ಯ ಈತ ಶ್ರೀನೃಪ ಶಾಲಿವಾಹನ ಶಕೆ ೧೭೮೫ ರುದಿರೋದ್ಗಾರಿನಾಮ ಸಂವತ್ಸರದ ಮಾರ್ಗಶಿರ ಶು. ೧೧ ರವಿವಾರ ಅಶ್ವಿನಿ ನಕ್ಷತ್ರದಲು ಅಮೃತಸಿದ್ಧಿಯೋಗ (೨೦.೧೨.೧೮೬೩)ದಲು ಶಂಕರಕವಿಯ ಚೋರಬಸವೇಶ್ವರನ ಕಾವ್ಯವನ್ನು ಬರೆದಿರುವನು."[೧೬]

ಎಫ್.ಟಿ.ಹಳ್ಳಿಕೇರಿ ಅವರು ಹೇಳಿದಂತೆ ಅಥಣಿ ತಾಲೂಕಿನಲ್ಲಿ ಶಹಾಪೂರ ಎಂಬ ಗ್ರಾಮವೇ ಇಲ್ಲ. ಆದರೆ ಬೆಳಗಾವಿ ನಗರಕ್ಕೆ ಹೊಂದಿಕೊಂಡು ಶಹಾಪೂರ ಎಂಬ ನಗರವಿದೆ. ಇಲ್ಲಿ ಕಾರಂಜಿಮಠ ಎಂಬ ಮಠವಿದೆ. ಬಹುಶಃ ಹಸ್ತಪ್ರತಿ ಲಿಪಿಕಾರನ ಅಜ್ಞಾನ-ಅವಸರ ಕಾರಣವಾಗಿ 'ಕಾಜಿಮಠ' ಆಗಿರಬಹುದೆಂದು ನಾನು ಭಾವಿಸಿದ್ದೇನೆ. ಸಂಪಗಾವಿ ಕಸಬೆದೊಳಗಿನ ನಾಗನೂರ ಉದಾಸ್ತಿ ಹಿರೇಮಠದ ಗುರುಬಸಪ್ಪದೇವರ ಪುತ್ರನಾದ ಮುದಿಬಸವದೇರಾತ್ಮಜ ಗುರುಬಸವೇಶ್ವರನ ತನುಜ ಗುರುನಾಥನ ಅಣುಗನಾದ ರಾಚೋಟಿದೇವರು ಒಬ್ಬ ಹವ್ಯಾಸಿ ಲಿಪಿಕಾರ. ಈತನ ವಂಶಾವಳಿ ಹೀಗಿದೆ. ಹಿರೇಮಠದ ಗುರುಬಸಪ್ಪದೇವರು>ಮುದಿಬಸಪ್ಪದೇವರು> ಗುರುಬಸವೇಶ್ವರ>

ಗುರುನಾಥ> ರಚೋಟಿದೇವರು. ಈತ ಪ್ರೀತಿಗೋಸ್ಕರವಾಗಿ ಅನುಭವ ಶಿಖಾಮಣಿ ಕೃತಿಯ ಬರವಣಿಗೆಯನ್ನು ಶಾಲಿವಾಹನ ಶಕೆ ೧೭೩೮ ವರ್ಷ ಧಾತುನಾಮ ಸಂವತ್ಸರದ ಶ್ರಾವಣ ಬಹುಳ ಚತುರ್ಥಿ ಸೋಮವಾರ ಪೈಲೆ ಪ್ರಹರದಿ ಪ್ರಹರ ದೀಡ ತಾಸಿನಲ್ಲಿ ಉತ್ತರಾಷಾಢ ನಕ್ಷತ್ರ (೧೨.೮.೧೮೧೬)ದಲ್ಲಿ ಮುಕ್ತಾಯಗೊಳಿಸಿದ್ದಾನೆ. ಸಂಬರಗಿ ಕಸಬೆಯೊಳಗಿನ ಮದಗಿಮಠದಲ್ಲಿರುವ ಜಂಗಮಪ್ರೇಮಿಗಳಾದ ಶಿವಪ್ಪ ಚೌಲಗಿ ಸುಪುತ್ರ ಚೆನ್ನಪ್ಪನ ಮನೆಯಲ್ಲಿದ್ದುಕೊಂಡು ಬರೆದಿರುವನು. ಇಲ್ಲಿ ಮರಾಠಿ ಅಕ್ಷರಗಳೂ ಸೇರಿಕೊಂಡಿರುವುದು ವಿಶೇಷ. ಬೈಲಹೊಂಗಲ ತಾಲೂಕಿನ ನಾಗನೂರು ಗ್ರಾಮದಲ್ಲಿ ಏಳುಮಠಗಳಿದ್ದವು. ಈಗ ರುದ್ರಾಕ್ಷಿಮಠ ಮತ್ತು ಚೌಕಿಮಠಗಳು ಮಾತ್ರ ಅಸ್ತಿತ್ವದಲ್ಲಿವೆ. ಉಳಿದ ಮಠಗಳು ನಾಮಾವಶೇಷವಾಗಿವೆ. ಅವುಗಳಲ್ಲಿ ಉದಾಸ್ತಿ ಹಿರೇಮಠವೂ ಒಂದು. ೧೮೧೬ರ ಸುಮಾರಿಗೆ ಈ ಮಠ ಅಸ್ತಿತ್ವದಲ್ಲಿತ್ತು ಎಂಬ ಸಂಗತಿ ನಮಗೆ ಇಲ್ಲಿ ತಿಳಿದುಬರುತ್ತದೆ.

"ಲಕುಮಣಗೊಂಡ ದೇಸಾಯಿ ಈತನ ಊರು ಐವತ್ತಾರದೊಳಗಿರುವಂಥ ಹೊಂಕಾರಪುರ. ಇಲ್ಲಿನ ಗುರುಲಿಂಗ ಜಂಗಮಕ್ಕೆ ಭಕ್ತರಾಗಿರುವಂತಹ ಅಲ್ಲಗೊಂಡ ದೇಸಾಯಿ ಈತನ ತಂದೆ. ಪ್ಲವಂಗನಾಮ ಸಂವತ್ಸರದ ಶ್ರಾವಣ ಶುದ್ಧಮಾಸ ದಕ್ಷಿಣಾಯನ ಆದಿತ್ಯವಾರ ಅನುರಾಧಾ ನಕ್ಷತ್ರ ಅಮೃತಗಳಿಗೆ (೧.೯.೧೯೦೭)ಯಲ್ಲಿ ತೋಂಟದಸಿದ್ಧೇಶ್ವರನ ಕಟ್ಟೋಂದನ್ನು ಬರೆದುಕೊಂಡವನು, ಲಕುಮಣಗೊಂಡ ದೇಸಾಯಿ. ಈತನಿಂದ ಮೇಗಳಗೇರಿ ವಿಯವರ್ಗದ ಆರಾಧ್ಯ ಪರಂಪರೆಗೆ ಸೇರಿದ ಸಿದ್ಧಲಿಂಗಯ್ಯ ಮತ್ತು ಬಸಪ್ಪ ಎಂಬಿಬ್ಬರು ಪ್ರತಿಮಾಡಿಕೊಂಡಿದ್ದಾರೆ."[೧೭] ಹಳ್ಳಿಕೇರಿ ಅವರು ಲಿಪಿಕಾರರ ಚರಿತ್ರೆಯಲ್ಲಿ ಹೇಳಿದ ವಿಷಯವನ್ನು ಪುನರ್‌ಪರಿಶೀಲಿಸಬೇಕಾಗಿದೆ. ಯಾಕೆಂದರೆ ಹೊಂಕಾರಪುರ ಎಂದರೆ ವಂಟಮುರಿ. ವಂಟಮುರಿಯಲ್ಲಿ ಸಂಸ್ಥಾನವೊಂದಿತ್ತು. ಈ ಸಂಸ್ಥಾನಕ್ಕೆ ಲಖಮನಗೌಡ ದೇಸಾಯಿ ರಾಜರಾಗಿದ್ದರು. ಇವರ ಸಂಸ್ಥಾನದಲ್ಲಿ ಸಿದ್ಧಲಿಂಗಯ್ಯ ಮತ್ತು ಬಸಪ್ಪ ಅವರು ಪ್ರಾಯಶಃ ಪ್ರತಿಮಾಡಿಕೊಂಡಿರಬೇಕು. ಮತ್ತು ಬೇರೆ ಯಾರಾದರೂ ಲಿಪಿಕಾರರು ಇದನ್ನು ಪ್ರತಿಮಾಡಿ ಲಖಮಗೌಡರ ಹೆಸರು ಸೇರಿಸಿರಬಹುದು.

ಬೆಳಗಾವಿ ಜಿಲ್ಲೆಯ ಹಸ್ತಪ್ರತಿ ಸಂಪತ್ತು ವೈವಿಧ್ಯಮಯವಾಗಿದೆ. ಇಲ್ಲಿ ನಾನು ಕ್ಷೇತ್ರಕಾರ್ಯ ಮಾಡಿದಾಗ ಹಳ್ಳಿ ಹಳ್ಳಿಗಳಲ್ಲಿ ಬೈಲಾಟದ ಹಸ್ತಪ್ರತಿಗಳು ವ್ಯಾಪಕವಾಗಿ ದೊರೆಯುತ್ತಿವೆ. ಇವುಗಳನ್ನು ಸಂಗ್ರಹಿಸಿ ಪ್ರಕಟಿಸಬೇಕಾದ ಅಗತ್ಯತೆ ಬಹಳಷ್ಟಿದೆ ಎಂದು ನಾನು ಭಾವಿಸಿದ್ದೇನೆ. ಬಯಲಾಟಗಳ ಮೂಲಕ ಸಮಾಜದಲ್ಲಿ ಒಂದು ಜಾಗೃತಿಯನ್ನು ತರಲು ಬಯಸಿದವರು ಅನೇಕ ಜನ ಬಯಲಾಟ ಕರ್ತೃಗಳು. ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಧಾರ್ಮಿಕ ಆಧ್ಯಾತ್ಮಿಕ ಬಯಲಾಟಗಳ ಸೃಷ್ಟಿಯಾದರೆ, ಪೂರ್ವಾರ್ಧದಲ್ಲಿ ಸಾಮಾಜಿಕ ಕಾಳಜಿಯ ಬಯಲಾಟಗಳು ನಿರ್ಮಾಣಗೊಂಡವು.

ಸಮಾಜದಲ್ಲಿ ಗೌರವದಿಂದ ಬಾಳಬೇಕು. ಪರಸ್ತ್ರೀಯರನ್ನು ನೋಡಬಾರದು, ನೋಡಿದರೆ ಏನಾಗುತ್ತದೆ ಎಂಬುದನ್ನು ನಾವು 'ಸಂಗ್ಯಾ ಬಾಳ್ಯಾ' ನಾಟಕದಲ್ಲಿ ಗಮನಿಸಬಹುದು. ಬೈಲಹೊಂಗಲ ತಾಲೂಕಿನ ಪತ್ತಾರ ಮಾಸ್ತರ ಎಂಬುವನು ಈ ನಾಟಕವನ್ನು ರಚಿಸಿದ್ದಾನೆ. ತನ್ನ ಕಾಲಘಟ್ಟದಲ್ಲಿ ನಡೆದ ಘಟನೆಯನ್ನು ಜಾನಪದ ರಂಗಭೂಮಿಗೆ ತಕ್ಕಂತೆ ನಾಟಕೀಯವಾಗಿ ರಚಿಸುವಲ್ಲಿ ಪತ್ತಾರ ಮಾಸ್ತರ ತೋರಿದ ಜಾಣ್ಮೆ ಮೆಚ್ಚುವಂತಹದು.

ಬೆಳಗಾವಿ ಜಿಲ್ಲೆಯ ಹಳ್ಳಿ–ಹಳ್ಳಿಗಳಲ್ಲಿಯೂ ಪ್ರತಿವರ್ಷ ಜಾತ್ರೆ–ಉತ್ಸವಗಳಲ್ಲಿ ಸಂಗ್ಯಾಬಾಳ್ಯಾ ನಾಟಕ ಪ್ರದರ್ಶನ ಇದ್ದೇ ಇರುತ್ತದೆ. ಅದರಷ್ಟು ಜನಪ್ರಿಯ ನಾಟಕ ಇನ್ನೊಂದಿಲ್ಲ. ಈ ನಾಟಕಕ್ಕೆ ಕರ್ನಾಟಕ ವ್ಯಾಪ್ತಿಯ ಪ್ರಚಾರ ಕೊಟ್ಟವರು ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳಾದ ಚಂದ್ರಶೇಖರ ಕಂಬಾರ ಅವರು. ಸಂಗ್ಯಾಬಾಳ್ಯಾ ನಾಟಕಕಥೆ ಬೈಲಹೊಂಗಲದಲ್ಲಿ ನಡೆದ ಒಂದು ಸತ್ಯಘಟನೆ. ಬೈಲಹೊಂಗಲದ ಲಗಳೇರ ಮನೆತನದ ಈರ್ಯಾ (ಈರಣ್ಣ), ಇರಪಾಕ್ಷಿ (ವಿರೂಪಾಕ್ಷಿ), ಬಸವಂತ ಎಂಬ ಅಣ್ಣತಮ್ಮಂದಿರು. ಈರ್ಯಾ ಶ್ರೀಮಂತ ವ್ಯಾಪಾರಿಯಾಗಿದ್ದ. ಹೀಗಾಗಿ ಮೇಲಿಂದಮೇಲೆ ಬಳ್ಳಾರಿ ಪ್ರಾಂತ್ಯಕ್ಕೆ ವ್ಯಾಪಾರಕ್ಕೆಂದು ಹೋಗುತ್ತಿದ್ದ. ಈರ್ಯಾ ಗಂಗಾಳನ್ನು ಮದುವೆಯಾದ. ಮದುವೆಯಾದ ಹೊಸದರಲ್ಲಿಯೇ ಹಣದ ವ್ಯಾಮೋಹಿಯಾಗಿದ್ದ ಈರ್ಯಾ ಹೆಂಡತಿಯನ್ನು ಬಿಟ್ಟು ವ್ಯಾಪಾರಕ್ಕೆ ಹೋದ. ಮದುವೆಯಾದ ತುಂಬ ಯೌವ್ವನದಲ್ಲಿದ್ದ ಗಂಗಾ ಸಹಜವಾಗಿಯೇ ಪತಿಯ ವಿರಹ ವೇದನೆಯಿಂದ ಬಳಲಿದಳು. ಅದೇ ಊರಿನ ಮೇಲಿನಮನಿ(ಇದು ಮನೆತನದ ಹೆಸರು) ಸಂಗ್ಯಾ ತುಂಬಾ ಸುಂದರ ತರುಣ ಮತ್ತು ರಸಿಕ. ಆತನ ಗೆಳೆಯ ಬಾಳ್ಯಾ ಬಡವ. ಸಂಗ್ಯಾ ಶ್ರೀಮಂತನಾಗಿದ್ದ. ಇಬ್ಬರು ಕೂಡಿ ಮರಡಿ ಬಸವಣ್ಣನ ಜಾತ್ರೆಗೆ ಹೋದಾಗ ಗಂಗಾಳನ್ನು ನೋಡಿ ಸಂಗ್ಯಾಮೋಹಗೊಳ್ಳುತ್ತಾನೆ. ಅವಳನ್ನು ಹೇಗಾದರೂ ಮಾಡಿ ಅನುಭವಿಸಬೇಕೆಂದು ಪರಿತಪಿಸುತ್ತಾನೆ. ಇದಕ್ಕಾಗಿ ಪರಮ್ಮ ಎಂಬ ಮುದುಕಿಯ ಸಹಾಯ ಪಡೆಯುತ್ತಾನೆ. ಕುತಂತ್ರದಿಂದ ಪರಮ್ಮ ಗಂಗಾಳನ್ನು ಸಂಗ್ಯಾನ ಹತ್ತಿರ ಬರುವಂತೆ ಮಾಡುತ್ತಾಳೆ. ಅಸಹಾಯಕಳಾದ ಗಂಗಾ ಸಂಗ್ಯಾನ ಮೋಸಕ್ಕೆ ಬಲಿಯಾಗುತ್ತಾಳೆ. ಅಷ್ಟರಲ್ಲಿ ಈರ್ಯಾ ವ್ಯಾಪಾರ ಮುಗಿಸಿಕೊಂಡು ಊರಿಗೆ ಬರುತ್ತಾನೆ. ಊರಿನಲ್ಲಿ ಸಂಗ್ಯಾ–ಗಂಗಾಳರ ಹಾದರ ಕಥೆ ಹಬ್ಬಿ ಬಿಟ್ಟಿರುತ್ತದೆ. ಇದರಿಂದ ಸಂಗ್ಯಾನನ್ನು ಹೇಗಾದರೂ ಮಾಡಿ ಮುಗಿಸಬೇಕೆಂದು ಈರ್ಯಾ ತೀರ್ಮಾನಿಸುತ್ತಾನೆ. ಸಂಗ್ಯಾನ ಗೆಳೆಯ ಬಾಳ್ಯಾನ ಸಹಾಯದಿಂದ ಸಂಗ್ಯಾನನ್ನು ಹಿಡಿದು ಕೊಲೆ ಮಾಡುತ್ತಾರೆ. ಈರ್ಯಾ, ಈರಪಕ್ಷಿ ಮತ್ತು ಬಸವಂತರನ್ನು ಬ್ರಿಟಿಷ್ ಸರಕಾರ ಶಿಕ್ಷೆಗೆ ಗುರಿಪಡಿಸುತ್ತದೆ. ಆಗ ಈರಪಕ್ಷಿ ಬಸವಂತ ಇಬ್ಬರೂ ಕ್ರೈಸ್ತ ಧರ್ಮ ಸ್ವೀಕಾರ ಮಾಡಿ ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಾರೆ. ಈರ್ಯಾನಿಗೆ ಶಿಕ್ಷೆ ಆಗುತ್ತದೆ. ಇದಿಷ್ಟು ಸಂಗ್ಯಾ ಬಾಳ್ಯಾ ನಾಟಕದ ಕಥಾವಸ್ತು. ಇಲ್ಲಿ ಹಾದರ ಮುಖ್ಯವಸ್ತುವಾಗಿದೆ. ಹಾದರ ಕಾರಣವಾಗಿ ಕೊಲೆಯೊಂದು ನಡೆಯುತ್ತದೆ. ಮಾನವ ಸಹಜ ಲೈಂಗಿಕ ಪ್ರವೃತ್ತಿಯೊಂದು ಎಂಥ ಧಾರುಣ ಸ್ಥಿತಿಗೆ ಮುಟ್ಟುವುದೆಂಬುದನ್ನು ನಾಟಕಕಾರ ಅತ್ಯಂತ ಕಲಾತ್ಮಕವಾಗಿ ಈ ನಾಟಕದಲ್ಲಿ ಎರಕಹೊಯ್ದಿದ್ದಾನೆ.

ಇಂದಿಗೂ ಕೆಲವು ಮಂಡಿವಂತ ಜನ, 'ಸಂಗ್ಯಾ ಬಾಳ್ಯಾ' ಒಂದು ಅಶ್ಲೀಲ ನಾಟಕ. ಅದು ಸಮಾಜದ ಕೆಳದರ್ಜೆ ಜನ ಆಡುವಂಥದು, ನೋಡುವಂಥದು. ಒಂದು ನೀತಿ ಇದೆಯೇ? ಕಲೆಗಾರಿಕೆ ಇದೆಯೇ? ಇಂಥ ನೀತಿಗೆಟ್ಟ ನಾಟಕ ಆಡುವವರು, ನೋಡುವವರು, ಒಂದು ರೀತಿಯಲ್ಲಿ ತಲೆ ತಿರುಕರೆಂಬರ್ಥದಲ್ಲಿ ಆಡುವಂಥ ಜನ ಇಂದಿಗೂ ಇದ್ದಾರೆ. ಅವರಲ್ಲೇ ಕೆಲವರು ನಾಟಕ ನೋಡಿ, ಸಂತೋಷಪಟ್ಟು ಅಭಿಪ್ರಾಯ ಬದಲಿಸಿಕೊಂಡವರೂ ಇದ್ದಾರೆ. ಅವರ ಅಭಿಪ್ರಾಯಕ್ಕೆ ಎರಡು ಕಾರಣಗಳಿವೆ: ೧. ಮೇಲುನೋಟಕ್ಕೆ ನಾಟಕದಲ್ಲಿ ಕಾಣುವ ಐಂದ್ರಿಕ ಸ್ಪರ್ಶ. ೨. ಅದನ್ನೇ ಪ್ರಧಾನವಾಗಿ ಮಾಡಿಕೊಂಡು ತಮ್ಮ ಲೈಂಗಿಕ ಪ್ರವೃತ್ತಿಗೆ ನಾಟಕದ ಮುಖಾಂತರ ದಾರಿ ಕಲ್ಪಿಸಿಕೊಂಡು, ಅತಿ ರಂಜಿತವಾಗಿ ಆಡುತ್ತ ಬಂದ ಕಲಾಪ್ರಜ್ಞೆ ಇಲ್ಲದ ಜನರು.

"ಈ ನಾಟಕದಲ್ಲಿ ನೈತಿಕ ಮೌಲ್ಯದ ಎಚ್ಚರದ ಧ್ವನಿ ಇದ್ದೇ ಇದೆ. ಆದರೆ ಇಂಥ ಮೌಲ್ಯವನ್ನು ನಂಬಿ ಬಾಳುತ್ತಿದ್ದರೂ, ಸಂಗ್ಯಾ-ಗಂಗೆ, ಈರ್‍ಯಾರಂಥ ಮುಗ್ಧಜೀವಿಗಳ ಬದುಕು, ತಡೆಯಲಾಗದ ಅದಮ್ಯ ಪ್ರವೃತ್ತಿಯ ಸಹಜ ಒತ್ತಡಕ್ಕೆ ಸಿಕ್ಕು ಹೇಗೆ ದಾರುಣವಾಗುತ್ತದೆಂದು ಚಿತ್ರಿಸುವಲ್ಲಿ, ನಾಟಕಕಲೆಯ ದೃಷ್ಟಿಯಿಂದ ಮಹತ್ವದ್ದಾಗಿ ಕಾಣಿಸುತ್ತದೆ. ಈ ನಾಟಕದಲ್ಲಿ ಬರುವ ದುರಂತ ವಿನ್ಯಾಸ ರುದ್ರನಾಟಕಗಳಷ್ಟು ಅದ್ಭುತವಲ್ಲದಿದ್ದರೂ ಒಂದು ಬಗೆಯ ಭಯದ ವಾತಾವರಣವನ್ನು ಸೃಷ್ಟಿಸುವಲ್ಲಿ ಯಶಸ್ವಿಯಾಗುತ್ತದೆ. ನಾಟಕವನು ಬರೆದ ನಾಟಕಕಾರ ಈ ಬಗೆಯ ಕಲಾಪ್ರಜ್ಞೆಯಿಂದ ನಾಟಕ ರಚನೆಗೆ ತೊಡಗಿದನೋ ಹೇಗೆಂದು ಹೇಳುವುದು ಕಷ್ಟ. ಆದರೆ ಅವನು ಬದುಕಿದ ಸಮಾಜದಲ್ಲಿ ಈ ಘಟನೆ ಅದೇ ಆಗ ನಡೆದು, ಭಾವನೆಗಳು ಇನ್ನೂ ಜನತೆಯಲ್ಲಿ ಜೀವಂತವಾಗಿದ್ದಾಗಲೇ ಅತಿ ಜಾನಪದ ಸಹಜ ಶೈಲಿಯಲ್ಲಿ ನಾಟಕವನ್ನು ಸೃಷ್ಟಿಮಾಡಿದ್ದಾನೆ. ಮುಖ್ಯವಾಗಿ ನಾಟಕ ಪ್ರಸ್ತುತವಾಗುವುದು, ಅದರ ಬದುಕಿಗೆ ಹತ್ತಿರವಾದ ವಸ್ತುವಿನಿಂದ, ಅದು ಭಾಷೆಯಲ್ಲಿ ಮೈದೋರಿದ ನೈಜತೆಯಿಂದ' ಎಂದು ಪ್ರಭುಸ್ವಾಮಿಮಠ ಅವರು ಹೇಳುವ ಮಾತುಗಳು ಅಕ್ಷರಶಃ ನಿಜ."[೧೮]

ಪತ್ತಾರ ಮಾಸ್ತರನ ನಾಟಕದ ಹಸ್ತಪ್ರತಿಗಳ ಶೋಧಕಾರ್ಯ ಮಾಡಿದ ಚಂದ್ರಶೇಖರ ಕಂಬಾರ ಅವರು ಈ ನಾಟಕವನ್ನು ಕೀರ್ತಿನಾಥ ಕುರ್ತಕೋಟಿ ಅವರೊಂದಿಗೆ ಕೂಡಿ ಸಂಪಾದಿಸಿ ಪ್ರಕಟಿಸಿದರು. ಎಸ್. ಎಸ್. ಅಂಗಡಿ ಅವರು ಈ ಕುರಿತು ಹೀಗೆ ವಿವರಿಸಿದ್ದಾರೆ: "ಕನ್ನಡ ಸಾಹಿತ್ಯದ ಅಮೂಲ್ಯ ಬಯಲಾಟ 'ಸಂಗ್ಯಾ ಬಾಳ್ಯಾ' ಹಸ್ತಪ್ರತಿಗಳು ಕಂಬಾರರ ಕೈಗೆ ದೊರಕಿದ್ದು ಒಂದು ಅಪೂರ್ವ ಯೋಗಾಯೋಗ. ಇದರ ಸಂಪಾದನೆಗೆ ಅವರು ಬೆಳಗಾವಿ ಜಿಲ್ಲೆಯ ಬಯಲಾಟದ ನೆಲೆಗಳಾದ ಅವರಾದಿ, ಶಿವಾಪುರ, ಕಾದ್ರೊಳ್ಳಿ, ಹಣ್ಣಿಕೇರಿ ಮುಂತಾದ ಪ್ರದೇಶಗಳನ್ನು ಹಲವು ಸಾರಿಸುತ್ತಾಡಿ, ಕ್ಷೇತ್ರಕಾರ್ಯ ಕೈಗೊಂಡು ಹಸ್ತಪ್ರತಿಗಳನ್ನು ಸಂಗ್ರಹಿಸಿ (ಪಠ್ಯ ಮತ್ತು ಪ್ರದರ್ಶನಗಳನ್ನು ಗಮನಿಸಿ) ಅವುಗಳಲ್ಲಿ ಕಥೆಯ ದೃಷ್ಟಿಯಿಂದ ಪೂರ್ಣವಾದ, ಭಾಷೆಯ

ದೃಷ್ಟಿಯಿಂದ ಶುದ್ಧವಾದ ಹಸ್ತಪ್ರತಿಯನ್ನು ಮೂಲವಾಗಿಟ್ಟುಕೊಂಡು 'ಸಂಗ್ಯಾ ಬಾಳ್ಯಾ' (೧೯೬೬) ಸಂಪಾದಿಸಿದರು. ವಿದ್ವತ್‌ಲೋಕದಲ್ಲಿ ಸಂಗ್ಯಾಬಾಳ್ಯಾ ಎಂದರೆ ಕಂಬಾರರು, ಕಂಬಾರರು ಎಂದರೆ ಸಂಗ್ಯಾಬಾಳ್ಯಾ ಎನ್ನುವಷ್ಟರ ಮಟ್ಟಿಗೆ ಅವು ಪರ್ಯಾಯವಾಗಿವೆ. ಸಂಗ್ಯಾಬಾಳ್ಯಾ ಬೆಳಗಾವಿ ಪರಿಸರದ ಆಡುನುಡಿಯ ಮೂಲಕ ಸಾಗುವುದರಿಂದ ಸಹೃದಯ ವಾಚಕರಿಗೆ ಸುಲಭವಾಗಿ ಅರ್ಥವಾಗಬೇಕೆಂದು ಪ್ರತಿಯೊಂದು ದೃಶ್ಯದ ತಿರುಳನ್ನು ಶಿಷ್ಟಕನ್ನಡದಲ್ಲಿ ಪಾಠದ ಎಡಬದಿಯಲ್ಲಿ ಕೊಟ್ಟಿದ್ದಾರೆ. ಬಹುಶಃ ಕನ್ನಡದಲ್ಲಿ ಮಾರ್ಗಸಾಹಿತ್ಯದಲ್ಲಿ ಡಿ.ಎಲ್.ಎನ್. ಅವರು 'ವಡ್ಡಾರಾಧನೆ'ಗೆ; ಜನಪದ ಸಾಹಿತ್ಯದಲ್ಲಿ ಕಂಬಾರರು 'ಸಂಗ್ಯಾಬಾಳ್ಯಾ'ಗೆ ಶ್ರಮಿಸಿರುವ ಉದಾಹರಣೆ ಮತ್ತೊಂದು ದೊರಕಲಾರವು. ವಡ್ಡಾರಾಧನೆ ಮತ್ತು ಸಂಗ್ಯಾಬಾಳ್ಯಾ ಆದರ್ಶ ಗ್ರಂಥಸಂಪಾದನೆಗೆ (ಮಾರ್ಗ ಮತ್ತು ದೇಶಿ) ಕನ್ನಡದ ಉದಾಹರಣೆಗಳಾಗಿವೆ."[೧೯]

ಸಮಾಜದಲ್ಲಿ ಕುಂದು ಕೊರತೆಯನ್ನು ಎತ್ತಿತೋರಿಸಿ ನೈತಿಕ ವಾತಾವರಣವನ್ನು ನಿರ್ಮಿಸುವುದೇ ಕವಿಯ ಉದ್ದೇಶವಾಗಿದೆ. ಈ ನಾಟಕದ ಹಿನ್ನೆಲೆಯಲ್ಲಿ ಸಾಮಾನ್ಯ ಜೀವನದ ನೈತಿಕಪ್ರಜ್ಞೆ ಕಣ್ಣುಕೋರೈಸುವಂತಿದೆ. ಇದು ಸಂಗ್ಯಾ ಬಾಳ್ಯಾ ರೂಪದಲ್ಲಿ ವ್ಯಕ್ತವಾದ ಉತ್ಕೃಷ್ಟವಾದ ಕಲೆಗಾರಿಕೆಗೆ ಸಾಕ್ಷಿಯಾಗಿದೆ.

ಬೆಳಗಾವಿ ಪ್ರದೇಶದಲ್ಲಿ ಹೆಚ್ಚು ಪ್ರಚಾರದಲ್ಲಿರುವ ಮತ್ತು ಜನಪ್ರಿಯವಾಗಿರುವ ಸಣ್ಣಾಟ 'ಸಂಗ್ಯಾಬಾಳ್ಯಾ'. ಇದು ಪತ್ತಾರ ಮಾಸ್ತರನ ಕೃತಿ. ಈ ಪತ್ತಾರ ಮಾಸ್ತರನ ಸ್ವಾರ್ಥ, ಹತಾಶೆ ಮತ್ತು ಸೇಡು ತೀರಿಸಿಕೊಳ್ಳುವ ಹುನ್ನಾರದಿಂದ ರಚನೆಯಾದುದು. ಇದರಲ್ಲಿಯ ಗಂಗಿ ಒಳ್ಳೆಯ ಸ್ವಭಾವದ ಮನೆತನಸ್ಥ ಹೆಣ್ಣುಮಗಳು. ಅವಳ ಮೇಲಿನ ಹಾದರದ ಕತೆ ಆರೋಪಿತವಾದುದು. ಖರೇ ಹಕೀಕತ್ತು ಬೇರೇನೆ ಇದೆ ಎಂಬುದು ಕಲಬುರ್ಗಿಯವರ ಶೋಧ. ಅದಕ್ಕೆ ಆಧಾರವಾಗಿ ಒಬ್ಬ ಹಿರಿಯ ವ್ಯಕ್ತಿಯ ಹೇಳಿಕೆಯನ್ನು ಉಲ್ಲೇಖಿಸುತ್ತಾರೆ. ಗಂಗಿ ಬಂಗಾರದಂಗಡಿಗೆ ಹೋದಾಗ ಪತ್ತಾರ ಮಾಸ್ತರನ ಕಣ್ಣು ಆಕೆಯ ಮೇಲೆ ಬೀಳುತ್ತದೆ. ಚೆಲುವೆಯಾದ ಅವಳನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಅವಳು ನಿರಾಕರಿಸುತ್ತಾಳೆ. ಅದರಿಂದ ಅವಮಾನಿತನಾದ ಪತ್ತಾರ ಮಾಸ್ತರ, ಗಂಗಿ ಶೀಲಗೆಟ್ಟವಳೆಂದು ಕತೆಕಟ್ಟಿ, ಒಂದಿಷ್ಟು ಓದು ಬರಹ ಬಲ್ಲವನಾದ್ದರಿಂದ ಸಣ್ಣಾಟ ಬರೆದು ಆಡಿಸುತ್ತಾನೆ. ಗಂಗಿಯ ಸುಂದರ ಸಂಸಾರ ಹಾಳುಮಾಡುತ್ತಾನೆ. ಇದು ನಿಜವಾದ ಕಥೆ. ಇದನ್ನು ತೋರಿಸುವುದಕ್ಕಾಗಿಯೇ ಕಲಬುರ್ಗಿಯವರು 'ಖರೆ ಖರೆ ಸಂಗ್ಯಾಬಾಳ್ಯಾ' ಬರೆದರು. ಪತ್ತಾರ ಮಾಸ್ತರನ ಸಣ್ಣಾಟದ ಕತೆ ಸುಳ್ಳೆಂದು ಹೇಳಿದರು. ಈ ಸಣ್ಣಾಟದ ಮೂಲಕ ಒಂದು ಸಂದೇಶ ಕೊಡುವ ಪ್ರಯತ್ನ ಕೂಡ ಕಲಬುರ್ಗಿಯವರ ರಚನೆಯಲ್ಲಿದೆ.

> "ಮಾನವಂತರು ಮಾರಿ ಎತ್ತಧಾಂಗ ಬರಿಯಬ್ಯಾಡ್ರಿ ತೆಗಳಿ
> ಮಾನಗೇಡಿಗಳು ಮೆರೆಯುಹಾಂಗ ಬರಿಯಬ್ಯಾಡ್ರಿ ಹೊಗಳಿ
> ಕೆಡಿಸಬ್ಯಾಡರಿ ಕಾಗದಗರತಿಯ ಮಿಂಡ ಮಸಿಯ ಕೆಳಗ
> ತೊಳೆಯಬ್ಯಾಡರಿ ವಿಷದ ಲೇಖನಿ ಕುಡಿವ ನೀರಿನೊಳಗ."[೨೦]

ಬರವಣಿಗೆಯನ್ನು ವೈಯಕ್ತಿಕ ದ್ವೇಷ ಸಾಧಿಸಲು, ಇನ್ನೊಬ್ಬರ ತೇಜೋವಧೆ ಮಾಡಲು ಬಳಸಬಾರದೆಂಬ ಎಚ್ಚರ ಈ ಹಾಡಿನಲ್ಲಿದೆ. ಇದು ಸಣ್ಣಾಟದ ಮುಖ್ಯ ಹಾಡು (ಟೈಟಲ್ ಸಾಂಗ್). ಕಲಬುರ್ಗಿಯವರ ಈ ಸಣ್ಣಾಟ ಬಳ್ಳಾರಿಯ ಲೋಹಿಯಾ ಪ್ರಕಾಶನದಿಂದ ಪ್ರಕಟವಾಯಿತು. ಅನೇಕ ಕಡೆಗಳಲ್ಲಿ ಶ್ರೀ ಬಸವಲಿಂಗಯ್ಯ ಹಿರೇಮಠ ಅವರ ತಂಡದಿಂದ ಪ್ರಯೋಗವಾಯಿತು. ಕಲಬುರ್ಗಿಯವರ ಈ ರಚನೆಯ ಪರ ಮತ್ತು ವಿರೋಧದ ಚರ್ಚೆಗಳು ನಡೆದವು. ಕಲಬುರ್ಗಿಯವರ ಸಣ್ಣಾಟದ ತಂತ್ರ, ಲಾವಣಿಗತ್ತಿನ ಹಾಡು ಅನುಸರಿಸಿ, ಇದಕ್ಕೆ ಸಣ್ಣಾಟವೆಂದೇ ಕರೆದಿರುವುದು ಗಮನಾರ್ಹ ಅಂಶ.

ಬೆಳಗಾವಿ ಜಿಲ್ಲೆಯ ವೃತ್ತಿರಂಗಭೂಮಿಗೆ ಒಂದು ಘನತೆ ಗೌರವವನ್ನು ತಂದುಕೊಟ್ಟ ಪ್ರಾತಃಸ್ಮರಣೀಯ ನಾಟಕಕಾರರಲ್ಲಿ ಚಿಕ್ಕೋಡಿ ಶಿವಲಿಂಗ ಸ್ವಾಮಿಗಳ ಹೆಸರು ಅಜರಾಮರವಾದುದು. ಅವರು ನಾಟಕಕಾರಾಗಿ, ನಾಟಕ ಕಂಪನಿ ಮಾಲೀಕರಾಗಿ, ನಾಟಕ ನಿರ್ದೇಶಕರಾಗಿ ನಾಡು ನುಡಿಗೆ ಸಲ್ಲಿಸಿದಸೇವೆ ಅವಿಸ್ಮರಣೀಯವಾದುದು. ಅವರು ಬರೆದ 'ಕಿತ್ತೂರು ರಾಣಿ ಚೆನ್ನಮ್ಮ', 'ರಾಣಿ ರುದ್ರಮ್ಮ' ನಾಟಕಗಳು ಬ್ರಿಟಿಷ್ ಸರಕಾರದ ನಿದ್ದೆಗೆಡಿಸಿದ್ದವು. ಶಿವಲಿಂಗ ಸ್ವಾಮಿಗಳ ಮೊದಲ ನಾಟಕವಿದು. ೧೯೨೮ರಲ್ಲಿ ಕಿತ್ತೂರಿನಲ್ಲಿ ರಾಣಿಚೆನ್ನಮ್ಮನ ಕುರಿತು ಒಂದು ನಾಟಕ ಬರೆಯಬೇಕೆಂದು ಶಿವಲಿಂಗಸ್ವಾಮಿಗಳು ನಿರ್ಧರಿಸಿದರು. ವೀರರಸ ಪ್ರಧಾನವಾದ ಈ ನಾಟಕದಲ್ಲಿ ರಾಷ್ಟ್ರೀಯಪ್ರಜ್ಞೆ ಮತ್ತು ದೇಶಭಕ್ತಿಯನ್ನು ಉದ್ದೀಪನಗೊಳಿಸುವಂಥ ಮೌಲ್ಯಗಳನ್ನು ತುಂಬಿದರು. ನಾಟಕದ ಪ್ರತಿಯನ್ನು ಅಬ್ಬಿಗೇರಿ ಬಸನಗೌಡರಿಗೆ ತೋರಿಸಿದರು. ಅಬ್ಬಿಗೇರಿ ಬಸನಗೌಡರು ತಮ್ಮ ಆರು ಜನ ಸಹೋದರರೊಂದಿಗೆ ಕೂಡಿ ೧೯೨೮ರಲ್ಲಿ 'ಕನ್ನಡ ಸಾಹಿತ್ಯ ಸೇವಾ ಸಂಗೀತ ನಾಟಕ ಮಂಡಳಿ' ಸ್ಥಾಪಿಸಿದರು. ಈ ಮಂಡಳಿ ಮೂಲಕ 'ರಾಣಿಚೆನ್ನಮ್ಮ' ನಾಟಕ ಆಡಲು ಪ್ರಾರಂಭಿಸಿದರು. ನಾಟಕ ಅದ್ಭುತ ಜಯಭೇರಿ ಭಾರಿಸಿತು. ಪ್ರೇಕ್ಷಕರು ದೇಶಾಭಿಮಾನದ ಕೆಚ್ಚನ್ನು ಪ್ರದರ್ಶಿಸತೊಡಗಿದರು. ಚನ್ನಮ್ಮನ ಜೀವನಗಾಥೆಯಿಂದ ಅವರು ಪ್ರೇರಣೆ ಪಡೆದು ಸ್ವಯಂಪ್ರೇರಿತರಾಗಿ ಚಳವಳಿಯಲ್ಲಿ ಭಾಗವಹಿಸತೊಡಗಿದರು. ಚೆನ್ನಮ್ಮನ ಪಾತ್ರ ಮಾಡಿದ ನಟಿಯನ್ನು ಪ್ರೇಕ್ಷಕರು ಪ್ರೀತಿಯಿಂದ ಮನೆಗೆ ಕರೆದು ಅಭ್ಯಂಗಸ್ನಾನ ಮಾಡಿಸಿ, ಅವಳಿಗೆ ಹೋಳಿಗೆ ಊಟ ನೀಡಿ, ಉಡಿ ತುಂಬಿ, ಸೀರೆ-ಕುಪ್ಪಸ ನೀಡಿ ಕಳಿಸುವಷ್ಟರ ಮಟ್ಟಿಗೆ ಈ ನಾಟಕದ ಖ್ಯಾತಿ ಬೆಳೆಯಿತು. ಚೆನ್ನಮ್ಮನ ವೀರಾವೇಶದ ಮಾತುಗಳಿಗೆ ಪ್ರೇಕ್ಷಕರು ಹುಚ್ಚೆದ್ದು ಕುಣಿಯುತ್ತಿದ್ದರು. ಅದೇ ಮಲ್ಲಪ್ಪಶೆಟ್ಟಿಯ ಪಾತ್ರ ಬಂದರೆ ಚಪ್ಪಲಿ ಎಸೆಯುತ್ತಿದ್ದರು. ಅಷ್ಟು ತನ್ಮಯತೆಯಿಂದ ನಟರು ಅಭಿನಯಿಸುತ್ತಿದ್ದರು. ಈ ನಾಟಕದಲ್ಲಿ ಬಾಲಕನಾಗಿದ್ದ ಏಣಗಿ ಬಾಳಪ್ಪನವರು ದತ್ತಕಪುತ್ರನ ಪಾತ್ರ ನಿರ್ವಹಿಸುತ್ತಿದ್ದರು. ಅಬ್ಬಿಗೇರಿ ಬಸನಗೌಡರು ಶಿವಲಿಂಗ ಸ್ವಾಮಿಗಳಿಗೆ ಈ ನಾಟಕ ಬರೆದ ಕಾರಣಕ್ಕಾಗಿ ಮೂರುಸಾವಿರ ರೂ. ಗೌರವಧನ ನೀಡಿದರು. ಇಡೀ ನಾಡಿನಲ್ಲಿ ಅಷ್ಟು ದೊಡ್ಡಮೊತ್ತದ ಗೌರವಧನ ಪಡೆದ ಏಕೈಕ ನಾಟಕಕಾರರೆಂಬ ಕೀರ್ತಿ ಶಿವಲಿಂಗ ಸ್ವಾಮಿಗಳದ್ದು. ಈ ನಾಟಕದ ಪರಿಣಾಮಗಳನ್ನು ಕುರಿತು ಬಿ.ಎಸ್.ಗವಿಮಠ ಅವರು ಹೀಗೆ ಹೇಳುತ್ತಾರೆ.

“ರಾಣಿ ಚನ್ನಮ್ಮ ನಾಟಕ ನೋಡಿದ ಪ್ರೇಕ್ಷಕರು ಥೇಟರ್ ಹೊರಗಡೆ ಬಂದು ವಿದೇಶಿ ವಸ್ತ್ರಗಳನ್ನು ಸುಟ್ಟು ಹಾಕಿದರು. ತಮ್ಮ ಊರುಗಳಿಗೆ ಹೋಗುವಾಗ ದಾರಿಯಗುಂಟ ಕಂಡುಬಂದ ಸಿಂದಿಗಿಡಗಳನ್ನು ಕಡಿದು ಹಾಕಿದರು. ಈ ನಾಟಕ ನೋಡಿದ ನಾಗನೂರಿನ ರಾಚನಾಯ್ಕರ ಮನೆತನದ ವೀರಮಹಿಳೆ ನಾಗವ್ವ ಕಲೆಕ್ಟರನನ್ನೇ ಚಪ್ಪಲಿಯಿಂದ ಹೊಡೆದಳೆಂದರೆ ಆ ನಾಟಕದ ಪ್ರಭಾವ ಎಷ್ಟಾಗಿರಬಹುದೆಂದು ನಾವು ಊಹಿಸಬಹುದಾಗಿದೆ. ಈ ನಾಟಕದಿಂದ ಪ್ರಚೋದನೆಗೊಂಡ ಪ್ರೇಕ್ಷಕರು ಮಹಾತ್ಮಾ ಗಾಂಧೀಜಿಯವರ ಅಸಹಕಾರ ಚಳವಳಿಯಲ್ಲಿ ಭಾಗವಹಿಸತೊಡಗಿದರು.”[೨೧]

ಬ್ರಿಟಿಷ್ ಸರ್ಕಾರ ಈ ನಾಟಕವನ್ನು ನಿಷೇಧಿಸಿತು. ಅದರ ಅನುಮತಿಗಗಾಗಿ ಅಬ್ಬಿಗೇರಿ ಬಸನಗೌಡರು ದೆಹಲಿಯವರೆಗೂ ಹೋಗಿ ಬಂದರು. ಆದರೆ ಅದು ಯಶಸ್ವಿಯಾಗಲಿಲ್ಲ. ಕಂಪನಿ ಮೈಸೂರು ಪ್ರಾಂತಕ್ಕೆ ಹೋಯಿತು. ಅಲ್ಲಿಯ ಮಹಾರಾಜರು ನಾಟಕ ನೋಡಿ ಸಂತೋಷಪಟ್ಟರು. ನಂತರ ಬೆಂಗಳೂರಿಗೆ ಬಂದು ಕ್ಯಾಂಪ್ ಮಾಡಿತು. ಆದರೆ ಅಲ್ಲಿಯ ಜನಕ್ಕೆ ಉತ್ತರ ಕರ್ನಾಟಕದ ಭಾಷೆ ತಿಳಿಯದ ಕಾರಣ ಕಂಪನಿ ನಷ್ಟ ಅನುಭವಿಸಿತು.

ನಂತರ ಶಿವಲಿಂಗಸ್ವಾಮಿಗಳು ರಾಣಿ ರುದ್ರಮ್ಮ ನಾಟಕವನ್ನು ಬರೆದರು. ಯರಾಶಿ ಭರಮಪ್ಪನವರು ತಮ್ಮ ವಾಣಿವಿಲಾಸ ನಾಟಕ ಮಂಡಳಿ ಮೂಲಕ ಈ ನಾಟಕವನ್ನು ಪ್ರದರ್ಶಿಸತೊಡಗಿದರು. ಆಗ ಯರಾಶಿಯವರ ಕಂಪನಿಯಲ್ಲಿ ಅನೇಕ ಘಟಾನುಘಟಿ ಕಲಾವಿದರಿದ್ದರು. ಹಂದಿಗನೂರ ಸಿದ್ಧರಾಮಪ್ಪ, ಬಾದಶಾ ಮಾಸ್ತರ, ಬೇವೂರ ಮಡಿವಾಳಸ್ವಾಮಿ, ಮಾನಪ್ಪ ಮಂಕಣಿ, ನಿಂಗಪ್ಪ ಯರಗುಪ್ಪಿ, ಶಂಕರರಾವ್ ಅಥಣಿ ಮೊದಲಾದ ನಟಶ್ರೇಷ್ಠರಿದ್ದರು. ಅಮೀರ್‌ಬಾಯಿ ಕರ್ನಾಟಕಿ, ಗೋಹರಜಾನ್ ಕರ್ನಾಟಕಿ ಇವರು ಸ್ತ್ರೀಪಾತ್ರಗಳನ್ನು ಮಾಡುತ್ತಿದ್ದರು. ಬಸವರಾಜ ಮನಸೂರ, ಮಲ್ಲಿಕಾರ್ಜುನ ಮನಸೂರ ಅವರಂಥ ಶ್ರೇಷ್ಠ ಗಾಯಕರಿದ್ದರು. ದೆಹಲಿಯ ಖ್ಯಾತ ಸಾರಂಗಿ ವಾದಕರೂ, ತಬಲಾ ಸಾಥಿಗಳು ಈ ಕಂಪನಿಯಲ್ಲಿದ್ದರು. ಕಂದಗಲ್ಲ ಹನಮಂತರಾಯರು ಈ ಕಂಪನಿಯಲ್ಲಿ ಮ್ಯಾನೇಜರ್ ಆಗಿದ್ದರು. ಶಿವಲಿಂಗ ಸ್ವಾಮಿಗಳು ಈ ಕಂಪನಿಗೆ ಮೂಲ ಪ್ರೇರಕಶಕ್ತಿಯಾಗಿದ್ದರು.

೧೯೩೧ರಲ್ಲಿ ಶಿವಲಿಂಗ ಸ್ವಾಮಿಗಳು ಮತ್ತೊಂದು ನಾಟಕ ಕಂಪನಿ ಸ್ಥಾಪಿಸಿದರು. ಶಿರಸಿಯಲ್ಲಿ ಜಾತ್ರಾ ಸಮಯದಲ್ಲಿ ಅನೇಕ ಕಂಪನಿಗಳು ಬಿಡಾರ ಹೂಡುತ್ತಿದ್ದವು. ಈ ಸಮಯದಲ್ಲೇ ಶಿವಲಿಂಗ ಸ್ವಾಮಿಗಳು ‘ಮಾರಿಕಾಂಬಾ ಪ್ರಸಾದಿಕ ಮಂಡಳಿ’ ಎಂಬ ಕಂಪನಿಯನ್ನು ಹುಟ್ಟುಹಾಕಿದರು. ಅಲ್ಲಿ ಕೆಲವು ಕಾಲ ‘ವೀರರಾಣಿರುದ್ರಮ್ಮ’ ನಾಟಕವಾಡಿದರು. ನಂತರ ಅಂಕೋಲೆಗೆ ಹೋದರು. ಅಲ್ಲಿ ಕಲೆಕ್ಷನ್ ಸರಿಯಾಗಿ ಆಗಲಿಲ್ಲ. ನಂತರ ಮರಳಿ ಶಿರಸಿಗೆ ಬಂದರು. ಅಲ್ಲಿ ವಾರಕ್ಕೊಮ್ಮೆ ನಾಟಕವಾಡತೊಡಗಿದರು. ಇದರಿಂದ ಕಂಪನಿ ನಷ್ಟವನ್ನು ಅನುಭವಿಸುವಂತಾಯಿತು. ರುದ್ರಮ್ಮನ ಪಾತ್ರ ಮಾಡುತ್ತಿದ್ದ ಭಾಗೀರಥಿ ಜಗಳವಾಡಿ ಕಂಪನಿ ಬಿಟ್ಟಳು. ಆಗ ಏಣಗಿ ಬಾಳಪ್ಪನವರೇ ರುದ್ರಮ್ಮನ ಪಾತ್ರ ಮಾಡಿ ಸೈ ಎನಿಸಿಕೊಂಡರು. ಕಲಾವಿದರಿಗೆ ತುಂಬ ಕಷ್ಟದ ದಿನಗಳು

ಎದುರಾದವು. ಮಾರಿಕಾಂಬಾ ದೇವಸ್ಥಾನದಲ್ಲಿ ಸಿಗುವ ಪ್ರಸಾದವನ್ನೇ ಸ್ವೀಕರಿಸಿ ಬದುಕು ಸಾಗಿಸಬೇಕಾದ ಪ್ರಸಂಗ ಅವರಿಗೆ ಎದುರಾಯಿತು.

ಶಿವಲಿಂಗ ಸ್ವಾಮಿಗಳು ಅದ್ಭುತ ನಾಟಕಕಾರರಾಗಿದ್ದರು. ಅವರು ಒಟ್ಟು ೧೯ ನಾಟಕಗಳನ್ನು ರಚಿಸಿದರು. ಸ್ವಾತಂತ್ರ್ಯ ಹೋರಾಟ ಮತ್ತು ರಾಷ್ಟ್ರೀಯ ಪ್ರಜ್ಞೆಗಳನ್ನು ಜಾಗೃತಗೊಳಿಸುವ ಏಳು ಐತಿಹಾಸಿಕ ನಾಟಕಗಳನ್ನು ಅವರು ಬರೆದರು.

೧. ವೀರರಾಣಿ ಕಿತ್ತೂರು ಚೆನ್ನಮ್ಮ

೨. ವೀರರಾಣಿ ಕಿತ್ತೂರು ರುದ್ರಮ್ಮ

೩. ಕೆಳದಿ ಚೆನ್ನಮ್ಮಾಜಿ

೪. ಒಂದೇ ಖಡ್ಗ

೫. ರಾಷ್ಟ್ರಧ್ವಜ

೬. ಅಸ್ಪೃಶ್ಯತಾ ನಿವಾರಣೆ

೭. ಕಟ್ಟಿಚೆನ್ನ

ಶಿವಲಿಂಗಸ್ವಾಮಿಗಳು ಸಾಮಾಜಿಕ ಜಾಗೃತಿಗಾಗಿಯೂ ಕೆಲವು ನಾಟಕಗಳನ್ನು ಬರೆದಿದ್ದಾರೆ.

೧. ಗುರುವಿರಕ್ತರ ಪ್ರಪಂಚ

೨. ಪವಿತ್ರ ಖಾದಿ

೩. ಸಿರಿಪ್ರಭಾವ

ಇವುಗಳಲ್ಲಿ ಗುರುವಿರಕ್ತರ ಪ್ರಪಂಚ ನಾಟಕ ಸಮಾಜದಲ್ಲಿ ಸಂಚಲನವನ್ನುಂಟು ಮಾಡಿತು. ಶಿಕ್ಷಣದ ಗಂಧ ಗಾಳಿ ಇಲ್ಲದ ಆ ಕಾಲದಲ್ಲಿ ಸ್ವಾಮಿಗಳೆಂದರೆ ಭಕ್ತಿಭಾವದಿಂದ ಮೂಢನಂಬಿಕೆಯಿಂದ ನಡೆದುಕೊಳ್ಳುತ್ತಿದ್ದ ಭಕ್ತ ಸಮುದಾಯಕ್ಕೆ ಸ್ವಾಮಿಗಳು ಮಾಡುವ ಅನಾಚಾರಗಳನ್ನು ಢೋಂಗಿತನವನ್ನು ಬಯಲಿಗೆಳೆದು ತಿಳಿಸುವ ಆಶಯ ಶಿವಲಿಂಗಸ್ವಾಮಿಗಳದ್ದಾಗಿತ್ತು. ಈ ನಾಟಕದ ವಿಷಯವಾಗಿ ಬಿ.ಎಸ್. ಗವಿಮಠ ಅವರು ಹೀಗೆ ಉಲ್ಲೇಖಿಸಿದ್ದಾರೆ:

"ಮಠಾಧೀಶರ ಲೋಪದೋಷಗಳನ್ನು ನಾಟಕದಲ್ಲಿ ತೋರಿಸಬೇಕೆಂದು ಬಯಸಿದ ಶಿವಲಿಂಗಸ್ವಾಮಿಗಳು ಏಣಗಿ ಬಾಳಪ್ಪನವರಿಗೆ ಈ ನಾಟಕವನ್ನು ಆಡಲೇಬೇಕೆಂದು ಆಗ್ರಹಿಸಿದರು. ನಾಟಕವಾಡದೆ ಹೋದರೆ ಶಾಪ ನೀಡುವುದಾಗಿ ಹೆದರಿಸಿದರು. ಆದರೆ ಗೋಕಾಕದ ಸುತ್ತಲೂ ಇರುವ ಹತ್ತಾರು ಮಠಗಳ ಸದ್ಭಕ್ತರು ಇದನ್ನು ವಿರೋಧಿಸಿದರು. ವಿರೋಧಗಳ ನಡುವೆಯೂ ಗುರುಗಳ ಸಲುವಾಗಿ 'ಗುರುವಿರಕ್ತರ ಪ್ರಪಂಚ' ನಾಟಕ ರಂಗಕಂಡಿತು. ಮುಂದೆ ೧೯೩೮ರಲ್ಲಿ ಅಖಿಲ ಭಾರತ ವೀರಶೈವ ಮಹಾಸಭೆ ೧೩ನೆಯ ಮಹಾಧಿವೇಶನ ಹುಬ್ಬಳ್ಳಿಯಲ್ಲಿ ಜರುಗಲಿತ್ತು.

ಶಿ.ಶಿ.ಬಸವನಾಳರು ಅಧ್ಯಕ್ಷತೆ ವಹಿಸಲಿದ್ದರು. ಈ ನಾಟಕ ಪ್ರದರ್ಶಿಸಬಾರದೆಂದು ವೀರಶೈವ-ಲಿಂಗಾಯತರು ಪ್ರತಿಭಟನೆ ಮಾಡಿದರು. ಕಂಪನಿಯವರಿಗೆ ಜೀವ ಬೆದರಿಕೆ ಹಾಕಿದರು. ಆದರೂ ಶಿವಲಿಂಗಸ್ವಾಮಿಗಳು ಅಂಜದೆ ಅಳುಕದೆ ನಾಟಕವಾಡಿದರು. ಆ ನಾಟಕ ನೋಡಲು ಪ್ರೇಕ್ಷಕರೇ ಬಾರದಂತೆ ತಡೆಯೊಡ್ಡಲಾಯಿತು. ಆದರೂ ಈ ನಾಟಕವನ್ನು ಪ್ರದರ್ಶಿಸಿಯೇ ಬಿಟ್ಟರು. ಇದೂ ಒಂದು ದಾಖಲೆಯಾಯಿತು. ಆಗಿನ ಕಾಲ ಶಿಕ್ಷಣವಿಲ್ಲದ ಅಂಧಶ್ರದ್ಧೆ, ಮೂಢನಂಬಿಕೆಗಳು ಆವರಿಸಿದ್ದ ಸಮಾಜ. ಎಲ್ಲವನ್ನೂ ಸಾರಾಸಾರ ವಿಚಾರ ಮಾಡದೆ ಭಕ್ತಿಯಿಂದ ಶಿರಸಾಪಾಲಿಸುತ್ತಿದ್ದ ಮುಗ್ಧಜನರಿದ್ದ ಕಾಲ. ಅಂಥ ದಿನಮಾನಗಳಲ್ಲಿ ಮಠಾಧೀಶರನ್ನು ಎದುರು ಹಾಕಿಕೊಂಡು ಇಂಥ ನಾಟಕವನ್ನು ಹುಬ್ಬಳ್ಳಿಯ ಡೀಕಪ್ಪನವರ ಮಲ್ಲಿಕಾರ್ಜುನ ನಾಟ್ಯಸಂಘದಲ್ಲಿ ಪ್ರದರ್ಶಿಸಿದ್ದು ಶಿವಲಿಂಗಶಾಸ್ತ್ರಿಗಳ ವೈಚಾರಿಕತೆ ಹಾಗೂ ಎದೆಗಾರಿಕೆಗಳಿಗೆ ಸಾಕ್ಷಿಯೆನಿಸುತ್ತದೆ."[೨೨]

ಶಿವಲಿಂಗಸ್ವಾಮಿಗಳು 'ದಕ್ಷಯಜ್ಞ' ಮತ್ತು 'ಮನೋವಿಜಯ' ಎಂಬ ಎರಡು ಪೌರಾಣಿಕ ನಾಟಕಗಳನ್ನು; 'ಪುರಂದರದಾಸರು' ಮತ್ತು 'ಮೋಳಿಗೆಯ ಮಾರಯ್ಯ' ಎಂಬ ಎರಡು ಭಕ್ತಿಪ್ರಧಾನ ನಾಟಕಗಳನ್ನು, 'ಗಜಾನನ ಜನ್ಮ' ಮತ್ತು 'ವಿಷ್ಣು ಸುದರ್ಶನ ಲಾಭ' ಎಂಬ ಎರಡು ಮಕ್ಕಳ ನಾಟಕಗಳನ್ನು ಅವರು ರಚಿಸಿದ್ದರು. ಶಿವಲಿಂಗಸ್ವಾಮಿಗಳಿಗೆ ಇಂಗ್ಲಿಷ್ ಮತ್ತು ಮರಾಠಿ ಭಾಷೆಯ ಮೇಲೆ ಪ್ರಭುತ್ವವಿತ್ತು. ಮರಾಠಿ ಭಾಷೆಯಿಂದ 'ಆ ಜನ್ಮಕುಮಾರಿ' 'ಚಂದ್ರಗ್ರಹಣ' ಎಂಬ ನಾಟಕಗಳನ್ನು ಅನುವಾದಿಸಿದ್ದರು. ಇಂಗ್ಲಿಷ್ ಭಾಷೆಯಿಂದ 'ಹ್ಯಾಮ್ಲೆಟ್' ನಾಟಕವನ್ನೂ ಅವರು ಅನುವಾದಿಸಿದ್ದರು. ಈ ಎಲ್ಲ ನಾಟಕಗಳಲ್ಲಿ ಪ್ರಕಟವಾಗಿದ್ದು ಕೇವಲ ಮೂರು ನಾಟಕಗಳು. ಉಳಿದ ನಾಟಕಗಳ ಹಸ್ತಪ್ರತಿಗಳು ಕಳೆದು ಹೋಗಿರುವುದು ನಾಟಕ ಸಾಹಿತ್ಯಲೋಕದ ದುರಂತವೆಂದೇ ಹೇಳಬೇಕು.

ಕಿತ್ತೂರು ತಾಲೂಕಿನ ಗಂದಿಗವಾಡ ಗ್ರಾಮದ ಬಾಳಂಭಟ್ಟ ೨೦ಕ್ಕೂ ಹೆಚ್ಚು ಬಯಲಾಟಗಳನ್ನು ರಚಿಸಿದ್ದಾನೆ. ಪ್ರಾರಂಭದಲ್ಲಿ ಪ್ರಾರ್ಥನಾ ಪದ್ಯ, ಭಕ್ತಿಗೀತೆ, ಕೋಲಾಟದ ಪದ, ಒಡಪು ಮುಂತಾದ ಬಿಡಿಪದ್ಯಗಳನ್ನು ಛಂದೋಬದ್ಧವಾಗಿ ಬರೆಯುತ್ತಿದ್ದ ಬಾಳಂಭಟ್ಟರು ಜನರ ಪ್ರೀತಿಯ ಒತ್ತಾಸೆಗೆ ಕಟ್ಟುಬಿದ್ದು ಬಯಲಾಟಗಳನ್ನು ಬರೆಯತೊಡಗಿದರು. ಅಜ್ಞಾನ, ಅಂಧಶ್ರದ್ಧೆ, ಅನಾಚಾರಗಳಿಂದ ದಾರಿತಪ್ಪಿದ ಜನಾಂಗವನ್ನು ಸನ್ಮಾರ್ಗಕ್ಕೆ ತರಲು ನಾಟಕ ಒಂದು ಪ್ರಮುಖ ಮಾಧ್ಯಮವೆಂದು ಅರಿತುಕೊಂಡರು. ನಾಟಕದ ಪಾತ್ರಗಳು, ಮಾತುಗಳು, ಸನ್ನಿವೇಶಗಳು ಪ್ರೇಕ್ಷಕರ ಅಂತರಂಗಕ್ಕೆ ಹತ್ತಿರವಾಗಿ ವಿಶೇಷ ಅನುಭವಗಳನ್ನು ನೀಡುತ್ತವೆ. ನಾಟಕಗಳನ್ನು ನೋಡುವುದರಿಂದ ವ್ಯಕ್ತಿ ಪರಿವರ್ತನೆ ಸುಲಭಸಾಧ್ಯ ಮತ್ತು ಸಾಮಾಜಿಕ ಜೀವನದಲ್ಲಿಯೂ ಬದಲಾವಣೆಗಳನ್ನು ತರಬಹುದೆಂದು ಬಾಳಂಭಟ್ಟರಿಗೆ ಪ್ರತ್ಯಕ್ಷ ಅನುಭವಗಳಿಂದ ವೇದ್ಯವಾಯಿತು. ದೃಶ್ಯಮಾಧ್ಯಮ ಶ್ರೋತೃ ಮಾಧ್ಯಮಕ್ಕಿಂತ ಹೆಚ್ಚು ಪ್ರಭಾವಶಾಲಿ ಎಂದರಿತು ಬಯಲಾಟಗಳ ರಚನೆಗೆ ಕೈ ಹಾಕಿದರು.

೧. ತಾಮ್ರಧ್ವಜ ೨. ಲವ ಕುಶರ ಕಾಳಗ

೩. ಐರಾವಣ–ಮೈರಾವಣ ೪. ಲಂಕಾದಹನ

೫. ರಾವಣವಧೆ ೬. ವೀರ ಅಭಿಮನ್ಯು

೭. ಕರ್ಣಾರ್ಜುನರ ಕಾಳಗ ೮. ವಿರಾಟಪರ್ವ

೯. ಮಯೂರಧ್ವಜ ೧೦. ವಿಜಯನಗರ ಸಾಮ್ರಾಜ್ಯ

೧೧. ಸತ್ಯ ಹರಿಶ್ಚಂದ್ರ ೧೨. ಭಕ್ತ ಕಬೀರ

೧೩. ಸಿರಿಯಾಳ ಸತ್ವಪರೀಕ್ಷಾ ೧೪. ಮಾಧವ ಕರುಣಾ ವಿಲಾಸ

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬಾಳಂಭಟ್ಟರ ಇಷ್ಟು ನಾಟಕಗಳ ವಿವರ ದೊರೆಯಿತು. ಪೇಪರ್ ಖರೀದಿಗೂ ಶಕ್ತಿ ಇಲ್ಲದ ಕನಿಷ್ಠ ಕಾಲದಲ್ಲಿ ಕೈಗೆಸಿಕ್ಕ ಕಾಗದದ ಮೇಲೆ ಕವಿತೆ, ನಾಟಕ, ಲಾವಣಿ ಮತ್ತು ಒಡಪುಗಳನ್ನು ಬರೆದ ಬಾಳಂಭಟ್ಟರ ಸಮಗ್ರ ಸಾಹಿತ್ಯ ಕೇವಲ ಕೈ ಬರಹದಲ್ಲಿಯೇ ಉಳಿದುಕೊಂಡದ್ದು ವಿಷಾದದ ಸಂಗತಿಯಾಗಿದೆ. ಸುತ್ತಲಿನ ಅನೇಕ ಹಳ್ಳಿಗಳನ್ನು, ಊರಿನ ಒಂದೊಂದು ಓಣಿಗಳನ್ನು ಸೇರಿಕೊಂಡ ಇವರ ಬಯಲಾಟಗಳು ಇತರರಿಗೆ ಲಭ್ಯವಾಗುತ್ತಿಲ್ಲ. ಇದ್ದ ಮೂಲ ಪ್ರತಿಯ ಪ್ರತಿ ಉಪಪ್ರತಿಗಳು ಮೂಲದಿಂದ ದೂರ ಸರಿದು ಸ್ವತಂತ್ರರೂಪ ಪಡೆದುಕೊಂಡಿವೆ. ಎಷ್ಟೋ ಜನ ಇವರ ಬಯಲಾಟಗಳನ್ನು ತಿರುಚಿ ಬರೆದು ತಮ್ಮವನ್ನಾಗಿ ಮಾಡಿಕೊಂಡಿದ್ದಾರೆ. ಅವುಗಳನ್ನು ಯಾರಿಗೂ ತೋರಿಸಲು ಸಿದ್ಧರಿಲ್ಲ. ಇನ್ನು ಕೊಡುವುದಂತೂ ದೂರೇ ಉಳಿಯಿತು. ಇವರ ಮಕ್ಕಳೆಲ್ಲ ಉದ್ಯೋಗಗಳನ್ನರಿಸಿ ಬೇರೆ ಬೇರೆ ಊರುಗಳಿಗೆ ಹೋಗಿದ್ದರಿಂದ ಜನ ಸಂಪರ್ಕ ಉಳಿಯಲಿಲ್ಲ. ಈಗ ಅವರೆಲ್ಲ ತೀರಿಕೊಂಡಿದ್ದಾರೆ. ಮೊಮ್ಮಕ್ಕಳಿಗೆ ಬಾಳಂಭಟ್ಟರ ಸಾಹಿತ್ಯದ ಪರಿಚಯವಿಲ್ಲ, ಆಸಕ್ತಿಯೂ ಇಲ್ಲ. ಗಂದಿಗವಾಡದಲ್ಲಿದ್ದ ಹೊಲ ಮನೆಗಳನ್ನು ಮಾರಿಕೊಂಡು ಬೇರೆ ಊರುಗಳನ್ನು ಸೇರಿಕೊಂಡಿದ್ದಾರೆ. ಬಾಳಂಭಟ್ಟರ ಪರಿಚಯವಿದ್ದವರು ಬೇರೆ ಬೇರೆ ಊರುಗಳಲ್ಲಿದ್ದಾರೆ. ಇಂದು ಬಾಳಂಭಟ್ಟರ ಬಯಲಾಟಗಳನ್ನು ಆಡುವವರು ಕಡಿಮೆ, ಅವರಿಗೆ ಪ್ರೋತ್ಸಾಹವಿಲ್ಲ. ಜಾನಪದ ಬಯಲಾಟ ಅಕಾಡೆಮಿಗಳು, ಸಾಹಿತ್ಯ ಪರಿಷತ್ತು, ಸಾಹಿತ್ಯ ಅಕಾಡೆಮಿಯಂಥ ಸಂಸ್ಥೆಗಳು ಇತ್ತ ಲಕ್ಷ್ಯವಹಿಸಿ ಬಯಲಾಟಗಳನ್ನು ಸಂಗ್ರಹಿಸಿ ಪ್ರಕಟಿಸಬೇಕಾಗಿದೆ. ಇಲ್ಲದೇ ಹೋದರೆ ಇವರ ಬಯಲಾಟಗಳು ಬಯಲಿನಲ್ಲಿ ಲೀನವಾಗುವುದರಲ್ಲಿ ಸಂದೇಹವಿಲ್ಲ.

ಹಣ್ಣಿಕೇರಿ ಶಿವಾನಂದ ಕವಿ ೩೦ಕ್ಕೂ ಮಿಕ್ಕಿ ಸಣ್ಣಾಟಗಳನ್ನು ಬರೆದು ಜನಪ್ರಿಯನಾಗಿದ್ದಾನೆ. ಹಾಗೆಯೇ ಕಾದ್ರೊಳ್ಳಿ ನೀಲಕಂಠ ಕವಿ ಕೂಡ ೧೮ಕ್ಕೂ ಹೆಚ್ಚು ಬಯಲಾಟಗಳನ್ನು ಬರೆದಿದ್ದಾನೆ. ಇವರ ಯಾವ ನಾಟಕಗಳು ಪ್ರಕಟವಾಗಿಲ್ಲ. ಶಿವಾನಂದ ಕವಿ ಮತ್ತು ನೀಲಕಂಠರು ಬರೆದ ನಿಜಗುಣ ಶಿವಯೋಗಿ ಮತ್ತು ಅಲ್ಲಮಪ್ರಭು ಎಂಬ ನಾಟಕವನ್ನು ಇಂದಿಗೂ ಹಳ್ಳಿಗಳಲ್ಲಿ ಆಡುತ್ತಿರುವುದು ಅವರ ಜನಪ್ರಿಯತೆಗೆ ಸಾಕ್ಷಿಯಾಗಿದೆ.

**ಒಟ್ಟುನೋಟ :**

ಬೆಳಗಾವಿ ಪರಿಸರದ ಹಸ್ತಪ್ರತಿ ಲಿಪಿಕಾರರು ಬಹುತೇಕ ಲಿಂಗಾಯತರಾಗಿದ್ದಾರೆ. ಜೈನ ಹಸ್ತಪ್ರತಿಗಳೆಲ್ಲ ಈಗ ಕೊಲ್ಲಾಪುರ ಲಕ್ಷ್ಮಿಸೇನಮಠವನ್ನು ಸೇರಿರುವುದರಿಂದ ಅವುಗಳ ಬಗ್ಗೆ ಏನೂ ಹೇಳಲು ಆಗುವುದಿಲ್ಲ. ಇಲ್ಲಿಯ ಬಹುತೇಕ ಹಸ್ತಪ್ರತಿಗಳನ್ನು ಮಠಾಧೀಶರು, ಅವರ ಮರಿದೇವರುಗಳು ಪ್ರತಿಮಾಡಿಕೊಂಡಿದ್ದಾರೆ. ಪ್ರಾಯಶಃ ಬಾಲ್ಯದಲ್ಲಿ ಅವರಿಗೆ ಆಧ್ಯಾತ್ಮಿಕ ಶಿಕ್ಷಣವನ್ನು ನೀಡಬೇಕೆಂಬ ಕಾಳಜಿಯಿಂದ ಗುರುಗಳಾದವರು ಹೀಗೆ ಪ್ರತಿ ಮಾಡಲು ಹಚ್ಚುತ್ತಿರಬೇಕು. ಇದರಿಂದ ಹೊಸಪ್ರತಿಯೊಂದು ಸಿದ್ಧವಾಗುವುದರ ಜೊತೆಗೆ, ಬರೆದವನಿಗೂ ಸ್ವಲ್ಪ ಜ್ಞಾನ ದೊರೆಯುತ್ತದೆ ಎಂಬ ಆಶಯ ಇಲ್ಲಿರಬಹುದು. ನನ್ನ ಅಧ್ಯಯನದ ಸಂದರ್ಭದಲ್ಲಿ ೨೦ಕ್ಕೂ ಹೆಚ್ಚುಮಠದ ಮಠಾಧೀಶರು, ಅವರ ಉತ್ತರಾಧಿಕಾರಿಗಳ ವಿವರ ದೊರೆಯುತ್ತದೆ. ಆದರೆ ಇದರಲ್ಲಿ ಉಲ್ಲೇಖವಿರುವ ಕೆಲವು ಮಠಗಳು ಇಂದು ನಾಮವಶೇಷವಾಗಿವೆ.

"ಕೆಲವು ಲಿಪಿಕಾರರು ತಮ್ಮ ಮಠದ ಪರಂಪರೆಯನ್ನು ದಾಖಲಿಸಿದ್ದಾರೆ. ಉಲ್ಲೇಖಿತ ಮಾಹಿತಿಯನ್ನು ಅನುಲಕ್ಷಿಸಿ ಹೇಳುವುದಾದರೆ ಬೆಳಗಾವಿ ಪ್ರದೇಶದಲ್ಲಿ ಸಾಕಷ್ಟು ಮಠಗಳು ಅಸ್ತಿತ್ವದಲ್ಲಿದ್ದವೆಂಬುದು ಸ್ಪಷ್ಟವಾಗುತ್ತದೆ. ಉದಾಹರಣೆಗಾಗಿ ಯಾದವಾಡದ ಅಗಡಿಮಠ, ಬರಡೂರಿನ ಜಿಗಜಿಣಗಿಮಠ, ಬಂಕಾಪುರ ವಿರಕ್ತಮಠ, ಮತ್ತೋಡುವಿನ ಚಿತ್ರದಮಠ, ಹೊಂಗಲದ ಭೂಸನೂರುಮಠ, ನಾಗನೂರು ರುದ್ರಾಕ್ಷಿಮಠ, ಕಿತ್ತೂರು ರಣಗಟ್ಟಿಮಠ, ಜಮಖಂಡಿಯ ಬಲ್ಲಮಠ, ಬೀಳಗಿಯ ಹಿರೇಮಠ(ಕಲ್ಮಠ), ಮುನವಳ್ಳಿಯ ಚಂದ್ರಶೇಖರಮಠ ಇತ್ಯಾದಿ ಮಠಗಳನ್ನು ಹೆಸರಿಸಬಹುದು. ಎಂಟು ಗ್ರಾಮಗಳ ಮಠಗಳಿಗೂ ಒಬ್ಬನೇ ಮಠಾಧಿಪತಿಯಿದ್ದ ಬಗೆಗೂ ಇಲ್ಲಿನ ಹಸ್ತಪ್ರತಿಗಳು ದಾಖಲಿಸಿವೆ.

ಕೆಲವರು ತಮ್ಮ ಪ್ರೀತಿ ಮತ್ತು ಸಂತೋಷಕ್ಕಾಗಿ ಲಿಪಿಕಾರರಿಂದ ಹಸ್ತಪ್ರತಿಗಳನ್ನು ಬರೆಯಿಸಿ ತಮ್ಮ ವಂಶಾವಳಿಯನ್ನು ಅದರಲ್ಲಿ ಸೇರಿಸುವ ಪ್ರಯತ್ನ ಮಾಡಿದ್ದಾರೆ. ಕೆಲವು ಲಿಪಿಕಾರರು ಹಣ ಪಡೆದು, ತಮ್ಮ ನಾಮನಿರಪೇಕ್ಷ ಪ್ರಜ್ಞೆ ಮರೆದು, ಬರೆಸಿದವರ ಗುಣಗಾನವನ್ನು ಮಾತ್ರ ಮಾಡಿರುವುದು ಕಂಡುಬರುತ್ತದೆ. ಪಾರುಪತ್ಯಗಾರ, ಕಸಬೆ, ಪರಗಣೆ, ದೇಸಾಯಿ, ಗುರಿಕಾರ, ಗೌಡ ಇತ್ಯಾದಿ ಉಲ್ಲೇಖಗಳು ಆಧುನಿಕ ಪೂರ್ವ ಕರ್ನಾಟಕದ ಸ್ಥಳೀಯ ಚರಿತ್ರೆಯ ಅಧ್ಯಯನಕ್ಕೆ ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ.

ಲಿಪಿಕಾರರಲ್ಲಿ ಕೆಲವರು ಓದಿಸೋ ಮನೆತನಕ್ಕೆ ಸೇರಿದವರು. ಇವರು ಒಂದು ಕಡೆ ಶಿಕ್ಷಣವನ್ನು ಬೋಧಿಸುತ್ತ ಮತ್ತೊಂದು ಕಡೆ ವಿವಿಧ ಕೃತಿಗಳನ್ನು ಪ್ರತಿಮಾಡಿ ಕೊಡುತ್ತಿದ್ದರು. ಓದಿಸೋ ಬಸಯ್ಯ, ಓದಿಸೋ ಪುರಾಣದ ಲಿಂಗಯ್ಯ ಮುಂತಾದವರು ಬೋಧನೆ ಮತ್ತು ಪ್ರತಿಮಾಡುವ ಕಾಯಕವನ್ನು ಅತ್ಯಂತ ನಿಷ್ಠೆಯಿಂದ ಪೂರೈಸಿದ್ದಾರೆ.

ಲಿಂಗಾಯತ ಸಾಹಿತ್ಯಕ್ಕೆ ಸಂಪಾದನ ಸಮಯದವರ ಕೊಡುಗೆ ವಿಶಿಷ್ಟವಾದುದು. ಬಸವಾದಿ ಶಿವಶರಣರ ಕಲ್ಯಾಣ ಕ್ರಾಂತಿಯಿಂದಾಗಿ ಅಲ್ಲಲ್ಲಿ ಚದುರಿ ಹೋಗಿದ್ದ ವಚನ ಸಾಹಿತ್ಯವನ್ನು

ಸ್ಥಲಗಳಿಗನುಗುಣವಾಗಿ ಜೋಡಿಸುವ ಕೆಲಸ ಒಂದು ಕಾಯಕವೆಂಬಂತೆ ಇವರು ವ್ಯವಸ್ಥಿತವಾಗಿ ಕೈಕೊಂಡರು. ಹೀಗಾಗಿ ಇವರ ಹೆಸರಿನೊಂದಿಗೆ ಸಂಪಾದನೆ ಎಂಬ ಅನ್ವರ್ಥಕಪದ ಸೇರಿಕೊಂಡಿತು. ಸಂಪಾದನೆಯ ಬೋಳಬಸವ, ಸಂಪಾದನೆಯ ಪರ್ವತೇಂದ್ರ ಮೊದಲಾದವರು ಅನೇಕ ಮಹತ್ವದ ಕೃತಿಗಳನ್ನು ರೂಪಿಸುವುದರ ಮೂಲಕ ವಚನಗಳ ಸಂಗ್ರಹ, ಸಂರಕ್ಷಣೆಯಲ್ಲಿ ಮಹತ್ತರ ಕೊಡುಗೆಯನ್ನು ನೀಡಿದ್ದಾರೆ. ಈ ಪರಂಪರೆಗೆ ಸೇರಿದ ಸಂಪಾದನ ಗುರುಪಾದಯ್ಯ, ಸಂಪಾದನೆಯ ಬಸವಲಿಂಗಸ್ವಾಮಿ ಅವರ ಹೆಸರುಗಳನ್ನು ಇಲ್ಲಿನ ಹಸ್ತಪ್ರತಿಗಳು ಉಲ್ಲೇಖಿಸಿವೆ.

ಬೆಳಗಾವಿ, ಬಿಜಾಪುರ, ಬಾಗಲಕೋಟೆ ಜಿಲ್ಲೆಯ ಹಲವು ಗ್ರಾಮಗಳ ಹೆಸರುಗಳು ಇಲ್ಲಿ ಉಕ್ತವಾಗಿವೆ. ಉದಾ: ಖಾನಾಪುರ, ಕಡಕೋಳ, ಯಾದವಾಡ, ನಾಗನೂರು, ತಿಗಡಿ, ಮುದೇನೂರು, ಮಹಾಲಿಂಗಪುರ, ಭೂಸನೂರು, ಇಟ್ಟಿಗೆ, ಹೊಂಗಲ, ರಣಗಟ್ಟಿ, ಶಿರೋಳ, ಬೀಳಗಿ, ಇಲಾಳು, ಜಮಖಂಡಿ, ಸಾಹಾಪೂರ, ಮುನವಳ್ಳಿ, ಕೊಕಟನೂರು ಹೀಗೆ ನೂರಾರು ಗ್ರಾಮಗಳಲ್ಲಿ ಲಿಪಿಕಾರರು ಪ್ರತಿಮಾಡಿಕೊಳ್ಳುವುದರ ಮೂಲಕ ಹಸ್ತಪ್ರತಿಗಳನ್ನು ಸಂರಕ್ಷಿಸಿದ ಕೀರ್ತಿಗೆ ಭಾಜನರಾಗಿದ್ದಾರೆ.

ಒಂದೇ ಊರಿನ ಒಂದೇ ಕುಟುಂಬದ ಕೆಲವು ವ್ಯಕ್ತಿಗಳು ಲಿಪಿಕಾರರಾಗಿದ್ದೊಂದು ವಿಶೇಷ. ಗೋಕಾಕ ತಾಲೂಕಿನ ಯಾದವಾಡ ಗ್ರಾಮದಲ್ಲಿ ಅಗಡಿಮಠ ಒಂದು ಕಾಲಕ್ಕೆ ಸಾಹಿತ್ಯವನ್ನು ಪೋಷಿಸುವ ಜವಾಬ್ದಾರಿಯುತವಾದ ಹೊಣೆಯನ್ನು ಹೊತ್ತಿರುವುದು ನಿಜಕ್ಕೂ ಶ್ಲಾಘನೀಯ. ಈ ಮಠದ ಚನ್ನಬಸಯ್ಯನವರು ಹಸ್ತಪ್ರತಿಗಳನ್ನು ಪ್ರತಿಮಾಡಿ ಕೊಳ್ಳುವುದರಲ್ಲಿ ಅತ್ಯಂತ ನಿಷ್ಣಾತರು. ಸಿದ್ಧೇಶ್ವರ ಪುರಾಣ, ಭಿಕ್ಷಾಟನ ಕಾವ್ಯ, ಹಮ್ಮೀರ ಕಾವ್ಯ, ಉದ್ಭಟದೇವರ ಕಾವ್ಯ, ರಾಘವಾಂಕ ಚರಿತ್ರೆ ಇತ್ಯಾದಿ ಕೃತಿಗಳನ್ನು ಪ್ರತಿಮಾಡಿರುವುದನ್ನು ನೋಡಿದರೆ ಇವರು ವೃತ್ತಿಯಿಂದ ಲಿಪಿಕಾರರಾಗಿದ್ದರೆಂಬುದು ಮೇಲ್ನೋಟಕ್ಕೆ ಗುರುತಿಸಬೇಕಾಗುತ್ತದೆ.

"ಬೆಳಗಾವಿ ಕರ್ನಾಟಕ ಮಹಾರಾಷ್ಟ್ರದ ಗಡಿಭಾಗ. ಹೀಗಾಗಿ ಕನ್ನಡದಲ್ಲಿ ಮರಾಠಿ, ಮರಾಠಿಯಲ್ಲಿ ಕನ್ನಡ ಭಾಷೆ ಮತ್ತು ಪದಗಳ ಬಳಕೆ ನಿರಂತರವಾಗಿ ಬಳಕೆಗೊಳ್ಳುತ್ತ ಬಂದಿರುವುದಕ್ಕೆ ಹಸ್ತಪ್ರತಿಪ್ರಶಸ್ತಿಗಳಲ್ಲಿ ನಿದರ್ಶನಗಳಿವೆ. ದೀಡತಾಸು>ಒಂದೂವರೆ ತಾಸು, ರಾಚೋಟಿದೇವರು ಎಂಬ ಲಿಪಿಕಾರ ಪ್ರಶಸ್ತಿ ಭಾಗದಲ್ಲಿ ಕನ್ನಡ ಮರಾಠಿ ಅಕ್ಷರಗಳನ್ನು ಸಮ್ಮಿಶ್ರವಾಗಿ ಬಳಸಿಕೊಂಡಿದ್ದಾರೆ. ಇನ್ನು ಕೆಲವರು ಇಂಗ್ಲೀಷ್ ಪದಗಳನ್ನು ನೇರವಾಗಿಯೇ ಬಳಸಿರುವರು ಉದಾ: ಡ್ಯಾಂ. ಹೀಗೆ ನಾಗನೂರು ರುದ್ರಾಕ್ಷಿಮಠದ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ ಹಸ್ತಪ್ರತಿಗಳ ಪ್ರಶಸ್ತಿಗಳಿಂದ ತಿಳಿದುಬರುವ ಸಂಗತಿಗಳಿವು."[೨೩]

ಪ್ರಾಚೀನ ಹಸ್ತಪ್ರತಿಗಳನ್ನು ಮತ್ತೆಮತ್ತೆ ಪ್ರತಿಮಾಡುವ ಮೂಲಕ ಸಾಮಾಜಿಕ ಸಾಮರಸ್ಯವನ್ನು ಕಾಪಾಡಬೇಕೆಂಬುದೇ ಲಿಪಿಕಾರರ ಆಶಯವಾಗಿತ್ತು. ಸ್ವಾಮಿಗಳು ಹೆಚ್ಚು ಹೆಚ್ಚು ಸಾಹಿತ್ಯ ಕೃತಿಗಳನ್ನು ಓದಿದರೆ, ಅವರಲ್ಲಿ ಜ್ಞಾನದಕ್ಷಿತಿಜ ವಿಸ್ತಾರಗೊಂಡು, ಭಕ್ತರಿಗೆ ತಿಳುವಳಿಕೆಯನ್ನು

ನೀಡಬಲ್ಲರು ಎಂಬುದನ್ನು ಈ ಹಸ್ತಪ್ರತಿಗಳು ನಮಗೆ ತೋರಿಸಿಕೊಡುತ್ತವೆ. ಜೈನ ಧರ್ಮದಲ್ಲಿ ಶಾಸ್ತ್ರದಾನ ಎಂಬುದು ಒಂದು ಪ್ರಕ್ರಿಯೆ ಇದೆ. ಜೈನಸಿದ್ಧಾಂತ ಗ್ರಂಥಗಳನ್ನು ಪ್ರಕಟಿಸಿ, ಉಚಿತವಾಗಿ ಹಂಚುತ್ತಿದ್ದರು. ಇಂಥ ಪ್ರಕ್ರಿಯೆ ಕಾರಣವಾಗಿ ಸಾಹಿತ್ಯದ ಬೆಳವಣಿಗೆ ನಿರಂತರವಾಗಿ ನಡೆದು ಬಂದಿತು ಎಂದು ಹೇಳಬಹುದು. ವಚನಗಳಲ್ಲಿ ಧಾರ್ಮಿಕ ಜೀವನದೊಂದಿಗೆ, ಸಾಮಾಜಿಕ ಬದುಕನ್ನು ಹೇಗೆ ಸಾಗಿಸಬೇಕೆಂಬ ಕುರಿತು ಅನೇಕ ಮೌಲಿಕ ವಿಚಾರಗಳು ಇರುವುದನ್ನು ಕಾಣಬಹುದು. ಹೀಗೆ ಹಸ್ತಪ್ರತಿಗಳು ಸಮಾಜಜೀವನದ ಸಂಸ್ಕೃತಿಯ ಘಟಕಗಳಾಗಿ ನಮಗೆ ತೋರುತ್ತವೆ. ಹಸ್ತಪ್ರತಿಗಳ ಅಂತ್ಯಪ್ರಶಸ್ತಿಗಳಲ್ಲಿ ವ್ಯಕ್ತಿನಾಮಗಳು, ಸ್ಥಳನಾಮಗಳು, ಕುಲನಾಮಗಳ ಉಲ್ಲೇಖ ಅತ್ಯಂತ ಸ್ಪಷ್ಟವಾಗಿ ದೊರೆಯುತ್ತವೆ. ಇವು ಒಂದು ಸಮುದಾಯವನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡಲು ತುಂಬಾ ಅನುಕೂಲವಾಗುತ್ತವೆ.

ಹಿರೇಮಠ, ಹೊಂಗಲಮಠ, ಅಗಡಿಮಠ, ಚೌಕಿಮಠ ಮೊದಲಾದ ಹೆಸರುಗಳು ಲಿಂಗಾಯತ ಪರಂಪರೆಯನ್ನು ಅರಿತುಕೊಳ್ಳಲು ಸಹಾಯ ಮಾಡುತ್ತವೆ. ಪುರಾಣಿಕ ಬಸಯ್ಯ, ಓದಿಸು ಬಸಯ್ಯ, ಅಕ್ಕಸಾಲಿಗರ ಜೀವಣ್ಣ ಮೊದಲಾದ ಹೆಸರುಗಳು ಅವರ ಕುಲನಾಮ, ವೃತ್ತಿನಾಮ ಮತ್ತು ವ್ಯಕ್ತಿನಾಮಗಳನ್ನು ತಿಳಿಸುತ್ತವೆ. ಇವುಗಳ ಆಧಾರದಿಂದ ತೌಲನಿಕ ಅಧ್ಯಯನ ಮಾಡಿದರೆ ಆ ಕಾಲದ ಸಾಮಾಜಿಕ ಜನಜೀವನದ ಸಂಪೂರ್ಣ ಪರಿಚಯ ನಮಗಾಗುವುದರಲ್ಲಿ ಸಂದೇಹವಿಲ್ಲ.

## ಕೊನೆ ಟಿಪ್ಪಣಿಗಳು

೧. ಜಿ.ಎಸ್. ಶಿವರುದ್ರಪ್ಪ : ಕನ್ನಡ ಸಾಹಿತ್ಯ ಸಮೀಕ್ಷೆ ಪು. ೧೪೫

೨. ಎಸ್. ಶಿವಣ್ಣ : ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು ಪು. ೨೧

೩. ಅದೇ ಪು. ೧೫೬

೪. ಅದೇ ಪು. ೧೬೧

೫. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂ–೧೦, ಪು. ೫೬

೬. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ ಪು. ೪೫೧

೭. ಎಫ್.ಟಿ. ಹಳ್ಳಿಕೇರಿ ಕಂಠಪತ್ರ–೩ ಪು. ೪೦

೮. ಎಂ.ಎಂ. ಕಲಬುರ್ಗಿ : ಮಾರ್ಗ ಸಂಪುಟ ೬ ಪು. ೪೫೭

೯. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂ–೧೦, ಪು. ೧೫೫

೧೦. ಕೆ. ರವೀಂದ್ರನಾಥ – ಹಸ್ತಪ್ರತಿಗಳು : ಕನ್ನಡಿಗರ ಬದುಕು ಪು. ೯೨

೧೧. ಕೆ. ರವೀಂದ್ರನಾಥ : ಬೆಳಗಾವಿ ಜಿಲ್ಲೆಯ ಹಸ್ತಪ್ರತಿ ಸಂಪತ್ತು ಹಸ್ತಪ್ರತಿ ವ್ಯಾಸಂಗ–೬, ಪು. ೧೨೩

೧೨. ಮೂರುಸಾವಿರಮಠದ ಹಸ್ತಪ್ರತಿ ಸೂಚಿ ಪು. ೧೨೯

೧೩. ಎಫ್.ಟಿ. ಹಳ್ಳಿಕೇರಿ: ಕಂಠಪತ್ರ –೩ ಪು. ೪೦

೧೪. ಅದೇ ಪು. ೫೨

೧೫. ಅದೇ ಪು. ೫೫

೧೬. ಅದೇ ಪು. ೪೮

೧೭. ಅದೇ ಪು. ೫೦

೧೮. ಸಿ.ವಿ. ಪ್ರಭುಸ್ವಾಮಿಮಠ– ಸಂಗ್ಯಾಬಾಳ್ಯಾ ಅಪರೂಪದ ಗೀತರೂಪಕ : ಕರ್ನಾಟಕ ಭಾರತಿ ಸ್ವಾತಂತ್ರ್ಯೋತ್ಸವ ಸಂಚಿಕೆ ೧೯೭೫ ಪು. ೧೨೫

೧೯. ಎಸ್.ಎಸ್. ಅಂಗಡಿ ಹಸ್ತಪ್ರತಿ ವ್ಯಾಸಂಗ–೧೪ ಪು. ೨೨೨–೨೨೩

೨೦. ಎಂ.ಎಂ. ಕಲಬುರ್ಗಿ : ಖರೇ ಖರೇ ಸಂಗ್ಯಾಬಾಳ್ಯಾ ಪು. ೫

೨೧. ಬಿ.ಎಸ್. ಗವಿಮಠ : ಚಿಕ್ಕೋಡಿ ಶಿವಲಿಂಗ ಸ್ವಾಮಿಗಳು ಪು. ೩೩

೨೨. ಅದೇ ಪು. ೪೧–೪೨

೨೩. ಎಫ್.ಟಿ. ಹಳ್ಳಿಕೇರಿ: ಕಂಠಪತ್ರ –೩ ಪು. ೫೫

# ಅಧ್ಯಾಯ – ಐದು

## ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಸಾಹಿತ್ಯಿಕ ಆಯಾಮ

ಕನ್ನಡ–ಕರ್ನಾಟಕಗಳ ಸಂದರ್ಭದಲ್ಲಿ ಬೆಳಗಾವಿ ಪ್ರದೇಶಕ್ಕೆ ವಿಶೇಷ ಮಹತ್ವವಿದೆ. ಇತಿಹಾಸದಲ್ಲಿ ಕಣ್ಣು ಹಾಯಿಸಿದರೆ ಅದು ಅನೇಕ ಘಟನಾವಳಿಗಳಿಗೆ ಸಾಕ್ಷಿಯಾಗಿರುವುದು ಸರ್ವವಿದಿತವಾಗಿದೆ. ಸಾಹಿತ್ಯದ ದೃಷ್ಟಿಯಿಂದ ಅವಲೋಕನ ಮಾಡಿದರೆ ಈ ನಾಡಿನಲ್ಲಿ ಅನೇಕ ಸಾಂಸ್ಕೃತಿಕವಾದ ಹಸ್ತಪ್ರತಿಗಳ ಪರಿಚಲನೆಯಿರುವುದು ತಿಳಿದು ಬರುತ್ತದೆ. ಸಾಹಿತ್ಯಿಕ ಅಧ್ಯಯನವಾಗಿ ಹಸ್ತಪ್ರತಿ ಅಧ್ಯಯನ ನಮಗೆ ಬಹುಮುಖ್ಯವಾಗುತ್ತದೆ. ಸಾಹಿತ್ಯಕೃತಿಯ ಪ್ರಸಾರದ ಸ್ವರೂಪವನ್ನು ಈ ಹಸ್ತಪ್ರತಿಯ ಮೂಲಕ ಗ್ರಹಿಸಬಹುದಾಗಿದೆ. ಬಸವಪುರಾಣ, ತೋಂಟದ ಸಿದ್ಧಲಿಂಗ ಯತಿಗಳ ವಚನ, ಟೀಕೆ ಮೊದಲಾದ ನೂರಾರು ಹಸ್ತಪ್ರತಿಗಳ ಪ್ರಶಸ್ತಿಗಳನ್ನು ಪ್ರಾದೇಶಿಕವಾಗಿ ವಿಂಗಡನೆ ಮಾಡುತ್ತ ಹೋದಾಗ ಯಾವ ಯಾವ ಪ್ರದೇಶಗಳಲ್ಲಿ ಭೀಮಕವಿಯು ರಚಿಸಿದ ಬಸವ ಪುರಾಣ, ಓದುವ ವರ್ಗ ಮತ್ತು ಪುರಾಣ ರೂಪದಲ್ಲಿ ಜನರಿಗೆ ತಿಳಿಸುವ ಪರಿಪಾಠವಿತ್ತು ಮತ್ತು ಅವರ ಮನೋಭಾವನೆ ಎಂಥ ವಿಶಾಲ ರೂಪದಲ್ಲಿತ್ತು ಎಂಬುದು ತಿಳಿದುಬರುತ್ತದೆ.

ಖ್ಯಾತ ಹಸ್ತಪ್ರತಿತಜ್ಞ ಎಸ್. ಶಿವಣ್ಣನವರು ಹನ್ನೊಂದು ಅನುಬಂಧಗಳೊಡನೆ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದಿಂದ ೧೯೯೪ರಲ್ಲಿ ಪ್ರಕಟಿಸಿದ 'ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು' ಈ ಕೃತಿ ಅನೇಕ ಕಾರಣಗಳಿಂದ ತುಂಬ ಮಹತ್ವದ್ದು. ಭಾರತದ ಇನ್ನು ಯಾವ ಭಾಷೆಯಲ್ಲಿಯೂ ಇಂತಹ ಪುಸ್ತಕ ಪ್ರಕಟಗೊಂಡ ಉದಾಹರಣೆಯಿಲ್ಲ. ಶಿವಣ್ಣನವರ ಅಪಾರ ಹಸ್ತಪ್ರತಿ ವಿದ್ವತ್ತಿಗೆ ಈ ಕೃತಿ ಸಾಕ್ಷಿಯಾಗಿದೆ. ಇಂಥ ಹತ್ತು ಸಂಪುಟಗಳನ್ನು ಸಿದ್ಧಪಡಿಸುವ ಯೋಜನೆಯನ್ನು ಶಿವಣ್ಣನವರು ರೂಪಿಸಿದ್ದರು. ಆದರೆ ದುರ್ದೈವದಿಂದು ಅದು ಕೈಗೂಡಲಿಲ್ಲವೆಂಬುದು ವಿಷಾದನೀಯ.

ಈ ಕೃತಿ ರಚನೆಯ ವಿವರಣೆಯಲ್ಲಿ ಶಿವಣ್ಣನವರು– 'ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು (ಸಂ–೧)ರಲ್ಲಿ ೨೩೧೬ ಕೃತಿಗಳ ಉಲ್ಲೇಖಗಳಿವೆ' ಎಂದು ವಿವರಿಸಿದ್ದಾರೆ.

೧. ಅ ಅಕ್ಷರದಿಂದ ನೂ ಅಕ್ಷರದವರೆಗೆ ಬಂದಿರುವ ಕೃತಿಗಳು ೧–೨೫೩ ಪುಟದಲ್ಲಿ ಉಲ್ಲೇಖಗೊಂಡಿವೆ.

೨. ಹೆಚ್ಚಿನ ನಮೂದು ಎಂದು ಮೇಲಿನ ಅಕ್ಷರಗಳ ವಿವಿಧ ಕೃತಿಗಳು ೨೫೪–೨೭೯ ಪುಟದಲ್ಲಿ ಪ್ರಕಟಗೊಂಡಿವೆ. ಉಳಿದಂತೆ

೨೮೦–೩೦೦ ಕವಿಗಳ ಕೃತಿಗಳ ಅಕಾರಾದಿ

೩೦೧–೩೧೯ ವ್ಯಕ್ತಿ ಸೂಚಿ

೩೨೦–೩೨೭ ಸ್ಥಳಸೂಚಿ

೩೨೮–೩೩೨ ದೈವಗಳು–ಐತಿಹಾಸಿಕ

೩೩೩–೩೩೫ ದೈವಗಳು ಪೌರಾಣಿಕ

೩೩೬–೩೩೯ ಮಠಗಳು

೩೪೦ ವೈಯಕ್ತಿಕ ಸಂಗ್ರಹ

೩೪೧ ಸಂಕೀರ್ಣ ೧. ಆಡಳಿತ ವಿಭಾಗಗಳು, ೨. ಆಡಳಿತಾಧಿಕಾರಿಗಳು, ೩. ಕೃತಿ/ದರ್ಶನಗಳು, ೪. ಗ್ರಂಥಸಂಪಾದನೆ, ೫. ನಾಣ್ಯಶಾಸ್ತ್ರ, ೬. ಪಂಚಾಂಗಾದಿ, ೭. ವಿವಿಧ ವೃತ್ತಿಗಳು, ೮. ಸಂಕೀರ್ಣ

ಈ ಸೂಚಿ ಸಿದ್ಧತೆಗಾಗಿ ಈ ಮುಂದಿನ ವ್ಯಕ್ತಿಗಳ ಸಂಗ್ರಹಗಳು ಹಾಗೂ ಸಂಪಾದಿತ ಕೃತಿಗಳನ್ನು ಬಳಸಿಕೊಳ್ಳಲಾಗಿದೆ. ಅದರಲ್ಲಿ ೨೧ ಜನರ ಹೆಸರಿದೆ. ೨೦ ಮಠಗಳ ಪಟ್ಟಿ ಇದೆ, ೯ ಸಂಸ್ಥೆಗಳ ಹೆಸರಿದೆ, ಹಸ್ತಪ್ರತಿ ಸೂಚಿಗಳು ಧಾರವಾಡ ೧, ೬, ೧೦, ಉಸ್ಮಾನಿಯ ವಿಶ್ವವಿದ್ಯಾಲಯದ ಸೂಚಿ, ಧಾರವಾಡ ಕನ್ನಡ ಸಂಶೋಧನಾ ಸಂಸ್ಥೆ ಸೂಚಿ ೧–೧೦, ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ–೧, ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಮೈಸೂರು ೧–೯, ಗೌರ್ವಮೆಂಟ್ ಓರಿಯೆಂಟಲ್ ಮ್ಯಾನುಸ್ಕ್ರಿಪ್ಟ್ ಲೈಬ್ರರಿ ೧ ರಿಂದ ೭, ಹುಬ್ಬಳ್ಳಿ ಮೂರುಸಾವಿರಮಠದ ಹಸ್ತಪ್ರತಿ ಸೂಚಿ, ಅವರೇ ಸಿದ್ಧಪಡಿಸಿದ ಶ್ರೀ ಮುರುಘರಾಜೇಂದ್ರ ಬೃಹನ್ಮಠದ ಹಸ್ತಪ್ರತಿ ಸೂಚಿ ಸಂಪುಟ–೧ (ಚಿತ್ರದುರ್ಗ) ಉಲ್ಲೇಖಿಸುವುದು ಬಿಟ್ಟು ಬಿಟ್ಟಿದ್ದಾರೆ. ಬಿ.ಆರ್. ಹಿರೇಮಠ ಅವರ 'ಸಂಶೋಧನ ಪಥ, ಸಿ. ಮಹಾದೇವಪ್ಪನವರ ರೀಸರ್ಚ ಕೋರಿಯರ್ ಸಿರೀಜ್'–೧ ಮೊದಲಾದ ಪ್ರಕಟಿತ ಅನೇಕ ಆಕರಗಳನ್ನು ಬಳಸಿಕೊಂಡಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (ಬೆಂಗಳೂರು), ಕರ್ನಾಟಕ ಭಾರತಿ (ಧಾರವಾಡ), ಚೆನ್ನುಡಿ (ಶಿವಮೊಗ್ಗ), ಪ್ರಬುದ್ಧ ಕರ್ನಾಟಕ (ಮೈಸೂರು), ಶಿವಾನುಭವ(ವಿಜಯಪುರ), ಸಾಧನೆ (ಬೆಂಗಳೂರು), ಹೇಮಕೂಟ (ಹೊಸಪೇಟೆ) ಮೊದಲಾದ ಪತ್ರಿಕೆಗಳನ್ನು ಆಕರವಾಗಿ ಬಳಸಿಕೊಂಡಿದ್ದಾರೆ.

ಶಿವಣ್ಣನವರು ಕವಿ-ಕೃತಿಗಳನ್ನು ಅಕಾರಾದಿಯಾಗಿ ಕೊಟ್ಟಿರುವುದು ಅಧ್ಯಯನಕಾರರಿಗೆ ಸಹಾಯಕಾರಿಯಾಗಿದೆ. ಸಾಹಿತ್ಯ ಪ್ರಕಾರಗಳಾದ ವಚನ, ರಗಳೆ, ಚರಿತ್ರೆ, ಸಾಂಗತ್ಯ ಲೌಕಿಕ, ಅಲೌಕಿಕ ಕೃತಿಗಳನ್ನು ಮತ್ತು ಜನಪದ ಕೃತಿಗಳು ಹೀಗೆ ಹಲವು ಪ್ರಕಾರದ ಕೃತಿಗಳನ್ನು ಈ ಗ್ರಂಥದಲ್ಲಿ ನೋಡಬಹುದು. ಹಾಗೆಯೇ ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ ಸಂಪುಟದಲ್ಲಿಯೂ ಇದೇ ಮಾದರಿಯನ್ನು ಅನುಸರಿಸಿ ಕೃತಿಗಳ ಕವಿಗಳ ಕೃತಿಗಳನ್ನು ಪಟ್ಟಿ ಮಾಡಿರುವುದು ನೋಡಬಹುದು. ೫೮೭ ಕೃತಿಗಳ ಉಲ್ಲೇಖವಾಗಿರುವುದು ಕಂಡುಬರುತ್ತದೆ.

ಅದರಂತೆ ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಸಂಪುಟ ೧, ೮ ಮತ್ತು ೧೦ರಲ್ಲಿ ನೂರಕ್ಕೂ ಹೆಚ್ಚು ಹಸ್ತಪ್ರತಿಗಳ ಕಟ್ಟುಗಳ ಸಾಹಿತ್ಯಿಕ ವಿವರ ದೊರೆಯುತ್ತದೆ. ಕೆ.ಆರ್.ಆಯ್.ದಲ್ಲಿಯೂ ೧೩ ಸೂಚಿಗಳು ಸಿದ್ಧಗೊಂಡಿವೆ. ೩, ೫, ೧೩, ೧೧, ೮, ೪, ೧೦ ಈ ನಂಬರಿನ ಸೂಚಿಗಳಲ್ಲಿ ಪ್ರಾಚೀನ, ಮಧ್ಯಕಾಲೀನ ಸಾಹಿತ್ಯಕ್ಕೆ ಸಂಬಂಧಿಸಿದ ಹಸ್ತಪ್ರತಿಗಳ ಪಟ್ಟಿ ನೋಡಬಹುದು. ಇದೇ ರೀತಿ ಸೂಚಿಶಿಲ್ಪವನ್ನು ಸಿದ್ಧಮಾಡಿರುವ ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿಯಲ್ಲಿಯು ಚರಿತ್ರೆ, ಲಾವಣಿ, ನೀತಿಬೋಧನೆ, ಲಿಂಗಾಯತ ಸಿದ್ಧಾಂತದ ನಿರೂಪನೆಯಂಥ ಮಹತ್ವದ ಹಸ್ತಪ್ರತಿಗಳ ವಿಷಯ ತಿಳಿದುಬರುತ್ತದೆ.

ಮತ್ತೊಂದು ರೀತಿಯಲ್ಲಿ ಸಾಹಿತ್ಯದ ಚಾರಿತ್ರಿಕ ವಿಮರ್ಶೆಯನ್ನು ಈ ಹಸ್ತಪ್ರತಿ ಮೂಲಕ ನಾವು ಕಟ್ಟಿಕೊಡಬಹುದು. ಕನ್ನಡ ಹಸ್ತಪ್ರತಿ ವಿಷಯವನ್ನು ಅವಲೋಕಿಸಿದಾಗ ಕೇವಲ ಸಾಹಿತ್ಯ ಪ್ರಧಾನವಾದ ಸ್ವರೂಪಗಳಲ್ಲದೆ, ಕಲೆ, ಧರ್ಮ, ಸಮುದಾಯ, ಜನಾಂಗ, ರಾಜಕೀಯ ರಾಜರ ಹಿತಾಸಕ್ತಿ, ಬಂಡವಾಳ-ಪುರೋಹಿತಶಾಹಿಗಳ ವರ್ಗ ಮತ ಪ್ರಚಾರಕ ಸಂಸ್ಥೆಗಳು ಮತೀಯ ಶಕ್ತಿಗಳು, ಸಂಸ್ಕೃತಿ, ಇತಿಹಾಸ ಹತ್ತು ಹಲವು ವಿಷಯಗಳನ್ನು ಒಂದು ಮನೆಯಲ್ಲಿ ಏನೆಲ್ಲಾ ತುಂಬಬಹುದು ಅಂಥ ಘಟಕಗಳೆಲ್ಲ ಕನ್ನಡ ಹಸ್ತಪ್ರತಿಗಳ ವಿಷಯ ಸ್ವರೂಪದಲ್ಲಿದೆ. ಆದ್ದರಿಂದ ವಿಷಯ ದೃಷ್ಟಿಯಿಂದ ಮಾತ್ರವಲ್ಲದೆ ನಾವು ಕಲ್ಪಿಸಿಕೊಂಡ ಮೇಲಿನ ಎಲ್ಲಾ ಪರಿಕಲ್ಪನೆಗಳೊಂದಿಗೆ ಹಸ್ತಪ್ರತಿಗಳ ವಿಷಯ ಸಂಪತ್ತನ್ನು ನೋಡಲಾಗಿದೆ. ಹಸ್ತಪ್ರತಿಗಳ ರಹಸ್ಯವನ್ನು ಒಳಹೊಕ್ಕು ಭೇದಿಸಿದಾಗ ಅವುಗಳು ಯಾವ ವಿಷಯಗಳನ್ನು ತನ್ನ ಒಡಲಲ್ಲಿ ಹಿಡಿದಿಟ್ಟುಕೊಂಡಿವೆ. ಬೆಳಗಾವಿ ಜಿಲ್ಲೆಯ ಹಸ್ತಪ್ರತಿ ಸಂಗ್ರಹ ಕಾರ್ಯವನ್ನು ಮೊದಲು ಬ್ರಿಟಿಷ್ ಅಧಿಕಾರಿಗಳೇ ಮಾಡಿದ್ದರು ಎನ್ನುವುದಕ್ಕೆ "ಬೆಟಗೇರಿ ಕೃಷ್ಣಶರ್ಮರ ಅಭಿನಂದನ ಗ್ರಂಥ, ಲೇಖನದಲ್ಲಿ ಫ್ಲೀಟ್‌ರು ಸಂಗ್ರಹಿಸಿದ ಕೆಲವು ಅಪೂರ್ವ ಹಾಡುಗಳು ಶ್ರೀನಿವಾಸ ಹಾವನೂರ ಶಾಲಾ ಮಾಸ್ತರರಿಂದ ಹಾಡುಗಳನ್ನು ಬರೆಯಿಸಿ ತರಿಸಿಕೊಂಡರು ಎಂಬ ವಿಚಾರವು ಫ್ಲೀಟರ್ ಸಂಗ್ರಹಿಸಿದ ಹಸ್ತಪ್ರತಿ ಮೂಲಕ ತಿಳಿಯಬಹುದು."[೧] ಭಾರತದಲ್ಲಿ ತಮ್ಮ ಕರ್ತವ್ಯ ಮುಗಿದ ಮೇಲೆ ಸ್ವದೇಶಕ್ಕೆ ಮರಳಿ ಹೋದ ಫ್ಲೀಟರು ತಮ್ಮಲ್ಲಿದ್ದ ಹಸ್ತಪ್ರತಿಗಳನ್ನು ಇಡಿಯಾಗಿ ಲಂಡನ್ನಿನ ಬ್ರಿಟಿಷ್ ಮ್ಯೂಜಿಯಂಗೆ ತಮ್ಮ ಸ್ವಚ್ಛೆಯಿಂದ ೧೯೧೭ ಅಕ್ಟೋಬರ್ ೧೩ರಂದು ನೀಡಿದರು. ಅವು ಈಗಲೂ ಅಲ್ಲಿ ಇವೆ. ಅವರ

ಈ ಹಸ್ತಪ್ರತಿ ಸಂಗ್ರಹದಲ್ಲಿ ಒಂದು ಪತ್ರವಿದೆ. ಅದು ಶಾಲಾ ಮುಖ್ಯೋಪಾಧ್ಯಾಯರೊಬ್ಬರು ಬರೆದ ಪತ್ರ. ಆ ಪತ್ರದೊಂದಿಗಿದ್ದ ಆರು ಲಾವಣಿಗಳ ವಿಷಯ ತಿಳಿಯುತ್ತದೆ. ಫ್ಲೀಟರು ಸಮಯಾಭಾವದಿಂದ ಇತರರಿಂದಲೂ ಲಾವಣಿಗಳನ್ನು ಸಂಗ್ರಹಿಸಿ ತರಿಸಿ ಅನಂತರ ತಮ್ಮ ಬಿಡುವಿನ ವೇಳೆಯಲ್ಲಿ ಅಭ್ಯಾಸ ಮಾಡುತ್ತಿದ್ದರು ಎಂಬ ಅಂಶ ಇಲ್ಲಿ ಮುಖ್ಯವಾಗಿದೆ. ಇದೇ ಸಂಗತಿಯನ್ನು ಅಂದರೆ ಶಾಲಾ ಮಾಸ್ತರರಿಂದ ಹಾಡುಗಳನ್ನು ಸಂಗ್ರಹಿಸಿ ತರಿಸಿಕೊಳ್ಳುತ್ತಿದ್ದ ಸಂಗತಿಯನ್ನು ಶ್ರೀನಿವಾಸ ಹಾವನೂರ ಅವರು ಕೂಡ ಪ್ರಸ್ತಾಪಿಸಿದ್ದಾರೆ. ಫ್ಲೀಟರ ಹಸ್ತಪ್ರತಿ ಸಂಗ್ರಹದಲ್ಲಿರುವ ಆ ಪತ್ರವನ್ನು ಇಲ್ಲಿ ಉಲ್ಲೇಖಿಸಬಹುದು.

"ಮೆಹರಬಾನ್ ಎ–ಇ–ಸಾ... ಬಹದ್ದೂರ ದಘಣ ಭಾಗ

ಇವರ ಹುಜೂರಿಗೆ

ನಾರಾಯಣ ಅಯ್ಯಾಜಿ ಹೆಡಮಾಸ್ತರ ತಾಲ್ಲೂಕ ಬಾದಾಮಿ ಈತನು ಬರಕೊಳ್ಳುವ ರಪೂರಟು– ಮೆಹರ್ಬಾನವರ ಹುಕುಮಿನ ಮೇರಿ ಆರು ಲಾವಣಿ ಪದಗಳಂನು"[೨]

ಅಂದರೆ ಬ್ರಿಟಿಷರ ಆಡಳಿತದಲ್ಲಿ ಹೆಚ್ಚಿನ ಜಿಲ್ಲೆಯ ಹಸ್ತಪ್ರತಿಗಳು ಫ್ಲೀಟರು ಸಂಗ್ರಹಿಸಿದ್ದಾರೆ ಎಂಬುದು ಈ ಮೇಲಿನ ಉಲ್ಲೇಖದಿಂದ ತಿಳಿಯಬಹುದು. ಇಂಥ ಎಷ್ಟೋ ಹಸ್ತಪ್ರತಿಗಳು ವಿಷಯ ದೊರೆಯದೆ ಅಜ್ಞಾತವಾಗಿ ಉಳಿದು ಬಿಡುತ್ತವೆ. ಬೆಳಗಾವಿ ಜಿಲ್ಲೆಯ ವೀರಶೂರತೆಗೆ ಹೆಸರಾದ ನಾಡು. ಫ್ಲೀಟರ ಸಂಗ್ರಹಿಸಿದ ಲಾವಣಿಯಲ್ಲಿ ಆರಂಭದಲ್ಲಿ ಸಂಗೊಳ್ಳಿ ರಾಯಣ್ಣನ ಲಾವಣಿಯು ಸಾಹಿತ್ಯಿಕವಾಗಿ, ಚಾರಿತ್ರಿಕ ಅನನ್ಯತೆಯೊಂದಿಗೆ ಲಾವಣಿಯು ಚಿತ್ರಿತಗೊಂಡಿರುವ ಬಗೆಯನ್ನು ನೋಡಬಹುದು.

"ಸಂಗೊಳ್ಳಿ ರಾಯನಾಯಕಾ ಸರ್ಜ್ಯಾ
ಸಂಪಗಾಂವಿ ಸುಭೆಯದಾರನ ಮ್ಯಾಗಾ
ತಳ್ಳಿ ಮಾಡತಾನೋ ಮುಂಡಾ
ಒತ್ತರದಿಂದ ಸುತ್ತಿನ ಹಳ್ಳಿ ಮುತ್ತಗಿ ಹಾಕಿ ಬಡದಾರಣ್ಣಾ
ಗೊತ್ತ ಇಲ್ಲದ ಹಾಂಗೆ ಹೋತ್ಯೊ ಬಂಡಾ ॥ಪ॥

೧ನೆಯ ನುಡಿ

ಪೂರ್ವದ ಮಾತ ಹೇಳತೇವ ನಿಮಗ
ಸರ್ವರು ಕುಂತ ಕೇಳರಿ ವಿಸ್ತಾರಾ
ಗರ್ವ ಬಂತ ಸಂಗೊಳ್ಳಿ ಕುಲಕರ್ಣಿಗೆ
ಚಂದದಿಂದ ರಾಯನಾಯಕ ಹೊಂದಿಕೊಂಡ ಇದ್ದ
ಅವರ ಮುಂದ ಹುಟ್ಟಿತಲ್ಲೆ ಕದನ ಬ್ಯಾ

ಕುಲಕಣ್ಣಿ ಬಾಳಪ್ಪ ರಾಯಣ್ಣ ಜಳಕಾ ಮಾಡುಹೊತ್ತ್ಯಾಗ
ಧೋತರ ಸೆಳತಾ ಅಂತ ಕೊಟ್ಟನವನ ಕೈಗಿ
ಇಷ್ಟುಮಾತಿಗೆ ಸಿಟ್ಟ ಮಾಡಿ ಧಿಟ್ಟತಾನ ಹಿಡಿದು
ರಾಯಣ್ಣ ಮುಟ್ಟಾಕಿಲ್ಲಂದರವೀ ಯೆಂದಂದಿಗಿ
ಯಾಕಲೆ ಹಳಬಾ ಜೋಕ್ಯಾಗಿದ್ದಿ
ಸೊಕ್ಕ ಬಂತೀಗೇನೋ ನಿನಗ
ದಿಗರಾಡ್ತ ನಿಂತ ಇದರಿಗಿ
ಕೇಳಿ ರಾಯಣ್ಣ ತಾಳಿ ಸಿಟ್ಟು
ಹೋಳಿ ಆಡ್ನಿನ್ನ ಬಿಡುವೆನೆಂದು
ಹೇಳಿ ಹೊಂಟ ಹಿಂದಕ ತಿರುಗಿ
ಒಳ್ಳೇದೋ ಬಾಳಣ್ಣ ನನ್ನ ತಳ್ಳಿ ಮಾತರಹಿಡಿಯೊ
ಇನ್ನ ದಾಳಿ ಬಂತೋ ತಿಳಿಯೋ ಸುತ್ತಿನ್ಹಳ್ಳಿಗೆ

೨ನೆಯ ನುಡಿ

ಒತ್ತರ ಮಾಡಿ ರಾಯನಾಯಿಕಾ ಹೆತ್ತ ತಾಯಿ ಪಾದಕಬಿದ್ದು
ಮತ್ತೆ ಕತ್ತಿ ಹಿಡಕೊಂಡ್ಹೊಂಟ ಧೀರಾ
ಮಗಲಾಯರ ಸೀಮಿಗಿ ಹೋಗಿ
ಸುರಪೂರರಸರ ಯಿದಿರಿಗಿ ನಿಂತು
ಕರವ ಮುಗಿದು ಮಾಡಿದಾನ ನಮಸ್ಕಾರಾ
ಧೀರ ಹೌದೋ ರಾಯನಾಯಕಾ
ಹಾರಿ ಹನ್ನೆರಡಕ್ಕಡಿ ಜಿಗದಾ
ಅರಸ ನೋಡಿದಿವನ ಕಣ್ಣಾರಾ
ಅರಸ ಮೆಚ್ಚಿ ಹರುಷವಾಗಿ
ಸರ್ಜ್ಯಾ ನಿನಗೆ ಸರಿಯಿಲ್ಲೆಂದು
ಯೇನ ಬೇಡತಿ ಬೇಡಂದ ರಣಸೂರಾ
ಎನಗ ಒಲಿದಾರ ನೀನು
ಮುನ್ನೂರು ಬ್ಯಾಡಕಿ ಕೊಡು
ಇನ್ನು ಆರಿಸಿ ಒಯ್ತೇನೋ ಪೂರಾ
ದಂಡನೆಲ್ಲಾ ತಕೊಂಡು ಬಂದು
ಭಂಡಾಯಿ ಮಾಡುನೆಂತೆಂದು

ಅವರಿಗ್ಹೇಳಿದಾನೋ ಚಾತುರಾ
ರವಡಮಾಡಿ ರಾಯನಾಯಕಾ
ದವಡಮಾಡಿ ತಂದ ದಂಡನ
ಗಿಡದಾಗವ್ಹೋದಿಟ್ಟ ಎಲ್ಲಾ ಬಾರಾ."[೩]

ಬೆಳಗಾವಿ ಪ್ರದೇಶವು ನೈಸರ್ಗಿಕ ಚೆಲುವು ಖನಿಜ ವಿಶಿಷ್ಟ ಬೆಳೆಗಳಿಗೆ ಮೊದಲಿನಿಂದಲೂ ಪ್ರಖ್ಯಾತರಾಗಿರುವಂತೆ, ವಿದ್ಯಾಭ್ಯಾಸ ವಿದ್ವತ್ತು ಪಾಂಡಿತ್ಯಗಳಿಗೂ ಹೆಸರುವಾಸಿಯಾಗಿದೆ. ಹೂಲೀ ಪೂವಲ್ಲಿಯ ಕವಿ ಸಿದ್ಧನಂಜೇಶನಿಂದಲೂ ವಿದ್ವತ್ತಿನ ದೊಡ್ಡ ಪರಂಪರೆಯೇ ಕಂಡು ಬರುತ್ತದೆ. ರಾಘವಾಂಕ ಚಾರಿತ್ರ, ಗುರುರಾಜ ಚಾರಿತ್ರ, ಬಸವ ಶತಕ ಮೊದಲಾದ ಚಾರಿತ್ರಿಕ ಕೃತಿಗಳನ್ನು ಬರೆದು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾನೆ. ಈತನ ಬಸವ ಶತಕದ ಮೂಲ ಹಸ್ತಪ್ರತಿ ಅನೇಕ ವರ್ಷಗಳ ಕಾಲ ಸಿಕ್ಕಿರಲಿಲ್ಲ. ಎಂ. ಎಂ. ಕಲಬುರ್ಗಿ ಅವರು ಬಸವ ಶತಕದ ೨೬ ಪದ್ಯಗಳು ದೊರೆಯುತ್ತವೆ ಎಂದು ಹೇಳಿದ್ದರು : "ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಭಂಡಾರದ ೧೩೫೪ನೆಯ ನಂಬರಿನ ಕಾಗದ ಪ್ರತಿಯ ಒಂದು ಭಾಗವಾಗಿರುವ ಇದು ೩೬ನೆಯ ಪದ್ಯಕ್ಕೆ ತಟ್ಟನೆ ನಿಂತು ಬಿಟ್ಟಿದೆ. ಈ ಕೃತಿಯ ಉದ್ದೇಶ ಬಸವಣ್ಣನವರನ್ನು ಪವಾಡ ಇತ್ಯಾದಿಗಳ ಮೂಲಕ ಸ್ತುತಿಸುವುದಾಗಿದೆ. ಗುರುವರ್ಗದ ಪೀಠಾಧಿಪತಿ ಸಿದ್ಧನಂಜೇಶ ಬಸವಣ್ಣನನ್ನು 'ಬಸವಣ್ಣನಿಂದತ್ಯಧಿಕವಿಲ್ಲವೀ ಲೋಕದೊಳು' ಎಂದುದು ಇಂದಿನ ಕೆಲವು ವೀರಶೈವರಿಗೆ ನಿಜಸ್ಥಿತಿಯ ಅರಿವನ್ನುಂಟು ಮಾಡಿಕೊಡುತ್ತದೆ."[೪] ಎಂದು ಕಲಬುರ್ಗಿ ವಿವರಿಸಿದ್ದಾರೆ. ಎಷ್ಟೋ ವರ್ಷಗಳ ಹುಡುಕಾಟದ ನಂತರ, ಬಸವ ಶತಕದ ಪೂರ್ಣಪ್ರತಿ ಲಭ್ಯವಾಯಿತು. ಎಸ್. ಶಿವಣ್ಣನವರು ಅದನ್ನು ಸಂಪಾದಿಸಿ ಗದುಗಿನ ತೋಂಟದಾರ್ಯಮಠದಿಂದ ೨೦೦೦ರಲ್ಲಿ ಪ್ರಕಟಿಸಿದರು.

ರುದ್ರಭಟ್ಟ ಈ ಜಿಲ್ಲೆಯ ಅತ್ಯಂತ ಪ್ರಾಚೀನ ಕವಿಯಾಗಿದ್ದಾನೆ. ಇವನು ಸು. ೯೫೦ರಲ್ಲಿ ರಾಷ್ಟ್ರಕೂಟರ ಆಸ್ಥಾನದಲ್ಲಿದ್ದು 'ಜಗನ್ನಾಥ ವಿಜಯ' ಎಂಬ ಪ್ರೌಢ ಚಂಪೂಕಾವ್ಯವನ್ನು ರಚಿಸಿದ್ದಾನೆ. ಕರ್ಪರಸ ಜಿಲ್ಲೆಯ ರಾಮದುರ್ಗದಲ್ಲಿ ಜನಿಸಿದವನು. ಮದನತಿಲಕ ಎಂಬ ಕಾಮಶಾಸ್ತ್ರ ಗ್ರಂಥವನ್ನು ಕನ್ನಡದಲ್ಲಿ ಬರೆದ ಚಂದ್ರರಾಜ ಈ ಕರ್ಪರಸರ ಕವಿಯ ತಂದೆಯಾದ ಚಂದ್ರ ಇರಬೇಕು ಎಂದು ಕವಿ ಚರಿತೆಕಾರರು ಊಹಿಸಿದ್ದಾರೆ. ಕರ್ಣಪಾರ್ಯ ಕವಿಯು ಶ್ರೇಷ್ಠವಾದ ವ್ಯಕ್ತಿತ್ವ ಹೊಂದಿದವನು. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನಾಲ್ಕು ಜನ ಕರ್ಣಪಾರ್ಯರು ಬರುತ್ತಾರೆ. ಅವರಲ್ಲಿ ಬೆಳಗಾವಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವವನೂ ಒಬ್ಬ. ೧೨ನೇ ಶತಮಾನದ ಜೈನಕವಿಯಾದ ಈತ ನೇಮಿನಾಥ ಪುರಾಣ, ವೀರೇಶ ಚರಿತೆ ಎಂಬ ಕೃತಿಯನ್ನು ರಚಿಸಿದ್ದಾನೆ. ೧೪ ಆಶ್ವಾಸಗಳ ೨೨೪೨ ಪದ್ಯಗಳಿರುವ ದೊಡ್ಡ ಚಂಪೂ ಕೃತಿ ಕನ್ನಡದಲ್ಲಿ ನೇಮಿನಾಥನನ್ನು ಕುರಿತು ಪುರಾಣಗಳಲ್ಲಿ ಇದು ಮೊತ್ತಮೊದಲನೆಯದು. ನೇಮಿಚಂದ್ರ ಕವಿ ಲೀಲಾವತಿ ಮಹಾಪ್ರಬಂಧ ಮತ್ತು ನೇಮಿನಾಥ ಪುರಾಣ ಎಂಬ ಎರಡು ಪ್ರೌಢ ಚಂಪೂ ಕಾವ್ಯಗಳ ಮೂಲಕ ಸುಪರಿಚಿತನಾಗಿದ್ದಾನೆ. ಇವನಿಗೆ ಚತುರ್ಭಾಷಾ ಕವಿ ಚಕ್ರವರ್ತಿ ಎಂಬ ಬಿರುದು ಇತ್ತು.

ಪಾರ್ಶ್ವಪಂಡಿತ, ಪಾರ್ಶ್ವನಾಥ ಪುರಾಣದ ಕರ್ತೃ ಎಂಬ ಹೆಗ್ಗಳಿಕೆಯಿದೆ. ಜೈನರ ೨೩ನೇ ತೀರ್ಥಂಕರನಾದ ಪಾರ್ಶ್ವನಾಥನ ಚರಿತ್ರೆಯನ್ನು ನಿರೂಪಿಸುವ ೧೬ ಆಶ್ವಾಸಗಳ ಒಂದು ದೊಡ್ಡ ಚಂಪೂ ಕಾವ್ಯ. ಕವಿ ಇದನ್ನು ೧೨೨೨ರಲ್ಲಿ ಬರೆದಿರುವುದಾಗಿ ತಿಳಿದು ಬರುತ್ತದೆ. ಇದಲ್ಲದೆ ಇವನು ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಕಲ್ಲುಹೊಳೆ (ಕಲ್ಲೋಳಿ) ಗ್ರಾಮದಲ್ಲಿ ರಟ್ಟ ದೊರೆ ೪ನೇ ಕಾರ್ತವೀರ್ಯನ ಕಾಳದ ೧೨೦೪ರ ಒಂದು ಶಾಸನವನ್ನು ಸಹ ರಚಿಸಿರುವುದಾಗಿ ತಿಳಿದುಬರುತ್ತದೆ. ರಾಮಚಂದ್ರ ಭೋಜರಾವ್ ದೇಶಪಾಂಡೆ ಇವನು ಬೆಳಗಾವಿ ಜಿಲ್ಲೆಯ ಮುರಗೋಡದವನು. ಚಿದಂಬರ ಚರಿತ್ರೆ ಎಂಬ ಕಾವ್ಯವನ್ನು ಸಂಸ್ಕೃತದಲ್ಲಿ ೧೮ನೇ ಶತಮಾನದಲ್ಲಿ ರಚಿಸಿದ್ದಾನೆ. ಅಲ್ಲದೆ ಮರಾಠಿ ಭಾಷೆಯಲ್ಲಿ ಕೆಲವು ಕೃತಿಗಳನ್ನು ರಚಿಸಿದ್ದಾನೆ. ನಮ್ಮ ಪ್ರಾಚೀನ ಕವಿಗಳು ಪ್ರಾತಃಸ್ಮರಣೀಯರಾದಂತೆ ೧೮ನೇ ಶತಮಾನದ ಕವಿಗಳು ಪ್ರಮುಖರಾಗಿದ್ದಾರೆ.

ರಟ್ಟರ ಪತನಾನಂತರ ಯಾದವರ, ವಿಜಯನಗರದರಸರ, ಆದಿಲ್‌ಶಾಹಿಗಳ, ಪೇಶ್ವೆಗಳ ಆಡಳಿತಕ್ಕೆ ಒಳಗಾದ ಬೆಳಗಾವಿ ನಗರ ಹಾಗೂ ಸುತ್ತಲಿನ ಭಾಗದ ಸಾಹಿತ್ಯ ಕೃಷಿಗೆ ಪೆಟ್ಟು ತಗುಲಿದುದನ್ನು ಅಲ್ಲಗಳೆಯುವಂತಿಲ್ಲ. ಮರಾಠಿ ಸಾಹಿತ್ಯದ ಪ್ರಾಬಲ್ಯ ಹೆಚ್ಚಾಗಿರುವುದರಿಂದ ಕನ್ನಡ ಸಾಹಿತ್ಯ ಕುಂಠಿತವಾಯಿತು. ಶಿಕ್ಷಕರಾಗಿ ಕಾರ್ಯಾರಂಭ ಮಾಡಿದ ವೆಂಕಟರಂಗೋ ಕಟ್ಟಿಯವರು ಕನ್ನಡ ಪದ್ಯಗಳ ರಚನೆಯೊಂದಿಗೆ ಕನ್ನಡಾನುವಾದ, ಛಂದಸ್ಸು ನವರತ್ನ ಹಾರದಂತಹ ಕೃತಿಗಳನ್ನು ರಚಿಸಿದರು. ಇದೇ ಅವಧಿಯಲ್ಲಿ ಗಂಗಾಧರ ತುರಮರಿ ಶಬ್ದಮಣಿ ದರ್ಪಣ ವ್ಯಾಖ್ಯಾನ, ಕವಿತಾ ಸಂಗ್ರಹ, ಕೈವಲ್ಯಪದ್ಧತಿ ಟೀಕೆ, ಬಾಣ ಕಾದಂಬರಿ, ನಾಟಕ, ಐಹೊಳೆ ವೆಂಕಟೇಶ ನಮಾಂಕಿತದ ರಾಮ ಪಾರಿಜಾತ, ಅನೇಕ ಪೌರಾಣಿಕ ಕೃತಿಗಳನ್ನು ರಚಿಸಿ ಅಭಿನಂದನಾರ್ಹರಾಗಿದ್ದಾರೆ.

ಶ್ರೀಕೃಷ್ಣ ರಾಮಚಂದ್ರ ಪಂತ ಕುಲಕರ್ಣಿ (ಬಾಳೇಕುಂದ್ರಿ ಪಂತ ಮಹಾರಾಜರು) ಕನ್ನಡ ಹಾಗೂ ಮರಾಠಿಯಲ್ಲಿ ಅಭಂಗ, ಭಕ್ತಲಾಪ ಪ್ರೇಮಶೋಭನ ಇತ್ಯಾದಿ ಕೃತಿಗಳನ್ನು ಬರೆದು ಅಧ್ಯಾತ್ಮಿಕ ಪ್ರಪಂಚಕ್ಕೆ ಬಹುದೊಡ್ಡ ಕಾಣಿಕೆ ನೀಡಿದವರು. ಹಿರೇಬಾಗೇವಾಡಿಯ ಶಿಕ್ಷಕ ಸಾಹಿತಿ ಶ್ರೀ ಬಾಳಕೃಷ್ಣ ಜೋಶಿ (೧೮೯೫-೧೯೪೬) ಕಾಲಾವಧಿಯಲ್ಲಿ ಬದುಕಿದ್ದವರು. ಕೈವಲ್ಯ ಸ್ವಾಮಿಗಳ ಚರಿತ್ರೆ, ದ್ರೋಣಾಚಾರ್ಯ ಕೃತಿಗಳನ್ನು ಭೀಮಾಜಿ ಹುಲಿಕವಿಯವರು ಶ್ರೇಯಸ್ಸಾಧನ, ಪತಿತ ಪರಿವರ್ತನ, ಶುದ್ಧಿ ಸಂಘಟನೆ, ಹತಬಾಗಿನಿ, ಸ್ವಪ್ನ ವಾಸವದತ್ತದಂಥ ಮಹತ್ವದ ಕೃತಿಗಳನ್ನು ಕನ್ನಡ ಸಾಂಸ್ಕೃತಿಕ ಲೋಕಕ್ಕೆ ನೀಡಿದ್ದಾರೆ. ಶ್ರೀ ಚಿದಂಬರ ಕುಲಕರ್ಣಿ ಹಿರೇಬಾಗೇವಾಡಿಯವರು. ವ್ಯಾಕರಣ ನಿಧಿ, ಸಾಯಿ ಚರಿತಾಮೃತ, ಶ್ರೀ ದಾಸಬೋಧೆ ಮುಂತಾದ ಕೃತಿ ರಚಿಸಿದರೆ, ಬೆಳಗಾವಿಯ ಭಾಸ್ಕರ ಗೋಖಲೆ ಭಾರತೀಯ ಸಂಸ್ಕೃತಿ ಸೊಗಸಿನ ಕಥೆ ಅನುವಾದಗಳನ್ನು ಕೂಡ ಮಾಡಿದ್ದಾರೆ. ಐತಿಹಾಸಿಕ ಅನುವಾದಿತ ಕೃತಿಗಳು ಇದೇ ಅವಧಿಯಲ್ಲಿ ರೂಪುಗೊಂಡಿದ್ದು ಮತ್ತು ಬೆಳಗಾವಿತಲ್ಲಿ ಸಂಸ್ಕೃತ ಸಾಹಿತ್ಯದ ಕೃಷಿ ನಡೆದದ್ದು ಉಲ್ಲೇಖನೀಯ

ಸಂಗತಿಯಾಗಿದೆ. ವಾಂಘರಿ ಕೃಷ್ಣಾಚಾರ್ಯರು ವಿಷ್ಣು ಸಹಸ್ರನಾಮ, ದ್ವಾದಶಸ್ತೋತ್ರ, ರಾಘವೇಂದ್ರ ಸ್ತೋತ್ರ ಮುಂತಾದ ಸಂಸ್ಕೃತ ಕೃತಿಗಳನ್ನು ರಚಿಸಿ ಕನ್ನಡ ಟೀಕೆಯೊಂದಿಗೆ ಪ್ರಕಟಿಸಿದ್ದು ಅನನ್ಯವಾಗಿದೆ. ಕಾಶೀನಾಥ ಪಾಠಕ ಎಂಬುವರು ಬರೆದ ಕವಿರಾಜಮಾರ್ಗದ ಪರಿಷ್ಕರಣೆ ರಾಮಚಂದ್ರ ಹೊದಲೂರ ಅವರು 'ಭಗವದಾಸ' ಅಂಕಿತದಲ್ಲಿ ಬರೆದ ಅಕ್ರೂರಾನುಭವ, ಗಜೇಂದ್ರಮೋಕ್ಷ ಬೆಳಗಾವಿ ನಗರ ಪ್ರದೇಶದಲ್ಲಿ ಈ ರೀತಿಯಾಗಿ ಶಿಷ್ಟಸಾಹಿತ್ಯ ಕೃಷಿಯು ಭರದಿಂದ ಸಾಗುತ್ತಿರುವಾಗಲೇ ತಾಲೂಕಿನ ಗ್ರಾಮ ಪರಿಸರದಲ್ಲಿ ವಿಪುಲವಾದ ಜನಪದ ಸಾಹಿತ್ಯವು ರಚನೆಗೊಂಡಿದ್ದು ತುಂಬಾ ಅಭಿಮಾನದ ಸಂಗತಿಯಾಗಿದೆ. ಕನ್ನಡ, ಮರಾಠಿ ಭಾಷೆಗಳಲ್ಲಿ ಲಾವಣಿ, ಗೀಗೀ ಪದಗಳು ಮೊದಲಾದ ಕಾವ್ಯ ಪ್ರಕಾರಗಳಲ್ಲಿ ಸಾಹಿತ್ಯ ರಚಿಸಿದ್ದಾರೆ. ಕುಕಡೊಳ್ಳಿಯ ಚೆನ್ನಮಲ್ಲಯ್ಯ ನೂರಾರು ಭಜನಾ ಪದಗಳನ್ನು, ಲಾವಣಿಗಳನ್ನು ಬರೆದರೆ ಕುಡಚಿಯ ಹರಿಜನ ಮಲ್ಲಪ್ಪನು ಸುಪ್ರಸಿದ್ಧ ಗೀಗೀ ಹಾಡುಗಾರನಷ್ಟೇ ಅಲ್ಲದೇ ಚಿಲ್ಲಾಳ ಎಂಬ ಡಪ್ಪಿನಾಟವನ್ನು ಬರೆದವನು.

ಬೆಂಡಿಗೇರಿ ಸಿದ್ಧಪ್ಪನಂತೂ ಹರದೇಶಿ ಸಂಪ್ರದಾಯದ ಹಾಡು ರಚಿಸುವುದರಲ್ಲಿ ಎತ್ತಿದ ಕೈ. ಹೇಮದತ್ತ ಭದ್ರವಿರಾಜ ರಾಜಾನಾಟ ಸಣ್ಣಾಟಗಳನ್ನು ಬರೆದವನು. ಚನ್ನಹೊಸೂರಿನ ಮಲ್ಲೇಶಿಯು ಸಿಂಧೂರ ಲಕ್ಷ್ಮಣ, ಕಿತ್ತೂರ ಚನ್ನಮ್ಮ, ಮಹಾತ್ಮಾಗಾಂಧಿ ಮುಂತಾದ ಹಿರಿಯರ ಕುರಿತು ಹಾಗೂ ಕುಟುಂಬ ಯೋಜನೆಗಳ ಕುರಿತು ಲಾವಣಿಗಳನ್ನು ಬರೆದದ್ದು ಉಲ್ಲೇಖನೀಯ. ಅದರಂತೆ ಗೋಕಾಕದ ಅನಂತಾದ್ರಿ ಕೀರ್ತಿನೆಕಾರರು ಕನ್ನಡ ವಿದ್ವತ್ತಿಗೆ ತಮ್ಮದೆಯಾದ ಕೊಡುಗೆಯನ್ನು ನೀಡಿದ್ದಾರೆ. 'ಸಂಗೀತ ವಿದ್ವಾಂಸರಾಗಿದ್ದ ದಾಸರು ಜನಪದ ಪಾರಿಜಾತ ಆಟದಲ್ಲಿ ನೈಪುಣ್ಯತೆ ಗಳಿಸಿದ್ದರೆಂದು ತಿಳಿದುಬರುತ್ತದೆ. ಹೀಗಾಗಿ ಇವರ ರಚನೆಗಳ ಮೇಲೆಯೂ ಜನಪದ ಗಾಢ ಪ್ರಭಾವವನ್ನು ಕಾಣಬಹುದಾಗಿದೆ. "ಅನಂತಾದ್ರೀಶರು ಚಿತ್ರಕಲೆಯಲ್ಲಿಯೂ ನಿಷ್ಣಾತರಾಗಿದ್ದರೆಂದು ಹೇಳಲಾಗುತ್ತದೆ. ಶ್ರೀ ಉದಯ ಕಡಕೋಳರು ದಾಸರ ವಂಶಸ್ಥರು. ಶ್ರೀ ವೆಂಕಟೇಶ ಪಾರಿಜಾತದ ಕಥನವನ್ನು ಚಿತ್ರಕಲೆಯಲ್ಲಿ ಬಿಡಿಸಿದ ಗ್ರಂಥವಿದೆ."[೫] ಅನಂತಾದ್ರೀಶರು ಏಳು ಸುದೀರ್ಘ ಕಥನ ಕಾವ್ಯಗಳನ್ನು ನೂರಾರು ಕೀರ್ತನೆಗಳನ್ನು ರಚಿಸಿದ್ದಾರೆಂದು ಹೇಳಲಾಗುತ್ತದೆ.

ಸಮಗ್ರ ದಾಸ ಸಾಹಿತ್ಯ ಸಂಪುಟಗಳಲ್ಲಿ ಸ್ಥಾನ ಪಡೆದ ಬೆಳಗಾವಿ ಜಿಲ್ಲೆಯ ಇನ್ನೊಬ್ಬ ಮಹತ್ವದ ಕೀರ್ತನಕಾರ ಶ್ರೀವರ ವಿಠಲರು. ಇವರ ಮೂಲ ಹೆಸರು ರಾಮಚಂದ್ರಪ್ಪ. ಇವರು ಬೆಳಗಾವಿ ಜಿಲ್ಲೆಯ ಅಥಣಿ ತಾಲೂಕಿನ ಸವದಿ ಗ್ರಾಮದವರು. ಧಾರವಾಡದಲ್ಲಿದ್ದರು. ಅಲ್ಲಿ ದೀಪದ ಅಣ್ಣಯ್ಯಾಚಾರ್ಯ ಮತ್ತು ಶ್ರೀನಿಧಿವಿಠಲರ ಪರಿಚಯ ಕಾರಣವಾಗಿ, ಅವರಿಂದ ರಾಮಚಂದ್ರಪ್ಪನವರು ದಾಸದೀಕ್ಷೆ ಪಡೆದುಕೊಂಡು ಶ್ರೀವರವಿಠಲರಾದರು.

ದಾಸಪಂಥದ ಪ್ರಸಾರಕ್ಕಾಗಿ ಶ್ರೀವರವಿಠಲರು ಹಗಲಿರುಳು ಶ್ರಮಿಸಿದರು. ಒಮ್ಮೆ ಚಿಪ್ಪರಗಿ ಎಂಬ ಗ್ರಾಮಕ್ಕೆ ಹೋದರು. ಇವರ ಕೀರ್ತನ ಚಾತುರ್ಯಕ್ಕೆ ಮಚ್ಚಿದ ದೊಡ್ಡಬಳ್ಳಾಪುರದ

ರಾಘಣ್ಣ ಇವರಿಂದ ದಾಸದೀಕ್ಷೆ ಪಡೆದುಕೊಂಡು 'ಮುದ್ದುಮೋಹನ ವಿಠಲ' ಎಂಬ ಅಂಕಿತದಲ್ಲಿ ನೂರಾರು ಕೀರ್ತನೆಗಳನ್ನು ರಚಿಸಿದ. ಶ್ರೀವರವಿಠಲರು ೧-೮-೧೮೭೩ರಂದು ನಿಧನರಾದರು. ಅವರ ಮಗ ಸವದಿ ಅಣ್ಣಾರಾಯರು ಧಾರವಾಡದ ಟ್ರೇನಿಂಗ್ ಕಾಲೇಜಿನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿ ನಿವೃತ್ತಿಯಾಗಿದ್ದರು. ಶ್ರೀವರವಿಠಲರ ಕೀರ್ತನೆಗಳು ನಮಗೆ ದೊರತದ್ದು ಅತ್ಯಂತ ಕಡಿಮೆ. ಆದರೆ ಅವರ ಕೀರ್ತಿ ಕರ್ನಾಟಕದ ಉದ್ದಗಲಕ್ಕೂ ಹಬ್ಬಿದೆ ಮುದ್ದುಮೋಹನ ವಿಠಲ ಅಂಕಿತದ ರಾಘವರು ಇವರ ಹೆಸರನ್ನು ಚಿರಸ್ಥಾಯಿಗೊಳಿಸಿದರು. ೧೯ನೆಯ ಶತಮಾನದ ಉತ್ತರಾರ್ಧ ಮತ್ತು ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಹರಿದಾಸ ಸಾಹಿತ್ಯ ಪ್ರಸಾರ-ಪ್ರಚಾರಕ್ಕಾಗಿ ಇವರು ಸಲ್ಲಿಸಿದ ಸೇವೆ ಸ್ಮರಣೀಯವಾದುದು.

"ಸಾಮಾಜಿಕ ಆಶಯಗಳು ಬದಲಾದಂತೆ ಸಾಹಿತ್ಯಿಕ ಒಲವು ನಿಲುವುಗಳೂ ಸಹ ಬದಲಾದುದನ್ನು ಇಲ್ಲಿಯೂ ಕಾಣುವಂತಾಗಿದೆ. ಮೊದಲ ಘಟ್ಟದಲ್ಲಿ ಬಂದ ಹಳಗನ್ನಡ, ನಡುಗನ್ನಡ, ಸಂಸ್ಕೃತ, ಮರಾಠಿ, ಇಂಗ್ಲಿಷ್ ಕೃತಿಗಳಲ್ಲಿ ಅವುಗಳ ಅನುವಾದಗಳಾಗಲಿ ಸತ್ವಭರಿತ ಜನಪದ ಸಾಹಿತ್ಯವಾಗಲಿ ಪ್ರಸ್ತುತ ಘಟ್ಟದಲ್ಲಿ ಬಾರದೆ ಸ್ವತಂತ್ರ ಕಾವ್ಯ ಕಾದಂಬರಿ ಕಥೆ ವಿಡಂಬನೆ ಇತ್ಯಾದಿ ಮುಕ್ತ ಸಾಹಿತ್ಯ ಸೃಷ್ಟಿಯು ಹುಲುಸಾಗಿ ಬೆಳೆದಿರುವುದನ್ನು ಗುರುತಿಸಬಹುದು."[೬] ಪಿ.ಜಿ.ಕೆಂಪಣ್ಣವರ ತಮ್ಮ ಬೆಳಗಾವಿ ಜಿಲ್ಲಾ ಸಾಹಿತ್ಯ ದರ್ಶನ ಕೃತಿಯಲ್ಲಿ ಬೆಳಗಾವಿ ತಾಲೂಕಿನ ವಿಷಯ ಕುರಿತು ಈ ಮೇಲಿನ ಅಂಶಗಳನ್ನು ಚರ್ಚಿಸಿದ್ದಾರೆ. ಹಳಗನ್ನಡದಲ್ಲಿ ವಿಪುಲವಾಗಿ ಬೆಳೆದ ಜೈನಸಾಹಿತ್ಯ ನಂತರದಲ್ಲಿ ಬಂದ ಶರಣರ ಸಾಹಿತ್ಯದ ಫಲಶ್ರುತಿಯಿಂದ ಬಂದ ವೈಷ್ಣವ ಸಾಹಿತ್ಯ ಮತ್ತು ಜನಪದ ಸಾಹಿತ್ಯದ ಬೆಳೆ ಹುಲುಸಾಗಿ ಬೆಳೆಯಿತು.

ಶಿಷ್ಟಸಾಹಿತ್ಯದ ಒಂದು ಅಂಗವಾಗಿ ಜನಪದ ಸಾಹಿತ್ಯವು ಮೂಡಿ ಬಂದಿದೆ. ಕರ್ನಾಟಕದ ಜನಪದ ರಂಗಭೂಮಿ ಕಲೆಯ ಹಲವು ಪ್ರಕಾರಗಳಲ್ಲಿ ಬಯಲಾಟ ಮತ್ತು ಯಕ್ಷಗಾನಗಳು ಅತ್ಯಂತ ಪ್ರಮುಖವೆನಿಸಿವೆ. ಜಾನಪದ ಕವಿ ಕಲಾವಿದರು ನಾಡಿನ ತುಂಬಾ ಸಾಹಿತ್ಯ, ಸಂಗೀತ, ಸಂಸ್ಕೃತಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಜನಮನ ತಣಿಸಿದ್ದಾರೆ. ಸಂಸ್ಕೃತಿಯ ಯಾವುದೇ ಪ್ರಕಾರವು ಸಹಸ್ರಾರು ವರ್ಷಗಳ ಮಾನವ ಜೀವನ ಯಾತ್ರೆಯಲ್ಲಿ ತಲೆಮಾರಿನಿಂದ ತಲೆಮಾರಿಗೆ ಕಂಠಸ್ಥ ಸಂಪ್ರದಾಯದ ಮೂಲಕವೇ ಸಾಗಿ ಬಂದಿದೆ. ಕವಿವಾಣಿ ಹೂವಾದರೆ ಜನವಾಣಿ ತಾಯಿ ಬೇರು ಆಗಿರುವಂತೆ ಶಿಷ್ಟರಂಗಭೂಮಿಯು ಜಾನಪದ ರಂಗಭೂಮಿಯಿಂದ ಸ್ಫೂರ್ತಿ ಪಡೆದಿದೆ. ಹೀಗಾಗಿ ಕನ್ನಡದಲ್ಲಿ ಜಾನಪದ ಹಾಗೂ ಅಭಿಜಾತ ರಂಗಭೂಮಿಗಳೆರಡೂ ಪರಸ್ಪರ ಪೂರಕವಾಗಿ ಬೆಳೆದು ಬಂದವು. ಅಭಿಜಾತ ರಂಗಭೂಮಿಯು ರಾಜಾಶ್ರಯದಲ್ಲಿ ಬೆಳೆದು ಬಂದರೆ ಜಾನಪದ ಕಲೆಗಳು ಜನತೆಯ ಪ್ರೀತಿ ಪ್ರೋತ್ಸಾಹದಿಂದ ತಮ್ಮ ಸ್ವಂತ ಶಕ್ತಿ ಸಾಮರ್ಥ್ಯಗಳಿಂದ ಬೆಳೆದುಬಂದಿರುತ್ತದೆ.

ಬಯಲಾಟ ಒಂದು ಪ್ರದರ್ಶನ ಕಲೆಯಾಗಿದ್ದರೂ ಅದಕ್ಕೆ ತನ್ನದೇಯಾದ ಸಾಹಿತ್ಯವಿದೆ. ಈ ಸಾಹಿತ್ಯ ಹಾಡು ಮತ್ತು ಸಂಭಾಷಣೆ ಎಂಬ ಎರಡು ರಚನೆಗಳಲ್ಲಿ ಅಭಿವ್ಯಕ್ತಗೊಂಡಿರುತ್ತದೆ. ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲಿಯೂ ಬಯಲಾಟದ ಪ್ರಭಾವ ಇದ್ದೇ ಇದೆ. ಇದು ಸ್ಥಳೀಯ ಲಿಪಿಕಾರ ಸೃಜನಶೀಲತೆಗೆ ಪ್ರೇರಣೆ ನೀಡಿದೆ. ಅಸಂಖ್ಯಾತ ಬಯಲಾಟದ ಕಲಾವಿದರು ರಚಿಸಿರುವ ನೂರಾರು ಬಯಲಾಟ ಕಥೆಗಳ ನಿದರ್ಶನವಿದೆ. ಇವುಗಳ ಮೌಖಿಕ ಮತ್ತು ಲಿಖಿತ ದಾಖಲೆಗಳಾಗಿರುವ ರೂಪವನ್ನು ನೋಡಬಹುದು. ಹಾಗೆಯೇ ಪ್ರಾದೇಶಿಕವಾಗಿ ಬಯಲಾಟದ ಕಥೆಗಳನ್ನು ನೋಡುತ್ತ ಹೋದಾಗ ಅವುಗಳು ಒಂದು ಪ್ರದೇಶಕ್ಕೂ ಮತ್ತೊಂದು ಪ್ರದೇಶಕ್ಕೂ ಭಿನ್ನವಾಗಿ ಕಾಣಿಸಿಕೊಳ್ಳುತ್ತವೆ.

ಪ್ರಸ್ತುತವಾಗಿ ನಾಡಿನ ತುಂಬೆಲ್ಲ ಸಮೃದ್ಧವಾಗಿ ಮತ್ತು ವೈವಿಧ್ಯಮಯವಾಗಿರುವ ಬಯಲಾಟದ ಹಸ್ತಪ್ರತಿ ಕಾರ್ಯವನ್ನು ಮಾಡದೆ ಇರುವುದು ಉಪೇಕ್ಷೆಗೊಳಗಾಗಿರುವ ಸಂದರ್ಭ ತಿಳಿದು ಬರುತ್ತದೆ. ಬೆಳಗಾವಿ ಪರಿಸರವು ಬಯಲಾಟಗಳ ಕೆನ್ನೆನೆಲವೆಂದು ಹೇಳಬೇಕಾಗುತ್ತದೆ. ಏಕೆಂದರೆ ಬೆಳಗಾವಿ ಜಿಲ್ಲೆಯು ಅನೇಕ ಹಳ್ಳಿಗಳನ್ನು ಹೊಂದಿದೆ. ಪ್ರತಿಯೊಂದು ಊರಿನಲ್ಲಿ ಜಾತ್ರೆ, ಉತ್ಸವಗಳಂಥ ಸಾಂಸ್ಕೃತಿಕ ಕಾರ್ಯಗಳು ನಿರಂತರವಾಗಿ ನಡೆಯುತ್ತವೆ. ಬಯಲಾಟವಿಲ್ಲದೆ ಹಳ್ಳಿಗಳಲ್ಲಿ ಇಂಥ ಮಹತ್ವದ ಕಾರ್ಯ ನಡೆಯುವುದಿಲ್ಲ. ಆದುದರಿಂದ ಈ ಪ್ರದೇಶದಲ್ಲಿ ಬೈಲಾಟದ ಹಸ್ತಪ್ರತಿಗಳು ಹೇರಳವಾಗಿ ದೊರೆಯುತ್ತವೆ. ಕ್ಷೇತ್ರಕಾರ್ಯ ಕೈಕೊಂಡ ಸಂದರ್ಭದಲ್ಲಿ ಕೆಲವೊಂದು ಮಹತ್ವದ ಬೈಲಾಟದ ಹಸ್ತಪ್ರತಿಗಳು ನನಗೆ ದೊರಕಿವೆ. ಅವುಗಳನ್ನು ಕುರಿತು ಮತ್ತೊಂದು ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಿದ್ದೇನೆ.

ಹದಿನೆಂಟನೆಯ ಶತಮಾನದ ಮಧ್ಯಭಾಗದಷ್ಟೊತ್ತಿಗೆ ಅಪರಾಳ ತಮ್ಮಣ್ಣ ಮತ್ತು ಸಿರಗುಪ್ಪಿ ಸದಾಶಿವರಾಯರಿಂದ ರಚಿಸಲ್ಪಟ್ಟ ಶ್ರೀಕೃಷ್ಣ ಪಾರಿಜಾತ ಕಾವ್ಯ ಕುಲಗೋಡ ತಮ್ಮಣ್ಣನಿಂದ ಜನಪದ ರಂಗಭೂಮಿಗೆ ಅಳವಡಿಸಲ್ಪಟ್ಟು ಲಕ್ಷಾಂತರ ಜನರನ್ನು ತಣಿಸುವ ಕಲೆಯಾಯಿತು. ಕಾವ್ಯವೆಂಬುದು ಒಂದು ಬರಹ ಬಲ್ಲ ಶಿಷ್ಟ ಸಮುದಾಯಕ್ಕೆ ದಕ್ಕಬಲ್ಲ ಪ್ರಕಾರವಾದರೆ ಅದೇ ಕಾವ್ಯದ ರಂಗಪ್ರಯೋಗ ಜನಸಾಮಾನ್ಯರಿಗೂ ಸುಲಭವಾಗಿ ತಿಳಿಯಬಲ್ಲ ಕಲಾಮಾಧ್ಯಮವಾಗುತ್ತದೆ. ಇದನ್ನರಿತ ಕುಲಗೋಡ ತಮ್ಮಣ್ಣ ಪಾರಿಜಾತ ಕಾವ್ಯವನ್ನು ದೃಶ್ಯವಾಗಿ ಶ್ರೀ ಕೃಷ್ಣ ಪಾರಿಜಾತ ಎಂಬ ಬಯಲಾಟದ ಹರಿಕಾರನಾಗಿ ಈ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಶಾಶ್ವತ ಸ್ಥಾನವನ್ನು ಗಿಟ್ಟಿಸಿಕೊಂಡಿದ್ದಾನೆ. ಶ್ರೀಕೃಷ್ಣ ಪಾರಿಜಾತ ಬಯಲಾಟ ಪರಂಪರೆಗೆ ಮೂಲ ಪುರುಷನಾದವನು ಕುಲಗೋಡ ತಮ್ಮಣ್ಣ.

"ಶ್ರೀಕೃಷ್ಣ ಪರಿಜಾತ ಕಾವ್ಯದ ನಿರ್ಮಾಣಕ್ಕೂ ಕುಲಗೋಡ ತಮ್ಮಣ್ಣನಿಗೂ ಸುಮಾರು ೧೦೦ ವರ್ಷಗಳ ಅಂತರವಿದೆ. ಈ ಕಾಲಾವಧಿಯಲ್ಲಿ ಶ್ರೀಕೃಷ್ಣ ಪಾರಿಜಾತ ಕಾವ್ಯ ತುಂಬಾ ಜನಪ್ರಿಯತೆ ಪಡೆದಿತ್ತು. ತಂಬೂರಿ ದಾಸರು ಈ ಹಾಡುಗಳನ್ನು ಹಾಡುತ್ತಿದ್ದರು. ಅನೇಕ ಬ್ರಾಹ್ಮಣ ಮನೆತನದ ಹೆಣ್ಣು ಮಕ್ಕಳು ಈ ಕಾವ್ಯದ ಹಾಡುಗಳನ್ನು ಬಿಡಿಬಿಡಿಯಾಗಿ ಹಾಡುತ್ತಿದ್ದರು. ಅದಕ್ಕಾಗಿ ಈ ಕಾವ್ಯದ ಅನೇಕ ಹಸ್ತಪ್ರತಿಗಳು ನಿರ್ಮಾಣಗೊಂಡವು."[೭]

ಈ ಕಾವ್ಯವನ್ನು ಓದಿಕೊಂಡನು ಇದರ ಹಾಡುಗಳನ್ನು ಕೇಳಿದ ತಮ್ಮಣ್ಣ ಇದರ ಪ್ರಭಾವಕ್ಕೆ ಒಳಗಾಗಿ ಇನ್ನೊಂದು ಕಾವ್ಯವನ್ನು ಸೃಷ್ಟಿಸಲಿಲ್ಲ. ಅವನ ಜಾಣ್ಮೆ ಇರುವುದು ಈ ಕಾವ್ಯವನ್ನು ರಂಗಪ್ರಯೋಗಕ್ಕೆ ಅಳವಡಿಸುವುದು ಅವನ ಉದ್ದೇಶವಾಗಿತ್ತು. ಹೀಗಾಗಿ ಈ ಕಾವ್ಯವನ್ನು ಸಮಗ್ರವಾಗಿ ಓದಿಕೊಂಡು ತನ್ನ ಕಲ್ಪನೆಯ ಮೂಲಕ ಹೊಸದಾಗಿ ಐದು ದೃಶ್ಯಗಳನ್ನು ಆರಂಭದ ಹಂತದಲ್ಲಿ ಜೋಡಿಸಿಕೊಂಡಿದ್ದು ಹಸ್ತಪ್ರತಿಯ ಮೂಲಕ ಕಂಡುಬರುತ್ತದೆ.

೧. ಗಜಾನನ ಪ್ರವೇಶ

೨. ಗೊಲ್ಲತಿ ಪ್ರವೇಶ

೩. ಗೊಲ್ಲತಿ–ಗೋಪಾಲನ ಪ್ರವೇಶ

೪. ಕೃಷ್ಣ ರುಕ್ಮಿಣಿ ಪ್ರವೇಶ

೫. ಸತ್ಯಭಾಮಾ ಪ್ರವೇಶ

ಅಂದಂದಿನ ರಂಗ ಸಂಪ್ರದಾಯ ಅಗತ್ಯಗಳನ್ನು ಗುರುತಿಸಿಯೇ ತಮ್ಮಣ್ಣ ಆಟದ ಪ್ರಾರಂಭದಲ್ಲಿಯೇ ಈ ದೃಶ್ಯಗಳನ್ನು ಜೋಡಿಸಿಕೊಂಡಂತೆ ಕಾಣುತ್ತದೆ.

ಈ ಪ್ರದೇಶದಲ್ಲಿ ಇನ್ನೂ ಅನೇಕ ಬಯಲಾಟಗಳು ಪ್ರದರ್ಶನಗೊಳ್ಳುತ್ತಿದ್ದವು. "ಅಂದು ಮಾಯಾ–ಮಚ್ಛೇಂದ್ರ' ಬೈಲಾಟವು ನಮ್ಮ ನಾಡಿನಲ್ಲಿ ವಿಶೇಷ ಮಾನ್ಯತೆಯನ್ನು ಪಡೆದಿತ್ತೆಂದು ಹಿರಿಯರು ಹೇಳುತ್ತಾರೆ. ಶ್ರೀ ತಿಪ್ಪಣ್ಣಾ ಪಾಂಗಳೆ, ಭೀಮಶಪ್ಪ ಹಳ್ಳಿ, ಭೀಮಪ್ಪ ಧರೇಣ್ಣವರ, ಮಾಯಪ್ಪ ತಹಶೀಲದಾರರಂತಹ ಗೋಕಾಕ ಕಲಾವಿದರಲ್ಲದೆ ಖನಗಾವ, ನಾಬಾಪೂರ, ಲೋಳಸೂರ, ಅಡಿಬಟ್ಟಿ ಹಾಗೂ ಬಸಳಿಗುಂದಿ ಗ್ರಾಮದಲ್ಲಿಯೂ ಈ ಬೈಲಾಟದ ಕಲಾವಿದರು ಇದ್ದರು. ಹೀಗಾಗಿ ನಾಡಿನ ತುಂಬೆಲ್ಲಾ ಈ ಕಥೆಗೆ ಪ್ರಾಮುಖ್ಯತೆ ಇತ್ತು. ಇದೊಂದು ವೈವಿಧ್ಯಮಯವಾದ ಜಾನಪದ ಬೈಲಾಟ."[೮] ಪ್ರಸ್ತುತ 'ಮಾಯಾ ಮಚ್ಛೇಂದ್ರ ಬೈಲಾಟದ ಕರ್ತೃ ಶಿವಾನಂದ ಕವಿಯೆಂದೂ ಇವನು ಗೋಕಾಕ ತಾಲೂಕಿನ ಅಡಿಬಟ್ಟಿ ಗ್ರಾಮದವನು ಎಂದು ಪ್ರಕಾಶ ಕೋಟಿನತೋಟ ಅವರು ಅಭಿಪ್ರಾಯಪಡುತ್ತಾರೆ. ಆದರೆ ಹಣ್ಣಿಕೇರಿ ಶಿವಾನಂದ ಕವಿ ಕೂಡ ಇಂಥ ಒಂದು ನಾಟಕ ಬರೆದ ಬಗ್ಗೆ ಮಾಹಿತಿ ಇದೆ. ಈ ಬಯಲಾಟ ೧೯೨೯ರಲ್ಲಿ ರಚನೆಗೊಂಡಿದೆ. ಈ ಬಯಲಾದ ಮೂಲ ಹಸ್ತಪ್ರತಿ ಕುರಣಿ ಗ್ರಾಮದ ಬಸವಣ್ಣನ ಗುಡಿಯಲ್ಲಿ ದಿನಂಪ್ರತಿ ಪೂಜೆ ಮಾಡುತ್ತಿದ್ದಾರೆ. ಇದನ್ನು ಸಂಗನಕೇರಿಯ ಬೈಲಾಟದ ಕಲಾವಿದ ಮುತ್ತೆಪ್ಪ ಭೀ ಪಾಟೀಲರು ೧೯೫೫ರಲ್ಲಿ ಮತ್ತೊಂದು ಇದನ್ನು ನೋಡಿಯೇ ಪ್ರತಿ ಮಾಡಿಕೊಂಡಿದ್ದಾನೆ. ಶ್ರೀ ಗಜಾನನ ಸ್ತೋತ್ರ ಪದದೊಂದಿಗೆ ನಾಟಕಕ್ಕೆ ನಾಂದಿಯಾಗುತ್ತದೆ. ನಂತರದಲ್ಲಿ ಅಲ್ಲಮ ಪ್ರಭುವಿನ ವ್ಯಕ್ತಿತ್ವ ಕುರಿತು ಶಿವ–ಪಾರ್ವತಿಯ ಸಂವಾದ ಸ್ವಾರಸ್ಯಭರಿತವಾಗಿರುವುದನ್ನು ಈ ಕೆಳಗಿನಂತೆ ನೋಡಬಹುದು:

ಎಲೇ ಪಟ್ಟದರಸಿ ಪಾರ್ವತಿ ಇತ್ತ ಹೊರಳು
ಪ್ರಾಣೇಶ್ವರಾ ಹೊರಳಿದ್ದೇನೆ ಹೇಳು.

ಪಾರ್ವತಿ ಹೆಣ್ಣಿನ ಮಾಯೆಗೆ ಒಳಗಾಗದವರು ಈ ಲೋಕದಲ್ಲಿ ಯಾರಿರುವರೆಂದು ನಾರದನ ಮುಂದೆ ನಂತು ನಿನ್ನಷ್ಟಕ್ಕೆ ನೀನೇ ಸೆಹಭಾಸ್ಯ ಎಂದುಕೊಳ್ಳುವಿಯಾ ಮಾಯಿಗೆ ಸೋಲದವರು ಈ ಲೋಕದಲ್ಲಿ ಯಾರು ಇಲ್ಲವೆ

"ಪ್ರಾಣೇಶ್ವರಾ ಯಾರು ಇರುವರು ಹೇಳಿರಿ
ಪಾರವತಿ ಹೇಳುತ್ತೇನೆ ಕೇಳು
ಪ್ರಾಣೇಶ್ವರಾ ಅದೇನಿರುವುದು ಹೇಳಿರಿ
ಬಿಡು ನಿನ್ನ ವನ ಭ್ರಾಂತಿ ಮಮಕಾಂತಿ ॥ಪ॥
ಸುರಮುನಿ ವಾರ್ತೆ ಸಟಿಯಲ್ಲ ಸುದತೆ ಸಾಕು ಹಂಕಾರತೆ ವನಭ್ರಾಂತಿ
ಬಿಡು ನಿನ್ನ ಪೌರುಷ ಪ್ರಾಣೇಷು ॥ಪ॥
ಹೆಂಗಸು ಮಾಯ ಗಂಡಸು ನಾಯಿ ಇರುವುದು ನೀನ್ಯಾರಯ್ಯಾ ಪ್ರಾಣೇಶ
ಶರಣರ ಲೀಲಾ ಶರ್ವೇಷ ಬಲ್ಲಾ
ಬಿಡೋ ಬಿಡೋ ರಮನಾ ನಾ ಬಲ್ಲೆ ನಿಮನಾ
ಹಟವಿದೊ ಸಲ್ಲ ಮಮಕಾಂತಿ ವನಭ್ರಾಂತಿ." (ಕ್ಷೇತ್ರ ಕಾರ್ಯದಲ್ಲಿ ದೊರೆತ ಹಸ್ತಪ್ರತಿಯಿಂದ ಆಯ್ದದ್ದು)

ಪಾರ್ವತಿ ಸತ್ವಶೀಲನಾದ ದೇವಋಷಿಯಾದ ನಾರದನ ಕೂಡ ವೃತ್ತಾಂತರ ಪಂತವನ್ನು ತೊಡಬೇಡಾ ಆತನು ಆಡುವ ಮಾತು ಸಟಿಯಲ್ಲ ಮಾಯೆ ಒಳಗಾಗದವರು ಈ ಲೋಕದಲ್ಲಿ ಯಾರು ಇಲ್ಲವೆಂದು ಅಂಕಾರವನ್ನು ತೊಡಬೇಡಾ ಮತ್ತು ಆ ಅಲ್ಲಮನ ಸುದ್ದಿಯನ್ನು ಕನಸು ಮನಸ್ಸಿನಲ್ಲಿ ತೆಗೆಯಬೇಡಾ ಆತನು ಯಕಶ್ಚಿತನಲ್ಲಾ ಶುದ್ಧ ನನ್ನ ಚೈತನ್ಯ ಅಂಶವೆ ಭೂ ಉದ್ಧಾರಕ್ಕೆ ಅಲ್ಲಮನೆಂಬ ಹೆಸರಿನಿಂದ ಅವತರಿಸಿದವನು.

ಈ ರೀತಿ ಶಿವ-ಪಾರ್ವತಿಯ ಮಧ್ಯ ವಾಗ್ವಾದ ನಡೆದು ಕೊನೆಗೆ ಅಲ್ಲಮನನ್ನು ಒಲಿಸಿಕೊಳ್ಳುವ ಗಿರಿಜೆ ಮಾಯೆಯನ್ನು ಕಳುಹಿಸುತ್ತಾಳೆ. ಮಾಯೆಯ ಪ್ರವೇಶವಾಗುತ್ತದೆ. ದೂತಿ ಪ್ರವೇಶ ಭಾಗ-೨ ಎಂದು ವರ್ಗೀಕರಣ ಮಾಡಿದ್ದಾರೆ. ಸಾತ್ವಿಕಿಯ ಪ್ರವೇಶ ಮತ್ತು ಕೌಶಿಕನ ಆಗಮನದೊಂದಿಗೆ ನಾಟಕಕ್ಕೆ ತೆರೆಬೀಳುತ್ತದೆ. ಕಿತ್ತೂರ ಚೆನ್ನಮ್ಮ ಸಂಗೊಳ್ಳಿ ರಾಯಣ್ಣ, ಬೆಳವಡಿ ಮಲ್ಲಮ್ಮ, ಹೇಮರಡ್ಡಿ ಮಲ್ಲಮ್ಮನಂಥ ಸ್ವಾತಂತ್ರ್ಯ ಹೋರಾಟಗಾರರ ಕುರಿತು ಪೌರಾಣಿಕ ನಾಟಕಗಳಿಗೆ ಹೆಚ್ಚಿನ ಮಾನ್ಯತೆಯಿತ್ತು ಹೀಗಾಗಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಸೂಚಿ ಸಂ. ೪ರ ೫೭೫ರ ಪಟ್ಟಿಯ ಸಂಖ್ಯೆಯಲ್ಲಿ ಹೇಮರಡ್ಡಿ ಮಲ್ಲಮ್ಮನ ಬೈಲಾಟವಿರವುದನ್ನು ಗಮನಿಸಬಹುದು.

"ಆದಿ : 'ಹೇಮರಡ್ಡಿ ಆಖ್ಯಾನವನ್ನು ಬರೆಯಲಿಕ್ಕೆ ಪ್ರಾರಂಭ । ಪ್ರವೇಶ । ರಾಗಭೂಪ । ನಾಂದಿ । ತಾಳ ಅಡಾ ಚೌಪತಾಳ । ಶುಭಕರ ಶಿವಮಲ್ಲಿಕಾರ್ಜುನ ಘನ ಶ್ರೀಶೈಲನಾಥ ಪೊರೆಯೋ ವರದಾತ ಶಾಂತಿಮನಾ ॥ ಪಲ್ಲ॥ ಪರಮ ಕರುಣಿ ಗಿರಿವರಾ ಪಾವನ ಸುರವಾದಿತನೇ।

ಅಂತ್ಯ : ಮಂಗಲ । ರಾಗವಸಂತ । ತಾಳ ಏಕ । ಜಯಗಿರಿತನುಜಾತೆ । ಮಂಗಳ ಮಹಾದೇವ ॥ಪಲ್ಲ॥

ನಾಟ್ಯಾರಾಜನಬೋದ್ಧಾರ ಭಸ್ಮಾಂಕಿತನ ನಿಜ ಶರೀರ ॥ ಶೈಲವಾಸ ॥

ವ್ಯಾಲಧಾರ ಅದಮಹಾಕಾಲ ಸಂಹಾರ । ಪಾಹಿಕೃಪಾಕರಾ ಭಕ್ತನುವರ

ದೇದಾಂಬ ವಿಮಲ ಶ್ರೀ ಗಿರೀಶಾ ॥ಸಮಾಪ್ತಿ॥"

ಹೀಗೆ ಬೆಳಗಾವಿ ಪರಿಸರದಲ್ಲಿ ಕಲಾವಿದರು ಬೈಲಾಟವನ್ನು ಕೃಷಿಮಾಡುವುದರ ಮೂಲಕ ರಂಗಭೂಮಿಯನ್ನು ಶ್ರೀಮಂತಗೊಳಿಸಿರುವುದು ಹೆಮ್ಮೆಯ ಸಂಗತಿಯಾಗಿದೆ. ಜಾನಪದ ಸಾಹಿತ್ಯಕ್ಕೆ ಮುಕುಟಪ್ರಾಯವಾಗಿ ಬೆಳೆಯುವಲ್ಲಿ ಅನೇಕ ಕಲಾವಿದರು ವಿಶಿಷ್ಟ ಕಾಣಿಕೆಯನ್ನು ನೀಡಿದ್ದಾರೆ. ಅದರಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬೈಲಾಟದ ಹಸ್ತಪ್ರತಿಯೊಂದಿಗೆ ಚಿನ್ನದ ಗಣಿಯಂತಿರುವ ಲಾವಣಿ ಹಸ್ತಪ್ರತಿಗಳು ಸಿಕ್ಕಿವೆ. ಇಡೀ ಜಿಲ್ಲೆಯ ತುಂಬೆಲ್ಲ ಹಳ್ಳಿ ನಗರಗಳಲ್ಲಿ ಲಾವಣಿ ಹಾಡುವವರು, ಬರೆಯುವವರು ಸಂಖ್ಯೆ ಅಪಾರವಾಗಿತ್ತು. ಈ ದಿಶೆಯಲ್ಲಿ ನೋಡಿದಾಗ ಬೆಳಗಾವಿ ಜಿಲ್ಲೆಯು ಲಾವಣಿಗಳ ಖನಿಜವಾಗಿದೆ.

ಜನಪದ ಸಾಹಿತ್ಯದ ಯಾವುದೇ ಪ್ರಕಾರವಾದರೂ ಅದರ ಮೂಲ ಪ್ರಾಚೀನತೆ, ರಚಿತವಾದ ಕಾಲ, ರಚಿಸಿದವರ ಕುರಿತು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಮೌಖಿಕ ಸಂಪ್ರದಾಯದ ಜನಪದ ಸಾಹಿತ್ಯ ಕಾಲಗರ್ಭದಲ್ಲಿ ಗತಿಸಿದ ಎಲ್ಲ ವಿವರಣೆಗಳನ್ನು ಪಡೆಯುತ್ತ ಪ್ರಾದೇಶಿಕ ವೈವಿಧ್ಯತೆಯನ್ನು ಹೊಂದಿರುತ್ತವೆ. ಇದಕ್ಕೆ ಬೆಳಗಾವಿ ಜಿಲ್ಲೆಯು ಹೊರತಾಗಿಲ್ಲ. ಬೆಳಗಾವಿಯನ್ನಾಳಿದ ವಿವಿಧ ರಾಜಮನೆತನಗಳು ಅದರಲ್ಲೂ, ಕಿತ್ತೂರು ಅರಸ ದೊರೆ ಮಲ್ಲಸರ್ಜ ದೇಸಾಯಿಯ ಕಾಲಾವಧಿಯಲ್ಲಿ ಶಿಷ್ಟ ಮತ್ತು ಜನಪದ ಸಾಹಿತ್ಯಗಳೆರಡಕ್ಕೂ ಪ್ರಾಶಸ್ತ್ಯ ದೊರೆತು ಸಮೃದ್ಧವಾಗಿ ಬೆಳೆದದ್ದನ್ನು ಕಾಣಬಹುದು. ಇದರಿಂದ ಲಾವಣಿಗಳು, ಕೋಲು ಪದಗಳು, ಡೊಳ್ಳು ಪದಗಳು, ಚೌಡಿಕೆ ಪದಗಳು, ಹಂತಿ ಪದಗಳು ಅನೇಕ ಜನಪದ ಕಲಾಪ್ರಕಾರಗಳಿಂದ ಬೆಳಗಾವಿಯ ಜನಪದ ಸಾಹಿತ್ಯ ಶ್ರೀಮಂತಿಕೆಯ ಶಿಖರವನ್ನು ತಲುಪಿದೆ. ರಸಮಿಶ್ರಣದೊಂದಿಗೆ ಲಾವಣಿಗಳು ಬೆಳೆಯುತ್ತ ಹೋಗುತ್ತವೆ. ವೀರ, ಕರುಣ, ಭಯಾನಕ, ಹಾಸ್ಯ ಇಂಥ ರಸಪಾಕದೊಂದಿಗೆ ಜಿಲ್ಲೆಯ ಲಾವಣಿಗಳು ಪ್ರಸಿದ್ಧಿಯನ್ನು ಪಡೆದುಕೊಂಡಿದ್ದು ಗಮನಾರ್ಹ ಸಂಗತಿಯಾಗಿದೆ.

**ಬೆಳಗಾವಿ ಜಿಲ್ಲೆಯ ಪ್ರಮುಖ ಲಾವಣಿಕಾರರು :**

ಲಾವಣಿ ಸಾಹಿತ್ಯ ಸಂಪ್ರದಾಯ ಉಗಮ ವಿಕಾಸದ ಕುರಿತು ಇಲ್ಲಿ ಹೆಚ್ಚು ಚರ್ಚಿಸದೆ, ಬೆಳಗಾವಿ ಜಿಲ್ಲೆಯ ಪ್ರಮುಖ ಲಾವಣಿಕಾರರ ಅಪ್ರಕಟಿತ ಸಾಹಿತ್ಯದ ಮಾಹಿತಿಯನ್ನು ಇಲ್ಲಿ

ನೀಡುತ್ತಿರುವೆ. ಲಾವಣಿಗಳನ್ನು–ಗೀಗೀ ಪದಗಳನ್ನು ಹಾಡುವ ಕೆಲವು ಸಂಪ್ರದಾಯಗಳು ಉತ್ತರ ಕರ್ನಾಟಕದಲ್ಲಿ ಪ್ರಸಿದ್ಧವಾಗಿವೆ. ತೇರದಾಳ ಲಾವಣಿ ಸಂಪ್ರದಾಯ, ಇಂಗಳಗಿ ಲಾವಣಿ ಸಂಪ್ರದಾಯ, ಸಾವಳಗಿ ಲಾವಣಿ ಸಂಪ್ರದಾಯ ಮೊದಲಾದ ಸಂಪ್ರಾದಯಗಳ ಜೊತೆಗೆ 'ಹುಲಕುಂದ ಲಾವಣಿ ಸಂಪ್ರದಾಯ'ವು ಅಸ್ತಿತ್ವದಲ್ಲಿತ್ತು. ಭಾರತೀಯ ಸ್ವಾತಂತ್ರ್ಯ ಆಂದೋಲನದಲ್ಲಿ ಈ ಹುಲಕುಂದ ಲಾವಣಿ ಸಂಪ್ರದಾಯದ ಮುಖಂಡರು ಮಾಡಿದ ದೇಶಸೇವೆ ಅವಿಸ್ಮರಣೀಯವಾದುದು. ತಮ್ಮ ಲಾವಣಿಗಳ ಮೂಲಕ ರಾಷ್ಟ್ರಭಕ್ತಿಯನ್ನು ಜನಸಾಮಾನ್ಯರ ನರನಾಡಿಗಳಲ್ಲಿ ಹುಮ್ಮಸ್ಸನ್ನು ಉದ್ದೀಪನಗೊಳಿಸಿ, ಚಳುವಳಿಗೆ ಒಂದು ಚೈತನ್ಯಶಕ್ತಿಯನ್ನು ನೀಡಿದರು. ಹುಲಕುಂದ ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲೂಕಿನ ಒಂದು ಚಿಕ್ಕ ಹಳ್ಳಿ. ಈ ಹಳ್ಳಿಯ ಶಿವಲಿಂಗಕವಿ, ಭೀಮಕವಿ, ಪ್ಯಾಟಿಶೆಟ್ಟರು ಮೊದಲಾದವರು ಲಾವಣಿಕರ್ತೃಗಳಾಗಿ, ಅವರ ಶಿಷ್ಯ–ಪ್ರಶಿಷ್ಯ ಪರಂಪರೆ ಈ ಲಾವಣಿಗಳನ್ನು ನಾಡಿನ ತುಂಬಾ ಹಾಡುತ್ತ ಸಂಚಲನವನ್ನುಂಟು ಮಾಡಿದರು. ಈ ಜಿಲ್ಲೆಯ ಪ್ರಮುಖ ಲಾವಣಿಕಾರರೆಂದರೆ :

೧. ಸಂಗೊಳ್ಳಿ ಬಡಿಗೇರ (೧೭೮೦–೧೮೭೦)

೨. ಮೋದಿನ ಸಾಬ್, ಬೈಲಹೊಂಗಲ (೧೭೮೦–೧೮೭೦)

೩. ಹೊಂಗಲದ ಬಸವ, ಬೈಲಹೊಂಗಲ (೧೭೯೦–೧೮೭೦)

೪. ಶಾಮರಾಯ ಬೈಲಹೊಂಗಲ (೧೮೦೦–೧೮೮೦)

೫. ಸಿದ್ಧಸೇವಕ ಗೋಕಾಕ (೧೮೦೦–೧೮೮೦)

೬. ಅಡಿವೆಪ್ಪಗೌಡ ನೇಸರಗಿ (೧೮೦೦–೧೯೦೦)

೭. ಪಂಚಾಕ್ಷರಿ ಉಳ್ಳಿಗೇರಿ (೧೮೨೦–೧೯೦೦)

೮. ಅಪ್ಪು ಬೈಲಹೊಂಗಲ (೧೮೨೦–೧೯೦೦)

೯. ಕುಂಬಾರ ಮಲ್ಲಪ್ಪ ಮಲ್ಲಾಬಾದಿ (೧೮೩೦–೧೯೦೦)

೧೦. ಮಲ್ಲೇಶಪ್ಪಾ ಗೋಕಾಕ (೧೮೩೨–೧೯೧೭)

೧೧. ಹರದಾಸ ಮಲ್ಲ ಮಲ್ಲಾಬಾದಿ (೧೮೩೦–೧೯೦೦

೧೨. ರಾಣಾ ಕೂಬಣ್ಣಾ (ಮುರಗೋಡ) (೧೮೩೩–೧೯೨೬)

೧೩. ಬಾಲಗೋಪಾಲ ಬೆಲ್ಲದ ಬಾಗೇವಾಡಿ (೧೮೩೦–೧೯೧೦)

೧೪. ಕೆಂಚನಾಯಕ ಇಂಚಲ (೧೮೪೦–೧೯೨೦)

೧೫. ಸಂಗನಬಸಪ್ಪ ಭೇಂಡಿಗೇರಿ (೧೮೪೪–೧೯೧೪)

೧೬. ಸಕ್ರನಾಯಕ ಇಂಚಲ (೧೮೪೭–೧೮೯೦)

೧೭. ಯಲ್ಲಪ್ಪ ಗೋಕಾಕ (೧೯೫೦-೧೯೦೦)

೧೮. ದ್ವಾರಪಾಲ ಅಲಾರವಾಡ (೧೮೫೦-೧೯೨೪)

೧೯. ಲಕ್ಷ್ಮಣ ಗೋಕಾಕ (೧೮೫೦-೧೯೪೨)

೨೦. ಸಾತು ಕ್ಯಾಮಣ್ಣ ಗೋಕಾಕ (೧೮೬೨-೧೯೪೨)

೨೧. ಕಲ್ಮೇಶ್ವರ ಶಿರಗೂರ (೧೮೬೮-೧೯೬೮)

೨೨. ಗೌಡಪ್ಪ ಬೆಂಡಿಗೇರಿ (೧೮೭೦-೧೯೫೨)

೨೩. ಬಸವಾರ್ಯ ಕಿತ್ತೂರ (೧೮೭೬-೧೯೨೧)

೨೪. ಬಸಪ್ಪ ಬನೂ ಗೋಕಾಕ (೧೮೮೪-೧೯೬೪)

೨೫. ಚನ್ನಮಲ್ಲಯ್ಯ ಕುಕಡೊಳ್ಳಿ (೧೮೮೫-೧೯೭೧)

೨೬. ಮಲ್ಲಪ್ಪ ಕುಡಚಿ (೧೮೮೭-೧೯೬೨)

೨೭. ಬಸವಣ್ಣೆಪ್ಪ ನೇಸರಗಿ (೧೮೯೧-೧೯೭೧)

೨೮. ಮಲ್ಲಪ್ಪ ಮುತನಾಳ (೧೮೯೦-೧೯೫೦)

೨೯. ಲಕ್ಷ್ಮಣ ಮಣ್ಣಿಕೇರಿ (೧೮೯೪-೧೯೩೬)

೩೦. ಹುಸೇನ ಯಾದವಾಡ (೧೮೯೬-೧೯೭೬)

೩೧. ಸಿದ್ಧಪ್ಪ ಬೆಂಡಿಗೇರಿ (೧೯೦೦-೧೯೭೦)

೩೨. ರಾಮಚಂದ್ರ ಯಂಕಂಚಿ (೧೯೧೦-೧೯೭೫)

೩೩. ಅಪ್ಪಣ್ಣ ಬಾಳಗೇರಿ (೧೯೧೦-೧೯೭೫)

೩೪. ಬಿಷ್ಟಪ್ಪ ತಿಗಡೊಳ್ಳಿ (೧೯೨೨-೧೯೮೦)

೩೫. ಮುರಳಿಧರ ಅಥಣಿ (೧೯೨೨-೧೯೮೫)

೩೬. ಮರಿಕಲ್ಲಪ್ಪ ಮಲಶೆಟ್ಟಿ ತಿಗಡೊಳ್ಳಿ (೧೯೨೨-೨೦೦೦)

೩೭. ಮೀರಾಸಾಹೇಬ ಪರಮಾನಂದವಾಡಿ (೧೯೨೨-೧೯೮೦)

೩೮. ಬಾಹುಬಲಿ ಅಲಾರವಾಡ (೧೯೨೭-೧೯೯೯)

೩೯. ಹಸನಸಾಬ ಹುಲಗಬಾಳಿ (೧೯೨೭-೧೯೯೦)

೪೦. ಅಲಭೈರಿ ಹಾರೂಗೇರಿ (೧೮೫೦-೧೯೨೦)

೪೧. ಸವದತ್ತಿ ಸಿದ್ಧಪ್ಪ (೧೮೭೦-೧೯೩೫)

೪೨. ಸೋಮಲಿಂಗಕವಿ ಹೊಸೂರ(ಬೈಲಹೊಂಗಲ) (೧೯೧೪-೨೦೧೪)"[೧೦]

ಒಟ್ಟಿನಲ್ಲಿ ಪ್ರಮುಖವಾಗಿ ೪೨ ಜನ ಲಾವಣಿಕಾರರು ಜಿಲ್ಲೆಯಲ್ಲಿ ಕಂಡುಬರುತ್ತಾರೆ. ಈ ಲಾವಣಿಗಳ ಮಹತ್ವದ ಅಂಶಗಳನ್ನು ವರ್ಗೀಕರಿಸಿ ನೋಡಲೇಬೇಕಾಗುತ್ತದೆ.

೧. ಸ್ತೋತ್ರ ಲಾವಣಿಗಳು

೨. ಹರದೇಶಿ–ನಾಗೇಶಿ (ಹೆಣ್ಣು ಹೆಚ್ಚೋ ಗಂಡು ಹೆಚ್ಚೋ ಎನ್ನುವ ಲಾವಣಿಗಳು)

೩. ಪೌರಾಣಿಕ ಲಾವಣಿಗಳು

೪. ಚಾರಿತ್ರಿಕ ಲಾವಣಿಗಳು

೫. ಶರಣ–ಸಂತರ ಕುರಿತ ಲಾವಣಿಗಳು

೬. ರಾಷ್ಟ್ರೀಯ ಪ್ರಜ್ಞೆಯ ಲಾವಣಿಗಳು

೭. ಸಾಮಾಜಿಕ ಪ್ರಜ್ಞೆಯ ಲಾವಣಿಗಳು

ಮೇಲಿನ ಲಾವಣಿಕಾರರ ಬಹುತೇಕ ವಿವರಗಳು ಇಂದು ಅಲಭ್ಯವಾಗಿವೆ. ಆದರೂ ಹುಲಕುಂದ ಲಾವಣಿಗಳ ಕುರಿತು ಒಂದಿಷ್ಟು ಆಶಾದಾಯಕ ಬೆಳವಣಿಗೆಯಾಗಿದೆ. ಚೆನ್ನಕ್ಕ ಪಾವಟೆ ಅವರು ಹುಲಕುಂದ ಭೀಮಕವಿ ಲಾವಣಿಗಳ ಸಂಗ್ರಹವನ್ನು ಸಂಪಾದಿಸಿ ಪ್ರಕಟಿಸಿದ್ದಾರೆ. ಆದರೆ ಇನ್ನೂ ನೂರಾರು ಲಾವಣಿಗಳು ಅಪ್ರಕಟಿತವಾಗಿ ಉಳಿದುಕೊಂಡಿರುವುದು ನನ್ನ ಕ್ಷೇತ್ರಾಧ್ಯಯನದಿಂದ ಕಂಡುಕೊಂಡಿರುವೆ. ನಾನು ಹುಲಕುಂದ ಗ್ರಾಮಕ್ಕೆ ಭೇಟಿಕೊಟ್ಟಾಗ ಹುಲಕುಂದ ಲಾವಣಿ ಸಂಪ್ರದಾಯದ ಹಾಡುಗಾರರಾಗಿದ್ದ ಹನುಮಂತಪ್ಪ ಹರಿಜನ ಹೆಬ್ಬಾಳ, ದುಂಡಪ್ಪ ನರಸನ್ನವರ ಚಿಕ್ಕುಂಬಿ, ಸೈದುಸಾಬ್ ನದಾಫ್, ಚನ್ನಪ್ಪ ಚಿಂಚಲಿ ಹುಲಕುಂದ, ಸಿದ್ಧಪ್ಪ ದ್ಯಾವನ್ನವರ ನವಲೂರ, ಗಂಗವ್ವ ಎಡ್ರಾವಿ, ಫಕೀರವ್ವ ಗುಡಿಸಾಗರ ಇವರೆಲ್ಲ ಹುಲಕುಂದ ಶಿವಲಿಂಗ ಕವಿ ಮತ್ತು ಭೀಮಕವಿಗಳ ಶಿಷ್ಯರು. ಇವರಲ್ಲಿ ಮೌಖಿಕವಾಗಿ ಈ ಸಾಹಿತ್ಯ ಪರಂಪರೆ ಉಳಿದುಕೊಂಡಿದೆ. ಇವುಗಳನ್ನ ದಾಖಲೀಕರಣ ಮಾಡಿ, ಉಳಿಸಬೇಕಾದ ಅನಿವಾರ್ಯತೆ ಇದೆ. ಇವರಲ್ಲಿ ಕೆಲವರು ಇನ್ನೂ ಚೆನ್ನಾಗಿ ಹಾಡಬಲ್ಲವರಿದ್ದಾರೆ. ಇವರಿಂದ ಆದಷ್ಟು ಬೇಗ ಧ್ವನಿ ಮುದ್ರಣವಾಗಬೇಕಾದ ಅವಶ್ಯಕತೆ ಇದೆ.

ಶಿವಲಿಂಗ ಕವಿಗಳು ಬರೆದ ನೂರಾರು ಲಾವಣಿಗಳಲ್ಲಿ ಇನ್ನೂ ಅಪ್ರಕಟಿತವಾಗಿ ಉಳಿದಿರುವ ಕೆಲವು ಲಾವಣಿಗಳನ್ನು ನಾನು ಪಟ್ಟಿ ಮಾಡಿರುವೆ.

೧. ಶ್ರೀದೇವಿ ಸ್ತೋತ್ರದ ಲಾವಣಿ, ೨. ಶಂಕರನ ಸ್ತೋತ್ರ ಲಾವಣಿ, ೩. ಶ್ರೀರಾಮನ ಸ್ತೋತ್ರ, ೪. ಸ್ತೋತ್ರ–೧, ೫.ಸ್ತೋತ್ರ–೨ ಈ ಐದು ಸ್ತೋತ್ರ ಲಾವಣಿಗಳಾದರೆ :

೧. ಆದಿಯಲ್ಲಿ ಆಕಾರ ಇದ್ದಿದ್ದಿಲ್ಲ ನಿರಾಕಾರ, ೨. ಶಕ್ತಿ ಹೆಚ್ಚಂತ ಸಾರಿ ಹೇಳತಿ, ೩. ಶಕ್ತಿ ಅಲ್ಲ ಸಾಂಬನ ಸರಿ, ೪. ಯುಕ್ತಿ ಇಲ್ಲದೆ ಶಕ್ತನು ಮಾಡಾಕಿ, ೫. ಹೆಂಗಸ ಹೆಚ್ಚನ್ನು ನಾಗವ್ವ, ೬. ಶ್ರೇಷ್ಠವಾದ ಜಂಗಮಗ ನಿಷ್ಠುರಾಡುತಿ, ೭. ಪಾಯಾ ಹಿಡಿದ ಪದಾ ಹಾಡ,

೮. ಕಾಂತಿ ನೋಡಿ ನಾಡ ಭ್ರಾಂತನಾದಿನೋ, ೯. ಸಾಂಭವಕ್ಕಿಂತ ನಿಮ್ಮ ಶಕ್ತಿ ಹೆಚ್ಚಲ್ಲ, ೧೦. ಕೇಳಿದ್ದು ಹೇಳಬೇಕು, ೧೧. ಹದಾ ತಿಳಿಯದೆ ಪದಾ ಹಾಡತಿ, ೧೨. ಮಹಾದೇವನ ಸಹಾಯದಿಂದ ಶಕ್ತಿ ಮಾಡ್ಯಾಳ ಕದನ, ೧೩. ತಂದಿ ಇಂದ್ರ ಬಿದ್ದ ತಾಯಿ ಗರ್ಭದೊಳು ಪಿಂಡ, ೧೪. ಹಿತ್ತಾಳೆಗೆ ಬಂಗಾರಂತ ಒತ್ತೊತ್ತಿ ಹೇಳಿದ್ದಾಂಗ, ೧೫. ಎಷ್ಟೋ ಮಂದಿ ಹಾಳಾಗಿ ಹೋಗ್ಯಾರ ಶಕ್ತಿ ಹೆಚ್ಚಂತ, ೧೬. ಹೆಣ್ಣ ಹೆಚ್ಚಂತ ಕಣ್ಣ ಕಿಸುತಿ, ೧೭. ಎಲ್ಲಮ್ಮ ಹೆಚ್ಚಂತ ಬಲ್ಲಂಗ ಹೇಳ್ತಿ, ೧೮. ಕೆಟ್ಟ ಕಲ್ಗಿ ರಂಡಿ, ೧೯. ಮಳ್ಳ ಹುಡಗಿ ನಿನಗೇನ ಗೊತ್ತ, ೨೦. ಮೊಜ್ಜಿ ನನ್ನ ವ್ಯಾಜ್ಯ ಮಾಡಬೇಡ, ೨೧. ಆದಿಶಕ್ತಿ ಹೆಚ್ಚಂತ ವಾದ ಮಾಡತಿ, ೨೨. ಸಾಂಬನಿಂದ ಶಕ್ತಿ ಸಡಗರ, ೨೩. ಸಲಗಿ ನಾಯಿ ತಲಿಗೇರಿದಂಗ

ಮೇಲಿನ ೨೩ ಅಪ್ರಕಟಿತ ಲಾವಣಿಗಳೆಲ್ಲ ಹರದೇಶಿ ಸಂಪ್ರದಾಯಕ್ಕೆ ಸಂಬಂಧಪಟ್ಟಿವೆ. ಅಲ್ಲದೆ,

೧. ಆದಿಶಕ್ತಿಯಿಂದ ಆಕಾರ, ೨. ಶಂಕರನ ತೆಲಿ ಮ್ಯಾಲ ನಮ್ಮ ಹೆಣ್ಣ, ೩. ರಾವಣನನ್ನು ಶಕ್ತಿ ಹೊಡೆದದ್ದು ಸುಳ್ಳಲ್ಲ, ೪. ಪರಮ ಕಪಟಿ ನಾರಾಯಣ, ೫. ಲಕ್ಷ್ಮೀ ಅಗಲಿ ಹರಿಗೆ ಬಂತೋ ವನವಾಸ, ೬. ಕುರುಡನ ಕೈಯ್ಯಾಗ ಕನ್ನಡಿ ಕೊಟ್ಟಾಂಗ ಈ ಅಪ್ರಕಟಿತ ಲಾವಣಿಗಳು ನಾಗೇಶಿ ಸಂಪ್ರದಾಯಕ್ಕೆ ಸೇರಿವೆ.

೧. ಗೋರಾ ಕುಂಬಾರ, ೨. ಬೇಡರಕಣ್ಣಪ್ಪ, ೩. ಭಕ್ತ ಸಿರಿಯಾಳ, ೪. ದಾಮೋಜಿ ಪಂತ, ೫. ಲಿಂಗಶೆಟ್ಟಿ, ೬. ರಾಮದುರ್ಗ ದುರಂತ, ೭. ಕಿತ್ತೂರ ಚೆನ್ನಮ್ಮ, ೮. ಕಿತ್ತೂರ ಯುದ್ಧ, ೯. ಅಪ್ಪಯ್ಯಸ್ವಾಮಿ, ೧೦. ನರಸಾಬಾಯಿ, ೧೧. ಕನ್ನಡ ನಾಡಿನ ಹುಲಿಗಳು, ೧೨. ಇಂದಿರಾಗಾಂಧಿ ಕೊಲೆ ಮುಂತಾದ ಲಾವಣಿಗಳು ಇನ್ನೂ ಅಪ್ರಕಟಿತವಾಗಿವೆ. ಶಿವಲಿಂಗ ಕವಿಗಳ ಜೀವನ ಮತ್ತು ಲಾವಣಿ ಸಾಹಿತ್ಯ ಕುರಿತು ಒಂದು ಎಂ.ಫಿಲ್. ಪ್ರಬಂಧ ರಚಿಸುವಷ್ಟು ಮಾಹಿತಿ ಲಭ್ಯವಿದೆ ಎಂಬುದು ಗಮನಾರ್ಹ. ಪ್ರಕಟಿತ ಮತ್ತು ಅಪ್ರಕಟಿತ ಸಾಹಿತ್ಯಿಕ ಲಾವಣಿಗಳು ಈ ನಾಡಿನಲ್ಲಿ ಹೆಚ್ಚಾಗಿ ದೊರೆಯುತ್ತವೆ. ಈ ಪರಿಸರದಲ್ಲಿ ಜಾನಪದ ಕಲಾವಿದರು ತುಂಬಾ ಆಸಕ್ತಿವುಳ್ಳವರಾಗಿದ್ದಾರೆ. ಅಪ್ರಕಟಿತ ಹಸ್ತಪ್ರತಿಗಳು ದೊರೆತರೆ ಅವುಗಳನ್ನು ಪ್ರಕಟಿಸುವ ಪಸರಿಸುವ ಕಾರ್ಯವನ್ನು ತೀವ್ರಗತಿಯಲ್ಲಿ ಮಾಡುತ್ತಾರೆ. ಹೀಗಾಗಿ ಹಾರೂಗೇರಿಯ ಪ್ರಮುಖ ಕವಿಯಾದ ಅಲಭ್ಯೆರಿಯ ಲಾವಣಿಗಳು ಸಾಹಿತ್ಯಿಕ ಅಂಶವನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡಿರುವ ವಿಚಾರವನ್ನು ಲಾವಣಿಯ ಮೂಲಕವೇ ತಿಳಿದುಕೊಳ್ಳಬಹುದು.

"ತಿಳಿಮನವ್ಯಾತಕೆ ಬಳಲುವೆ ಬರಿದೆ
ಬಳಲುವೆ ಬರಿದೆ ಅಳಿಯಾಸೆ ಬಿಡದೆ ॥ಪ॥
ಸುಡು ಸಾಕೆನ್ನದೆ ಕಡು ಕಷ್ಟದ ಬಾಧೆ
ಕಡುಕಷ್ಟದ ಬಾದೆ ಎಡರವ ನೋಡದೆ ॥೧॥

ಗಾಸಿಯಾಗುವೀ ಜಗದೀಶನ ಸ್ಮರಿಸದೆ
ಈಶನ ಸ್ಮರಿಸದೇ ಪಾಶಗಳಳಿಯದೇ ॥೨॥
ಹಾರೂಗೇರಿ ದೇವನ ಭೈರದೈಕ್ಯಾಗದೆ
ಬೆರೆದೈಕ್ಯಾಗದೆ ವರಮುಕ್ತಿ ಬೇಡದೆ." ॥೩॥"[೧೧]

ಮೇಲಿನ ತತ್ವಪದ ಲಾವಣಿಯಲ್ಲಿ ಚರಣದ ಕೊನೆಯಲ್ಲಿ ಅಂತ್ಯ ಪ್ರಾಸವನ್ನು ಲಾವಣಿಕಾರ ಬಳಸಿರುವುದನ್ನು ನೋಡಬಹುದು. ಕವಿ ಅಲಭೈರಿಯು ಕರ್ಬಲ್ ಹಾಡುಗಳನ್ನು ರಚಿಸಿರುವುದು ಕಂಡುಬರುತ್ತದೆ.

"ಮೂರುಲೋಕಕ್ಕೆ ಗುರುವೆ ಆಧಾರಾ
ಅಲ್ಲಾಮಯ ಲಾಲೀ ಮುಖ್ಯಪೀರಾ ॥ಪಲ್ಲ॥
ಸರ್ವಸಾಕ್ಷಿ ಒಬ್ಬ ದೇವರಾ
ಏಕ ಅಲ್ಲ ನಾಮ ಹಜಾರಾ ॥೧॥
ಪಾಲನ ಉತ್ಪತ್ತಿ ಪರಮೇಶ್ವರಾ
ಕಾರಣ ತೊಟ್ಟತ್ರಿ ಮೂರ್ತಿ ಅವತಾರಾ
ಬಡ್ಡಿ ಲೋಕದೊಳ್ ಜಾತಿ ಮುನ್ನೂರಾ
ಬೇರೆ ಬೇರೆ ಎತ್ತಿದ ತಾನೆ ಹೆಸರಾ."[೧೨]

ಗೋಕಾವಿ ನಾಡಿನ ಶ್ರೇಷ್ಠ ಲಾವಣಿಕಾರನಾದ ಸಾತು ಕ್ಯಾಮಣ್ಣನು ಅನೇಕ ಲಾವಣಿಗಳನ್ನು ರಚಿಸಿದ್ದಾನೆ. ಇವುಗಳನ್ನೆಲ್ಲ ಒಂದೆಡೆ ಸಂಗ್ರಹಿಸಿ ಪ್ರಕಟಿಸಿದ್ದಾರೆ.

"ಪ್ರಮಾದಿ ಇತ್ತ ಸಂವತ್ಸರಾ
ವೈಶಾಖ ಶುದ್ಧ ತೃತಿಯಾ ಶನಿವಾರಾ
ಹೊತ್ತು ಆಗಿತ್ತು ಎರಡು ಪ್ರಹರಾ
ಶುಕ್ಲಯೋಗ ಕೂಡಿತ್ತ ಸುಖಕರಾ
ಸಹಸ್ರ ಅರ್ಜುನನ ಕೊಂದೇನ ರವಿವಾರ
ಹೊತ್ತ ಆಗಿತ್ತ ಮೂರು ಪ್ರಹರಾ
ನಕ್ಷತ್ರ ಮಾಡಿದನ ಶುರಾ
ನನ್ನಿ ಗುರುವ ವಶಿಷ್ಠರಾ."[೧೩]

ಪ್ರಸ್ತುತ ಲಾವಣಿಕಾರನು ಐತಿಹಾಸಿಕ ಪೌರಾಣಿಕ ಹಾಡುಗಳನ್ನು ರಚಿಸುವುದಷ್ಟಲ್ಲದೆ, ಸಂತ ಕವೀರದಾಸರಂಥ ದಾರ್ಶನಿಕ ವ್ಯಕ್ತಿಗಳ ಲಾವಣಿಯನ್ನು ಬರದಿದ್ದಾನೆ.

"ಸಂತ ಸಜ್ಜನರ ಪುರುಷರ ಗಣಾ
ಭಕ್ತಿ ಲಕ್ಷಣಾ ಕೇಳ್ರಿ ಇನ್ನ ಲೀಲಾ

ಕಬೀರ ಸತ್ವದಿ ಪ್ರಭಲಾ
ಅವನ್ಹಂಗ ಭಕ್ತಿಗ್ಯಾರಿಲ್ಲಾ
ಪರಹಿತಕ ಹತಾ ಮಾಡಿದ
ಸತಿಯ ಶಿರ ಕಮಲಾ ॥ಪಲ್ಲ॥
ಕೂತ ಕೇಳ್ರಿ ಅವನ ವ್ರತಾನೇಮ ನಿತ್ಯ ದಾನ ಧರ್ಮ
ಮಾಡುವ ಸಂಪ್ರದಾ ವಿಠೋಬಾನ ಭಜನಿಯ ಲುಬ್ಧಾ
ಅಷ್ಟಭಕ್ತರೊಳಗ ಪ್ರಸಿದ್ಧಾ
ಹೋ ರಾತ್ರಿ ಅತಿಥಿಗಳ ಸೇವಕ
ತತ್ಪರ ಇದ್ದಾ ತತ್ಪರ ಇದ್ದಾ."[೧೪]

ಸಾತು ಕ್ಯಾಮಣ್ಣ ಬರೆದ 'ನಾವ ಮುಳುಗಿದ ಲಾವಣಿ' ಅತ್ಯಂತ ಪ್ರಸಿದ್ಧವಾದ ಸತ್ಯಘಟನೆಯೊಂದನ್ನು ಪ್ರಸ್ತಾಪಿಸುವ ಲಾವಣಿಯಾಗಿದೆ. ಗೋಕಾವಿ ಪ್ರದೇಶದಲ್ಲಿ ಘಟಪ್ರಭಾ ನದಿಗೆ ಬಂದ ಮಹಾಪೂರ ಕಾರಣವಾಗಿ ನಾವ (ಹಡುಗು) ಒಂದು ಮುಳುಗಿ, ಅದರಲ್ಲಿದ್ದ ಅನೇಕ ಜನರು ನೀರಿನಲ್ಲಿ ತೇಲಿ ಹೋದರು. ಇದು ಒಂದು ಟೈಟಾನಿಕ್ ದುರಂತದಂಥ ಘಟನೆ.

"ಶಕೆ ಅಠ್ರಾಸೆ ಛತ್ತೀಸ ಸಾಲ ಬಂತ ಕೆಡಗಾಲ ನಾವ ಹರಗೋಲ
ಮುನಗಿ ಹ್ವಾದು ಎಲ್ಲಾ ತೇಲಿ ಹ್ವಾದು ಊರಾ
ದೆವ್ವ ಹೊಳಿ ಬಂದ ವಿಪರೀತ ಭೂಮಿ ಭೂಪಾರಾ ॥ಪಲ್ಲ॥
ಸಿಂಗಳಾಪೂರದ ಹೆಣಾ ಹನ್ನೊಂದ
ನೋಡ್ಯಾರ ಪಂಚರ ಬಂದ
ಕೇಳ್ರಿ ಇನ್ನ ಮುಂದ ಇದ್ದು ಎಣಕಿಂದ
ಹುಣಶ್ಯಾಳದು ಮೂರಾ
ಬಸಳಿಗುಂದೀವ ನಾಲ್ಕ
ಲೊಳಸೂರ ಹೆಣಾ ಇದ್ದು ಇಪತ್ತಾರು
ಒಟ್ಟಿಗಿ ಹೆಣಾ ಅದು ನಾಲ್ವತ್ನಾಲ್ಕು
ಹಚ್ಯಾರ ರಜಿಸ್ಟರಕ
ಮಾಡ್ಯಾರ ಸಾರ್ಥಕ ಪೋಣಾಸೆ ಮಂದಿ ಲೆಕ್ಕಕ
ಹತ್ಯಾರ ಉಳಿದವರಾ
ಉಳಿದ ಮಂದಿ ಲೆಕ್ಕ ಗಂಗವ್ವಗ ಗೊತ್ತು ಆಕಾರಾ.[೧೫]

ಎಂದು ಪ್ರಾರಂಭವಾಗುವ ಈ ಲಾವಣಿ ಮಳೆಗಾಲ ಹೋಗಿ ಶ್ರಾವಣ ಬರುವವರಿಗೆ ರೈತರು ಹೊಲದಲ್ಲಿ ಕಾಳು ಬಿತ್ತಿರಲಿಲ್ಲ. ಇಂಥ ಸಂಕ್ರಮಣ ಸ್ಥಿತಿಯಲ್ಲಿ ಒಂದು ದಿನ ಸಹ್ಯಾದ್ರಿ

ಪರ್ವತದಲ್ಲಿ ವಿಪರೀತ ಮಳೆಯಾಗಿ ಘಟಪ್ರಭಾ ನದಿಗೆ ಮಹಾಪೂರ ಬಂದಿತು. ಶ್ರಾವಣದ ಜಾತ್ರೆ ಸಂಭ್ರಮದಲ್ಲಿದ್ದ ಅನೇಕ ಜನ ಸಂತೆ ಮಾಡಿಕೊಂಡು 'ನಾವ'ದಲ್ಲಿ ಪ್ರಯಾಣ ಮಾಡುತ್ತಿದ್ದರು. ನದಿಯ ಮಧ್ಯಕ್ಕೆ ಬರುವಷ್ಟರಲ್ಲಿ ಹಡಗು ಮುಳಗತೊಡಗಿತು. ಅಂಬಿಗ ನೀರಿನಲ್ಲಿ ಜಿಗಿದು ಬಿಟ್ಟ. ಜನರು ತಮ್ಮ ಪ್ರಾಣ ಕಾಪಾಡಿಕೊಳ್ಳಲು ಹರಸಾಹಸ ಮಾಡಿದರು. ಕೆಲವರು ಗಿಡದ ಟೊಂಗಿಗಳನ್ನು ಗಟ್ಟಿಯಾಗಿ ಹಿಡಿದುಕೊಂಡರು. ಕೆಲವರು ಈಜಲು ಪ್ರಯತ್ನಿಸಿದರು. ಏನು ಮಾಡಿದರು ನೀರಿನ ಸೆಳೆತದ ಮುಂದೆ ಅವರ ಪ್ರಯತ್ನ ವಿಫಲವಾಯಿತು. ನೀರು ರಭಸದಿಂದ ಗೋಕಾವಿ ನಾಡಿನ ಅನೇಕ ಹಳ್ಳಿಗಳನ್ನು ಸುತ್ತುವರಿಯಿತು. ಆರುನೂರು ಮನೆಗಳು ನೆಲಸಮವಾದವು. ಅಡಿಬಟ್ಟಿ, ಮೆಳವಂಕಿ, ಬಳೋಬಾಳ, ಮಸಗುಪ್ಪಿ, ಹುಣಶ್ಯಾಳ, ಪುಲಗಡ್ಡಿ ನಂದಗಾವಿ, ಕಮಲದಿನ್ನಿ ಮೊದಲಾದ ಊರುಗಳಲ್ಲಿ ನೀರು ಬಂದು ಜನ ನಿರಾಶ್ರಿತರಾದರು. ಕವಿ ಕ್ಯಾಮಣ್ಣ ಯಾವ ಊರಿನವರು ಎಷ್ಟು ಜನ ಸತ್ತರು ಎಂಬುದನ್ನು ಮೇಲಿನ ಲಾವಣಿಯಲ್ಲಿ ಹೇಳಿದ್ದಾನೆ.

ಈ 'ನಾವ'ದಲ್ಲಿ ಇದ್ದ ಲಕ್ಷ್ಮವ್ವ ಎನ್ನುವ ಹೆಣ್ಣುಮಗಳು ನಿಪಿನ್ಯಾಳ ಗ್ರಾಮದವಳು. 'ಮುಣ ಮುಣಿಗಿ ಎದ್ದಾಳ । ಗಿಡ ಹಿಡದಾಳ ಮಕ್ಕಳ್ನ ನೋಡ್ಯಾಳ । ಕಾಣಲಿಲ್ಲ ಒಂದಾ । ಬೋರ್ಯಾಡಿ ಅಳತಾಳ ನನ್ನ ವಂಶಾ । ಮುಳಗಿತಂತ ಇಂದಾ' ಎಂದು ಅವಳು ಅಳುತ್ತ ಹೇಗೋ ಬದುಕಿದ್ದಳು. ಲಕ್ಷ್ಮವ್ವ ೬೦ ವರ್ಷಗಳ ಕಾಲ ಬದುಕಿದ್ದಳು. ಗೋಕಾಕದಲ್ಲಿ ನಾವ ಮುಳುಗಿ ಉಳಿದ ಸಾಹಸವನ್ನು ರಸವತ್ತಾಗಿ ಹೇಳುತ್ತಿದ್ದಳು. ಸಾತು ಕ್ಯಾಮಣ್ಣ ಆಕೆಯನ್ನು ಕರೆಯಿಸಿಕೊಂಡು ಸಾಹಸವನ್ನು ಕೇಳಿದ್ದನು. ಘಟನೆಯನ್ನು ಗೊತ್ತು ಮಾಡಿಕೊಂಡನು. ಅಲ್ಲದೆ 'ಶ್ರೀಮತಿ ಲಕ್ಷ್ಮವ್ವನ ಸಾಹಸ' ಎಂಬ ಲಾವಣಿಯನ್ನು ಪ್ರತ್ಯೇಕವಾಗಿಯೇ ಬರೆದನು. ನಾವ ಮುಳುಗಿದ್ದು ಕ್ರಿ.ಶ. ೧೯೧೮ರಲ್ಲಿ. ಇಂದಿಗೆ ನೂರು ವರ್ಷಗಳ ಹಿಂದೆ ಇಂಥ ಘಟನೆ ಗೋಕಾಕದಲ್ಲಿ ನಡೆದುದನ್ನು ಪ್ರಾಯಶಃ ಕ್ಯಾಮಣ್ಣನ ಲಾವಣಿಯೇ ಮೊದಲು ದಾಖಲಿಸಿದೆ. ಹಡಗು ಮುಳುಗಿದ ಸಂಗತಿ ಲೋಕಪ್ರಸಿದ್ಧವಾಯಿತು. ವಿಜಯಪುರ, ಜತ್ತ, ಅಕ್ಕಲಕೋಟೆ, ಮಿರಜ, ಜಮಖಂಡಿಯ ಗೊಂದಲಿಗರು ಹಾಗೂ ಲಾವಣಿಯ ಹಾಡುಕಾರರು ಬಂದು ಸಾತು ಕ್ಯಾಮಣ್ಣನ ಈ ಲಾವಣಿಯನ್ನು ಬರೆಯಿಸಿಕೊಂಡು ಹೋದರು. ಜಮಖಂಡಿಯ ತಂಡದವರು ಹುಬ್ಬಳ್ಳಿ, ಧಾರವಾಡ, ದಾವಣಗೆರೆ ಭಾಗಗಳಲ್ಲಿ ಸಾತು-ಕ್ಯಾಮಣ್ಣನ ಲಾವಣಿಗಳನ್ನು ಹಾಡಿ ಬಂದರು. ವಿಜಯಪುರ ಲಾವಣಿಕಾರರು ಉತ್ತರ ಕರ್ನಾಟಕದಲ್ಲಿ ಸಾತು ಕ್ಯಾಮಣ್ಣನ ಲಾವಣಿಗಳನ್ನು ಪ್ರಚಾರ ಮಾಡಿದರು. "ಸಾತು ಕ್ಯಾಮಣ್ಣನು ಒಂದು ಸಾವಿರ ಲಾವಣಿಗಳನ್ನು ರಚಿಸಿದ್ದನೆಂದು ಅವನನ್ನು ಬಲ್ಲವರು ಹೇಳುತ್ತಾರೆ."[೧೬]

ವಿವಿಧ ವಿಷಯಕ್ಕೆ ಸಂಬಂಧಿಸಿದ ಕಲಗಿ ಲಾವಣಿ ಪದಗಳನ್ನು ಕೂಡಾ ಈ ಪರಿಸರದ ಲಾವಣಿಗಳನ್ನು ಹಾಡುವವರು ಮತ್ತು ರಚನೆಕಾರರು ಇದ್ದ ಬಗ್ಗೆ ಮಾಹಿತಿ ಕಂಡು ಬರುತ್ತದೆ.

"**ಆದಿ :** ಅಖಂಡ ಬ್ರಹ್ಮಣ ನಿಜಖಂಡವ ಸಾಧಕ ಹಿಂಡ ಮಂದಿಯೊಳು ಕೂಡ್ಯೋಂಡ ತಂಡ ಮಾಡಿ ಮಾಯಾ । ಗಂಡ ತೊತ್ತಿನಂತೆ ಮಂಡಿ ಬೋಳಿಸಿಕೊಂಡ ಕಂಡಕಡೆಗೆ ಹರಿದಾಡುವಗ ಸಾಧು ಅನ್ನೋದು ಬಹಳ ಅನ್ಯಾಯ ॥ಪಲ್ಲ॥

ಸನ್ಯಾಸಿ ಆದ ಮ್ಯಾಲೆ ಹೆಣ್ಣು ಹೊನ್ನು, ಮಣ್ಣು ಬಿಡಬೇಕ । ತನ್ನ ಜಾತಿ ಅಭಿಮಾನ ಬಿಟ್ಟ ಭಿನ್ನ ಭೇದಗಳ ಚೆನ್ನಾಗಿ ಇರುವುದು ಮನಹಸನ ಹಸನಮನಗನ । ಗುರುವೆಸನದೊಳಿರುವಾಗ ಮಾನ ಅಪಮಾನ ಸುಖ ದುಃಖ ಸರ್ವ ಆಗ । ಈ ಸರ್ವ ಭುವನ ಜನರ ಮೀರಿದ ಪರಶಿವನಂತೆ ಇರವಂಥ ಸಂಜೀವನ । ಸಂಜೀವ ರತ್ನಕಳ ಇಂಜಾನದಲ್ಲಿ ಇರುವುದು ಅಂಜಿನಕ್ಕೆ ಹರಿಯುವುದು। ಮುಂಜ್ಯಾನ್ ಮುಂಜಾವದಲ್ಲಿ ಇರುವ ಮಹಾ ನಿರಂಜನ ತೇಜಹಪುಂಜ ಪರಂಜ್ಯೋತಿ ರೂಪದವ ಭವಭಂಜನಾ॥

**ಅಂತ್ಯ :** ಚಾಲ॥ ಧರಣಿಯೊಳು ಮೆರೆಯುವ ಬೆಂಡಿಗೇರಿ ಅಲ್ಲಿನೆಲಸಿದ ಬಸವೇಶಂ ದೊರಿ । ಸಂಗನಗೌಡಗ ತೋರಿಸೋ ಮಾರಿ । ಚಾರಿ ತೆಗೆದ ಮಾಡತಾರ ಘಾಬರಿ । ಸಂಗನ ಬಸಣ್ಣ ಹೇಳತಾನ ಸಾರಿ । ಜವಾಬಕೊಟ್ಟ ಉಗಳತಾ ನಗಾರಿ

॥ಏರು॥ ತುರಾಯಿದವರನ್ನ ಘಾಬರಿ ಮಾಡಾಂವ ಒಡ್ಡ ಅದಾನ ಅಲಕನೂರ ಪೀರ"[೧೭]

ಈ ಲಾವಣಿಕಾರ ಅಲಕನೂರ ಪೀರನು ರಾಯಬಾಗ ತಾಲೂಕಿನ ಅಲಖನೂರ ಗ್ರಾಮದವನು. ಮುಸ್ಲಿಂ ಸಮುದಾಯಕ್ಕೆ ಸೇರಿದವನು. ಇವನು ಕವಿ ಅಲಭ್ಯೆರಿಯ ಆತ್ಮೀಯ ಶಿಷ್ಯನಾಗಿದ್ದನು ಎಂಬ ಮಾಹಿತಿ ತಿಳಿಯುತ್ತದೆ. ಇವನ ಮೂಲ ಹೆಸರು ರಾಗಿರಾಮ ಅಥವಾ ರಾಮ ಪೂಜೇರಿ ಎಂದು ಕರೆಯುತ್ತಿದ್ದರು. ಪೀರ ಎಂಬ ನಾಮಾಂಕಿತವನ್ನಿಟ್ಟುಕೊಂಡು ಡೊಳ್ಳಿನ ಹಾಡು-ಗೀಗೀ ಪದ ಬರೆಯುತ್ತಿದನು ಎಂದು ರಮೇಶ ಕಮತಗಿಯವರು ಹೇಳುತ್ತಾರೆ.

ಹಾಗೆಯೇ ಸಾತು ಕ್ಯಾಮಣ್ಣನ ಅಪ್ರಕಟಿತ ಲಾವಣಿಗಳು ನನ್ನ ಕ್ಷೇತ್ರಕಾರ್ಯದಲ್ಲಿ ದೊರಕಿವೆ. ನನ್ನ ಆತ್ಮೀಯರಾದ ಸುರೇಶ ಹನಗಂಡಿ ಅವರು ಈ ಹಸ್ತಪ್ರತಿಗಳನ್ನು ಪ್ರತಿ ಮಾಡಿಟ್ಟುಕೊಂಡಿದ್ದಾರೆ. ಕ್ಯಾಮಣ್ಣ ತನ್ನ ಸ್ವಹಸ್ತಾಕ್ಷರದಿಂದ ಬರೆದ ಐದು ಲಾವಣಿಗಳು ಚಾರಿತ್ರಿಕ, ಧಾರ್ಮಿಕ, ಸಾಹಿತ್ಯಿಕ ವಿಷಯಗಳನ್ನು ಒಳಗೊಂಡಿವೆ. ಕಥೆಯ ಮೂಲಕ ಲಾವಣಿಯನ್ನು ರಚನೆ ಮಾಡಿದ್ದು ಗಮನಿಸಬೇಕಾಗುತ್ತದೆ. 'ಧರಣಿ ಕೇಶವನ ಕಥೆ' ಹೇಳತೀನಿ ಅಂಥ ಆರಂಭದ ಸಾಲಿನಲ್ಲಿಯೇ ಲಾವಣಿಕಾರ ಹೇಳುತ್ತಾನೆ.

"ಮಕ್ಕಳಿಲ್ಲದಕ ಮಾಡತಾನ ತಪಯೋಗ
ಕೇಳಿದ ಆಗ । ಲೋಕದೊಳಗ
ಅತಿ ಕಷ್ಟನಾದಿತು ತಿಳಿದ ಹೇಳ್ರಿಸ್ವಾಮಿ ಈಗ
ಮಕ್ಕಳಿಲ್ಲ ನಮಗೆ ॥ಪಲ್ಲ॥
ಧರಣಿ ಕೇಶವಗ ಋಷಿ ಹೇಳಿದಾನ ಗಂಡ ಹೆಂಡ್ರ
ಹೋಗಬೇಕ ಪರ್ವತಕ
ಅಲ್ಲಿಂದ ಪ್ರಾರಂಭ ಪುತ್ರ ಸಂತಾನಕ

ದಾನಧರ್ಮ ಮಾಡ್ರಿ ದೇವರ್ಥಂತೇಕ

ಅಲ್ಲಿಂದ ಪರಿಣಾಮ ಆದಿತೊ ಅರಸನೇ ಇಷ್ವ

ಮಾಡಿದ್ರ ನಿಮ್ಮ ಜೀವಕ ಉಲ್ಹಾಸ ಮನಕ." (ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

ಹೀಗೆ ಲಾವಣಿಕಾರ ಧರಣಿಕೇಶವನ ಕಥೆ ಹೇಳುತ್ತ ಮುಂದೆ ಸಂತಾನ ಪ್ರಾಪ್ತಿಯನ್ನು ದಯಪಾಲಿಸುವ ಸಂದರ್ಭದಲ್ಲಿ ಪ್ರತಿಯೊಂದು ಸಾಲಿನ ಕೊನೆಯ ಅಕ್ಷರ ಪ್ರಾಸ ಬದ್ಧವಾಗಿ, ಲಯದಿಂದ ಕೂಡಿರುವುದನ್ನು ಗಮನಿಸಬಹುದು. ಇದೇ ಲಾವಣಿಕಾರನ ಇನ್ನೊಂದು ಕೊನೆಯ ಪ್ರಾಸಾಕ್ಷರ ಬಂದಿರುವ ಹಾಡನ್ನು ನೋಡಬಹುದು.

"ಹಳಿ ಹದ್ದಿನ ನುಂಗಿತ ಹಾಂವಾ

ಮತ್ತ ಹ್ಯಾಂಗ ತುಂಬಿತ್ತು ಜೀವಾ

ನೀ ಬಹಳ ಬಲ್ಲಿ ಅನುಭವಾ

ನೀ ಹೇಳಿಕೊಂಡಯಲ್ಲಾ ಬಲ್ಲವಾ

ಇನ್ನ ಮೋಜಾ ನೋಡತೀವ ನಾವಾ

ಇತ್ತ ಸಣ್ಣ ಭಾವಾ." (ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

ಬೆಳಗಾವಿ ಜಿಲ್ಲೆಯ ಲಾವಣಿಕಾರರು ಕೇವಲ ಲಾವಣಿಗಳನ್ನು ಬರೆಯುವುದರಲ್ಲಿ ಮಾತ್ರ ಮೇಧಾವಿಗಳಾಗಿರದೆ ಜೊತೆಗೆ ಛಂದಸ್ಸಿನಲ್ಲಿ ಕಾವ್ಯಗಳನ್ನು ರಚಿಸುವುದರ ಮೂಲಕ ಸೃಜನಶೀಲತೆಯ ಅಗಾಧತೆಯನ್ನು ತೋರ್ಪಡಿಸಿದ್ದಾರೆ. ಸವದತ್ತಿ ತಾಲೂಕಿನ ಗುರುಪಾದಪ್ಪ ಹೊಂಗಲ ಅವರು 'ಮಾವನ ಮನೆಯ ಸುಖ' ಎಂಬ ಕಾವ್ಯವನ್ನು ಚಂಪಕ ಮಾಲೆಯಲ್ಲಿ ರಚಿಸಿದ್ದಾರೆ.

ನರರಿಗೆ ಸಗ್ಗದಂತೆ ಬಹು ಸೌಖ್ಯಕರಂ ಸ್ವರಾಕಯಂಚಿರಂ

ದೊರೆವುದು ಪಂಚಷಡ್ದಿವಸ ಮಾತ್ರವೆ ಸೌಖ್ಯವು ಹೆಚ್ಚಿಗಿಲ್ಲವೈ

ಇರುವೆನು ಪಂಚ ಭಕ್ಷ್ಯಾಪರಮಾನ್ನವ ಸೇವಿಸುತೊಂಡು ತಿಂಗಳು

ಬರುವವು ಮಾಸಮಿಕ್ಕುವಿರಲೊಂದು ದಿನಂ ಘನಪಾದ ರಕ್ಷೆಗಳ್. ॥೧॥

(ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

ಕಂದ ಪದ್ಯಗಳನ್ನು ರಚಿಸಿದ್ದಾನೆ. ಕಿತ್ತೂರು ನಾಡಸೇವೆ ಮಾಡಲು ಮುತ್ತೂರು ಮಹಾಬಲೇಶ ವಿಯೋಗ ದುಃಖೋದ್ಗಾರದ ಕಂಬನಿಗಳು ಎಂದು ಶೀರ್ಷಿಕೆಯನ್ನು ನೀಡಿದ್ದಾರೆ.

॥ಕಂದ॥ "ಕಿತ್ತೂರ ನಾಡಸೇವೆಗೆ

ನಿತ್ಯಂ ನಿಜ ತನುವ ನೀಡಿ ಕೀರ್ತಿಧ್ವಜಮಂ

ಉತ್ತುಂಗಮಾಗಿ ನಿಲ್ಲಿಸಿ

ಮುತ್ತೂರ ಮಹಾಬಲೇಶನಸುವಂ ತೊರೆದಂ ॥೧॥
ಕವಿಕಾವ್ಯಾನಂದರ ಶಿ
ಷ್ಯದರೇಣ್ಯಂ ಮಾಬಲೇಶನಳಿಯಲ್ ಹಾಹಾ
ರವ ಮಣ್ಮಿದು ದಣ್ಧಿಸೆಯೊಳ್
ಶಿವ ಶಿವ ಕರ್ಣಾಟಕಾಂಬೆ ಕಣ್ಣೀರ್ಗ್ಗರೆದಳ್ ॥೨॥

॥ಮತ್ತೇಭ ವಿಕ್ರೀಡಿತ ವೃತ್ತಂ॥

ದೊರೆ ಕಿತ್ತೂರಿನ ಭಾನುವಸ್ತು ಮಿತ ನಾದಂ ವೀರ ಚನ್ನವ್ವನಾ
ಸಿರಿನಾಡೋಳ್ ಪುರುಳಲ್ಲದಾಯ್ತು ಸುಭಟಾಪೋದಂ ಗಡಾದೇಶಭ
ಕ್ತರ ಚಿಂತಾರಮಣಿ ಮಾಯವಾಯ್ತು ಮರೆಯಾದಂಬೂಬತಿಂದು
ಗರದೊಳ್ ಸೂಂಕುತೆ ಬಂಧು ಮಿತ್ರತರಂ ದೈವಾಜ್ಞೆಯಿಂದಕ್ಕಟಾ
ಯುವ ಕರ್ಗುತ್ತಮಕಾರ್ಯ ನಿಷ್ಠೆಯು ಕಲಾಬಿಜ್ಞರ್ಗೆ ಕೌಶಲ್ಯ ಮ
ನವ ಚೈತನ್ಯವ ಲೇಖಕರ್ಗೆ ಕವಿಗಳ್ಗೀವುತ್ತಮಣೆಲ್ಲರಂ
ತವೆ ಕಾರ್ಯೋನ್ಮುಖಂ ನೆಗಳ್ಚತಿಹಂ ನೀಂ ಯಾಣ್ದಾ ಮಹಾತ್ಕಾರ್ಯ
ಶಿವಲೋಕಕ್ಕೆ ತೆರಳ್ದು ಪೋಪಿದೊಳಿತೇ ಸನ್ಮಿತ್ರ ಚೂಡಾಮಣಿ." (ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

ಪ್ರಸ್ತುತ ಲಾವಣಿಕಾರ ಛಂದಸ್ಸು ಕಾವ್ಯಗಳನ್ನು ರಚನೆ ಮಾಡುವುದರ ಜೊತೆಗೆ ಸಹಕಾರಿ ತತ್ವಪದ, ದೇವತಾಸ್ತೋತ್ರ, ಬಾಲಕರ ಪ್ರಾರ್ಥನೆ, ಗುರುಸ್ಮರಣೆಯಂಥ ಮಹತ್ವದ ಕಾವ್ಯಗಳನ್ನು ರಚಿಸಿದ್ದಾನೆ. ಸು. ೧೮೨ ಪುಟಗಳ ಗಾತ್ರದಲ್ಲಿ ಅಪ್ರಕಟಿತವಾಗಿರುವ ಸಾಹಿತ್ಯದ ಹಸ್ತಪ್ರತಿಗಳನ್ನು ನಾನು ಸಂಗ್ರಹಿಸಿದ್ದೇನೆ.

**ತತ್ವಪದಕಾರರು :**

ಬೆಳಗಾವಿ ಜಿಲ್ಲೆಯಲ್ಲಿ ಲಾವಣಿ ಹುಲುಸಾಗಿ ಬೆಳೆದ ಸಾಹಿತ್ಯ ಪ್ರಕಾರವಾಗಿದೆ. ಆದರೆ ತತ್ವಪದಗಳ ದೃಷ್ಟಿಯಿಂದ ಈ ಮಾತನ್ನು ಹೇಳುವುದು ಕಷ್ಟ. ಹಾರೂಗೇರಿಯ ಕವಿ ಅಲಭೈರಿ, ಶಿರಗೂರಿನ ಕಲ್ಮೇಶ್ವರರು ಹೆಚ್ಚು ತತ್ವಪದಗಳನ್ನು ರಚಿಸಿದ್ದಾರೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿದ ತತ್ವಪದಗಳು (ಪ್ರಾತಿನಿಧಿಕ ಸಂಕಲನ) ಕೃತಿಯಲ್ಲಿ 'ಬರತೀರೇನ ಪಂಢರಪುರಕ' ಎಂಬ ತತ್ವಪದವನ್ನು ಅಜ್ಞಾತ ಕರ್ತೃವಿನ ಹೆಸರಿನಲ್ಲಿ ಪ್ರಕಟಿಸಲಾಗಿತ್ತು. ಆದರೆ ಈ ತತ್ವಪದವನ್ನು ಬರೆದವನು ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ ಕಾಡಾಪುರದ 'ಸವದತ್ತಿ ಸಿದ್ಧಪ್ಪ'. ಈತನ ಮನೆಮಾತು ಕನ್ನಡವಾಗಿದ್ದರು, ಕಲಿತದ್ದು ಮರಾಠಿ ಭಾಷೆಯನ್ನು. ಹೀಗಾಗಿ ಈತನ ತತ್ವಪದಗಳು ಮರಾಠಿ ಮತ್ತು ಉರ್ದು ಲಿಪಿಯಲ್ಲಿ ದೊರೆಯುತ್ತವೆ. ಭಾಷೆ ಕನ್ನಡ ಲಿಪಿಮಾತ್ರ ದೇವನಾಗರಿಯಾಗಿರುವದು ವಿಶೇಷ. ಈತನ ಗುರುಪರಂಪರೆಯನ್ನು ತತ್ವಪದಗಳ ಆಧಾರದಿಂದ ನಾನು ಗುರುತಿಸಿದ್ದು ಹೀಗೆ

ಗುರು ಶಿರಗೂರು ಕಲ್ಮೇಶ್ವರರು ಇವರ ಶಿಷ್ಯ ಮೀರಾಸಾಬ ಮುಲ್ಲಾ (ಪರಮಾನಂದವಾಡಿ), ಇತನ ಶಿಷ್ಯ ಬಾಬಾಜಿ ಜಮಾದಾರ (ದಿಗ್ಗೇವಾಡಿ) ಈ ಬಾಬಾಜಿ ಅವರನ್ನು ತನ್ನ ಗುರುವೆಂದು ಸವದತ್ತಿ ಕಾಡಪ್ಪ ತನ್ನ ತತ್ವಪದಗಳಲ್ಲಿ ಸ್ಮರಿಸಿಕೊಂಡಿದ್ದಾನೆ. ವಾಯ್.ಬಿ. ಹಿಮ್ಮಡಿ ಅವರು ಬೆಳಗಾವಿ ಜಿಲ್ಲೆಯ ಈ ಮೇಲಿನ ತತ್ವಪದಕಾರರ ತತ್ವಪದಗಳನ್ನು ಶೋಧಿಸಿದ್ದಾರೆ. ಕನಕದಾಸ ಸಂಶೋಧನ ಸಂಸ್ಥೆಯಿಂದ ಇಷ್ಟರಲ್ಲಿಯೇ ಪ್ರಕಟವಾಗುವ ಸಾಧ್ಯತೆಯಿದೆ.. ಮೊದಲ ಬಾರಿಗೆ ೬ ಜನ ನೂತನ ತತ್ವಪದಕಾರರು ದೊರೆತಿರುವುದು ವಿಶೇಷ ಸಂಗತಿಯಾಗಿದೆ.

**ವೈದ್ಯಶಾಸ್ತ್ರ :**

ಆರೋಗ್ಯ ಮತ್ತು ದೈಹಿಕ ಸ್ವಾಸ್ಥ್ಯತೆ ಮನುಷ್ಯನ ಮೂಲಭೂತ ಅಗತ್ಯಗಳಲ್ಲೊಂದು ಅನ್ನ-ಬಟ್ಟೆ ಮನೆಗಳಂತೆ ವೈದ್ಯಕೀಯ ಉಪಚಾರವೂ ಸಹಿತ ಆತನಿಗೆ ಅನಿವಾರ್ಯವು. ಬೆಳಗಾವಿ ಜಿಲ್ಲೆಯಲ್ಲಿ ಮಲೆನಾಡು, ಬೆಳವಲ ನಾಡು ಮತ್ತು ಬಯಲಸೀಮೆಯಿದ್ದು ಹಲವು ನದಿಗಳ ಹರಿವು ಇಲ್ಲಿದೆ. ವನ್ಯಔಷಧಿಯು ಹುಲುಸಾಗಿ ಬೆಳೆಯಬಲ್ಲವು. ಹೀಗಾಗಿ ವೈಜ್ಞಾನಿಕ ಮತ್ತು ತಂತ್ರಜ್ಞಾನದ ಯುಗದಲ್ಲೂ ಜನ ಸಾಮಾನ್ಯರು ಆಯುರ್ವೇದ ವೈದ್ಯಕ್ಕೆ ಹೆಚ್ಚಿನ ಗಮನ ನೀಡುತ್ತಿರುವುದನ್ನು ನಾವು ಗಮನಿಸಿದರೆ, ವೈದ್ಯಶಾಸ್ತ್ರದ ಹಸ್ತಪ್ರತಿಗಳು ಇಲ್ಲಿ ಹೆಚ್ಚಾಗಿ ದೊರೆಯುತ್ತವೆ. ಆದುದರಿಂದ ವೈದ್ಯಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ನೋಡೋಣ.

ಅಶೋಕ ಸಸ್ಯವು ಎಂಬ ವಂಶಕ್ಕೆ ಸೇರಿದೆ. ಈ ಸಸ್ಯದ ಕಾಂಡ, ಬೀಜಗಳು ಗರ್ಭಾಶಯದ ತೊಂದರೆಗಳಿಗೆ ವರಪ್ರಸಾದವಾದ ಔಷಧಿಯಾಗಿದೆ. "ತುಳಸಿ ಜಿಲ್ಲೆಯು ಕಂಡ ಇನ್ನೊಂದು ಪ್ರಮುಖ ಔಷಧಿ ಎಂಬ ವಂಶಕ್ಕೆ ಸೇರಿದ ಈ ಸಸ್ಯವು ಧಾರ್ಮಿಕವಾಗಿ ಮನ್ನಣೆ ಪಡೆದಿದೆ. ಈ ಸಸ್ಯವು ಕೆಮ್ಮಿಗೆ ನೋವಿನ ನಂಜಿಗೆ ಪ್ರಸಿದ್ಧಗೊಂಡ ಮದ್ದು."[೧೮]

ಈ ಸಸ್ಯವು ಜಿಲ್ಲೆಯ ಎಲ್ಲ ನಗರ ಹಳ್ಳಿಗಳಲ್ಲಿ ಹೇರಳವಾಗಿ ದೊರೆಯುತ್ತದೆ.

"ಬಿಲ್ವ ಅಥವಾ ಪತ್ರೆ -ಕಾಯಿ ಔಷಧಿಯುಕ್ತ ಸಸ್ಯ ಎಂಬ ವಂಶಕ್ಕೆ ಸೇರಿದೆ. ಇದರ ಎಣ್ಣೆಕಾಯಿ ಔಷಧಕ್ಕೆ ಬಳಸಲಾಗಿದ್ದು, ನೋವಿಗೆ ಮೈ ಮೇಲೆ ಬರುವ ಗಾಯಕ್ಕೆ ಉಪಯುಕ್ತ ಔಷಧಿ."[೧೯]

ಈ ಬಿಲ್ವಪತ್ರೆಯು ಪ್ರತಿಯೊಂದು ಲಿಂಗಾಯತಮಠದ ಮುಂದೆ ದೊರೆಯುತ್ತದೆ. ಏಕೆಂದರೆ ಜಿಲ್ಲೆಯಲ್ಲಿ ಲಿಂಗಾಯತಮಠಗಳ ಸಂಖ್ಯೆ ಅಪಾರವಾಗಿದೆ. ದಿನನಿತ್ಯ ಪೂಜೆಗೆ ಈ ಪತ್ರಿಯು ಅವಶ್ಯವಾಗಿ ಬೇಕಾಗುತ್ತದೆ.

"ಬ್ರಾಹ್ಮಿ ಎಂಬ ವಂಶಕ್ಕೆ ಸೇರಿದ ಅತ್ಯಂತ ಸಣ್ಣಪ್ರಮಾಣದ ಔಷಧಿಯುಕ್ತ ವಿಶೇಷವಾಗಿ ಬೆಳಗಾವಿ ನಗರದ ಹೊರಗಿನ ಬಡಾವಣೆಗಳಲ್ಲಿ ಕಂಡು ಬರುವ ಸಸ್ಯೌಷಧಿಯಾಗಿದೆ. ಮಿದುಳಿಗೆ ಉತ್ತಮ ಆಹಾರ ಒದಗಿಸುವ ಒಳ್ಳೆಯ ಔಷಧಿಯಾಗಿದೆ."[೨೦]

**ಲಗ್ನಮುಳ್ಳು :** ಇದು ಖುಷ್ಕಿ ಜಮೀನಿನಲ್ಲಿ ಬೆಳೆಯುತ್ತದೆ. ಈ ಮುಳ್ಳನ್ನು ಒಂದು ಲೋಟಾ ನೀರಿಗೆ ಬೆರೆಸಿ ಕುದಿಸಿ ಬೆಳಗಿನ ಸಮಯದಲ್ಲಿ ಕುಡಿದರೆ ಹೊಟ್ಟೆಯಲ್ಲಿರುವ ಹರಳು ಕರಗಿ ಹೋಗುತ್ತದೆ.

**ಕರಿಬೇವು :** ಎಲ್ಲ ಆಹಾರದಲ್ಲಿ ಬೆರೆಸಿ ತಿನ್ನುವುದರಿಂದ ಕಣ್ಣು ಬೇನೆಯನ್ನು ನಿವಾರಿಸುತ್ತದೆ.

**ಕಣ್ಣು ಬೇನೆಗೆ :** "ಬೇವಿನ ಬೀಜವನ್ನು ಅಂಬಿಲದಲ್ಲಿ ಅರೆದು ಎಡದ ಕಣ್ಣಿಗೆ ಆದರೆ ಬಲದ ಕಿವಿಗೆ ಹಿಂಡಿದರೆ ಗುಣ".[೨೧]

**ಬೆಳ್ಳೊಳ್ಳಿ :** "ಲವಣ ಕಷಾಯ, ಕೆಮ್ಮು, ಶೀತಕ್ಕಾಗಿ ಗ್ರಮೀಣ ಔಷಧಿಯಾಗಿ ಪ್ರತೀತಿ ಪಡೆದಿದೆ. ಇತ್ತೀಚೆಗೆ ರಕ್ತದೊತ್ತಕ್ಕಾಗಿ ಬೆಳ್ಳುಳ್ಳಿ ಉತ್ತಮ ಔಷಧಿ ಎಂದೆನಿಸಿಕೊಂಡಿದೆ. ಹಸಿಶುಂಠಿ ಅಥವಾ ಅಲ್ಲಾ ಎಂದು ಬಳಕೆಯಲ್ಲಿರುವ ಔಷಧಿ, ಕೆಮ್ಮು ಶೀತ ನೆಗಡಿ ಕಫ ಹೀಗೆ ಸಹಜ ವ್ಯಾಧಿಗೆ ಶುಂಠಿ ರಾಮಬಾಣ".[೨೨]

'ಕರಿ ಮೆಣಸು ಸದಾಮಲ್ಲಿಗೆ ಆಡುಸೊಗೆ ದಾತಾರಾ (ಹಚ್ಚಗಿಡಾ) ಜಾಜಿಕಾಯಿ ಜೇಷ್ಠಮದ ಬದಾಮಿ, ಗೋಡಂಬಿಯಂಥ ಔಷಧಿಗಳು ಜಿಲ್ಲೆಯಲ್ಲಿ ಹೇರಳವಾಗಿ ದೊರೆಯುತ್ತವೆ. ವಿಶ್ವದ ಔಷಧ ವಿಜ್ಞಾನಕ್ಕೆ ಬೆಳಗಾವಿಯ ಕೊಡುಗೆ ಅಪಾರವಾಗಿದೆ.'

ಹೀಗೆ ಬೆಳಗಾವಿ ಜಿಲ್ಲೆಯ ಸಸ್ಯದಿಂದ ಮತ್ತು ಗಿಡಮೂಲಿಕೆಗಳಿಂದ ಆಯುರ್ವೇದ ಔಷಧಿಗಳನ್ನು ತಯಾರಿಸುತ್ತಿದ್ದರು. ಈ ವಿಷಯವನ್ನು ಗಮನದಲ್ಲಿಟ್ಟುಕೊಂಡು ಕೃಷ್ಣದಾಸ ಮುಗಶೆಟ್ಟಿ ಕವಿಯು ಲಾವಣಿಯಲ್ಲಿ 'ಹೊಟ್ಟೆಶುದ್ಧ' ಎಂಬ ಹಾಡನ್ನು ರಚಿಸಿದ್ದಾನೆ.

"ಹೊಟ್ಟಿ ಬಹು ಕೆಟ್ಟದಯ್ಯ
ನಷ್ಟ ಮಾಡುದೆಲ್ಲ ದೇಹಾ ॥೧॥
ಹೊಟ್ಟೆ ಕೆಟ್ಟದ್ದಾದರೆ ಅಯ್ಯಾ
ಭ್ರಷ್ಟವಾಗುವುದೆಲ್ಲ ಜೀವಾ ॥೨॥
ಶ್ರೇಷ್ಠತನವು ಅಳಿದು ಹೋಗಿ
ಶಠನು ಆಗಿ ಉಳಿಯುವನೋ ॥೩॥
ಮನಸವನ್ನು ಘಟ್ಟಿಮಾಡಿ
ಬಾಯಿಬಂದ ಹಿಡಿಯಿರೋ ॥೪॥
ಹೊಟ್ಟಿಗೆಷ್ಟು ಬೇಕು ನೋಡಿ
ಅಷ್ಟೇ ತಿನ್ನುತ ಹೋಗರೋ ॥೫॥
ಹೊಟ್ಟಿ ಭ್ರಷ್ಟ ಮಾಡಿದರೇನು
ಭ್ರಮಿಷ್ಠನಾಗಿ ಬಿಡುವನು ॥೬॥

ತಿಳಿದು ನೀವು ನೋಡಿರಣ್ಣಾ
ಮೂಲ ಬೇರು ಹೊಟ್ಟಯಲ್ಲ್ಯೊ ॥೭॥
ಊಟ ತಿಳಿದು ಒಳಗೆ ಕೊಳತು
ಮನಸು ಕೆಡುವದೋ ॥೮॥
ಮನಸು ಕೆಟ್ಟ ಮೇಲೆ ಏನು
ಹೊಲಸು ಚಟಗಳ್ಹತ್ತುವವೋ॥೯॥
ಕೆಟ್ಟವಾದ ಖೊಟ್ಟವಿಚಾರ
ಬಂದು ಅವನ ತುಂಬವೋ॥೧೦॥
ಅದಕ ನೀವು ಕೇಳಿರೋ
ಉಪವಾಸ ಮಾಡಿರೋ ॥೧೧॥
ನೀರು ಹೆಚ್ಚು ಕುಡಿಯಿರೋ
ಕಿಟ ನಷ್ಟ ಮಾಡಿರ್‍ಯೋ ॥೧೨॥
ನಮ್ಮ ಮನಸು ಹೊಲಸು ಆಗಿ
ಕಲುಷಿತದ ಬಲುಮೆಯಾಗಿ
ಮೂರ್ಖರಂತೆ ಮೂಢರಾಗಿ
ಹಾಳಾಗುವೆವೋ ಕಾಳಜಿವಿರಲ್ಯೋ." (ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

ಕವಿಯು ಊಟ ಹೆಚ್ಚಾದರೆ ಹೊಟ್ಟೆಗೆ ಕೇಡು ತಿಂದ ಅನ್ನ ಜೀರ್ಣವಾಗಲಿಲ್ಲವೆಂದರೆ ಮೂಲಬೇರು ಔಷಧಿ ಹುಡುಕಿ ತಿನ್ನುವುದು ಸರಿಯಲ್ಲ. ಹೊಟ್ಟೆಗೆ ಉಪವಾಸ ಮಾಡುವುದು ಆಯುರ್ವೇದ ವೈದ್ಯರು ಕೂಡ ಹೇಳುತ್ತಾರೆ. ಅದನ್ನು ಗಮನದಲ್ಲಿಟ್ಟುಕೊಂಡು ನೀರು ಹೆಚ್ಚು ಕುಡಿದು ಆರೋಗ್ಯ ಸುಖವಾಗಿರಲಿ ಎಂಬ ಆಶಯ ಕವಿ ಹೊಂದಿದ್ದಾನೆ.

ಹುಕ್ಕೇರಿ ತಾಲೂಕಿನ ಶಿರಗಾಂವ ಗ್ರಾಮದಲ್ಲಿ ಶಿವಪ್ಪ ಹುಲ್ಲೋಳಿ ಎಂಬ ಸುಪ್ರಸಿದ್ಧ ಆಯುರ್ವೇದ ಪಂಡಿತರಿದ್ದರು. ಅವರು ಆಯುರ್ವೇದ ಔಷಧಗಳ ವಿವರಗಳನ್ನು ನೀಡುವ ಒಂದು ಅದ್ಭುತ ಕೃತಿಯನ್ನು ರಚಿಸಿದ್ದಾರೆ. ಆದರೆ ಅದು ಇನ್ನೂ ಅಪ್ರಕಟಿತ ಹಸ್ತಪ್ರತಿ ರೂಪದಲ್ಲಿದೆ. ಹುಬ್ಬಳ್ಳಿಯಲ್ಲಿರುವ ಅವರ ಎಂ. ಎಸ್. ಹುಲ್ಲೋಳಿ ಅವರು ಈ ಕೃತಿ ಪ್ರಕಟಣೆಗಾಗಿ ಪ್ರಯತ್ನಿಸುತ್ತಿದ್ದಾರೆ.

**ಶಕುನಶಾಸ್ತ್ರ :**

ಹಲವು ಶಾಸ್ತ್ರಗಳಲ್ಲಿ ಶಕುನಶಾಸ್ತ್ರವು ಪ್ರಮುಖವಾದುದು. ಜ್ಯೋತಿಷ್ಯಶಾಸ್ತ್ರದ ಒಂದು ಭಾಗವಾಗಿ ಈ ಶಾಸ್ತ್ರ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿದೆ. "ಶಕುನಗಳ ಉಗಮ ಹಾಗೂ ಪ್ರಾಚೀನತೆ ಕುರಿತು ಮಾತನಾಡುವುದು ತುಂಬಾ ಕಷ್ಟ ಆದರೂ ಸಹಿತ ಮಾನವನ ಉಗಮದೊಂದಿಗೆ

ಈ ಶಾಸ್ತ್ರ ಬೆಳೆದುಕೊಂಡು ಬಂದಿದೆ ಎಂದು ಸಾಮಾನ್ಯವಾಗಿ ಹೇಳಲಾಗುತ್ತದೆ. ಒಂದು ಕಾಲದ ನಂಬಿಕೆಗಳು ಮತ್ತೊಂದು ಸಂದರ್ಭದಲ್ಲಿ ಶಕುನಗಳಾಗಿ ಮಾರ್ಪಡುತ್ತ ಹೋಗಿವೆ. ಆದ್ದರಿಂದ ಭಾರತದ ಬಹು ಪುರಾತನವಾದ ಶಾಸ್ತ್ರವೆಂದರೆ ಶಕುನಶಾಸ್ತ್ರವೆಂದೇ ಹೇಳಲಾಗುತ್ತದೆ."[೨೩]

ಒಂದು ಕಾಲದ ನಂಬಿಕೆಗಳೇ ಮುಂದಿನ ದಿನಗಳಲ್ಲಿ ಶಕುನಗಳ ರೂಪವನ್ನು ಪಡೆದುಕೊಂಡವು ಒಂದರ್ಥದಲ್ಲಿ ನಂಬಿಕೆಗಳು ಶಕುನಗಳ ಕೀಲಿಕೈಗಳಿದ್ದಂತೆ, ಕಾಲಾಂತರದಲ್ಲಿ ಅದಕ್ಕೆ ಶಾಸ್ತ್ರದ ಸ್ಪರ್ಶವನ್ನು ಕೊಟ್ಟ ಕಾರಣದಿಂದ ಶಕುನಗಳು ಸಮಾಜದಲ್ಲಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿರುವುದು ಗಮನಿಸಬೇಕಾದ ಸಂಗತಿಯಾಗಿದೆ. ಈ ದಿಶೆಯಲ್ಲಿ ಆಲೋಚನೆ ಮಾಡಿದಾಗ ನನಗೆ ಕನ್ನಡ–ಮರಾಠಿ, ಮೋಡಿ ಲಿಪಿಯ ಹಸ್ತಪ್ರತಿಗಳು ಲಭ್ಯವಾಗಿವೆ. ಮೋಡಿ–ಮರಾಠಿ ಭಾಷೆಗಳು ಪಂಚಾಂಗಕ್ಕೆ ಸಂಬಂಧಿಸಿದರೆ ಕನ್ನಡದವುಗಳು ಕಾಗೆ, ಹಲ್ಲಿ, ಬೆಕ್ಕಿನ ಶಕುನದ ಹಸ್ತಪ್ರತಿಗಳು ದೊರಕಿವೆ. ಅವುಗಳನ್ನು ಈ ಕೆಳಗೆ ವಿಶ್ಲೇಷಣೆ ಮಾಡಲಾಗಿದೆ. ಕವಿ ಕೃಷ್ಣದಾಸ ಪುಗಶೆಟ್ಟಿ ೧೯೩೬ರಂದು ಬೆಳಗಾವಿಯಲ್ಲಿ ಮುಂಜಾನೆ ೪–೨೦ ಗಂಟೆಗೆ ಈ ಕಾಗಿಶಕುನವನ್ನು ಬರೆದಿದ್ದಾನೆ. ಲಾವಣಿ ರೂಪದಲ್ಲಿ ಬರೆದಿರುವುದು ವಿಶೇಷ.

**ಕಾಗಿಶಕುನ :**

"ಕಾಗೀ ಎಡಕ ಬಂತಂತ । ಅಪಶಕುನಾತಂತ
ಹಿಡಿದ ಕೆಲ್ಸ ಎಂದೆಂದೂ । ಸಿದ್ಧಿಗ್ಹತ್ತೂದಿಲ್ಲಂತ॥ಪಲ್ಲ॥
ಹಳ್ಳಿ ಜನರು ಮಳ್ಳರಯ್ಯಾ । ನಂಬಿಗೆಯಲ್ಲಿ ಮಿಗಿಲರಯ್ಯಾ
ಕಳ್ಳರಂತೆ ಅವರೇನಲ್ಲಾ । ಜೊಳ್ಳು ನಂಬಿಕೆ ಮರುಳರಯ್ಯಾ ॥೧॥
ಕಾಗಿಯನ್ನು ನಂಬುವರು ನಮ್ಮನಸೀಬನ್ನುವರು
ಕಾಗಿಗೇನು ಗೊತ್ತವಯ್ಯಾ ತನ್ನ ಹೊಟ್ಟಿಗ್ಹೋಗುದಯ್ಯಾ ॥೨॥
ಮನುಷ್ಯನಿಗೆ ದೇವರ್‍ಯಾರು ಗೊತ್ತಿದ್ದರೆ ಪೇಳಿರಯ್ಯಾ
ಮನದ ನಂಬಿಗೆಂದು ನಾನು ನಂಬಿ ಪೇಳುವೇವಯ್ಯಾ ॥೩॥
ಹೀಗಿ ನಂಬಿ ಹಳ್ಳಿಯವರು । ಹಾಳ ತಾವಾಗಿರುವರು
ಹೀಗಿ ಆದ ಮಾತುಗಳನ್ನು ಎಷ್ಟೋ ನಾನು ಕೇಳಿರುವೆನು ॥೪॥
ಹಳ್ಳಿ ಜನರಿಗೆ ನಾಣು ಸತ್ಯಮಾತ ತಿಳಿಸುವೇನು
ಹಳ್ಳಿಯಲ್ಲಿ ಬುದ್ಧಿಯನ್ನು ಸಿದ್ಧವಾಗಿ ನಿಲ್ಲಿಸುವೆನು ॥೫॥
ಕಾಗಿ ಬಲಕ ಹೋತಂತಾ ಸುಶಕುನಾತಂತ
ಹಿಡಿದ ಕೆಲ್ಸ ತಾನಾಗಿ । ಸಾಧಿಸುವುದರಿಗಂತ
ಸತ್ಯವಾಗಿ ಹೌದರೆಪ್ಪ ಸ್ತುತ್ಯವಾದ ಮಾತು ಇದು." ॥೬॥ (ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

ಕವಿಯ ಮೇಲಿನ ಲಾವಣಿಯ ಅಂಶವನ್ನು ನೋಡಿದರೆ ಕಾಗೆ ಎಲ್ಲಾ ಕೆಲಸಕ್ಕೂ ಒಳ್ಳೆಯದು ನಮ್ಮ ಮನಸ್ಸಿನ ನಂಬಿಕೆಯೇ ನಮಗೆ ಆಧಾರವಾಗಿದ್ದು, ಧೈರ್ಯಗೆಡದೆ ವಿಚಲಿತರಾಗದೆ ಮಾಡುವ ಕೆಲಸ ಸಾರ್ಥಕಗೊಳ್ಳುತ್ತದೆ ಎಂಬ ವಿಚಾರವಿದೆ. ಕಾಗೆ ಶನಿದೇವನ ವಾಹನ ಅಷ್ಟೇ ಅಲ್ಲದೆ ಮಹಾಭಾರತದಲ್ಲಿ ಕರ್ಣನ ರಥದ ಧ್ವಜದ ಮಧ್ಯ ಕಾಗೆಯ ಚಿಹ್ನೆ ಇದ್ದಿರುವುದು ಶುಭ ಸಂಕೇತವಾಗಿದೆ ಎಂಬುದನ್ನು ನೋಡಬಹುದು.

**ಹಲ್ಲಿಶಕುನ :**

"ಅಲ್ಲಿ ಇಲ್ಲಿ ನೋಡಿದರ ಹಲ್ಲಿ ಶಬ್ದ ಕೇಳುವವು
ಗಲ್ಲದ ಮೇಲೆ ಬಿದ್ದರದು । ಅಲ್ಲದಾಗು ಕೆಲ್ಸವಂತ
ಹಲ್ಲಿ ಶಕುನವನ್ನು ನಂಬಿ । ಅಲ್ಲಿ ಇಲ್ಲಿ ಬೀಳುವರು
ಹಲ್ಲೀಗೇನು ಗೊತ್ತವಯ್ಯ । ಹುಳುಗಳ ತಿನ್ನುವುದಯ್ಯಾ
ಹಲ್ಲಿಮಾತು ಹಳ್ಳಿಯವಂಗೆ ಎಲ್ಲ ಪೂರ್ಣ ತಿಳಿಯುವಂತೆ
ಹಲ್ಲಿ ಮಾತು ತಿಳಿದರಯ್ಯ ಎಲ್ಲರ ಮಾತು ತಿಳಿಯಬೇಕು
ಅದಕು ದೇವರು ಹೊಟ್ಟೆಕೊಟ್ಟು ಕಷ್ಟಪಡಿಯಲಚ್ಚಾನಯ್ಯ
ತನ್ನ ಬಂಧುಗಳನು ಎಲ್ಲ ಒಂದ ಕಡೆಗೆ ಕರೆಯುವದಯ್ಯ
ಅದಕ್ಕೆ ಲೊಟ್ಟ ಲೊಟ್ಟ ಎಂದು ನುಡಿಯುವುದಯ್ಯ
ಹಳ್ಳಿಯವರು ನಂಬಿ ಜೊಲ್ಲುಮಾರಿ ಹಾಕುವರಯ್ಯ
ಕಳ್ಳರು ಬಂದು ರಾತ್ರಿ ಮನೆಗೆ ಬಂದು ಇಂದು ಮನೆ ಒಡೆಯುವರು
ಅಂದು ಏನಾಗದಿದ್ದರೆ ಮಾತ್ರ ಚಲೋ ನುಡಿದತ್ತೇನ್ನುವರು
ಹೀಗೆ ಎಷ್ಟು ಅದರ ಮೇಲೆ ನಂಬಿ ನಂಬಿ ತಾವುಗಳು
ಶುಂಬರಾಗಿ ಕೂತುಕೊಂಡು ಹುಂಬರೆಂದನಿಸುವರಯ್ಯ." (ಕ್ಷೇತ್ರಕಾರ್ಯದಲ್ಲಿ ಹಸ್ತಪ್ರತಿಯಿಂದ ಆಯ್ದದ್ದು)

"ಶಕುನಶಾಸ್ತ್ರದಲ್ಲಿ ಹಲ್ಲಿಶಕುನ ವಿಶೇಷವಾಗಿದೆ. ಹೀಗಾಗಿ ಈ ಶಕುನಕ್ಕೆ ಸಂಬಂಧಿಸಿದ ಕೃತಿಗಳು ಅಧಿಕ ಪ್ರಮಾಣದಲ್ಲಿ ಸಿಗುತ್ತವೆ. ಹಲ್ಲಿ ಶಕುನ, ಹಲ್ಲಿ ಬಿದ್ದ ಫಲ, ಹಲ್ಲಿಫಲ ಇತ್ಯಾದಿ ಹೆಸರಿನ ಕೃತಿಗಳು ಇನ್ನೂ ಹಸ್ತಪ್ರತಿ ರೂಪದಲ್ಲಿಯೇ ಇವೆ. ಕನ್ನಡ ವಿಶ್ವವಿದ್ಯಾಲಯದ ಭಂಡಾರದ ೧೩೦೦ನೆಯ ಕ್ರಮಾಂಕದ ಹಸ್ತಪ್ರತಿಯಲ್ಲಿ ಹಲ್ಲಿ ಮತ್ತು ಓತಿಯ ಶಕುನವನ್ನು ತಿಳಿಸುವ ಚಿಕ್ಕದಾದ ಟೀಕಾ ಕೃತಿ ಆರಂಭದ ಪುಟದಲ್ಲಿ ಜನರ ಹಿತಾರ್ಥವಾಗಿ ಬರೆಯಲ್ಪಟ್ಟು ಶ್ಲೋಕಗಳಿಂದ ಟೀಕು ಸಹಿತ ರಚಿಸಿರುತ್ತದೆ ಎಂದು ತಿಳಿಸಲಾಗಿದೆ."[೨೪]

ಹಲ್ಲಿ ಸ್ವಭಾವ ಚಂಚಲವಾದದ್ದು. ನಿರಂತರ ಚಲಿಸುವುದು ಅದರ ಸ್ವಭಾವವಾಗಿರುತ್ತದೆ. ಅದು ಮನುಷ್ಯನ ದೇಹದ ಯಾವ ಭಾಗದ ಮೇಲೆ ಬಿದ್ದರೆ ಫಲಾಫಲಗಳು ಶುಭದಾಯಕವಾಗಿರುತ್ತವೆ ಎನ್ನುವುದನ್ನು ಕೂಡಾ ನಾವು ನೋಡಬಹುದು.

"ಹಲ್ಲಿ ಬಿದ್ದ ಫಲ। ಬ್ರಹ್ಮಸ್ಥಾನದಲ್ಲಿ ಬಿದ್ದರೆ ಕಲಹ। ಕೇಶದ ಮೇಲೆ ಬೀಳೇ ಲಾಭ। ಉಡಿಯ ಮೇಲೆ ಬೀಳೆ ಸಂಪತ್ತು, ಹುಬ್ಬಿನ ಮೇಲೆ ಬೀಳೆ ಅರಸುಗಳು ಮುನಿಸುವರು, ಎಡದ ಹುಬ್ಬಿನ ಮೇಲೆ ಬೀಳೆ ರಾಜಮನ್ನಣೆ ನಾಶಿಕದ ಮೊದಲಲ್ಲಿ ಬೀಳೆ ಶುಭ. ಬಲದ ಹರಡ ಮೇಲೆ ಬೀಳೆ ಸಂಭೋಗ, ಎಡದ ಹರಡ ಮೇಲೆ ಸಂಕೋಲೆ। ಬಲದ ಪದದ ಮೇಲೆ ಬೀಳೆ ಲೇಸು। ಎಡದ ಪದದ ಮೇಲೆ ಬೀಳೆ ಸುಖ। ಬಲದ ಹಿಮ್ಮಡದ ಮೇಲೆ ಬೀಳೆ ದಾಂನ್ಯ ಲಾಭ, ಎಡ ಹಿಂಮಡದ ಮೇಲ ಬೀಳೆ ಲೇಸು xxx ತಮಗೆ ಕೇಡು xxx ಸಮಾ ಶ್ರೀ ಗರಿಗಳ ಸ್ವಲ್ಪ ಭಾಗ ಮುರಿದಿದೆ." [೨೫]

ನಮ್ಮ ಭಾರತೀಯ ಸತ್ಸಂಪ್ರದಾಯದಲ್ಲಿ ಇನ್ನೊಂದು ಬಗೆಯ ನಂಬಿಕೆಯಿದೆ ಮದುವೆಯನ್ನು ಮಾಡಿಕೊಳ್ಳುವುದಕ್ಕಿಂತ ವಧು–ವರರ ಸಾಲವಳ್ಳಿ ನೋಡುವುದು ಅದು ಕೂಡಾ ಫಲಾಫಲಗಳ ಶುಭ–ಅಶುಭಗಳ ವಿಚಾರವನ್ನು ತಿಳಿಸುತ್ತದೆ. ಇದನ್ನು ಪಂಚಾಂಗ ಅಥವಾ ಜ್ಯೋತಿಷ್ಯ ಗ್ರಂಥದಲ್ಲಿ ನೋಡಿ ತಿಳಿಯಬೇಕಾಗುತ್ತದೆ. ಇಂಥ ಒಂದು ಜ್ಯೋತಿಷ್ಯಗ್ರಂಥವು ಬೆಳಗಾವಿ ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿಯಲ್ಲಿ ನೋಡಬಹುದು.

"**ಆದಿ :** ಶ್ರೀಗುರುಬಸವಲಿಂಗಾಯ ನಮಃ ॥ ಜ್ಯೋತಿಷ್ಯ ಗ್ರಂಥ । ಅಷ್ಟಾದಶನಿ ಮೆಷಾಸ್ತು ಕಾಷ್ಟಾತ್ರಿಂಸಘೃತಾಃ ಕಾಲಾಃ ತಾಸ್ತು ತಿಂತ್ರಕ್ಷಣೆಸ್ಯೈತು ಮಹರ್ತೋದ್ವಾದಶ ಸ್ತ್ರೀಯಾಂ।...... ಟೀಕೆ॥

**ಅಂತ್ಯ :** ೧೩ ವರ್ಷದಲ್ಲಿ ನೋಡುವಾಗ ೨೩ ನಕ್ಷತ್ರವೇಸರಿ ಮಧ್ಯನಾಡಿಯಾದರೆ ವಿವಾಹ ಮಾಡತಾಹದು । ಸಂಗಡತಿ ಬಂದ ಪಾಶ್ವನಾಡಿಯ ಬಿಡುವುದು । ಒಂದೆರಡು ನಾರಕ್ಕ ಬಿಟ್ಟು ಪಾಶ್ವನಾಡಿಂ x x x ಮಾಡುವುದು ಮುಖ್ಯ."[೨೬]

ಇದೇ ಕಟ್ಟಿನಲ್ಲಿ ಇನ್ನೊಂದು ಗ್ರಂಥ ವಾರ, ತಿಥಿ ಇತ್ಯಾದಿ ವಿಷಯಗಳನ್ನು ಒಳಗೊಂಡಿರುವುದನ್ನು ನಾವು ನೋಡಬಹುದು.

"**ಆದಿ :** 'ಶ್ರೀಗುರುಬ್ರಹ್ಮಣೆ ನಮಃ । ಶಾರಬಾಯೆ ನಮಃ ಜ್ಯೋತಿಷ್ಯ ಗ್ರಂಥ॥ ವಿಷ್ಕಂಭಂ ಪ್ರೀತಿರಾಯಷಾನಸ್ಯಂಖೆ । ಬಸವಸ್ತಥಾ । ಅತಿಗಂಡ ಸರ್ಮಾಚರತಿ ಸ್ಥೂಲಚದೈವಚ।

**ಅಂತ್ಯ :** ಅಧ್ಯಯನ। ಧ್ಯಾಪನ । ರಾನಪ್ರತಿ । ಗ್ರಹ ಅರಿಷಡ್ವರ್ಗಗಳು ಕಾಮ ಕ್ರೋಧ। ಮದ ಮತ್ಸರ ಲೋಭ ಮೋಗ ಷಡತಿಭಾದೆಗಳು ಅತಿವೃಷ್ಟಿ ಅನಾವೃಷ್ಟಿ ಬಲವೃದ್ಧಿ ಮೂಷಕ ವೃದ್ಧಿ ಶುಕವೃದ್ಧಿ ರಾಜರ ಪರಸ್ಪರ ವೈರ । ಶಿವಪುತ್ರಪ್ಪಾ।"[೨೭]

ಹೀಗೆ ಪರಂಪರಾನುಗತವಾಗಿ ಬಂದಿರುವ ನಂಬಿಕೆಗಳೇ ಕಾಲಕ್ರಮೇಣ ಶಕುನಗಳಾಗಿ ರೂಪಗೊಂಡವು. ಈ ಶಕುನಗಳಿಗೆ ತದನಂತರದಲ್ಲಿ ಕಾವ್ಯ ಅಥವಾ ಶಾಸ್ತ್ರ ಮರ್ಯಾದೆ ಪ್ರಾಪ್ತವಾಯಿತು. ಈ ನಿಟ್ಟಿನಲ್ಲಿಯೇ ಕನ್ನಡದಲ್ಲಿ ಶಕುನಶಾಸ್ತ್ರವನ್ನು ನಿರೂಪಿಸುವ ನೂರಾರು ಕೃತಿಗಳು ವಿವಿಧ ಛಂದಸ್ಸಿನಲ್ಲಿ ರಚನೆಗೊಂಡವು. ಈ ಶಾಸ್ತ್ರವು ಒಂದು ಪರಂಪರೆಯಾಗಿ ಬೆಳೆದು ಇಂದಿಗೂ ತನ್ನದೆಯಾದ ಜನಪ್ರಿಯತೆಯನ್ನು ಗಳಿಸಿರುವುದು ವಿಶಿಷ್ಟವಾಗಿದೆ.

**ಅಪ್ರಕಟಿತ ಸಾಹಿತ್ಯದ ಹಸ್ತಪ್ರತಿಗಳು :**

ಬೆಳಗಾವಿ ಜಿಲ್ಲೆಯು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಅಪಾರ ಹಸ್ತಪ್ರತಿಗಳನ್ನು ಹೊಂದಿರುವ ಬೃಹತ್ ಜಿಲ್ಲೆಯಾಗಿದೆ. ಲಾವಣಿ, ಜಾನಪದ ಮತ್ತು ವೈದ್ಯಶಾಸ್ತ್ರದ ಹಸ್ತಪ್ರತಿಗಳಿಗಿಂತ ಪ್ರಾಚೀನವಾದ ಸಾಹಿತ್ಯಿಕ ಕೃತಿಗಳ ಸಂಗ್ರಹ, ಸಂರಕ್ಷಣೆಯಲ್ಲಿ ಮುಂಚೂಣಿಯಲ್ಲಿರುವುದು ಕಂಡು ಬರುತ್ತದೆ. ಏಕೆಂದರೆ ಹಳಗನ್ನಡ-ನಡುಗನ್ನಡ-ಟೀಕೆ-ವಚನಗಳನ್ನು ಓದುವ ಹವ್ಯಾಸಿ ಜನರು ಈ ಭಾಗದಲ್ಲಿರುವುದರಿಂದ ಮತ್ತು ಅವುಗಳಲ್ಲಿರುವ ಪೌರಾಣಿಕ ಕೃತಿಗಳನ್ನು ಪಠನ-ಪೂಜೆ ಮಾಡುವುದರಿಂದ ಸಂಪತ್ತು ಐಶ್ವರ್ಯ ಹೆಚ್ಚಾಗುತ್ತದೆ ಎಂಬ ನಂಬಿಕೆ ಇದ್ದಂತೆ ಕಂಡುಬರುತ್ತದೆ. ಏಕೆಂದರೆ ಈ ನಾಡಿನಲ್ಲಿ ಮನೆಗಳಲ್ಲಿ ಸಂಗ್ರಹಿಸಿದ ಹಸ್ತಪ್ರತಿಗಳ ಮೇಲೆ ಕುಂಕುಮ-ವಿಭೂತಿ ಧಾರಣೆ ಮಾಡಿರುವ ಕಲೆಗಳು ಗ್ರಂಥಗಳ ಮೇಲೆ ಕಾಣಿಸುತ್ತವೆ. ಹೀಗಾಗಿ ನನ್ನ ಅಧ್ಯಯನಕ್ಕಾಗಿ ಕ್ಷೇತ್ರಕಾರ್ಯ ಕೈಕೊಂಡಾಗ ಕೆಲವೊಂದು ಸಾಹಿತ್ಯದ ಕುರಿತು ತಾಳೆಗರಿ ಆಧುನಿಕ ಕಾಗದ ಹಸ್ತಪ್ರತಿಗಳು ದೊರಕಿವೆ. ಅವುಗಳನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಅಥಣಿ ಮೋಟಗಿಮಠದ ಹಸ್ತಪ್ರತಿಗಳನ್ನು ಪರಿಶೀಲಿಸುತ್ತಿದ್ದಾಗ ಅಲ್ಲಿಯ ಶ್ರೀಮಠದ ಹಿಂದಿನ ಪೀಠಾಧಿಪತಿಗಳಾಗಿದ್ದ ಪೂಜ್ಯ ಗುರುಬಸವ ಸ್ವಾಮಿಗಳು ರಚಿಸಿದ ಕೆಲವು ಮಹತ್ವದ ಕೃತಿಗಳು ಇನ್ನೂ ಪ್ರಕಟವಾಗದೆ, ಹಸ್ತಪ್ರತಿ ರೂಪದಲ್ಲಿಯೇ ಇರುವುದನ್ನು ಗಮನಿಸಿದೆ. ಈ ವಿಷಯವನ್ನು ಈಗಿನ ಪೂಜ್ಯರು ನನಗೆ ತಿಳಿಸಿಕೊಟ್ಟರು. ಪೂಜ್ಯ ಗುರುಬಸವ ಸ್ವಾಮಿಗಳ ಅಪ್ರಕಟಿತ ಸಾಹಿತ್ಯದ ಹಸ್ತಪ್ರತಿಗಳು ಹೀಗಿವೆ.

**ಅಪ್ರಕಟಿತ ಕೃತಿಗಳು :**

೧. ಪಾಖಂಡ ಕೃತಿ ಖಂಡನ ವೀರಶೈವ ಮತಮಂಡನ

೨. ಶ್ರೀಕ್ಷೇತ್ರ ಅಥಣಿ ಮೋಟಗಿಮಠದ ಶ್ರೀ ಚನ್ನಬಸವ ಚಾರಿತ್ರ್ಯವು ಅರ್ಥಾತ್ ವೀರಶೈವ ಕರ್ಣಾಮೃತವು(ಭಾಮಿನಿ ಷಟ್ಪದಿ)

೩. ಸುಂದರನಂಬಿಯ ಚಂಪು

೪. ಶಿವಾನುಭವ ಶತಕಂ

೫. ಮಹಾಯೋಗದ ಮರ್ಮವು ಅರ್ಥಾತ್ ಶಿವಯೋಗದ ಗುಟ್ಟು

೬. ವೇದಾಂತ ವಿಮರ್ಶವು

೭. ಅನಾಮಯ ಸ್ತೋತ್ರಂ (ದಂಡಿಕೃತ: ಕನ್ನಡ ವ್ಯಾಖ್ಯಾನ)

೮. ಕರ್ನಾಟಕ ಪಾರ್ವತಿ ಪರಿಣಯಂ (ಬಾಣ ನಾಟಕದ ಕನ್ನಡ ಅನುವಾದ)

೯. ಶಿವಭಕ್ತಿ ವಿಳಾಸ

೧೦. ವಿಶ್ವಸಂದೇಶ

**ಬಿಡಿ ಲೇಖನಗಳು :**

೧. ಬಿಳ್ಳೂರಿನ ಶ್ರೀ ಗುರುಬಸವ ಚಾರಿತ್ರ್ಯಕ್ಕೆ ಮುನ್ನುಡಿ

೨. ಕನ್ನಡಿ ವಾರಪತ್ರಿಕೆಯಲ್ಲಿ ಪ್ರಕಟಿತ ಲೇಖನಗಳು

೩. ತಪಸ್ವಿ (ಅಥಣಿ ಮುರುಘೇಂದ್ರ ಸ್ವಾಮಿಗಳ ಕುರಿತು ಲೇಖನ)

೪. ವೀರಶೈವರಿಗೆ ಪುರಾತನರ ಪೂಜೆ ನಿಷೇಧ

೫. ವೀರಶೈವರಿಗೆ ಜ್ಯೋತಿಷ್ಯ ನಿಷೇಧ

೬. ಲಿಂಗತ್ಯಾಗವು ವಿದ್ವತ್ ಸನ್ಯಾಸವಲ್ಲ.

'ಶ್ರೀಗುರು' ಇವರ ಕಾವ್ಯನಾಮ. ಅದು ಅವರ ಗುರುನಿಷ್ಠೆಗೆ ನಿದರ್ಶನ. ಇವರ ಸಮಗ್ರ ಸಾಹಿತ್ಯ ಪ್ರಕಟಣೆಯ ಅಗತ್ಯವಿದೆ. ಲಿಂಗಾಯತ ಧಾರ್ಮಿಕ ಗ್ರಂಥಗಳ ಸಂಶೋಧನೆಯ ಕುರಿತು ಅಧ್ಯಯನ ಶ್ರೀಮಠದಲ್ಲಿ ನಡೆಯುತ್ತಿತ್ತು. ವೀರಶೈವ ಗ್ರಂಥ ಸಂಶೋಧನಾ ಸಮಿತಿಯನ್ನು ೧೯೪೦ರಲ್ಲಿ ರಚಿಸಿದ್ದರು. ಪೂಜ್ಯಶ್ರೀ ಗುರುಬಸವರು ಸಾಹಿತ್ಯದ ಮೇಧಾವಿಗಳಾಗಿದ್ದರು. ಇವರ ಜೊತೆ ಆರ್. ಸಿ. ಹಿರೇಮಠ, ಸಂ.ಶಿ. ಭೂಸನೂರಮಠ, ಸಂಗಮೇಶ ಬಿರಾದಾರ, ತೆಲಸಂಗದ ಬಸವಲಿಂಗ ಶಾಸ್ತ್ರಿಗಳು, ಪಂ. ನಾಗಭೂಷಣ ಶಾಸ್ತ್ರಿ, ವೈ. ನಾಗೇಶ ಶಾಸ್ತ್ರಿ, ಸದಾಶಿವ ಶಾಸ್ತ್ರಿ ಹುಕ್ಕೇರಿ ಮೊದಲಾದ ಸಾಹಿತ್ಯ ದಿಗ್ಗಜರು ಸಾಹಿತ್ಯ ಚಿಂತನ ನಡೆಸಿದ ಅನೇಕ ಘಟನೆಗಳಿವೆ.

ಅಥಣಿಯಲ್ಲಿ ನೆಲೆಸಿದ ರಾಮಚಂದ್ರ ಪಾಂಡುರಂಗ ಕುಲಕರ್ಣಿ ಅವರು ೧೯೯೭ರಲ್ಲಿ ನಿಧನರಾದರು. ಇಂಚಗೇರಿ ಸಂಪ್ರದಾಯವನ್ನು ನಂಬಿದ ಅವರು ಗುರುದೇವ ರಾನಡೆ ಅವರ ಪರಮಾಪ್ತರಲ್ಲಿ ಒಬ್ಬರಾಗಿದ್ದರು. ಅವರು ಅನೇಕ ಕೃತಿಗಳನ್ನು ಪ್ರಕಟಿಸಿದ್ದರೆ. 'ಪ್ರಭುಲಿಂಗಲೀಲೆ'ಯನ್ನು ಕುರಿತು ಅವರು ಕರಾರುವಕ್ಕಾಗಿ ಮಾತನಾಡಬಲ್ಲವರಾಗಿದ್ದರು. ಅವರು ಬರೆದ ಅಪ್ರಕಟಿತ ಸಾಹಿತ್ಯ ಇನ್ನೂ ಪ್ರಕಟವಾಗಬೇಕಾಗಿದೆ. ಸಾಹಿತ್ಯಲೋಕ ಅವರನ್ನು ಗುರುತಿಸಬೇಕಾಗಿದೆ. ಕನ್ನಡ ಮತ್ತು ಮರಾಠಿ ಎರಡೂ ಭಾಷೆಯ ಮೇಲೆ ಹಿಡಿತ ಸಾಧಿಸಿದ ಆರ್.ಪಿ. ಕುಲಕರ್ಣಿ ಅವರು ಎರಡೂ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಅಥಣಿಯಲ್ಲಿರುವ ಅವರ ಮನೆಯಲ್ಲಿ ಈ ಕೃತಿಯ ಅಪ್ರಕಟಿತ ಹಸ್ತಪ್ರತಿಗಳನ್ನು ಗಮನಿಸಬಹುದು.

ಇವರ ಕೃತಿಗಳು ಹೀಗಿವೆ:

೧. ಭಾರತೀಯ ಇತಿಹಾಸ ಪರಿಚಯ

೨. ಬೋಧನೆ

೩. ಶರಣಾಗತಿ (ಮರಾಠಿ)

೪. ಶ್ರೀ ಗುರುದೇವ ದರ್ಶನ (ಮರಾಠಿ)

೫. ಭಕ್ತೀ ಚಾ ಕಳಸ (ಮರಾಠಿ)

೬. ಶಿವಶರಣೆ ಶಿವಲಿಂಗವ್ವಾ (ಕನ್ನಡ)

೭. ಶ್ರೀಗುರುದೇವ ವಚನಾಮೃತ (ಇಂಗ್ಲಿಷ್)

೮. ದಾಸ ಬೋಧಾಚೆ ಅಧ್ಯಾತ್ಮಿಕ ಶಿಕವಣ (ಮರಾಠಿ)

೯. ಶ್ರೀ ಗುರುದೇವ ರಾನಡೆಯವರ ತತ್ವಜ್ಞಾನ (ಕನ್ನಡ)

೧೦. ಶ್ರೀಭಾವೂ ಸಾಹೇಬ ಮಹಾರಾಜ ಉಮದೀಕರವರಾಂಚೆ ಶಿಕವಣ (ಮರಾಠಿ)

೧೧. ನಾಮಸಾಧನಾಚೇ ಮಾರ್ಗದರ್ಶನ (ಮರಾಠಿ)

೧೨. ಮೀ ಪಾಹಿಲೇಲೇ ಕಾಕಾ ತುಳಪುಳೆ (ಮರಾಠಿ)

೧೩. ನಿತ್ಯನೇಮಾವಳೀಚೆ ಅಂತರಂಗ (ಮರಾಠಿ)

೧೪. ಶ್ರೀ ಗುರುದೇವ ರಾನಡೆ ಆಣಿ ಅನುಭೂತಿ ಶಾಸ್ತ್ರ (ಮರಾಠಿ)

೧೫. ಜ್ಞಾನೇಶ್ವರತೀ ಸಾಕ್ಷಾತ್ಕಾರ ದರ್ಶನ

೧೬. ಸಾಧಕಾಚೆ ಚಿಂತನ

೧೭. ರತ್ನಾಕರ ವರ್ಣಿಯ ಭರತೇಶ ವೈಭವ (ಮರಾಠಿ ಅನುವಾದ)

೧೮. ಪ್ರಭುಲಿಂಗಲೀಲೆಯ ಸಮೀಕ್ಷೆ

ಇವರ ಕನ್ನಡ–ಮರಾಠಿ–ಇಂಗ್ಲಿಷ್ ಕೃತಿಗಳು ಅಮೂಲ್ಯವಾಗಿವೆ.

**ಎಳಂದೂರ ಪರ್ವತಶಿವಯೋಗಿಯ ಮೂರು ಅಪ್ರಕಟಿತ ಕೃತಿಗಳು :**

ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರಕ್ಕೆ ಮೇಲಿಂದ ಮೇಲೆ ಭೇಟಿ ನೀಡುವುದು ನನಗೆ ಪ್ರೀತಿಯ ಕೆಲಸ. ನನ್ನ ಅಧ್ಯಯನಕ್ಕೆ ಸಂಬಂಧಿಸಿದ ಪ್ರಕಟಿತ–ಅಪ್ರಕಟಿತ ಸಾಹಿತ್ಯದ ಸ್ವರೂಪ ತಿಳಿಯಲು ಈ ಕೇಂದ್ರ ನನಗೆ ತುಂಬಾ ಸಹಾಯಕಾರಿಯಾಗಿದೆ. ಈ ಕೇಂದ್ರಕ್ಕೆ ಇತ್ತೀಚೆಗೆ ಬಂದ ಹಸ್ತಪ್ರತಿಗಳನ್ನು ಅವಲೋಕಿಸಿದಾಗ ಎಳಂದೂರ ಪರ್ವತಶಿವಯೋಗಿಯ ೧೨ ಕೃತಿಗಳ ಒಂದು ಕಟ್ಟುದೊರೆಯಿತು.

೧. ಅಷ್ಟಾವರಣ ಸ್ತೋತ್ರ ತ್ರಿವಿಧಿಯ ಸಾರ

೨. ಕರಣ ಹಸಿಗೆ ತತ್ವವಿಭಾಗ (ಗದ್ಯ)

೩. ಕರಸ್ಥಲದ ನಾಗಲಿಂಗದೇವರ ತ್ರಿವಿಧಿ ಟೀಕೆ

೪. ತತ್ವವಿಭಾಗ

೫. ತತ್ವವಿಭಾಗ (ಕರಣಹಸಿಗೆ)

೭. ತ್ರಿವಿಧಿ ಸಾರದ ಟೀಕೆ

೭. ಪ್ರಭುಲಿಂಗ ಕಂದದ ಟೀಕೆ

೮. ಬಸವ ಸ್ತೋತ್ರ ತ್ರಿಪದಿಯ (ಸಿದ್ಧರಾಮ) ಸಾರದ ಟೀಕೆ

೯. ಮಿಶ್ರಸೋತ್ರ ತ್ರಿಪದಿಯ (ಸಿದ್ಧರಾಮ) ಸಾರ ಟೀಕೆ

೧೦. ಮಿಶ್ರಾರ್ಪಣ (ಚನ್ನಬಸವ ಕೃತ) ಟೀಕೆ

೧೧. ಲಿಂಗಾಂಗ ಪ್ರಣವ ಸಂಯೋಗ ಸ್ಥಲ ತ್ರಿವಿಧಿ ಟೀಕೆ

೧೨. ಶೀಲವಂತಯ್ಯನ ತ್ರಿವಿಧಿ ಟೀಕೆ

ಈ ೧೨ ಕೃತಿಗಳಲ್ಲಿ ಮೂರು ಕೃತಿಗಳು ಇನ್ನೂ ಅಪ್ರಕಟಿತವಾಗಿವೆ. ಇವುಗಳ ವಿವರ ಹೀಗಿದೆ:

**೧. ಗುರುಸ್ತೋತ್ರದ ತ್ರಿವಿಧಿಯ ಟೀಕೆ :**

ಗುರುಸ್ತೋತ್ರ ತ್ರಿವಿಧಿ ಮೂಲ ಕೃತಿಯನ್ನು ಚನ್ನಮಲ್ಲಿಕಾರ್ಜುನರು ಸಂಪಾದಿಸಿ ಸದ್ಧರ್ಮದೀಪಿಕೆ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಈ ಸ್ತೋತ್ರ ಕೃತಿಗೆ ಏಳಂದೂರ ಪರ್ವತಶಿವಯೋಗಿ ಟೀಕೆ ಬರೆದಿದ್ದಾನೆ. ಈ ಟೀಕಾ ಕೃತಿ ಇಲ್ಲಿಯವರೆಗೆ ಪ್ರಕಟವಾಗಿಲ್ಲ. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರದಲ್ಲಿ ಈ ಟೀಕಾ ಕೃತಿ ಇದೆ. ಕೃತಿಯ ಕೊನೆಯಲ್ಲಿ "ಶ್ರೀಮತ್ ಷಟ್‌ಸ್ಥಲಾದ್ವೈತ ವಿದ್ಯಾಪಾರಂಗತ ಸಿದ್ಧಲಿಂಗಾಖ್ಯಸ್ವಾಮಿಗಳ ಜ್ಞಾನಪ್ರಸಂನಪಾತ್ರ ಬಾಲೇಂದುಪುರದ ಹರೀಶ್ವರ ಶಾಂತವೀರೇಶ್ವರ ಕರಸರಸೀರುಹ ಸಂಜಾತ ವೀರಮಾಹೇಶ್ವರ ಪರ್ವತ ಶಿವಯೋಗಿಗಳು ವಿರಚಿತಮಪ್ಪ ಗುರುಸ್ತೋತ್ರದ ತ್ರಿವಿಧಿಯ ವ್ಯಾಖ್ಯಾನ' ಕ್ರೋಧಿ ಸಂವತ್ಸರದ ಜೇಷ್ಠ ಮಾಸದ ನವಮಿ ಬುಧವಾರದೊಳ್ ಸಂಪೂರ್ಣವಾಯಿತು ಮಂಗಳ ಮಹಾಶ್ರೀ"[೨೮] ಎಂದು ಹೇಳಲಾಗಿದೆ. ಇಂಥ ಲಘು ಕೃತಿಗಳನ್ನು ಸಂಪಾದಿಸಿ ಪ್ರಕಟಿಸುವತ್ತ ನಮ್ಮ ವಿದ್ವಾಂಸರ ಗಮನ ಹರಿಯಬೇಕಾಗಿದೆ.

**೨. ಚನ್ನಬಸವೇಶ್ವರ ಕರಣಹಸುಗೆಯ ಟೀಕೆ :**

ಚನ್ನಬಸವಣ್ಣನವರು ಬರೆದ ಕರಣ ಹಸಿಗೆ ಕೃತಿಗೆ ಹತ್ತಾರು ಜನ ಟೀಕೆಯನ್ನು ಬರೆದಿದ್ದಾರೆ. ಅವರಲ್ಲಿ ಎಳಂದೂರ ಪರ್ವತ ಶಿವಯೋಗಿ ಕೂಡ ಒಬ್ಬ. ಆತ ಕರಣ ಹಸಿಗೆ ಕೃತಿಗೆ ಟೀಕೆಯನ್ನು ಬರೆದ ಕೃತಿ ಈವರೆಗೆ ಪ್ರಕಟವಾಗಿಲ್ಲ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ಭಂಡಾರದಲ್ಲಿ ಈ ಕೃತಿಯ ನಾಲ್ಕು ಟೀಕಾ ಕೃತಿಗಳು ಲಭ್ಯವಿವೆ. ನಾಗನೂರು ಮಠದ ಹಸ್ತಪ್ರತಿ ಭಂಡಾರದಲ್ಲಿಯೂ ಒಂದು ಸಂಗ್ರಹ ಕಟ್ಟಿನಲ್ಲಿ ಈ ಕೃತಿ ಉಳಿದುಕೊಂಡಿದೆ. ಈ ಕೃತಿಯ ಆದಿ ಅಂತ್ಯಗಳು ಹೀಗಿವೆ:

"**ಆದಿ :** ಶ್ರೀಗುರುಬಸವಲಿಂಗಾಯ ನಮಃ। ಆವುದಾನೊಂದು ಶಾಸ್ತ್ರವ ನೋಡಬೇಕಾದರೂ ಪ್ರಥಮದಲ್ಲಿ ಶಿವಾನುಭವ ಮಾಡಬೇಕಾದರೆ, ಮೊದಲಲ್ಲಿ ಗುರು ನಮಸ್ಕಾರವೇ ಮುಖ್ಯವಾದ

ಕಾರಣ ಆದ್ಯರು ಈ ಶಾಸ್ತ್ರ ಪ್ರಥಮ ಪ್ರಾರಂಭದಲ್ಲಿ ಶ್ರೀಗುರು ನಮಸ್ಕಾರವೇ ಅತ್ಯಧಿಕವೆಂದರಿದು ಪ್ರಥಮಾಚಾರ್ಯರಾದ ಬಸವೇಶ್ವರನೆಂಬ ಶ್ರೀಗುರು ತತ್ವಕ್ಕೆ ... ಶಾಸ್ತ್ರೋದ್ಧಾರಮಂ ಮಾಡಿದ್ದರೋ ಅದೆಂತೆದೊಡೆ ಶ್ರೀ ಸದ್ಗುರುಣೈಶ್ವರ್ಯ ಸಂಪತ್ಕರವುಳ್ಳಂಥ ಮುಕ್ತಿ ಪ್ರದಾಯಕವಾದಂಥ ।ಬಸವ। ಬಕಾರವೆಂಭದೂರ ಗುರು ಸಕಾರವೇ ಸಕಲ ಚೈತನ್ಯಾತ್ಮಕವಾದ ಲಿಂಗವು 'ವ' ಕಾರವೇ ವಾಚಿಸುವುದಕ್ಕೆ ಕಾರಣ ಮಹಾನುಭವ ಮೂರ್ತಿಯಪ್ಪ ಜಂಗಮವು। ಇಂತು ಗುರು ಲಿಂಗ ಜಂಗಮವಾದಂಥ ಲಿಂಗಾಯ ಉತ್ಪತ್ತಿ ಸ್ಥಿತಿಲಯಂಗಳಿಗಾಲಯವಾದ ಬಸವೇಶ್ವರನೆಂಬ ಶ್ರೀಗುರು ತತ್ವಕ್ಕೋಸ್ಕರ ನಮಃ ನಮಸ್ಕಾರವು ಎಂಬುದೀಗ .... ನಿರೂಪಿಸಿದ ಕರಣ ಹಸಿಗೆ॥

**ಅಂತ್ಯ :** ಷಟ್‌ಸ್ಥಲ ಜ್ಞಾನ ಚಕ್ರವರ್ತಿಯಪ್ಪ ಚೆನ್ನಬಸವೇಶ್ವರ ಸ್ವಾಮಿಗಳೆಂಬ ಮಹಾಜ್ಞಾನಗುರು ಮೂರ್ತಿಯು ನಿರೂಪಿಸಿದ। ಉಪದೇಶಿಸಿದ। ಕರಣಹಸಿಗೆ ತತ್ವವಿಭಾಗನೆಯೆಂಬ ಅಭಿಧಾನವುಳ್ಳ ಪೂರ್ವಪ್ರಕರಣಂ ॥ಸಮಾಪ್ತಂ॥"[೨೯]

**೩. ಚನ್ನಬಸವೇಶ್ವರ ಮಿಶ್ರಾರ್ಪಣದ ಟೀಕೆ :**

ಎಳಂದೂರ ಪರ್ವತ ಶಿವಯೋಗಿ ಬರೆದ ಚನ್ನಬಸವೇಶ್ವರನ ಮಿಶ್ರಾರ್ಪಣದ ಟೀಕೆ ಇನ್ನೂ ಅಪ್ರಕಟಿತವಾಗಿದೆ. ವೀರಣ್ಣ ರಾಜೂರ ಅವರು ಇತ್ತೀಚೆಗೆ ಸಮಗ್ರ ಮಿಶ್ರಾರ್ಪಣ ಸಂಪುಟ ಪ್ರಕಟಿಸಿದ್ದಾರೆ. ಆ ಕೃತಿಯಲ್ಲಿಯೂ ಕೂಡ ಇದು ಪ್ರಕಟವಾಗಿಲ್ಲ. ಈ ಕೃತಿಯ ಆದಿ–ಅಂತ್ಯ ಹೀಗಿದೆ:

"**ಆದಿ :** ಶ್ರೀಗುರು ಬಸವಲಿಂಗಾಯ ನಮಃ । ಆವದಾನೊಂದು ಶಾಸ್ತ್ರವ... ಚನ್ನಬಸವದೇವರು । ಷಡುಸ್ಥಲದ ಚಕ್ರವರ್ತಿಯಪ್ಪ ಚೆನ್ನಬಸವೇಶ್ವರ ಸ್ವಾಮಿಗಳೆಂಬ ಮಹಾಜ್ಞಾನ ಗುರುಮೂರ್ತಿಯು । ನಿರೂಪಿಸಿದ ತಂಮಂಶಿಭೂತವಾದ ನಿತ್ಯ ನಿತ್ಯ ವಸ್ತುವೆ ನಿತಯಿಗಮುಕ್ತರಾರ್ತಫಲವಿಭೋಗ ವಿರಾಗ ಸಮಾಧಿ ಘಟ ಸಂಪತ್ತಿ ಮುಮುಕ್ಷುತ್ವಂಗಳೆಂಬ ಸಾಧನ ಚತುಷ್ಟಯ ಸಂಪನ್ನರಾದ ಸಕಲ ಶಿವಶರಣರು ಅರಿದುದಾಚರಿಸಿ ಕೃತಾರ್ಥರಾಗಲಿಯೆಂಬ ತಂಮಕೃಪಾಮನದಿಂದೆ । ಪಾಲುಕ್ಕಿ ವೂಲುವರಿದು ಪಾದಿಯಲ್ಲಿ ತಂಮಸ್ವಾನುಭಾವ ಪ್ರಸಂಗಮಂ ಸ್ಪಷ್ಟ ವಾಕ್ಯಂಗಳಿಂದುಪದೇಶಿಸಿದ ಮಿಶ್ರಾರ್ಪಣ। ಮಿಶ್ರವೆಂದರೆ ಪದಾರ್ಥ, ಅರ್ಪಣವೆಂದರೆ ಲಿಂಗಾರ್ಪಣ। ಲಿಂಗಾರ್ಪಣದ ಸಕಲವನು ಹೇಳುವಂಥಾ ಮಿಶ್ರಾರ್ಪಣವೆಂಬ ಅಭಿಧಾನವುಳ್ಳ ಉತ್ತರ ಪ್ರಕರಣಂ॥

**ಅಂತ್ಯ :** ಸ್ವಯಂ ಪ್ರಕಾಶನ ಸ್ವರೂಪವಾದಂಥಾ ಯತಿಸ್ವಾಮಿಯೆಂಬುದರ್ಥ। ಚನ್ನಬಸವೇಶ್ವರದೇವರು ನಿರೂಪಿಸಿದ ಮಿಶ್ರಾರ್ಪಣ ಸಮಾಪ್ತ ಮಂಗಳ ಮಹಾ ಶ್ರೀ॥"[೩೦]

ಎಳಂದೂರ ಪರ್ವತ ಶಿವಯೋಗಿಯ ಈ ಮೂರು ಕೃತಿಗಳು ಇನ್ನೂ ಹಸ್ತಪ್ರತಿ ರೂಪದಲ್ಲಿವೆ. ಅವುಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಬೇಕಾದ ಅನಿವಾರ್ಯತೆ ಇದೆ.

**ಕವಿಕರ್ಣರಸಾಯನ :**

ಬೆಳಗಾವಿ ಜಿಲ್ಲೆಯ ಹಿರಿಯ ವಿದ್ವಾಂಸರಾಗಿದ್ದ ಎಸ್. ಸಿ. ನಂದೀಮಠ ಅವರು ಕವಿಕರ್ಣರಸಾಯನ ಕೃತಿಯನ್ನು ಸಂಪಾದಿಸಿ ಪ್ರಕಟಿಸಬೇಕೆಂದು ನಲವತ್ತು ವರ್ಷಗಳ ಕಾಲ ಶ್ರಮಪಟ್ಟಿದ್ದರು. ಈ ವಿಷಯವಾಗಿ ಆರ್. ಸಿ. ಹಿರೇಮಠ ಅವರು ಹೀಗೆ ಹೇಳುತ್ತಾರೆ : "ನಂದೀಮಠ ಸಾಹೇಬರು ಕವಿಕರ್ಣ ರಸಾಯನವನ್ನು ಸಂಪಾದನೆ ಮಾಡುತ್ತಿದ್ದುದು ನನಗೆ ೪೦ ವರ್ಷಗಳ ಹಿಂದೆಯೇ ತಿಳಿದಿದ್ದಿತು. ಸಮಗ್ರ ಗ್ರಂಥದ ಪ್ರತಿಯ ಶೋಧನೆಯಲ್ಲಿ ಅವರಿದ್ದರು..... ಕವಿಕರ್ಣ ರಸಾಯನ ಅಚ್ಚಾಗಲಿಲ್ಲ. ತಾವು ಆಗಾಗ ಸಂಗ್ರಹಿಸಿದ್ದ ಹಸ್ತಪ್ರತಿ ಹಾಗೂ ಅಚ್ಚಾದ ಪ್ರತಿಗಳನ್ನು ಸಾಹೇಬರು ಗೋಕಾಕದಲ್ಲಿಟ್ಟಿದ್ದರು. ಅವರು ತೀರಿ ಹೋದ ಮೇಲೆ ಅವರ ಚಿರಂಜೀವರು ಅವನ್ನು ನಂದಿಯೊಳಗಿನ ಮನೆಗೆ ಸ್ಥಳಾಂತರಿಸಿದರು."[೩೧]

ಕವಿಕರ್ಣ ರಸಾಯನ ಕೃತಿ ಇಲ್ಲಿಯವರೆಗೆ ಇನ್ನೂ ಮುದ್ರಣಭಾಗ್ಯ ಕಂಡಿಲ್ಲ. ಹಾಗೆಯೇ ನಂದೀಮಠರು ಸಂಸ್ಕೃತ ಬಸವ ಪುರಾಣವೊಂದನ್ನು ಸಂಪಾದಿಸಿ ಪ್ರಕಟಿಸಬೇಕೆಂದು ಆಲೋಚಿಸಿದ್ದರು. ಆ ಹಸ್ತಪ್ರತಿಯೂ ಪ್ರಕಟಣೆಯ ಭಾಗ್ಯ ಕಾಣಲಿಲ್ಲ.

**ಬೋಳಬಸವೇಶ್ವರ ದೇವರು ಸಂಕಲಿಸಿದ ೧೦೦೮ ವಚನಗಳು :**

ನಾಗನೂರು ರುದ್ರಾಕ್ಷಿಮಠದ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿರುವ ಈ ಹಸ್ತಪ್ರತಿಯನ್ನು ಕೊಟ್ಟವರು ಹುಕ್ಕೇರಿ ತಾಲೂಕಿನ ಉಳ್ಳಾಗಡ್ಡಿ ಖಾನಾಪೂರದ ಸಿದ್ಧಲಿಂಗಯ್ಯ ಹೊಳಿಮಠ ಅವರು. ಈ ಹಸ್ತಪ್ರತಿ ಇನ್ನೂ ಅಪ್ರಕಟವಾಗಿದೆ ಎಂಬ ಅಂಶವನ್ನು ನನಗೆ ತಿಳಿಸಿದವರು ಖ್ಯಾತ ಹಸ್ತಪ್ರತಿ ತಜ್ಞ ಎಸ್. ಶಿವಣ್ಣನವರು. ಈ ಹಸ್ತಪ್ರತಿಯನ್ನು ಗಮನಿಸಿದ ಶಿವಣ್ಣನವರು ಈ ಕಟ್ಟಿನಲ್ಲಿ ಅಜಗಣ್ಣನ ಐದು ಹೊಸ ವಚನಗಳಿವೆ ಎಂಬುದನ್ನು ಶೋಧಿಸಿ, ಸ್ವಪ್ನಲೋಕ ಪತ್ರಿಕೆಯಲ್ಲಿ ಪ್ರಕಟಿಸಿದ್ದಾರೆ.

ಸಕಲ ಪುರಾತನರ ವಚನಗಳ ಕಟ್ಟುಗಳ ಮಾದರಿಯಲ್ಲಿ ಬೋಳಬಸವೇಶ್ವರ ದೇವರು ಸಂಕಲಿಸಿದ ಈ ಹಸ್ತಪ್ರತಿ ಕೂಡ ಕೋಲ ಶಾಂತಯ್ಯನ ವಚನಗಳಿಂದ ಪ್ರಾರಂಭವಾಗುತ್ತದೆ.

**ಶ್ರೀ ಮದ್ವೀರಶೈವಾಭಿಷ್ಟಕಲ್ಪಧ್ರುಮಂ ಪುರಾಣ :**

ಇದೊಂದು ಅಪರೂಪದ ಹಸ್ತಪ್ರತಿ. ನಾಗನೂರು ಮಠದ ಗ್ರಂಥಾಲಯದಲ್ಲಿದೆ. ೧೯೨೮ರಲ್ಲಿ ರೇವಣಸಿದ್ಧ ಎಂಬ ಕವಿ ವಾರ್ಧಕ ಷಟ್ಪದಿಯಲ್ಲಿ ಅರಟಾಳ ರುದ್ರಗೌಡರ ಚರಿತ್ರೆಯನ್ನು ಬರೆದಿದ್ದಾನೆ. ೧೨ ಸಂಧಿಯ ಈ ಪುರಾಣದಲ್ಲಿ ಅರಟಾಳ ರುದ್ರಗೌಡರನ್ನು ದೈವತ್ವಕ್ಕೆ ಏರಿಸುವ ಪ್ರಯತ್ನವನ್ನು ಮಾಡಿದ್ದಾನೆ.

"ಅರಟಾಳದ ರುದ್ರಮ್ಮನವರ ಸತ್ಫಲವಾದ
ವರಡೆಪ್ಯೂಟೀ ಕಲೇಕಟ್ ರುದ್ರಭೂಪಾಲ

ಶಿವಮತಕ್ಕೆ ಹಿತವರಚಿಪ ಕಾರಣವಾಗಿ ಜಗವ್ಯೆದಿದ
ಪರಮಾವತಾರಿಗಳ ಪುರಾಣವನ್ನು ಬಾಲರ ನುಡಿಗನನ್ನುಡಿದ
ವೋಲನುಡಿದಿನಿಲ್ಲಿ ವಿಭುದರು ತಪ್ಪುಮಿರ್ದೊದಂತಿದ್ದಬೇಕೆಂದು ನಿಮಡಿಗಳ್ಗೆ
ನಮಿಪೆನೀಗಾ."[೩]

ಎಂದು ಕವಿ ವಿನಯಪೂರ್ವಕ ಬೇಡಿಕೊಂಡಿದ್ದಾನೆ. ಸಾಮಾಜಿಕ ಸೇವಾಕಾರ್ಯದ ವ್ಯಕ್ತಿಯೊಬ್ಬನನ್ನು ಕುರಿತು ಆಧುನಿಕ ಕಾಲದಲ್ಲಿ ಪುರಾಣ ಮಾಧ್ಯಮದಲ್ಲಿ ಚರಿತ್ರೆಯನ್ನು ಬರೆದು ರುದ್ರ ಭೂಪಾಲ ಎಂದು ಗೌರವಿಸಿದ್ದು ಸ್ಮರಣೀಯ ಸಂಗತಿಯಾಗಿದೆ.

**ಗುರುವರ್ಯ ಬಸವಾರ್ಯಕವಿ ವಿರಚಿತ ಸಮಾಜದರ್ಶ ಅಥವಾ ರುದ್ರಪ್ರಭು ನೀತಿ :**

೧೯೧೩ರಲ್ಲಿ ಕಂಬಿ ಬಸವಾರ್ಯ ಮಾಸ್ತರರಿಂದ ರಚಿತವಾದ ಕಿರುಕೃತಿ ಇದು. ಇದು ಇನ್ನೂ ಹಸ್ತಪ್ರತಿ ರೂಪದಲ್ಲಿದೆ. ಅರಟಾಳ ರುದ್ರಗೌಡರು ಅಖಿಲ ಭಾರತ ವೀರಶೈವ ಮಹಾಸಭೆ ಅಧ್ಯಕ್ಷರಾಗಿ ಸಮಾಜಕ್ಕಾಗಿ ಮಾಡಿದ ಸ್ಮರಣೀಯ ಸೇವೆಯನ್ನು ಕುರಿತು ವಿವರಿಸುವ ಅಪರೂಪದ ಕೃತಿಯಿದು.

"ಕಂದ॥ ಹಾಂಗಲ್ ಸ್ವಾಮಿಯ ಕರುಣಾ
ಪಾಂಗದೊಳ ರುದ್ರಗೌಡ ಲಿಂಗ ನೃಪಾಲ್
ಲಿಂಗಾಯತ ಮತ ಸಭೆಯಂ
ತುಂಗೋತ್ಸವದಿಂದ ನೆಗಳರದನರಿಯದರಾರ್."[೩೩]

ಎಂದು ಕಂದಪದ್ಯವೊಂದರಲ್ಲಿ ಕವಿ ಹೇಳಿದ್ದಾನೆ. ಆ ಕಾಲದ ಒಟ್ಟು ಸಾಮಾಜಿಕ ಪರಿಸ್ಥಿತಿ ಮತ್ತು ಲಿಂಗಾಯತ ಪುನರುಜ್ಜೀವನದ ಘಟ್ಟವನ್ನು ವಿವರಿಸುವ ಮಹತ್ವದ ಕೃತಿಯಿದಾಗಿದೆ. ಇದು ಇನ್ನೂ ಪ್ರಕಟವಾಗದಿರುವುದು ವಿಷಾದದ ಸಂಗತಿ.

**ನಿಜಗುಣ ಶಿವಯೋಗಿಯ ಪಾರಮಾರ್ಥ ಗೀತೆಯ ಟೀಕೆ :**

ಈ ಕೃತಿಯು ಸುಮಾರು ೮೦ ಪುಟಗಳ ಆಧುನಿಕ ಕಾಗದದ ಮೇಲೆ ಬರೆಯಲ್ಪಟ್ಟಿದೆ. ಕೃತಿಕಾರನ ಹೆಸರು ಸ್ಥಳದ ವಿಚಾರ ಎಲ್ಲಿಯೂ ಕಂಡುಬರುವುದಿಲ್ಲ.

"ಟೀಕು– ಅದು ಕರಣದಿಂಕನಗಾವುದು= ಅಪ್ರಯೋಜನದಿಂದಕನಗೆ ಯಾವಮಕವು। ಭವದುಃಖವನೆಕೆಡಿಸಿ–ಜನ್ಮದ ಪ್ರಳಾಪವನ್ನು ನಾಶಮಾಡಿ ನಿತ್ಯ ಚಿದಾನಂದದ ಘನಪದಮಂ ಕಾಣುವುದು=ಸತ್ತು ಚಿತ್ತು ಆನಂದ ಐಕ್ಯ ಪರಿಪೂರ್ಣವೆಂಬ ಪಂಚ ಲಕ್ಷಣ ಪರಬ್ರಹ್ಮವನ್ನು ಕೋರಿಸಿಕೊಂಡುವುದು। ಅದುವೇ ಗುರುಮತವು=ಅಂಥಾದ್ದೇ ಆಚಾರ್ಯರಮಕವುಕಳಿಯಲದೇ ಸುಶ್ರಾವ್ಯಂ=ಅರಿಯಲಾಗಿ ಅಂಥಾಗುರು ಮಕವೇ ಒಳ್ಳೆ ಪೂಜ್ಯಮಾನವಾಗಿರುವುದು. ಜನ್ಮ ಪ್ರಲಾಪನಾಶವಾಗಲು ನಿತ್ಯ ಚಿದಾನಂದನ ಸ್ಮರಣೆ ಬೇಕು–ಪಂಚಲಕ್ಷಣಗಳಾವವು ಎಂಬುದು ತಿಳಿದು ಬರುತ್ತದೆ."[೩೪]

**ಶಿವಾಧಿಕ್ಯ ಕನ್ನಡ ಟೀಕೆ :**

ಪೂರ್ವದಲ್ಲಿ ಪರಶಿವನ ಚರಣಾರಾಧನ ದುರೀಣರಾದ ಅಪ್ಪಯ್ಯ ದೀಕ್ಷಿತರೆಂಬ ಮಹಾಪುರುಷರಿದ್ದರು. ಇವರು ಶಿವಾನುಗ್ರಹದಿಂದ ಚತುರ್ವೇದ ಷಡಂಗ ಚತುರ್ದಶ ವಿದ್ಯಾಷ್ಟಾದ್ಶ ಪುರಾಣ ಸಕಲಾಗಮ ಮಂತ್ರಾದಿಗಳಲ್ಲಿ ಪಾರಂಗತರಾಗಿದ್ದಾರೆ. ಶಿವಧರ್ಮಗಳನ್ನು ಬೋಧಿಸುತ್ತಾ ಕೆಲವು ದಿವಸಗಳ ಮೇಲೆ ಆನೆಗುಂದಿ ಸಂಸ್ಥಾನಕ್ಕೆ ಬಂದು ಒಂದು ದಿನ ರಾಜದರ್ಶನಾರ್ಥವಾಗಿ ಅರಮನೆ ಬಾಗಿಲಲ್ಲಿ ನಿಂತು ತಮ್ಮ ಆಗಮನವನ್ನು ರಾಜನೀತಿಯ ಪಡಿಸಲು ರಾಜನು ಬಹಳ ಸಂತೋಷಯುಕ್ತನಾಗಿ ಒಳಗೆ ಬರಬಹುದೆಂದು ಹೇಳಿಕಳುಹಿಸಲಾಗಿ ಅಪ್ಪಯ್ಯ ದೀಕ್ಷಿತರು ರಾಜ್ಯಾಲಯವನ್ನು ಪ್ರವೇಶಿಸಿ ಸಕಲ ವಿದ್ಯಾರ್ಜನ ಮಂತ್ರಿ ಪುರೋಹಿತ ನಟವಿಟ ಗಾಯಕವಂದಿ ಸಂದೋಹ ಸುಂದರವಾದ ಮಂದಿರದಲ್ಲಿ ಸಿಂಹಾಸನಾರೂಢನಾಗಿ ಇರುವ ರಾಜನಿಗೆ ಅಭಿಮುಖವಾಗಿ ನಿಲ್ಲುತ್ತಾನೆ. ದೀಕ್ಷಿತರ ಮುಖವನ್ನು ರಾಜನು ನೋಡಿ ನಗುತ್ತಾನೆ. ಇಬ್ಬರಲ್ಲಿ ವಿಷ್ಣುಪೀಠ, ಶಿವಪೀಠವನ್ನು ಸ್ಥಾಪಿಸುವ ವಾಗ್ವಾದ ನಡೆಯುತ್ತದೆ. ರಾಜತಾತಾಚಾರ್ಯ ಆ ದಿವಸ ದೀಕ್ಷಿತರನ್ನು ಮನೆಗೆ ಕಳುಹಿಸಿ ಮಾರನೆ ದಿನ ರಾಜ್ಯ ಸಭೆ ಕರೆದು ಇದರ ಕುರಿತು ಸಂವಾದ ಮಾಡುತ್ತಾನೆ. ಶಿವಪಾರಮ್ಯವನ್ನು ಸಾರುವ ಈ ಕೃತಿಯ ಕರ್ತೃ ಅಜ್ಞಾತ.

**ತೋಂಟದ ಸಿದ್ಧಲಿಂಗೇಶ್ವರರು ನಿರೂಪಿಸಿದ ಕಾಲಜ್ಞಾನ ವಚನ :**

ಶ್ರೀಗುರು ಬಸವಲಿಂಗಾಯ ನಮಃ ಶ್ರೀ ವಿರೂಪಾಕ್ಷಯ ನಮಃ ಶ್ರೀ ಗುರು ತೋಂಟದ ಸಿದ್ಧಲಿಂಗಾಯ ನಮಃ ಕಾಮತ್ರಿಪುರ ದಾಕ್ಷಾದ್ವರ ದುರಿತ ದ್ವಾಂಸಿಯಾದಂಥಾ ಪರಮ ಭಕ್ತರುಗಳಿಗೆ ಬಂದಂಥಾ ಕಂಟಕವನ್ನು ದೂರು ಮಾಡು ಶಿವ ಮಂಗಲ ಸ್ವರೂಪನಾದಂಥಾ ಶಿವಭಕ್ತರನ್ನು ರಕ್ಷಿಸು ನಿರ್ಮಲಕೃತನಾದಂಥಾ ದೇವನೆ ಜಯಜಯತು ಸರ್ವೋತ್ಕೃರ್ಷನಾಗು ಶರಣು ಕರುಣಾಕರ ಕೃಪೆಯನು ಕಡಮಡ್ಡಾ ದೇವನೇ ಶರಣು ನಮಸ್ಕಾರ ಭಕ್ತವತ್ಸಲ ಭಕ್ತಿ ಮಾಡುವಂಥಾ ಭಕ್ತರುಗಳಲ್ಲಿ ಮರಕತ್ವದಮಳಂಥಾ ದೇವನೆ ಅಧಿಕವಾದಂಥ ಲಿಂಗಲಯ ಮನಂಗಳಿಗೆ ಕರ್ತೃವಾದಂಥಾ ಗುರುಮುಕ್ತಿಪ್ರದಾಯಕನಾದಂಥ ಶಿವಮಂಗಲ್ಯಸ್ವರೂಪನಾದಂಥ ಸಿದ್ಧ ಗ್ರಂಥ ಆದಿನಾಥೆ ಅಂತೆಶ್ರೀ ಮನ್ಮಶ್ಚಂದ್ರನಾಗರ್ಜುನ ವಿರೂಪಾಕ್ಷೆಪತಿರ್ನವನಾಥಯೆಂದು ನವನಾಥ ಸಿದ್ಧರುಗಳಿಗೆ ಸಿದ್ಧ ಪ್ರಸಿದ್ಧನಾದಂಥ ಈಶ್ವರ ಒಡೆಯನಾದ ಪ್ರಭುವೆ ಸ್ವತಂತ್ರ ಕರ್ತೃವಾದಂಥಾ ದೇವನೆ ಅಂತುಮಲ್ಲದೆ ಪ್ರಾಣಲಿಂಗ ಗುರುರಕ್ಷಿಸು.

ಗುರುಲಿಂಗವು ಶಿವಲಿಂಗವು ಸಿದ್ಧ ಜಂಗಮಲಿಂಗವು ಐಶ್ವರ್ಯ ಪ್ರಸಾದ ಲಿಂಗವು ಪ್ರಭುವೇ ಆಚಾರಲಿಂಗವು ಇಂತಿ ಷಡ್ವಿಧಲಿಗ ಸ್ವರೂಪನಾದಂಥ ಯತಿ ಪರಶಿವಲಿಂಗವೆ॥೧॥ ಜ್ಞಾನಾಗಮ್ಯದೃಢಂ ಪ್ರಾಂಜ್ಞಗಿ ದೇವದೇವತ್ರ್ಯಿಂಚನಂಮ ದೇವಂಮ ಆತ್ಮನಾಯ ಜ್ಞಾನ ಪರಾತ್ಪರ ಮೂರು ದಶಕೋಟಿ ನಾರಾಯಣರು ಏಕಾದಶ ಕೋಟಿ ರುದ್ರರು ಮೂವತ್ತಮೂರು ಕೋಟಿ ದೇವತೆಗಳು, ಅರವತ್ತಾರು ಕೋಟಿ ರಾಕ್ಷಸರು ಎಂಬತ್ತೆಂಟು ಕೋಟಿ ಜನಂಗಳು, ಅಷ್ಟಕೋಟಿ ನಾಗರ್ಕಳು, ಅನಂತಕೋಟಿ

ಗರುಡಗಾಂಧರ್ವರು ಕಿಂನರ ಕಿಂಪುರುಷರು ಸಿದ್ಧ ವಿದ್ಯಾಧರರು ಗಂಗೆಯ ಮೇಳಲಿಗೆ ಸಮಾನವಾದ ರುದ್ರಗಣಂಗಳಿಂದ ದವಾಲೈಸಿ ಕುಂಬುವಂಥದ್ದಲ್ಲಿ ಪರಮೇಶ್ವರನಿಗೆ ವೈರಾಗ್ಯ ತಲೆದೋರಿ ಸ್ಮಶಾನವಾಟಿಕೆಯಲ್ಲಿ ಮೂರ್ತ ಮಾಡಿಕೊಂಡು ಕೋಟ್ಯಾನುಕೋಟಿ ಗಣಂಗಳು ಕಾರುಣ್ಯದಿಂದ ವೈರಾಗ್ಯ ಮೂಡಿತು. ವ್ರತನಾಗಿ ಆಚರಿಸುವಂಥಾ ಪರಮ ವೀರಶೈವಾಚಾರದ ಸಂಪತ್ತು ಹೆಚ್ಚಾಯಿತು. ಗುರು ಶಿವಸಿದ್ಧೇಶ್ವರ ಪ್ರಭುವೆ ಯೋಗಿಯಲ್ಲ, ಜೋಗಿಯಲ್ಲ ಶ್ರವಣನಲ್ಲ ಸನ್ಯಾಸಿಯಲ್ಲ ಕಾಳಾಮುಖಿಯಲ್ಲ ಪಶುಪತಿಯಲ್ಲಿರುವನು.

ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯರೆಂದು ಆರು ಪ್ರಕಾರದಲ್ಲಿ ವರ್ತಿಸುತ್ತಿರುವುದು ವರಶೈವಮ ಪ್ರಾಣಲಿಂಗ ಗುರುಸಿದ್ಧೇಶ್ವರ ಪ್ರಭುವೆ ಗುರುಲಿಂಗವಾಗಲು ಭಕ್ತನು ಶ್ರದ್ಧೆ ಭಕ್ತಿಯೊಳಗಣ ಸೃಷ್ಟಿಗೊಂಡು ದೈವತ್ಯರೆಡು ವಚನಗಳೊಳಗೆ ಭಕ್ತನ ಸ್ಥಲವೆಂದು ಅಂಗವಾಗಿವಳಿದ ಆಚರಣೆಯಾಗಿದೆ.'

ಈ ಕಾಲಜ್ಞಾನ ವಚನವು ಭಕ್ತರ ಮತ್ತು ಶಿವನ ನಡುವಿನ ಭಕ್ತಿಯ ಸಂಗಮವಾಗಿದೆ. ಸರ್ವಾಂತರಯಾಮಿಯಾದ ಶಿವ ಸರ್ವೋತ್ಕೃರ್ಷನಾಗಿ ಶರಣರನ್ನು ರಕ್ಷಿಸುವ ಮತ್ತು ಭಕ್ತಿಯಲ್ಲಿ ಮೋಕ್ಷ ದೊರೆಯುವ ವಿಚಾರ ಈ ಹಸ್ತಪ್ರತಿಯಲ್ಲಿ ಪ್ರತಿಪಾದಿತವಾಗಿದೆ. ಕೋಟಿ ಕೋಟಿ ಜನ ದೇವತೆಗಳು ಕಿನ್ನರು-ಕಿಂಪುರುಷರು, ವಿದ್ಯಾಧರರು ಮಾಡಿದ ಪೂಜೆಯ ಫಲದಿಂದ ವೈರಾಗ್ಯಪ್ರಾಪ್ತಿಯಾದ ಬಗೆಯನ್ನು ಈ ವಚನದಲ್ಲಿ ಕಾಣುತ್ತೇವೆ. ವ್ರತದಿಂದ ಸಂಪತ್ತು ಹೆಚ್ಚಾಗುವಲ್ಲಿ ಸಿದ್ಧೇಶ್ವರ ತೋರಿದ ಆಚರಣೆಯು ಇಲ್ಲಿ ಮುಖ್ಯವೆನಿಸುತ್ತದೆ.

**ಬಸವಜನ್ಮ ಮಹಾತ್ಮೆ :**

ಈ ಹಸ್ತಪ್ರತಿಯು ಅಥಣಿ ಮೋಟಗಿಮಠದಲ್ಲಿದೆ. ಈ ಕೃತಿ ಪ್ರಕಟವಾಗಿಲ್ಲ. ನಾನು ಮೈಸೂರು ವಿಶ್ವವಿದ್ಯಾಲಯದ ಸಮಗ್ರ ಗ್ರಂಥಸೂಚಿಯನ್ನು ಪರಿಶೀಲಿಸಿ ಈ ವಿಷಯವನ್ನು ಮನದಟ್ಟು ಮಾಡಿಕೊಂಡೆ. ಅಲ್ಲದೆ ಶರಣ ಸಾಹಿತ್ಯದಲ್ಲಿ ನಡೆದಾಡುವ ಕೋಶವೆಂದೇ ಖ್ಯಾತರಾಗಿರುವ ತುಮಕೂರಿನ ಬಿ. ನಂಜುಂಡಸ್ವಾಮಿ ಅವರೊಂದಿಗೆ ಈ ವಿಷಯವಾಗಿ ಮಾತನಾಡಿ ಇದು ಅಪ್ರಕಟಿತ ಕೃತಿಯೆಂದು ತಿಳಿದುಕೊಂಡೆ. ಇದನ್ನು ಗುರುಲಿಂಗಕವಿ ಬರೆದಿರುವನು. ಕೃತಿಯ ಕೊನೆಯಲ್ಲಿ ಕವಿ ತನ್ನ ಹೆಸರನ್ನು 'ಗುರುಲಿಂಗಕವಿ ರಚಿತ' ಎಂದು ಹೇಳಿಕೊಂಡಿದ್ದಾನೆ. ಬಸವಣ್ಣನವರನ್ನು ಕುರಿತು ಷಡಕ್ಷರದೇವ ಮಹಾಕವಿ ಮಾತ್ರ ಬಸವರಾಜ ವಿಜಯಂ ಎಂಬ ಚಂಪೂ ಕಾವ್ಯ ರಚಿಸಿದ್ದಾನೆಂದು ನಮ್ಮ ವಿದ್ವಾಂಸ ವಲಯ ಹೇಳುತ್ತ ಬಂದಿದೆ. ಆದರೆ ಬಸವ ಜನ್ಮಮಹಾತ್ಮೆ ಕಾವ್ಯ ಒಂದು ಅಪರೂಪದ ಚಂಪೂ ಕಾವ್ಯವಾಗಿದೆ.

ಶಿವಸ್ತೋತ್ರದೊಂದಿಗೆ ಪ್ರಾರಂಭವಾಗುವ ಈ ಕೃತಿ ಶಿವಸಭಾ ವರ್ಣನೆ, ಆದಿಶೇಷನಮನಾನಂದ ಶೇಷನಾಭರಣ, ಹರಿಯ ಸಂಶಯ ಪರಿಹಾರ, ದೇವೇಂದ್ರನವರ್ಗ ನಂದೀಶನಪಮಾನ, ತಮೋವರ್ಣನೆ ನಿರ್ಜರರಭಿತಿ, ಶಿವನ ಕ್ರೋಧ, ಇಂದ್ರದೂತನಪಮಾನ, ನಂದಿವಿಜಯ, ಶಕ್ರನಯುದ್ಧ, ನಂದಿವಿಜಯ,

ಸುತ್ರಾಮಗೆ ಶಾಪಉಶಾಪ, ನಂದೀಶನುಗ್ರತ್ವ ಭೂದೇವಿ ತಾಪ, ರಜತಾದ್ರಿವರ್ಣನೆ, ತಪೋವನ ವರ್ಣನೆ, ಭೂದೇವಿಯ ಬೇಡಿಕೆ ಧ್ಯಾನ, ಬಸವ ಕರುಣ ಭೂಲೋಕ ಗಮನ, ಅನಿಮಿಷನ ಜನ್ಮ, ಪಟ್ಟಾಭಿಷೇಕ ವೃಷಭಯೋಗಿದರ್ಶನ, ಅನಿಮಿಷನ ಗುರುಭಕ್ತಿ, ಬಸವನ ಲಿಂಗಾಪಹರಣ ಅನಿಮಿಷನ ಕೈಲಾಸಗಮನ, ಬಸವ ತಾಪ, ನಾರದನ ಶಿವದರ್ಶನ, ನಾರದನ ಬಾಗೇವಾಡಿ ದರ್ಶನ, ಮಾದಲಾಂಬಿಕೆಗೆ ಗರ್ಭಾಂಕುರ, ಬಸವ ಜನ್ಮ ಇಲ್ಲಿಗೆ ಕಾವ್ಯ ಮುಕ್ತಾಯವಾಗುತ್ತದೆ. ಮಧ್ಯದಲ್ಲಿ ಗುರುಮಹಿಮೆ, ಗುರುಭಕ್ತನ ಕಥೆ, ಲಿಂಗಮಹಿಮೆ, ಪೆದ್ದಣ್ಣನ ಕಥೆ, ಜಂಗಮಮಹಿಮೆ, ಭಸ್ಮ ಮಹಿಮೆ, ರುದ್ರಾಕ್ಷಿಮಹಿಮೆ, ಚಾಮರಸ ರಾಜನ ಕಥೆ, ಮಂತ್ರಮಹಿಮೆ, ಪಾದೋದಕ ಮಹಿಮೆ, ಪ್ರಸಾದ ಮಹಿಮೆ, ಷಟ್‌ಸ್ಥಲ ನಿರ್ಣಯ ಮೊದಲಾದ ಲಿಂಗಾಯತ ಸಿದ್ಧಾಂತದ ಪ್ರತಿಪಾದನೆಯು ಈ ಕೃತಿಯಲ್ಲಿ ಬಂದಿದೆ. ಹಸ್ತಪ್ರತಿಯ ಕೊನೆಯಲ್ಲಿ

"ಕಂದ॥ ಪದಮಂ ನೋಡುವರಸಿಕರ್
ಪದಸ್ವಾದಾಮೃತವನೀಂಟಲೆಂಬುವಮನದಿಂ
ಪದಿನಾರು ಸಂಧಿರಚಿಸಿದೆ
ಪದಿನಾರುಕಳಾಭರಿತನೆನ್ನ ಕವಿತಾಚಂದ್ರಂ."[೩೨]

**ಗದ್ಯ :** ಇದು ಶ್ರೀಮದ್ವೀರಶೈವಾಚಾರಧುರೀಣಶಾಂತವೀರ ದೇವರೊಡಲಬುದಿ ಚಂದಿರ ಕವಿತಾಮಂದಿರ ಗುರುಲಿಂಗಕವಿ ರಚಿತ ಬಸವಜನ್ಮ ಮಹಾಕಾವ್ಯದೊಳ್ ಷೋಡಶಾಶ್ವಾಸಂ ಸಮಾಪ್ತಂ. ಅಂತೂ ಸಂಧಿ ಹದಿನಾರಕ್ಕಂ ಗದ್ಯಪದ್ಯಂಗಳು ಹನ್ನೊಂದುನೂರಾ ಎಂಬತ್ತೊಂದಕ್ಕಂ ಮಂಗಲಮಹಾ ಶ್ರೀ ಶ್ರೀ.

**ಚಿತ್ರಶೇಖ ಸೋಮಶೇಖರ ಚರಿತ್ರೆ :**

ಇದೊಂದು ಯಕ್ಷಗಾನ ಕೃತಿಯಾಗಿದೆ. ಬೆಳಗಾವಿ ಜಿಲ್ಲೆಯಲ್ಲಿಯೂ ಅನೇಕ ಯಕ್ಷಗಾನ ಕೃತಿಗಳು ದೊರೆತಿವೆ ಎಂಬುದನ್ನು ಹಿಂದಿನ ಅಧ್ಯಾಯದಲ್ಲಿ ಗಮನಿಸಿದ್ದೇವೆ. ಅಜ್ಞಾತ ಕರ್ತೃವಿನ ಈ ಕೃತಿ ಪ್ರಕಟವಾಗಿಲ್ಲ.

"ಸೋಮಶೇಖರ ಚಿತ್ರಶೇಖರಗೆ ತನ್ನಯ ಕುಮಾರರಿಗೆ
ಪರಿದಾಗಿ ಗಣಪದವನಿತ್ತು ಸರಸಕೋವಿದ ಸಂ...
ಭೀಮ ವಿಕ್ರಮರೂ ಸ್ಮರರೂಪರೆಂದೆನಿಪ ನೆರೆ
ಜಾನರುಗಳು ಅರಿಗಳೆದೆದಲ್ಲಣರೂ ವೀರಬಲತಿಮಿರಕ್ಕ
ಉಪ್ಪಾಳಕನಂತೆ ಬಾಳಿದರ ಚರಿತ್ರೆ ಜಗದೊಳಗೇ
ಜಾಣರ ಕಥೆಯೆನಿಸಿ ಚರಿಸುತಿರಲೂ
ಬಲ್ಲ ಗಂಭೀರ ಪುರುಷರು ಯಕ್ಷಗಾನವೆಂದೆನ್ನೊಳು

ಹರುಷದಿಂ ಮಾಡೆನಲು ವಿರೂಪಾಕ್ಷದೇವರ ಕರಜಾತ
ಕಸ್ತೂರಿಯನಾಗಂಣನೆನಿಪ ಅಲರಂ ಬಸವರೂಪ
ಸಲೆ ಜಾಣಸಂಪನ್ನ ಗೆಲುಗೈಯ್ಯನಾತಂಗೆ ಲಲನೆಯೆಂದ
ನಿಸುವಳು ಪರಮಪತಿವ್ರತೆ ಅರುಂದ್ರುತಿಗೆ ಸರಿಯೆಂದ
ನಿಪ ಗರ್ಭವಾರುಧಿ ಚಂದ್ರನಾದ ಕಸ್ತೂರಿಯ ಸಿದ್ಧನಿದ
ಬೋಳೇಶನೆಂದೆಂಬು ಕತ್ರುವಿನ ಕೃಪೆಯಿಂದಾ ವಿಸ್ತಾರ
ವಾಗಿ ಸೋಮಶೇಖರ ಯಕ್ಷಗಾನವೆಂದೀ ಕೃತಿಗೆ ನಾಮ
ವಿಟ್ಟನು ಬಹುಪ್ರೇಮದಿಂದ
ಕರ್ಣದಿ ವೋದಿದವರುಗಳನವರತ ಆಯುರಾರೋಗ್ಯ
ಐಶ್ವರ್ಯ ಹರನೊಲಿದು ಕರುಣಿಪನು ಶರಧಿಗಿರಿ
ತಾರೆ ಹಿಮಕರ ತರಣಿಯುಳ್ಳನಕಸ್ತಿರವಾದ ಕೃತಿ
ರಾಕ್ಷಸ ಸಂವತ್ಸರದ ಕಾರ್ತಿಕ ಶು॥ ೧೦ ಮಿತಿ
ಆದಿತ್ಯವಾದವರಿಗೆ ಸಂಪೂರ್ಣ । ಅಂತು ವೊಟ್ಟು
ಪದ ೧೦೦೦ಕ್ಕೆ ಮಂಗಳಮಹಾ ಶ್ರೀ ಶ್ರೀ."[೩೬]

ಅಂತು ಸೋಮಶೇಖರ ಚಿತ್ರಶೇಖರ ಕಥಾಪ್ರಸಂಗಮಂ ಪೂರೈಸಿ ಬಂದಂತಾ ದೊಡ್ಡಮಲ್ಲಿಗೆಕೆರೆಯ ಕಂತ ಚೆನ್ನವೀರದೇವರು ಗುರುಕಟಾಕ್ಷದಿಂದಾಯಿ ಯಕ್ಷಗಾನವ ಬರುದುದಕ್ಕೆ ಶುಭಮಸ್ತು ಗುರುಪಾದವೆ ಗತಿ.

ಇದು ತಾಡೋಲೆ ಪ್ರತಿಯಾಗಿದೆ. ೧೮ನೇ ಶತಮಾನಕ್ಕೆ ಸಂಬಂಧಿಸಿದೆ. ಇದರ ಶೈಲಿ ಯಕ್ಷಗಾನದಲ್ಲಿದೆ. ಈ ಚಿತ್ರಶೇಖರ ಸೋಮಶೇಖರ ಚರಿತ್ರೆಯನ್ನು ಕಿವಿಯಿಂದ ಕೇಳಿದರೆ ಓದಿದರೆ ಜೀವನ ಪರ್ಯಂತ ಆರೋಗ್ಯ ಐಶ್ವರ್ಯ ದೊರೆಯುತ್ತದೆ ಎಂಬ ನಂಬಿಕೆ ಇಲ್ಲಿದೆ.

**ಶಿವಸ್ತೋತ್ರ**

"ಶ್ರೀಗುರುವೆ ನಮಃ ಭೋಗಿ ಕಂಕಣಭರ್ಗ ಭಕ್ತವತ್ಸಲ ಸಿಂಧು ರಾಗರಹಿತ
ಶಿವನಾಮ ಭಜೆ।
ಈಶ ಮಹೇಶ ಸರ್ವೇಶ ಮೃಡಾನಿಯಧೀಶ ಪ್ರಾಣೇಶನ ನಾಮ ಭಜೆ
ನಾಮ ಭಜೆ ಗುರುನಾಮ ಭಜೆ ಹರನಾಮ ಭಜೆ ಶಿವನಾಮ ಭಜೆ ॥ಪಲ್ಲ॥
ಅಕ್ಷಯ ಪಾತ್ರ ಮಹೇಶ ವಾಹನ ಜಗದ್ರಕ್ಷಯಕ್ಷವರನಾಮ ಭಜೆ
ದಕ್ಷಕೃತಾಯಗಸಿಕ್ಷಾನುತಗಣಾ ಮೋಕ್ಷವಿಧಾಯಕ ನಾಮಭಜೆ
ಕಾಮಕಾಲದಕ್ಷದ್ವಾಂತಾತ್ರಿಪುರ ಹರನಾಮ ದೇಶಿಕ ಶಿವನಾಮ ಭಜೆ

ಭಸ್ಮಭವಂತರಾಶಾವಚವರ್ತತ ಶಿವಬಾತಿ ಮಂಗಳ ನಾಮಾಭಜೆ

ನಗರೋರಧಿಕವೆಂದು ನಗರೋಧಿಕವೆಂದು ಶ್ರೀಗುರುವೆ ನಾಮ ಭಜೆ

ದೇಶಿಕ ಬೆರಟೂರ ಪತಿ ವೃಷಭೇಷನ ಶೇಷಾಂಮೃತ ಶಿವನಾಮ ಭಜೆ."[೩೭]

ಹೀಗೆ ಶಿವಮಹಿಮೆಯ ಸ್ತೋತ್ರವು ಶಿವನ ಕುರಿತು ನಾಮಸ್ಮರಣೆ ಮಾಡಿದರೆ ಮೋಕ್ಷಕ್ಕೆ ಮಾರ್ಗವು ದೊರೆಯುತ್ತದೆ ಎಂಬ ವಿಚಾರ ತಿಳಿಯುತ್ತದೆ. ಇದು ೨೨ ಸಾಲುಗಳ ಕಾಗದದ ಪ್ರತಿಯಾಗಿದೆ.

**ಅಪ್ರಕಟಿತ ಬಯಲಾಟ ಹಸ್ತಪ್ರತಿಗಳು :**

ಬೆಳಗಾವಿ ಜಿಲ್ಲೆ ಸಣ್ಣಾಟಗಳ ಸೃಷ್ಟಿಯಲ್ಲಿ ಅಪಾರ ಸೇವೆ ಸಲ್ಲಿಸಿದೆ. ಅಂಥ ಮಹನೀಯರಲ್ಲಿ ನೀಲಕಂಠ ಕವಿಯ ಪಾತ್ರ ಹಿರಿಯದು. ಇವರನ್ನು ಸಣ್ಣಾಟಗಳ ಜನಕನೆಂದೂ ಕರೆದು ಜನ ಪ್ರೀತಿ–ಗೌರವಗಳನ್ನು ತೋರಿಸಿದ್ದಾರೆ. ಇವನು ರಚಿಸಿದ ಪ್ರಮುಖ ಕೃತಿಗಳನ್ನು ಇಲ್ಲಿ ಹೆಸರಿಸಲಾಗಿದೆ:

೧. ತಿರುನೀಲಕಂಠ
೨. ಮಹಾದೇವಿಯಕ್ಕ
೩. ಶ್ವೇತರಾಜ
೪. ಪಂಚಾಕ್ಷರೀ ಮಹಾತ್ಮೆ
೫. ದಾಸಾರ್ಯರಾಜನ ಚರಿತೆ
೬. ಶ್ರೀನಿವಾಸ
೭. ದೇವಸೇನ
೮. ಚೂಡಾಲಿ
೯. ತಿಲಕಾಂಬೆ
೧೦. ವೀರಸಂಗಮಾರ್ಯ
೧೧. ಗುರುಭಕ್ತಾಂಡಾರಿ
೧೨. ನಿಜಗುಣ ಶಿವಯೋಗಿ
೧೩. ಸೌಂದರನಂಬಿ
೧೪. ಧರ್ಮಸಾಮ್ರಾಜ್ಯ
೧೫. ಮೋನೇಶ್ವರ ಚರಿತೆ
೧೬. ಕುಣಾಲನ ಚರಿತೆ
೧೭. ಧ್ರುವ ಚರಿತೆ
೧೮. ಭಕ್ತಕೋಶನ ಚರಿತೆ
೧೯. ತಿಲಕಾಂಬೆ ಚರಿತೆ
೨೦. ಸಾನಂದ ಋಷಿಯ ಚರಿತೆ
೨೧. ಮಹಾನಂದೆಯ ಚರಿತೆ
೨೨. ಮೇದಾರ ಕೇತಯ್ಯ
೨೩. ಅದೃಶ್ಯಯ್ಯ ಚರಿತೆ ಮುಂತಾದವುಗಳು.

**ಅಕ್ಕಮಹಾದೇವಿ (ಸಣ್ಣಾಟದ ಒಂದು ಪದ್ಯ)**

"ಸಭಾದಲ್ಲಿ ಕೂಡಿರುವಂಥ ಪಂಡಿತರೀಗ ಚಿತ್ತಕೊಟ್ಟು ಕೇಳಿರೀಗ

ಈ ಕತೆಯ ಚಮತ್ಕಾರ ಶಿವಾನಂದ ಹರವಿನ ವಿಸ್ತಾರಾ

ಮುಕ್ತಿಯ ಆಧಾರಾ । ತತ್ವದ ಬೇರಾ

ಗಂಡಮೆಟ್ಟ ಕಾದ್ರೊಳ್ಳಿ ಊರಾ । ದೇಶದ ಮೂಲ ಜಾಹೀರಾ

ಅಲ್ಲಿ ನೆನದಾನೋ ವೀರಭದ್ರದೇವರಾ । ಆತನ
ದಯದಿಂದ ನೀಲಕಂಠಪ್ಪ ಕವಿಗಾರ ರಚಿಸಿದ
ಕಥಾಸಾರಾ ಅತಿಮಧುರಾ."[೩೮]

ಶ್ವೇತರಾಜ (ಸಣ್ಣಾಟದ ಒಂದು ಪದ್ಯ)

"ನಾನೇ ಜಗದೊಳು ಆದೆನು ಧನ್ಯಳು । ಮಾನವಂತಳು ಬಹುಶ್ರೀಮಂತಳು ॥ಪ॥
ರಾಜನ ಮನವಾ । ಸೆಳೆದು ಧನವಾ। ಗಳಿಸಿದೆ ಹೇರಳವಾ ಕಂಡೆನು ಸುಖವಾ
ವೇಶ್ಯೇರು ತಾವಾ । ನೋಡೆನ್ನ ವಿಭವಾ । ಮಾಡ್ವರು ಮತ್ಸರವಾ.[೩೯] ॥೧॥"

ಮೌನೇಶ್ವರ (ಸಣ್ಣಾಟದ ಒಂದು ಪದ್ಯ)

"ಆದಿಲಿಂಗಾ ಸುಜನಸಂಗಾ । ಮೋದದಿ ಬಾರೈ ಈದಿನ ಮನೆಗೆ
ಪನ್ನಗಭೂಷಣ ಉನ್ನತ ಮಹಿಮಾ ನಿನ್ನನೆ ಸೇವಿಪೆ ಅನುದಿನಾ
ಮನ್ನಿಸೆನ್ನಯ ಕೋರಿಕೆ ಸತ್ಪ್ರಭೊ । ನಿನ್ನ ಪಾದಗತಿಯೆಂದು ನಂಬಿದೆ ನಾ."[೪೦]

ನೀಲಕಂಠಕವಿಯ ಈ ಕೃತಿಗಳಲ್ಲಿ ಯಾವ ಕೃತಿಯು ಪ್ರಕಟವಾಗಿಲ್ಲವೆಂಬುದು ನನ್ನ ಕ್ಷೇತ್ರಕಾರ್ಯದ ಅಧ್ಯಯನದಿಂದ ಕಂಡುಕೊಂಡಿರುವೆ.

ಬೆಳಗಾವಿ ತಾಲೂಕಿನ ಹಾಲಗಿಮರಡಿ ಗ್ರಾಮದ ಗುರುಸಿದ್ಧಯ್ಯ ಪುರಾಣಿಕಮಠ ಬರೆದ 'ನಂದಿನಾಥ' ಎಂಬ ಡಪ್ಪಿನಾಟ ಅಪ್ರಕಟಿತವಾಗಿದೆ. ಚಿಕ್ಕೋಡಿ ತಾಲೂಕಿನ ಕಾಡಾಪುರ ಗ್ರಾಮದ ಬಸವಂತಪ್ಪ ಬರೆದ 'ಭಕ್ತ ಸಿರಿಯಾಳ' ಮತ್ತು 'ವೇಮನಾರಾಧ್ಯ' ಎಂಬ ಬಯಲಾಟಗಳು ರಚಿಸಿದ್ದಾನೆ. ಹಸ್ತಪ್ರತಿಗಳು ಪ್ರಕಟವಾಗಿಲ್ಲ. ಹಾಗೆಯೇ ಯಥಾಸ್ಥಿತಿಯಲ್ಲಿ ಉಳಿದುಕೊಂಡಿವೆ.

ಬೆಳಗಾವಿ ತಾಲೂಕಿನ ಭೆಂಡಿಗೇರಿ ಗ್ರಾಮದ ಸಿದ್ಧಪ್ಪ ಎಂಬ ಕವಿ 'ಹೇಮದತ್ತ', 'ಭದ್ರವಿರಾಜ', 'ರಾಜಾನಾಟ', ಮತ್ತು 'ಮಹಾದೇವಿ' ಎಂಬ ನಾಲ್ಕು ಸಣ್ಣಾಟಗಳನ್ನು ರಚಿಸಿದ್ದಾನೆ. ಇಂದು ಆ ಹಸ್ತಪ್ರತಿಗಳು ನೋಡಲು ದೊರೆಯುವುದಿಲ್ಲ, ಕಳೆದು ಹೋಗಿವೆ.

ಬೆಳಗಾವಿ ತಾಲೂಕಿನ ಕಣವಿಯೊಂದರ ಓರೆಯಲ್ಲಿ ಇರುವ ಕರುವಿನಕೊಪ್ಪ ಗ್ರಾಮಕ್ಕೆ 'ಕಣವಿಕರುವಿನಕೊಪ್ಪ' ಎಂದು ಕರೆಯುವರು. ಈ ಗ್ರಾಮದ ಗುರುರಾಚಯ್ಯ ಎಂಬುವರು 'ಸತ್ಯ ಹರಿಶ್ಚಂದ್ರ', 'ಜಯದ್ರಥ', 'ಕಿರಾತರ್ಜುನ ಯುದ್ಧ' ಮೊದಲಾದ ದೊಡ್ಡಾಟಗಳನ್ನು, 'ಗುರುಭಕ್ತ' ಎಂಬ ಸಣ್ಣಾಟವನ್ನು, 'ಮರಾಠರ ಅಭ್ಯುದಯ', 'ಬಸವೇಶ್ವರ' ಮೊದಲಾದ ನಾಟಕಗಳನ್ನು ಬರೆದಿದ್ದಾನೆ. ಈ ಯಾವ ಕೃತಿಗಳು ಮುದ್ರಣ ಭಾಗ್ಯ ಕಂಡಿಲ್ಲ.

ಕರುವಿನಕೊಪ್ಪ ಗ್ರಾಮದ ಬಸಪ್ಪ ಗುರಪ್ಪ ನಂದಿ ಎಂಬ ಕವಿ 'ಯಯಾತಿರಾಜ', 'ಭಕ್ತಪುಂಡಲೀಕ', 'ರುಕ್ಮಿಣಿ ಸ್ವಯಂವರ' ಎಂಬ ದೊಡ್ಡಾಟಗಳನ್ನು ರಚಿಸಿದ್ದಾನೆ. ಬೈಲಹೊಂಗಲ ತಾಲೂಕಿನ ನೇಸರಗಿ ಬಸವಣ್ಣೆಪ್ಪ ಎಂಬ ನಾಟಕಕಾರ ಅನೇಕ ನಾಟಕಗಳನ್ನು ರಚಿಸಿದ್ದಾನೆ. ಈತನ ಗುರು ಅದೇ ಊರ ವೀರಭದ್ರಪ್ಪ ಚೌಬಾರಿ ಅವರು. ದತ್ತವಾಡದ ಬಾಬಾ, ದೇವರಕೊಂಡದ

ಚನ್ನವೃಷಭೇಂದ್ರ ಮತ್ತು ಕಾದರೊಳ್ಳಿಯ ಅದೃಶ್ಯಪ್ಪಗಳಿಂದ ಪ್ರಭಾವಿತನಾಗಿದ್ದ ಈತನು ಹರದೇಶಿ ಮತ್ತು ನಾಗೇಶಿ ಎರಡೂ ಪಂಗಡದ ಹಾಡು ರಚಿಸುತ್ತಿದ್ದನು. ಈತನ 'ಯಯಾತಿ' ಅತ್ಯಂತ ಶ್ರೇಷ್ಠಮಟ್ಟದ ಆಟವಾಗಿದೆ. ಈತನ ಬಯಲಾಟ ಕೃತಿಗಳು ಹೀಗಿವೆ:

| | |
|---|---|
| ೧. ಮಾರುತಿ ಲಿಂಗಧಾರಣ | ೧೦. ಭೀಮಾರ್ಜುನ ಕಾಳಗ |
| ೨. ಕರ್ಣಾರ್ಜುನ ಕಾಳಗ | ೧೧ ಮಹಾಭಾರತ |
| ೩. ಶತಮುಖ ರಾವಣ | ೧೨. ಲವ-ಕುಶ |
| ೪. ಸಿಂಧು ಬಲ್ಲಾಳ | ೧೩. ದೇವಿ ಪುರಾಣ |
| ೫ ವೀರ ಅಭಿಮನ್ಯು | ೧೪. ಯಯಾತಿ |
| ೬. ಕೃಷ್ಣಾರ್ಜುನ ಕಾಳಗ | ೧೫. ನಾಗಾರ್ಜುನ ಕಾಳಗ |
| ೭. ರಾಮಾಯಣ | ೧೬. ಪಾಂಡವ ಪ್ರತಾಪ |
| ೮. ಗಿರಿಜಾ ಕಲ್ಯಾಣ | ೧೭. ಅಶ್ವಮೇಧ |
| ೯. ಇಂದ್ರಜಿತ ಕಾಳಗ | ೧೮. ಲಂಕಾದಹನ |

ಬೆಳಗಾವಿ ಜಿಲ್ಲೆಯ ಕಿತ್ತೂರು ತಾಲೂಕಿನ ಗಂದಿಗವಾಡದಲ್ಲಿ ಬಾಳಂಭಟ್ಟ ಎಂಬ ಮಹಾನ್ ನಾಟಕಕಾರ ಇರುವುದನ್ನು ಗಮನಿಸಬಹುದು. ಬಾಳಂಭಟ್ಟ ೩೦ಕ್ಕೂ ಹೆಚ್ಚು ಬಯಲಾಟಗಳನ್ನು ಬರೆದಿದ್ದಾನೆಂದು ತಿಳಿದುಬರುತ್ತದೆ. ಆದರೆ ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನಗೆ ೧೪ ನಾಟಕಗಳ ವಿವರ ದೊರೆಯಿತು.

| | |
|---|---|
| ೧. ತಾಮ್ರಧ್ವಜ | ೨. ಲವ ಕುಶರ ಕಾಳಗ |
| ೩. ಐರಾವಣ-ಮೈರಾವಣ | ೪. ಲಂಕಾದಹನ |
| ೫. ರಾವಣವಧೆ | ೬. ವೀರ ಅಭಿಮನ್ಯು |
| ೭. ಕರ್ಣಾರ್ಜುನರ ಕಾಳಗ | ೮ ವಿರಾಟಪರ್ವ |
| ೯. ಮಯೂರಧ್ವಜ | ೧೦. ವಿಜಯನಗರ ಸಾಮ್ರಾಜ್ಯ |
| ೧೧. ಸತ್ಯ ಹರಿಶ್ಚಂದ್ರ | ೧೨. ಭಕ್ತ ಕಬೀರ |
| ೧೩. ಸಿರಿಯಾಳ ಸತ್ವಪರೀಕ್ಷಾ | ೧೪. ಮಾಧವ ಕರುಣಾ ವಿಲಾಸ |

ಬಾಳಂಭಟ್ಟರ ಮಗ ವೆಂಕಟರಾಜ ಪಾನಸೆ ಅವರು ಇಂಗ್ಲೆಂಡಿಗೆ ಹೋಗಿದ್ದರು. ಕರ್ನಾಟಕ ಏಕೀಕರಣ ಚಳುವಳಿಗೆ ಆಕರ್ಷಿತರಾಗಿ ಇಂಗ್ಲೆಂಡ್ ಬಿಟ್ಟು ಬೆಳಗಾವಿಗೆ ಬಂದರು. ಆದರೆ ತಮ್ಮ ತಂದೆಯ ನಾಟಕ ಹಸ್ತಪ್ರತಿಗಳನ್ನು ಕಾಪಾಡಿಕೊಳ್ಳುವಲ್ಲಿ ಅವರು ವಿಫಲರಾದರು. ಈಗ ಅವರ ವಂಶಜರ ಹತ್ತಿರ ಈ ನಾಟಕದ ಹಸ್ತಪ್ರತಿಗಳು ದೊರೆಯುವುದಿಲ್ಲ. ಆದರೆ ಗಂದಿಗವಾಡ ಮತ್ತು

ಸುತ್ತಮುತ್ತಲಿನ ಹಳ್ಳಿಗಳಲ್ಲಿ ಇಂದಿಗೂ ಬಾಳಂಭಟ್ಟರ ಈ ನಾಟಕಗಳನ್ನು ಜನ ಆಡುತ್ತಾರೆ. ಅವರನ್ನು ಸಂಪರ್ಕಿಸಿದಾಗ, ನನ್ನ ಕ್ಷೇತ್ರಕಾರ್ಯದಲ್ಲಿ ಈ ವಿಷಯ ತಿಳಿದು ಬಂದಿತು. ಬಾಳಂಭಟ್ಟರ ಹೆಸರಿನ ಈ ನಾಟಕಗಳನ್ನೆಲ್ಲ ಸಂಗ್ರಹಿಸಿ ಒಂದು ಬೃಹತ್ ಸಂಪುಟದಲ್ಲಿ ಪ್ರಕಟಿಸಬೇಕಾದ ಅನಿವಾರ್ಯತೆ ಇದೆ.

ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಹನ್ನಿಕೇರಿ ಗ್ರಾಮದ ಪರಪ್ಪ ಮುನೆನ್ನಿ ಎಂಬ ವ್ಯಕ್ತಿ 'ಶಿವಾನಂದ' ಎಂಬ ಅಂಕಿತದಲ್ಲಿ ಹತ್ತಾರು ಸಣ್ಣಾಟಗಳನ್ನು ರಚಿಸಿ 'ಹಣ್ಣಿಕೇರಿ ಶಿವಾನಂದ ಕವಿ' ಎಂದು ಪ್ರಖ್ಯಾತನಾಗಿದ್ದಾನೆ. ಬೆಳಗಾವಿ ಜಿಲ್ಲೆಯ ಸಣ್ಣಾಟ ಪರಂಪರೆಗೆ ನಾಂದಿಹಾಡಿದ ಸಿದ್ಧಿಪುರುಷ ಶಿವಾನಂದ ಕವಿ ಬರೆದ 'ನಿಜಗುಣ ಶಿವಯೋಗಿ' ನಾಟಕ ಇಂದಿಗೂ ಹಳ್ಳಿ-ಹಳ್ಳಿಗಳಲ್ಲಿ ಆಡಲ್ಪಡುತ್ತಿದೆ. ಈ ನಾಟಕವನ್ನು ಸಿ. ಕೆ. ನಾವಲಗಿ ೨೦೧೭ರಲ್ಲಿ ಕರ್ನಾಟಕ ಜಾನಪದ ಅಕಾಡೆಮಿಯಿಂದ ಸಂಪಾದಿಸಿ ಪ್ರಕಟಿಸಿದ್ದಾರೆ.

| | |
|---|---|
| ೧. ವಸಂತ ಮಾಲತಿ | ೨. ಸಂಪೂರ್ಣ ರಾಮಾಯಣ |
| ೩. ಶಿಬಿ ಚಕ್ರವರ್ತಿ | ೪. ಸತ್ಯಶೀಲ |
| ೫. ಕುಂಭಕರ್ಣ | ೬. ನಿಜಗುಣ ಶಿವಯೋಗಿ |
| ೭. ಮಹಾದೇವಿ | ೮ ಕಬೀರದಾಸ |
| ೯. ಐರಾವಣ ಮೈರಾವಣ | ೧೦. ಜೋಧಾಬಾಯಿ |
| ೧೧.ಇಂದ್ರಕೀಲ | ೧೨. ಜಲಂಧ್ರ |
| ೧೩.ಬಲವಂತ ಬಸವಂತ | ೧೪. ಸಾಮ್ಯವಾದಿ ಬಸವ |
| ೧೫.ರಾಮ ಸಾಮ್ರಾಜ್ಯ | ೧೬. ದೇವಿ ಪುರಾಣ (ಕಾವ್ಯ) |

ಬೈಲವಾಡದ ರಾಯಪ್ಪ ಸಂಗ್ಯಾಬಾಳ್ಯಾ ನಾಟಕವನ್ನು ಬರೆದು ಲೋಕಪ್ರಸಿದ್ಧನಾಗಿದ್ದಾನೆ. ಈತನ ಸಂಗ್ಯಾ ಬಾಳ್ಯಾ ನಾಟಕವನ್ನು ಚಂದ್ರಶೇಖರ ಕಂಬಾರ ಮತ್ತು ಕೀರ್ತಿನಾಥ ಕುರ್ತಕೋಟಿ ಅವರು ಸಂಪಾದಿಸಿ ಪ್ರಕಟಿಸಿ ಅದಕ್ಕೊಂದು ವಿಸ್ತಾರದ ಭಿತ್ತಿಯನ್ನು ಕಲ್ಪಿಸಿಕೊಟ್ಟಿದ್ದಾರೆ. ಸಂಗ್ಯಾಬಾಳ್ಯಾ ನಾಟಕದ ಅನೇಕ ರೂಪಾಂತರಗಳು ದೊರೆಯುತ್ತವೆ. ಸು. ೩೦ ಸಂಗ್ಯಾಬಾಳ್ಯಾ ನಾಟಕಗಳು ಪ್ರಕಟಗೊಂಡಿವೆ. ರಾಯಪ್ಪ ಸಂಗ್ಯಾಬಾಳ್ಯಾ ಆಟ ಅಲ್ಲದೆ ಮಹಲಿಂಗಶೆಟ್ಟಿ ಮತ್ತು ಪುಂಡಲಿಕ ಆಟಗಳನ್ನೂ ಬರೆದಿದ್ದಾನೆ. ಬೆಳಗಾವಿ ಜಿಲ್ಲೆಯಲ್ಲಿ ಈ ಪುಂಡಲಿಕನ ಆಟಕ್ಕೆ ಬಾವಾನಾಟ ಎಂದು ಕರೆಯುವರು. ಇಂಚಲದ ಕೆಂಚನಾಯ್ಕನೂ ಕೂಡ ಬಾವಾನಾಟ ಒಂದನ್ನು ಬರೆದಿದ್ದಾನೆಂದು ತಿಳಿದುಬರುತ್ತದೆ ಹಸ್ತಪ್ರತಿಯೊಂದರಲ್ಲಿ ಈ ಇಬ್ಬರು ಕವಿಗಳ ಬೇರೆ ಬೇರೆ ಪದ್ಯಗಳು ಇರುವುದನ್ನು ಗಮನಿಸಬಹುದು. ಈ ಮೂರೂ ನಾಟಕಗಳು ಅಪ್ರಕಟಿತ ಹಸ್ತಪ್ರತಿ ರೂಪದಲ್ಲಿವೆ.

ಶಾಂತವೀರ ರಾಚಿದೇವ ಕಿತ್ತೂರ ಅವರು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಚಿರಸ್ಥಾಯಿಯಾಗಿ ಉಳಿಯುವ ಹೆಸರು. ಸಕ್ಕರಿ ಬಾಳಾಚಾರ್ಯ (ಶಾಂತಕವಿಗಳಿಗೆ) ವಿದ್ಯೆಕಲಿಸಿದ

ಪ್ರಾತಃಸ್ಮರಣೀಯರು. ಗುರುವಿನ ಮೇಲಿನ ಭಕ್ತಿ ಕಾರಣವಾಗಿ ಸಕ್ಕರಿ ಬಾಳಾಚಾರ್ಯರು ತಮ್ಮ ಅಂಕಿತವನ್ನು 'ಶಾಂತಕವಿ' ಎಂದು ಕರೆದುಕೊಂಡರು. ಶಾಂತವೀರ ರಾಚಿದೇವ ಕಿತ್ತೂರು ಅವರು ಬರೆದರೆನ್ನಲಾದ ಕೃತಿಗಳು ಒಟ್ಟು ಆರು.

೧. ನವರತ್ನಹಾರ

೨. ಕೆಲವು ಕ್ರಮಿಕ ಪುಸ್ತಕಗಳು

೩. ದೊರೆ ಮಲ್ಲಸರ್ಜಕಾವ್ಯ

೪. ಶಾಂತವೀರ ಛಂದಸ್ಸು

೫. ಶಾಂತವೀರ ನಿಘಂಟು

೬. ರಾಜಶೇಖರ ವಿಳಾಸದ ಎರಡನೆಯ ಆಶ್ವಾಸದ ಟೀಕೆ.

ನವರತ್ನಹಾರ ಎಂಬುದು ಪಾಶ್ಚಾತ್ಯ ವಿದ್ವಾಂಸ ಜೆ.ಎಚ್.ಫ್ಲೀಟ್ ಅವರಿಗೆ ಪ್ರೀತಿ ವಿಶ್ವಾಸಗಳಿಂದ ಅರ್ಪಿಸಿದ ಕಾವ್ಯ ಸಂಗ್ರಹವಾಗಿದೆ. 'ದೊರೆ ಮಲ್ಲಸರ್ಜಕಾವ್ಯ'ವನ್ನು ಶಾಂತವೀರಯ್ಯನವರೆ ಬರೆದರೆಂದು ಹೇಳಲಿಕ್ಕೆ ಸಾಕಷ್ಟು ಆಧಾರಗಳಿಲ್ಲ. ಕಿತ್ತೂರಿನ ಅಧಿಪತಿಯಾದ ದೊರೆ ಮಲ್ಲಸರ್ಜನನ್ನು ಕುರಿತು ದುಂದುಮೆ ಧಾಟಿಯ ಕೃತಿಯಲ್ಲಿ ಬಂದಿರುವ 'ಗುರುಶಾಂತವೀರನು ಹೇಳಿದನೀಗ' ಎಂಬ ಮಾತಿನಿಂದ ಶಾಂತವೀರಯ್ಯ ಕಿತ್ತೂರ ಅವರೆ ಇದನ್ನು ಬರೆದಿರಬಹುದೆಂದು ಹೇಳುವುದು ಕೇವಲ ಊಹೆಯಾಗಬಲ್ಲುದು. ಅಲ್ಲದೆ ಶಾಂತವೀರಯ್ಯನವರು ಇಂಥ ಬೇರೆ ಕೃತಿಗಳನ್ನು ಬರೆದ ಬಗೆಗಾಗಲಿ, ಬರೆಯುತ್ತಿದ್ದರೆಂಬ ಬಗೆಗಾಗಲಿ ಯಾವ ಸೂಚನೆಗಳೂ ದೊರೆತಿಲ್ಲ. ಅಲ್ಲದೆ, ಈ ಕೃತಿಯನ್ನು ಶೀಗೇಹಳ್ಳಿಯ ರುದ್ರಗೌಡ ಎಂಬುವರು ರಚಿಸಿರಬಹುದೆಂಬ ಸಂದೇಹವೂ ಇದೆ. ಅಂತೂ ಬೇರೆ ಖಚಿತವಾದ ಆಧಾರಗಳು ದೊರಕುವವರೆಗೆ ಈ ಕೃತಿ ಶಾಂತವೀರಯ್ಯನವರದಲ್ಲ ಎಂದು ಹೇಳುವುದೇ ವಿಹಿತ.

ಇನ್ನು 'ಶಾಂತವೀರ ಛಂದಸ್ಸು' ಗ್ರಂಥವು ಉಪಲಬ್ಧವಿಲ್ಲ. ಆದರೆ ಸ್ವತಃ ಕಿತ್ತೂರ ಅವರೇ ತಮ್ಮ ರಾಜಶೇಖರ ವಿಳಾಸದ ಎರಡನೆಯ ಟೀಕಾ ಗ್ರಂಥದ ಪ್ರಸ್ತಾವನೆಯಲ್ಲಿ 'ಶಾಂತವೀರ ಛಂದಸ್ಸಿನ' ಉಲ್ಲೇಖ ಮಾಡಿರುವರು. ತಮ್ಮ ಟೀಕೆಗೆ ಸಹಾಯಕವಾದ ಗ್ರಂಥಗಳ ವಿಚಾರವನ್ನು ತಿಳಿಸುತ್ತ ಅವರು 'ಶಾಂತವೀರ ಛಂದಸ್ಸು, ನಾಗವರ್ಮ ಛಂದಸ್ಸುಗಳ ನೇಮಗಳಿಂದಲೂ ಎಂದು ಬರೆದಿರುವರು. ಈ ಆಧಾರದ ಮೇಲಿಂದಲೇ 'ರಾಜಶೇಖರ ವಿಳಾಸದ' ಎರಡನೆಯ ಆಶ್ವಾಸದ ಕನ್ನಡ ಟೀಕೆಯ ಸೂಚನೆಯಲ್ಲಿ ಶಾಂತವೀರ ಛಂದಸ್ಸಿನ ನಿರ್ದೇಶನವಿದೆ. ಇದನ್ನು ಬರೆದಾದ ಮೇಲೆ ಟೀಕೆಯನ್ನು ಬರೆದಿದ್ದಾರೆಂಬುದು ಸ್ಪಷ್ಟವಿದೆ. ಆದರೆ ಈ ಗ್ರಂಥವು ಉಪಲಬ್ಧವಿಲ್ಲ ಎಂದು ಕೊಪ್ಪಳ ವೀರಭದ್ರಪ್ಪನವರು ಅಭಿಪ್ರಾಯಪಟ್ಟಿರುವರು. ರಾ.ಯ.ಧಾರವಾಡಕರ ಮತ್ತು ಶ್ರೀನಿವಾಸ ಹಾವನೂರ ಅವರು ಈ ಗ್ರಂಥದ ಬಗ್ಗೆ ಉಲ್ಲೇಖಿಸಿರುವರಾದರೂ ಇತರ ಯಾವ ವಿವರಗಳನ್ನೂ ಕೊಟ್ಟಿಲ್ಲ.

ಈ 'ಶಾಂತವೀರ ಛಂದಸ್ಸಿ'ನ ಬಗ್ಗೆ ಸ್ವತಃ ಕಿತ್ತೂರ ಅವರ ಉಲ್ಲೇಖವನ್ನು ಬಿಟ್ಟರೆ ಹೆಚ್ಚಿನ ಆಧಾರಗಳೇನೂ ಉಪಲಬ್ಧವಿಲ್ಲ. ಇದರಿಂದ 'ಶಾಂತವೀರ ಛಂದಸ್ಸು' ಎಂಬ ಗ್ರಂಥವಿತ್ತು ಮತ್ತು ಕಿತ್ತೂರ ಅವರು ಆ ಗ್ರಂಥದ ಸಹಾಯವನ್ನು ಪಡೆದಿರುವರೆಂಬುದು ಮಾತ್ರ ಖಚಿತವಾಗಿ ತಿಳಿದು ಬರುತ್ತದೆ. ಆದರೆ ಈ 'ಶಾಂತವೀರ ಛಂದಸ್ಸು' ಕಿತ್ತೂರಕೃತವೇ ಆಗಿತ್ತೇ? ಎಂಬ ಸಂದೇಹಕ್ಕೂ ಆಸ್ಪದವಿದೆ. ಈ ಸಂದೇಹಕ್ಕೆ ಒಂದು ಚಿಕ್ಕ ಕಾರಣವೆಂದರೆ, ತಮ್ಮ ಸಟೀಕ ರಾಜಶೇಖರ ವಿಳಾಸದ ಎರಡನೆಯ ಆವೃತ್ತಿಯ ಪ್ರಸ್ತಾವನೆಯಲ್ಲಿ ಕಿತ್ತೂರ ಅವರು 'ಶಾಂತವೀರ ಛಂದಸ್ಸಿನ' ಜೊತೆಗೆ ಉಲ್ಲೇಖಿಸಿದ ಇತರ ಸಂಸ್ಕೃತ-ಕನ್ನಡ ಗ್ರಂಥಗಳೆಲ್ಲ ಪ್ರಾಚೀನ ಕೃತಿಗಳೆ ಆಗಿವೆಯೆಂಬುದು. ಆದರೆ ಇದೊಂದು ನಕಾರಾತ್ಮಕ ಆಧಾರವಾಗುತ್ತದೆಯಲ್ಲದೆ, ಸಬಲ ಕಾರಣವಾಗುವುದಿಲ್ಲ. ಅಂತೂ ಪ್ರಸ್ತುತ 'ಶಾಂತವೀರ ಛಂದಸ್ಸು' ಉಪಲಬ್ಧವಿಲ್ಲದ್ದರಿಂದ ಹೆಚ್ಚಿಗೆ ಹೇಳಲಾಗದು. ಆದರೆ ಇಂಥ ಒಂದು ಗ್ರಂಥವನ್ನು ಬರೆಯುವ ಅರ್ಹತೆ ಮಾತ್ರ ಕಿತ್ತೂರರಿಗೆ ಇತ್ತೆಂಬುವಲ್ಲಿ ಸಂದೇಹವಿಲ್ಲ.

"ಇನ್ನು 'ಶಾಂತವೀರ ನಿಘಂಟು' ಗ್ರಂಥವೂ ಉಪಲಬ್ಧವಿಲ್ಲ. ಈ ಗ್ರಂಥವನ್ನು ಕಿತ್ತೂರ ಅವರು ಬರೆದಿರುವರೆಂದು ರಾ.ಯ.ಧಾರವಾಡಕರ್ ಅವರು ತಮ್ಮ 'ಹೊಸಗನ್ನಡ ಸಾಹಿತ್ಯದ ಉದಯ ಕಾಲದಲ್ಲಿ ಹೇಳಿದ್ದರೂ (ಪು-೧೮೯). ಅದರ ಬಗ್ಗೆ ಯಾವ ವಿವರಗಳನ್ನೂ ತಿಳಿಸಿಲ್ಲ. ಆದರೆ ಕಿತ್ತೂರರು ತಮ್ಮ ರಾಜಶೇಖರ ವಿಳಾಸದ ಟೀಕೆಯ ಕೊನೆಗೆ ಕೊಟ್ಟಿರುವ 'ಶಾಂತವೀರ ಕೋಶ'ವೇ 'ಶಾಂತವೀರ ನಿಘಂಟು' ಆಗಿರಬಹುದೇನೋ ಎಂಬ ಸಂದೇಹವನ್ನು ಕೊಪ್ಪಳ ವೀರಭದ್ರಪ್ಪನವರು ವ್ಯಕ್ತಪಡಿಸಿರುವರು. ಕೊಪ್ಪಳ ಅವರ ಊಹೆ ಸರಿಯೆಂದು ತೋರುತ್ತದೆ. ಆದರೆ ಕಿತ್ತೂರ ಅವರು ಬರೆದ 'ಶಾಂತವೀರ ನಿಘಂಟು' ಈಗ ಉಪಲಬ್ಧವಿಲ್ಲವಾದರೂ ಅವರ ಸಮಕಾಲೀನರೂ ಸಹೋದ್ಯೋಗಿಗಳೂ ಆದ ತುರಮರಿ ಗಂಗಾಧರಯ್ಯನವರು ಬರೆದು ೧೮೬೯ರಲ್ಲಿ ಪ್ರಕಟಿಸಿದ 'ಶಬ್ದಮಂಜರಿ' ಎಂಬ ಶಬ್ದಕೋಶದಂತ ಒಂದು ಕೋಶವನ್ನು ಕಿತ್ತೂರರು ಸಿದ್ಧಪಡಿಸಿರಬಹುದೇ? ಎಂಬ ಸಂದೇಹಕ್ಕೂ ಆಸ್ಪದವಿದೆ."[೪೧]

ಅಂತೂ ಶಾಂತವೀರಯ್ಯನವರು ಬರೆದ ರಾಜಶೇಖರ ವಿಳಾಸದ ಎರಡನೆಯ ಆಶ್ವಾಸದ ಟೀಕೆಯನ್ನು ಬಿಟ್ಟರೆ, ಅವರ ಇತರ ಗ್ರಂಥಗಳಾವುವೂ ಈಗ ಉಪಲಬ್ಧವಿಲ್ಲ.

**ಹಸ್ತಪ್ರತಿಗಳ ಸಾಹಿತ್ಯಿಕ ವಿವೇಚನೆ :**

ಕರ್ನಾಟಕದಲ್ಲಿ ಅತಿ ದೊಡ್ಡ ಜಿಲ್ಲೆಯೆಂಬ ಖ್ಯಾತಿ ಪಡೆದ ಬೆಳಗಾವಿ ಜಿಲ್ಲೆಯ ಸಾಹಿತ್ಯ ಕೃಷಿಯನ್ನು ಊಹಿಸುವುದು ತುಂಬಾ ಕಷ್ಟದ ಕೆಲಸವಾಗಿದೆ. ಏಕೆಂದರೆ ಸಾಹಿತ್ಯದ ರಾಶಿ ಬೆಟ್ಟದಷ್ಟು ಬೆಳೆದಿದೆ. ಜಿಲ್ಲೆಯ ತುಂಬೆಲ್ಲ ಇರುವ ಲಿಂಗಾಯತಮಠ ಮತ್ತು ಸಾಹಿತ್ಯ ಪ್ರಿಯರ ಮನೆಯಲ್ಲಿರುವ ಹಸ್ತಪ್ರತಿಗಳ ರಾಶಿಯನ್ನು ಬೆಳಕಿಗೆ ತಂದರು. ಇನ್ನು ಕಣ್ಣುತಪ್ಪಿ ಸಾಹಿತ್ಯದ ರಾಶಿ ಉಳಿದುಕೊಂಡಿದೆ. ಜಿಲ್ಲೆಯಲ್ಲಿರುವ ಮಹತ್ವದ ಹಸ್ತಪ್ರತಿಗಳನ್ನು ನಾಗನೂರು ರುದ್ರಾಕ್ಷಿಮಠದ

ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿ ಸಂಗ್ರಹಿಸಿರುವುದು ಸಂತೋಷದ ಸಂಗತಿಯಾಗಿದೆ. ಹಸ್ತಪ್ರತಿಗಳನ್ನು ಸಂರಕ್ಷಿಸುತ್ತಿರುವ ಕಾರ್ಯ ಶ್ಲಾಘನೀಯವಾದುದು. ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಹಯೋಗದಲ್ಲಿ ೨೦೦೦ರಲ್ಲಿ ಹಸ್ತಪ್ರತಿ ಸಂರಕ್ಷಣಾ ತರಬೇತಿ ಶಿಬಿರವನ್ನು ಏರ್ಪಡಿಸಿದ್ದರು. ಕೇಂದ್ರ ಸರಕಾರದ ಪತ್ರಾಗಾರ ಇಲಾಖೆ ಮತ್ತು ರಾಜ್ಯ ಪತ್ರಾಗಾರ ಇಲಾಖೆಯ ಅನುದಾನ ಪಡೆದು ಸೂಚಿ ಸಂಪುಟವೊಂದನ್ನು ಪ್ರಕಟಿಸಿದ್ದಾರೆ. ೫೮೭ ಕೃತಿಗಳ ವಿವರಣಾತ್ಮಕ ಸೂಚಿ ಅದಾಗಿದೆ. ಸೂಚಿಸ್ವರೂಪದಲ್ಲಿ ಕೃತಿ ಪರಿಚಯ, ಕವಿ ಪರಿಚಯ, ಕಾಲದ ವಿಚಾರ ನಿರ್ಣಯಿಸಿದ್ದಾರೆ. ಕವಿ ಕೃತಿಗಳನ್ನು ಅಕಾರಾದಿಯಲ್ಲಿ ಹೆಸರಿಸಿದ್ದಾರೆ. ಆದರೆ ಈ ಕೃತಿಯ ಕೊರತೆ ಎಂದರೆ– ಕೃತಿಯ ಅಂತ್ಯ ಪ್ರಶಸ್ತಿ ಭಾಗವನ್ನು ನಮೂದಿಸಿಲ್ಲ. ಈ ಕೊರತೆಯನ್ನು ನಿವಾರಣೆ ಮಾಡುವ ಉದ್ದೇಶದಿಂದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗದ ಮುಖ್ಯಸ್ಥರಾಗಿದ್ದ ಎಫ್.ಟಿ. ಹಳ್ಳಿಕೇರಿ ಅವರು 'ನಾಗನೂರು ಮಠದ ಹಸ್ತಪ್ರತಿ ಲಿಪಿಕಾರರ ಚರಿತ್ರೆ'ಯನ್ನು ರಚಿಸಿ ಮಹದುಪಕಾರ ಮಾಡಿದ್ದಾರೆ. ಹಳ್ಳಿಕೇರಿ ಅವರು ೬೮ ಲಿಪಿಕಾರರ ಚರಿತ್ರೆಯನ್ನು ಮೊದಲ ಬಾರಿಗೆ ಬೆಳಕಿಗೆ ತಂದಿದ್ದಾರೆ. ಈ ಗ್ರಂಥಾಲಯದಲ್ಲಿರುವ ಹಸ್ತಪ್ರತಿಗಳನ್ನು ಸಾಹಿತ್ಯಿಕವಾಗಿ ವಿಭಾಗಿಸಿ ಅವುಗಳ ವಿವರವನ್ನು ಇಲ್ಲಿ ನೀಡಲು ಪ್ರಯತ್ನಿಸಿರುವೆ.

**ವಚನಕ್ಕೆ ಸಂಬಂಧಿಸಿದ ಕೃತಿಗಳು :**

ಅಕ್ಕಗಳ ಕಾಲಜ್ಞಾನದ ವಚನ–ಅಕ್ಕಮಹಾದೇವಿ ೧೧೬೦, ಅಕ್ಕಗಳ ಸೃಷ್ಟಿಯ ವಚನ–ಅಕ್ಕಮಹಾದೇವಿ ೧೧೬೦, ಅಖಂಡೇಶ್ವರನ ವಚನಗಳು–ಷಣ್ಮುಖಸ್ವಾಮಿ ೧೭೦೦, ಅಖಂಡೇಶ್ವರನ ಷಟ್‌ಸ್ಥಲದ ವಚನ–ಷಣ್ಮುಖಸ್ವಾಮಿ–೧೭೮೦, ಅಷ್ಟಾವರಣದ ಸ್ತೋತ್ರದ ವಚನ–ಎಳಮಲೆಯ ಗುರುಶಾಂತದೇವ–೧೭೦೦, ಆಚರಣೆಯ ಸಂಬಂಧದ ವಚನ?, ಉರಿಲಿಂಗಪೆದ್ದಿಯ ವಚನ–ಉರಿಲಿಂಗಪೆದ್ದಿ–೧೧೬೦, ಉರಿಲಿಂಗಪೆದ್ದಿಗಳ ಸೃಷ್ಟಿಯ ವಚನ–ಉರಿಲಿಂಗಪೆದ್ದಿ–೧೧೬೦, ಎಲ್ಲಾ ಪುರಾತನರ ವಚನಗಳು? ಕರಸ್ಥಲದ ವಚನ–ಕರಸ್ಥಲದ ನಾಗಿದೇವ–೧೪೩೦, ಕೈವಲ್ಯ ಕಲ್ಪವಲ್ಲರಿ–ಸರ್ಪಭೂಷಣ ಶಿವಯೋಗಿ ೧೭೦೦, ಕೈವಲ್ಯ ಪದ್ಧತಿ ನಿಜಗುಣ ಶಿವಯೋಗಿ–೧೫೦೦, ಕಾಡಸಿದ್ಧೇಶ್ವರ ವಚನ–ಕಾಡಸಿದ್ಧೇಶ್ವರ–೧೭೦೦, ಗಣದಾಸಿ ವೀರಣ್ಣನ ವಚನಗಳು–ಗಣದಾಸಿ ವೀರಣ್ಣ, ಗಣಭಾಷಿತ ರತ್ನಮಾಲೆ–ಗುಬ್ಬಿಮಲ್ಲಣ್ಣಾರ್ಯ–೧೪೭೫, ಘನಲಿಂಗ ದೇವರ ವಚನ–ಘನಲಿಂಗದೇವ–೧೬೧೦, ದಶವಿಧ ಪಾದೋದಕ ನಿರ್ಣಯ ವಚನ? ದಶವಿಧ ಪಾದೋದಕ ನಿರ್ಣಯ ವಿವರ–ತೋಂಟದ ಸಿದ್ಧಲಿಂಗ ೧೪೭೦, ನವಚಕ್ರದ ವಚನ?, ನೂರೊಂದು ಸ್ಥಲ–ಜಕ್ಕಣ್ಣಾರ್ಯ ೧೪೩೦, ಪಾದೋದಕ ನಿರ್ಣಯ ವಚನ? ಪ್ರಭುದೇವರ ಸೃಷ್ಟಿಯ ವಚನ–ಪ್ರಭುದೇವ–೧೧೬೦, ಬಸವಸ್ತೋತ್ರದ ವಚನಗಳು–ಚೆನ್ನಂಜೆದೇವ–೧೬೩೦, ಬಸವೇಶ್ವರನ ಷಟ್‌ಸ್ಥಲದ ವಚನ–ಬಸವಣ್ಣ–೧೧೬೦, ಬೆಡಗಿನ ವಚನಗಳು–ಸಿಂಗಳದ ಸಿದ್ಧಬಸವರಾಜ, ಬ್ರಹ್ಮಾದ್ವೈತ ಸಿದ್ಧಾಂತ ಷಡಸ್ಥಲಾಭರಣ–ಶಾಂತೇಶಗುರು ೧೫೬೧, ಮಂತ್ರಗೋಪ್ಯ ವಚನ–ಚೆನ್ನಬಸವಣ್ಣ–

೧೧೬೦, ಮೋಳಿಗೆ ಮಾರಯ್ಯನ ವಚನಗಳು–ಮೋಳಿಗೆ ಮಾರಯ್ಯ–೧೧೬೦, ರಾಜಯೋಗದ ವಚನ–ಚನ್ನಬಸವೇಶ ೧೧೬೦, ಲಿಂಗನಿರ್ಣಯ (ಕುಸ್ತಿ ಆಗಮ) ಲಿಂಗಸ್ತೋತ್ರದ ವಚನಗಳು–ಸಿದ್ಧವೀರಣ್ಣ ೧೧೬೦, ಷಟ್‌ಸ್ಥಲ ಅನುಭಾವದ ವಚನ–ಚನ್ನಬಸವಣ್ಣ–೧೧೬೦, ಶಂಕರದೇವನ ವಚನ? ಶಿಖಾರತ್ನ ವಚನ–ಬಾಲಸಂಗಯ್ಯ, ಶೂನ್ಯಸಂಪಾದನೆ–ಗೂಳೂರು ಸಿದ್ಧವೀರ, ಸಮಾಧಿ ಕ್ರಿಯಾ ವಚನ? ಸೃಷ್ಟಿಯ ವಚನ–ಪ್ರಭುದೇವ–೧೧೬೦, ಸ್ವರಏಕೋತ್ತರ ಶತಸ್ಥಲದ ವಚನ–ಜಕ್ಕಣ್ಣ

**ಟೀಕಾ ಸಾಹಿತ್ಯ ಕೃತಿಗಳು :**

ಶರಣ ಸಾಹಿತ್ಯ, ಮೌಲ್ಯಗಳಿಗೆ ಬರೆದ ಸಾಹಿತ್ಯಿಕ ವ್ಯಾಖ್ಯಾನವಾಗಿದೆ. ವಚನ ಸಾಹಿತ್ಯ, ಈ ಲಿಂಗಾಯತ ಸಾಹಿತ್ಯದ ಪ್ರಥಮ ಬೆಳೆ. ಈ ವಚನಸಾಹಿತ್ಯಕ್ಕೆ ಹರಿಹರ–ರಾಘವಾಂಕ ಮೊದಲಾದವರು ಸಾಹಿತ್ಯಿಕ ವ್ಯಾಖ್ಯಾನವನ್ನೂ ಹದಿನೈದು–ಹದಿನಾರನೆಯ ಶತಮಾನದ ಸಂಕಲನ– ಸಂಪಾದನ–ವ್ಯಾಖ್ಯನಕಾರರು ತಾತ್ವಿಕ ವ್ಯಾಖ್ಯಾನವನ್ನೂ ರೂಪಿಸಿದರು. ಹೀಗೆ ವಚನ ಸಾಹಿತ್ಯದ ತರುವಾಯ ರಚಿತವಾದ ಶರಣ ಸಾಹಿತ್ಯವನ್ನು ಸೃಜನ ಸಾಹಿತ್ಯ, ಸಂಕಲನ–ಸಂಪಾದನ ಸಾಹಿತ್ಯ ಹಾಗೂ ವ್ಯಾಖ್ಯಾನ ಸಾಹಿತ್ಯವೆಂದು ಹೆಸರಿಸಬಹುದು.

ಕೃತಿಯ ಅರ್ಥ–ಭಾವ–ಉದ್ದೇಶಗಳನ್ನು ವಿವರಿಸಿ ಹೇಳುವುದಕ್ಕಾಗಿ ಸಂಸ್ಕೃತ ಸಾಹಿತ್ಯದಲ್ಲಿ ವ್ಯಾಖ್ಯಾನ, ಭಾಷ್ಯ, ವಾರ್ತಿಕ, ಅಧಿಕರಣ, ಕೃತಕ, ತಾತ್ಪರ್ಯ ನಿರ್ಣಯಗಳೆಂಬ ವಿವಿಧ ಪ್ರಕಾರಗಳನ್ನು ರೂಪಿಸಲಾಗಿದೆ. ಆದರೆ ಕನ್ನಡ ಕೃತಿಗಳಿಗೆ ಟೀಕೆ ಬರೆದ ಲಿಂಗಾಯತ ಟೀಕಾಕಾರರು ಇದಕ್ಕಾಗಿ ಟೀಕೆ, ವ್ಯಾಖ್ಯಾನ, ಟಿಪ್ಪಣೆ, ಸಾರಾರ್ಥ, ಸಾರಾಮೃತ, ಮಾಚ್ಯ, ವಚನಾರ್ಥ, ನುಡಿ ಮುಂತಾದ ಪದಗಳನ್ನು ಬಲಸಿದ್ದರೂ ಇವೆಲ್ಲ ವಿವಿಧ ಪ್ರಕಾರಗಳಲ್ಲ : 'ಟೀಕೆ'ಯನ್ನು ಸೂಚಿಸುವ ಪರ್ಯಾಯ ಪದಗಳು. ಕನ್ನಡ ಸಾಹಿತ್ಯದಲ್ಲಿ 'ಟೀಕೆ ಅಥವಾ ಟೀಕು' ಪದವೇ ಅಧಿಕವಾಗಿ ಬಳಕೆಗೊಂಡಿರುತ್ತದೆ. ಕೆಲವು ಸಲ ಕೃತಿಯ ಆರಂಭದಲ್ಲಿ 'ಸಿಂಗಳದ ಸಿದ್ಧಬಸವ ರಾಜದೇವರ ವ್ಯಾಖ್ಯಾನ' ಎಂದಿದ್ದರೂ ತರುವಾಯ 'ಟೀಕು' ಎಂದೇ ಬರೆಯಲಾಗಿದೆ. ಹೀಗೆ ವೀರಶೈವ ಟೀಕಾಕಾರರು ಟೀಕು, ವ್ಯಾಖ್ಯಾನ ಪದಗಳನ್ನು ಸಮಾನಾರ್ಥದಲ್ಲಿಯೇ ಪ್ರಯೋಗಿಸಿರುವುದು ತಿಳಿದುಬರುತ್ತದೆ. ಕೆಲವು ಟೀಕಾ ಕೃತಿಗಳ ವಿವರ ಹೀಗಿದೆ:

ಅನಾಮಯ ಸ್ತೋತ್ರ ಟೀಕೆ–ಗುರುದೇವ–೧೩೫೦, ಅಪರಾಧ ಸ್ತೋತ್ರ (ಕನ್ನಡ ಟೀಕೆ), ಏಕಾಕ್ಷರ ನಿಘಂಟು ಟೀಕೆ? ಏಕೋತ್ತರ ಶತಸ್ಥಲ ಟೀಕೆ–ಶ್ರೀಗಿರೀಂದ್ರ–೧೪೩೦, ಏಕೋತ್ತರ ಸಾರಾಮೃತ ಟೀಕೆ? ಕರಣಹಸಿಗೆ ಟೀಕೆ–ಪರ್ವತಶಿವಯೋಗಿ–೧೬೫೦, ಕರಣಹಸಿಗೆ ತತ್ವ ಟೀಕೆ–ಪರ್ವತ ಶಿವಯೋಗಿ–೧೧೬೦, ಕರಣ ಹಸಿಗೆ ವಾಚ್ಯ–ಪರ್ವತ ಶಿವಯೋಗಿ ೧೬೫೦, ಕೈವಲ್ಯ ಪದ್ಧತಿಯ ವ್ಯಾಖ್ಯಾನ? ಗುರು ಸ್ತೋತ್ರದ ತ್ರಿವಿಧ ಟೀಕೆ–ಶೀಲವಂತ ಚೆನ್ನಮಲ್ಲಯ್ಯ, ಜಿಗುನಿ ಮರುಳದೇವರ ಕಂದ ಟೀಕೆ–ಮರಿಸಂಗಯ್ಯ ೧೬೦೦, ದೀಕ್ಷಾವಿಧಾನ (ಟೀಕೆ) ಪಂಚತಂತ್ರದ

ಟೀಕೆ? ಪಂಚೀಕರಣ ಪದ ಟೀಕೆ–ವರತೆ ಸೋಮಯ್ಯ–೧೬೦೦, ಪದಮಂತ್ರ ಗೋಪ್ಯದ ಟೀಕೆ, ಪರಮ ರಹಸ್ಯ ಟೀಕೆ–೧೬೦೦, ಪ್ರಭುದೇವರ ಟೀಕಿನ ವಚನ ಕುಮಾರ ಬಂಕನಾಥ–೧೪೩೦, ಪ್ರಭುದೇವರ ಮಂತ್ರಗೋಪ್ಯ ಟೀಕೆ–ಕಲ್ಲಿಮಠದ ಪ್ರಭುದೇವ ೧೪೩೦, ಪ್ರಭುದೇವರ ಸೃಷ್ಟಿ ವಚನದ ಟೀಕೆ? ಬ್ರಹ್ಮೋತ್ತರ ಕಾಂಡ ಟೀಕೆ–ಚಾಮರಾಜ ೧೬೩೭, ಭರ್ತೃಹರಿಯ ವ್ಯಾಖ್ಯಾನ? ಮಂತ್ರಗೋಪ್ಯದ ಟೀಕೆ–ಕಲ್ಲುಮಠದ ಪ್ರಭುದೇವ ೧೪೩೦, ಮನೋವಿಜಯ ಕಾವ್ಯದ ವ್ಯಾಖ್ಯಾನ–ಗುರುದೇವ–೧೪೩೦, ಮಲಯರಾಜ ಸ್ತೋತ್ರ ಟೀಕೆ–ಗುರುದೇವ ೧೩೫೦, ಮಹಿಮ್ನಸ್ತೋತ್ರ ಟೀಕೆ ಸೊಸಲೆ ರೇವಣಾರಾಧ್ಯ–೧೬೭೩ ಮಹಿಮ್ನ ಸ್ತೋತ್ರ ವ್ಯಾಖ್ಯಾನ–ಸೋಸಲೆ ರೇವಣಾರಾಧ್ಯ–೧೬೭೩, ಮಾಘದಶಮ ಸರ್ಗಟೀಕೆ–ಮಲ್ಲಿನಾಥ ಸೂರಿ, ಮಾಚಿದೇವ ಮನೋವಿಲಾಸ ಟೀಕೆ–ಬಸವಲಿಂಗ ಶಿವಯೋಗಿ–೧೫೦೦, ಮಿಶ್ರಾರ್ಪಣ ಟೀಕೆ–ಪರ್ವತಶಿವಯೋಗಿ–೧೬೫೦, ಯೋಗಸ್ಥಾಪನ ಸ್ಥಲದ ಟೀಕೆ? ರಾಜಶೇಖರ ವಿಳಾಸ ಕಠಿಣಪದ ಟೀಕೆ–೧೬೫೫, ರುದ್ರಭಾರತ ಟೀಕೆ–ಸೋಸಲೆ ರೇವಣಾಚಾರ್ಯ–೧೬೭೩, ರುದ್ರಭಾಷ್ಯಾ ಪ್ರಾಕೃತ ಟೀಕೆ? ಲಿಂಗಲೀಲಾವಿಲಾಸ ಚಾರಿತ್ರ ಟೀಕೆ–ಕಲ್ಲುಮಠದ ಪ್ರಭುದೇವ–೧೪೩೦, ಲಿಂಗಾವಧಾನದ ಗ್ರಂಥ ಟೀಕೆ? ವಿಭೂತಿಯ ಮಹತ್ವ–ಶಿವಸಿದ್ಧೇಶ್ವರ? ಷಡ್ಷಕ್ರ ಟೀಕು? ಶತಕತ್ರಯದ ಟೀಕು–ವಿರಕ್ತ ತೋಂಟದಾರ್ಯ, ಸಿದ್ಧಾಂತ ಶಿಖಾಮಣಿಯ ಟೀಕೆ, ಸ್ವರ ಚಿಂತಾಮಣಿ ಟಈಕೆ, ಹಲಾಯುಧ ಸ್ತೋತ್ರ ವ್ಯಾಖ್ಯಾನ–ಗುರುದೇವ,

**ತ್ರಿಪದಿ ಹಾಗೂ ಶತಕಕ್ಕೆ ಸಂಬಂಧಿಸಿದ ಕೃತಿಗಳು :**

ಅಷ್ಟಾವರಣ ಸ್ತೋತ್ರದ ತ್ರಿಪದಿ–ಸಿದ್ಧರಾಮ ೧೧೬೦, ಅಷ್ಟಾವರಣ ತ್ರಿವಿಧಿ–ಸಿದ್ಧರಾಮ–೧೧೬೦, ಎಲ್ಲಾ ಪುರಾತನದ ತ್ರಿವಿಧಿ–ನಿಜಗುಣ, ಕರಸ್ಥಲದ ನಾಗಿದೇವರ ತ್ರಿವಿಧಿ–ಕರಸ್ಥಲದ ನಾಗಿದೇವ–೧೪೩೦, ಗುರುಬೋಧಾಮೃತ– ವಿರತ ಮಹಾಲಿಂಗದೇವ ೧೫೦೦, ನಾಗಲಿಂಗಯ್ಯನವರ ತ್ರಿಪದಿ–ಕರಸ್ಥಲ ನಾಗಲಿಂಗ–೧೬೫೦, ನೀಲಮ್ಮನ ತ್ರಿಪದಿ–ನೀಲಮ್ಮ ೧೫೫೦, ಬಸವ ತ್ರಿವಿಧಿ–ಸಿದ್ಧರಾಮ, ಬಸವಸ್ತೋತ್ರದ ತ್ರಿವಿಧಿ–ಸಿದ್ಧರಾಮ–೧೪೩೦, ಮಹದ್ವೈಪುರೇಶ್ವರ ಶತಕ–ಮಗ್ಗೆಯ ಮಾಯಿದೇವ–೧೪೩೦, ಮಿಶ್ರಸ್ತೋತ್ರದ ತ್ರಿವಿಧಿ–ಸಿದ್ಧರಾಮ ೧೧೬೦, ಲಿಂಗನಿಜಸ್ಥಲ–ಕರಸ್ಥಲ ವೀರಣ್ಣ, ಶಿವಾಧಿಕ್ಯ ಶತಕ–ಮಗ್ಗೆಯ ಮಾಯಿದೇವ–೧೪೩೦, ಶಿವಾವಲ್ಲಭ ಶತಕ–ಮಗ್ಗೆಯ ಮಾಯಿದೇವ, ಶೀಲವಂತಯ್ಯನ ತ್ರಿವಿಧಿ–ಚನ್ನಮಲ್ಲ–೧೧೬೦, ಸರ್ವಜ್ಞನ ತ್ರಿಪದಿ–ಸರ್ವಜ್ಞ–೧೭೦೦, ಸಿದ್ಧೇಶ್ವರ ತ್ರಿಪದಿ ೧೬೦೦, ಸೋಮೇಶ್ವರ ಶತಕ–ಸೋಮೇಶ್ವರ ೧೩೦೦, ಶಿವಮಹಿಮಾ ಶತಕ–ಮಲ್ಲಿಕಾರ್ಜುನ ೧೫೬೦.

**ರಗಳೆ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು :**

ಅರವತ್ತೂರು ಪುರಾತನರ ರಗಳೆ, ಅಸಂಖ್ಯಾತ ಪುರಾತನರ ರಗಳೆ? ಎಂಬತ್ತೆಂಟು ಪವಾಡದ ರಗಳೆ–೧೬೦೦, ಗುರುರಗಳೆ–ತ್ರಿಭುವನ ತಾತ ೧೧೬೫, ಜಂಗಮ ರಗಳೆ–ಸಿದ್ಧಲಿಂಗೇಶ್ವರ–

೧೪೮೦, ಪಂಚಾಕ್ಷರಿ ರಗಳೆ? ಪುನರ್ದಿಕ್ಷೆಯ ರಗಳೆ–ಶಂಕರದೇವ–೧೬೦೦, ಬಸವೇಶ್ವರನ ಪವಾಡದ ರಗಳೆ–೧೬೦೦, ಭಕ್ತಿ ಬಿನ್ನಹದ ರಗಳೆ–ಶಂಕರದೇವ–೧೬೨೦, ಭೀಮಕವೀಶ್ವರ ರಗಳೆ–ಶಂಕರದೇವ–೧೬೨೦, ಲಿಂಗರಗಳೆ–ಶಾಂತಮಹಾಘನಲಿಂಗ–ವೀರಶೈವ ರಗಳೆ–ಶಂಕರದೇವ–೧೬೨೦, ಷಡಕ್ಷರ ರಗಳೆ–ಶಂಕರದೇವ–೧೬೦೦, ಶರಣಬಸವ ರಗಳೆ–ಪಾಲ್ಕುರಿಗೆ ಸೋಮನಾಥ ೧೨೯೦, ಶಿವಮಹಿಮಾ ರಗಳೆ, ಶಿವಷಡಕ್ಷರ ರಗಳೆ–ಶಂಕರದೇವ ೧೬೨೦

**ಚರಿತ್ರೆಗೆ ಸಂಬಂಧಿಸಿದ ಕೃತಿಗಳು :**

ಆರಾಧ್ಯ ಚರಿತ್ರೆ–ನೀಲಕಂಠಾರಾಧ್ಯ ೧೫೦೦, ಚೋರಬಸವ ಚರಿತ್ರೆ? ನನ್ನಯ್ಯನ ಚರಿತ್ರೆ–ಪರ್ವತದೇವ ೧೫೭೮, ಭಿಕ್ಷಾಟನೆ ಚರಿತ್ರೆ–ಗುರುಲಿಂಗ ವಿಭು–೧೫೫೦, ಭೈರವೇಶ್ವರ ಚರಿತ್ರೆ–ಕೆ.ನಂಜುಂಡ ೧೫೫೦, ಮಡಿವಾಳಯ್ಯನ ಚರಿತ್ರೆ? ಮಣೇಶನ ಚರಿತ್ರೆ–೧೬೦೦, ರೇವಣಸಿದ್ಧೇಶ್ವರ ಚರಿತ್ರೆ–ಬೊಮ್ಮರಸ–೧೫೦೦, ರೇವಣಸಿದ್ಧೇಶ್ವರ ಪುರಾಣದ ಚರಿತ್ರೆ–ಬೊಮ್ಮರಸ–೧೫೫೦, ಸಾನಂದ ಗಣೇಶನ ಚರಿತ್ರೆ–ಓದುವ ಗಿರಿಯ ೧೫೨೫, ಸಿದ್ಧೇಶ್ವರ ಪುರಾಣ ಚರಿತ್ರೆ–ವಿರಕ್ತ ತೋಂಟದಾರ್ಯ ೧೫೬೦, ಸೌಂದರಪುರಾಣ ಚರಿತ್ರೆ–ಬೊಮ್ಮರಸ–೧೪೫೦

**ಕಾವ್ಯಕ್ಕೆ ಸಂಬಂಧಿಸಿದ ಕೃತಿಗಳು :**

ಉದ್ಭಟಕಾವ್ಯ–ಬಸವಾಂಕ ೧೫೫೦, ಗಿರಿಜೆ ಗಂಗೆ ಸಂವಾದ–ಸಿದ್ಧಲಿಂಗದೇವರು ೧೭೦೦, ಜಂಗಮ ಮಹಾತ್ಮೆ–ದೀಪದ ಕಲಿಯಾರ ಕಾವ್ಯ–ಚೆನ್ನಮಲ್ಲೇಶ ೧೭೦೦, ನೇಮಿಜಿನೇಶ ಕಾವ್ಯ–ಔನೇ ಮಂಗರಸ ೧೫೦೮, ಪಂಚೀಕರಣ ಪದಕಾವ್ಯ–ವರತೆ ಸೋಮಯ್ಯ ೧೬೦೦, ಪದಮಂತ್ರಗೋಪ್ಯ–ಪ್ರಭುದೇವ–೧೧೬೦, ಪ್ರೌಢದೇವರಾಯನ ಕಾವ್ಯ–ಅದೃಶ್ಯಕವಿ ೧೫೮೦, ಬಸವ ಕಾವ್ಯ–ಮರುಳಸಿದ್ಧ ೧೭೦೦, ಭಿಕ್ಷಾಟನ ಕಾವ್ಯ–ಗುರುಲಿಂಗ ವಿಭು ೧೫೫೦, ಭೈರವೇಶ್ವರ ಕಾವ್ಯ–ಕೆ. ನಂಜುಂಡ ೧೫೫೦, ಮನೋವಿಜಯ ಕಾವ್ಯ–ಗುರುಬಸವ ೧೪೩೦, ಯೋಗಾಂಗ ವಿಭೂಷಣ ಕಾವ್ಯ–ಗುರುಬಸವ–೧೪೩೦, ರಾಘವಾಂಕ ಕಾವ್ಯ–ಸಿದ್ಧನಂಜೇಶ–೧೬೫೦, ರಾಜಶೇಖರ ವಿಳಾಸಕಾವ್ಯ–ಷಡಕ್ಷರದೇವ ೧೬೫೫, ವಸ್ತುಕ ಕಾವ್ಯ ಮುರಿಗೆ ಸ್ವಾಮಿ ೧೫೬೦, ಶಿವಾಧಿಕ್ಯ ಪುರಾಣ ಕಾವ್ಯ–ಬಸವಲಿಂಗ ೧೬೧೧, ಸಿದ್ಧರಾಮ ಚಾರಿತ್ರ–ರಾಘವಾಂಕ ೧೩೦೦, ಸೋಮನಾಥ ಕಾವ್ಯ ನಾಂದ್ಯ?

**ಗದ್ಯ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು :**

ಅಷ್ಟೋತ್ತರ ಗದ್ಯ ಶತನಾಮ? ಅಷ್ಟೋತ್ತರ ಶತ ಗದ್ಯ? ಅಕ್ಷರಮಾಲಿಕಾಗದ್ಯ–ಪಾಲ್ಕುರಿಕೆ ಸೋಮನಾಥ ೧೧೯೫, ಅಕ್ಷರಾಂಕ ಗದ್ಯ–ಪಾಲ್ಕುರಿಕೆ ಸೋಮನಾಥ, ಉದಾಹರಣಾ ಗದ್ಯ? ಕರಣಹಸಿಗೆ–ಚೆನ್ನಬಸವಣ್ಣ–೧೧೬೦, ಕರಣ ಹಸಿಗೆ ಗದ್ಯ–ಚೆನ್ನಬಸವಣ್ಣ–೧೧೬೦, ಧಾತು ನಿರ್ಣಯ ಗದ್ಯ–ಕೇಶಿರಾಜ–೧೨೬೦, ನಮಸ್ಕಾರ ಗದ್ಯ–ಪಾಲ್ಕುರಿಗೆ ಸೋಮನಾಥ ೧೧೯೫, ನಕ್ಷತ್ರ ಚೋಮಣಿ ಗದ್ಯ? ಪಂಚತಂತ್ರ–ದುರ್ಗಸಿಂಹ ೧೦೬೦, ಪಂಚಪ್ರಕಾರ ಗದ್ಯ–ಪಾಲ್ಕುರಿಕೆ

ಸೋಮನಾಥ ೧೧೬೫, ಪಂಚೀಕರಣದ ಪದ–ವರತೆ ಸೋಮಯ್ಯ–೧೬೦೦, ಪರಮಾರ್ಥಗೀತೆ–ನಿಜಗುಣ ಶಿವಯೋಗಿ ೧೫೦೦, ಪಾರಮಾರ್ಥಿಕ ಪ್ರಕಾಶಿಕೆ–ನಿಜಗುಣ ಶಿವಯೋಗಿ ೧೫೦೦, ಬಸವಪುರಾಣದ ಕಥಾಸಾರ–ಉತ್ತರ ದೇಶದ ಬಸವಲಿಂಗ ೧೬೦೦, ಬ್ರಹ್ಮಪ್ರಕಾಶಿಕೆ ಗದ್ಯ? ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಗದ್ಯ–ಶಾಂತಲಿಂಗದೇಶಿಕ ೧೬೭೨, ಮಂತ್ರಗೋಪ್ಯ ಗದ್ಯ–ಚೆನ್ನಬಸವಣ್ಣ ೧೧೬೦, ಮಿಶ್ರಾರ್ಪಣ ಗದ್ಯ–ಚೆನ್ನಬಸವಣ್ಣ ೧೧೬೦, ರಟ್ಟಮತ ಗದ್ಯ? ವಿವೇಕ ಚಿಂತಾಮಣಿ–ನಿಜಗುಣ ಶಿವಯೋಗಿ ೧೫೦೦, ಷಟ್‌ಸ್ಥಲ ಗದ್ಯ–ಮೊಗ್ಗಿಯ ಮಾಯಿದೇವ ೧೪೩೦, ಶಬರ ಶಂಕರ ವಿಳಾಸ–ಷಡಕ್ಷರದೇವ ೧೫೦೦, ಸಾಮುದ್ರಿಕೆ ಲಕ್ಷಣ ಗದ್ಯ–೧೬೦೦

**ಷಟ್ಪದಿ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು :**

ಐರಾವತ–ಕುಮಾರವ್ಯಾಸ ೧೪೩೦, ಕರ್ನಾಟಕ ಶಬ್ದಮಂಜರಿ–ವಿರಕ್ತ ತೋಂಟದಾರ್ಯ–೧೫೬೦, ಕರ್ನಾಟಕ ಶಬ್ದಮಂಜರಿ ಷಟ್ಪದಿ–ವಿರಕ್ತತೋಂಟದಾರ್ಯ ೧೫೬೦, ಕಪ್ಪೆ ನಂಜೆ ದೇವರ ನಾಂದ್ಯ–ಕಪ್ಪಿ ನಂಜಯ್ಯ–೧೬೫೦, ಕಾರಣಾಗಮದ ವಾರ್ಧಕ–ಕಲ್ಯಾಣಸ್ವಾಮಿ–೧೫೦೦, ಚೇರಮಾಂಕ ಕಾವ್ಯದ ನಾಂದ್ಯ=ಚೇರಮ–೧೫೨೬, ಚೋರಬಸವೇಶ್ವರ ಪುರಾಣ, ನಿಜಲಿಂಗಶತಕದ ವಾರ್ಧಕ–ಪಾರ್ವತೀಶ್ವರ ನಾಂದ್ಯ ೧೬೫೦, ಪ್ರಭುದೇವರ ನಾಂದ್ಯ–ಎಳಂದೂರ ಹರೀಶ್ವರ ೧೬೦೬, ಬಸವಪುರಾಣ–ಭೀಮಕವಿ ೧೩೬೯, ಬಸವಸ್ತೋತ್ರದ ಷಟ್ಪದಿಗಳು–ಚೆನ್ನಂಜೆದೇವ ೧೬೩೦, ಬಸವೇಶ್ವರ ಪುರಾಣದ ನಾಂದ್ಯ–ಭೀಮಕವಿ ೧೩೬೯, ಮಿಶ್ರಸ್ತೋತ್ರದ ಷಟ್ಪದಿಗಳು–ಸಿದ್ಧವೀರದೇವರು–೧೬೦೦, ಮಿಶ್ರಸ್ತೋತ್ರದ ಷಟ್ಪದಗಳು–ಚೆನ್ನಂಜೆದೇವ–೧೬೩೦, ಮುರಿಗೆ ಶಾಂತವೀರಸ್ವಾಮಿಗಳ ನಾಂದ್ಯ–ಮುರಿಗೆಸ್ವಾಮಿ ೧೫೬೦, ರಾಘವಾಂಕನ ಕಾವ್ಯದ ತುಣುಕುನುಡಿ? ಲಿಂಗಾಂಗ ತತ್ವನಿರ್ದೇಶದ ಷಟ್ಪದಂಗಳು–ಶಾಂತಲಿಂಗಸ್ವಾಮಿ, ವೈರಾಗ್ಯ ಷಟ್ಪದಿ–ಮುರಿಗೆ ಶಾಂತವೀರ ೧೫೩೦, ವೃಷಭಗೀತೆ–ಗುರುಬಸವ–೧೪೩೦, ವೃಷಭೇಂದ್ರ ವಿಜಯದ ನಾಂದ್ಯ? ಷಟ್‌ಸ್ಥಲ ತಿಲಕ, ಶಿವಸಹಸ್ರ ನಾಮಾವಳಿ ಷಟ್ಪದಿ–ಪಂಡಿತಾರಾಧ್ಯ? ಶಿವಲಿಂಗ ನಾಂದ್ಯ–ಇಮ್ಮಡಿ ಮುರಿಗೆ ಸ್ವಾಮಿಗಳು ೧೫೯೦, ಶಿವಲಿಂಗ ಷಟ್ಪದ–ಇಮ್ಮಡಿ ಗುರುಸಿದ್ಧ ಸ್ವಾಮಿ ೧೫೬೦

**ಸಾಂಗತ್ಯ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು :**

ಕೊಡಗದ ಮಾರಯ್ಯನ ಸಾಂಗತ್ಯ? ಗುಂಡಬ್ರಹ್ಮಯ್ಯಗಳ ಸಾಂಗತ್ಯ–ಚೆನ್ನಬಸವದೇವರು, ಜಂಗಮಲಿಂಗ ಸಾಂಗತ್ಯ? ಜಪದ ಲಕ್ಷಣ ಸಾಂಗತ್ಯ, ಪರಮಾನುಭವಬೋಧೆ–ನಿಜಗುಣ ಶಿವಯೋಗಿ ೧೫೦೦, ಬಸವ ಶಿಖಾಮಣಿ ಸಾಂಗತ್ಯ–ಕವಿ ಕಾಡ ೧೭೦೦, ಬೊಪ್ಪನಾಮ ಸಾಂಗತ್ಯ? ಸೊಬಗಿನ ಸೋನೆ–ದೇವರಾಜ ೧೪೦೦, ಹರಳಯ್ಯಗಳ ಸಾಂಗತ್ಯ?

**ಕಂದ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳು :**

ಕರ್ನಾಟಕ ಧಾತು ನಿರ್ಣಯ–ಕೇಶಿರಾಜ ೧೨೬೦, ಕರ್ನಾಟಕ ಧಾತು–ಕೇಶಿರಾಜ ೧೨೬೦, ಧಾತು ಮಾಲಿಕಾ–ಕೇಶಿರಾಜ–೧೨೬೦, ಧಾತು ರೂಪಾವಳಿ ಕಂದ? ಲಿಂಗನಿರ್ಣಯ, ಶ್ರೀರಾಮ

ಸೂರಿ, ವಿಭಕ್ತಿ ಪ್ರತ್ಯಯ–ಕೇಶಿರಾಜ–೧೨೬೦, ಶಂಕರದೇವರ ಕಂದ ೧೬೦೦, ಶಬ್ದಮಣಿದರ್ಪಣದ ಕಂದ–ಕೇಶಿರಾಜ ೧೨೬೦,

**ಸ್ತೋತ್ರಕ್ಕೆ ಸಂಬಂಧಿಸಿದ ಕೃತಿಗಳು :**

ಅನ್ನಪೂರ್ಣಸ್ತೋತ್ರ–ಶಂಕರಾಚಾರ್ಯ, ಅನಾಮಯ ಸ್ತೋತ್ರ–ಗುರುದೇವ–೧೩೫೦, ಅಪರಾಧ ಸ್ತೋತ್ರ? ಸಹಸ್ರನಾಮ? ಚಿಕ್ಕಮಲ್ಲಮ್ಮನ ಸ್ತೋತ್ರ? ಚಿದಂಬರಸ್ತೋತ್ರ? ದೇವಿ ಅಷ್ಟೋತ್ತರ? ನಂದಿಕೇಶ್ವರ ಸ್ತೋತ್ರ? ನೀಲಮ್ಮನ ಸ್ತೋತ್ರ, ನೀಲಾಂಬಿಕಾ ಲಲಿತ ಸ್ತೋತ್ರ, ಪ್ರಭುದೇವರ ಪುರಾಣದ ಸ್ತೋತ್ರ ನಾಂದ್ಯ–ಎಳಂದೂರ ಹರೀಶ್ವರ ೧೬೦೬, ಬಸವಲಿಂಗ ಸ್ತೋತ್ರ ಷಟ್ಪದಂಗಳು? ಬಸವೇಶ್ವರನ ಪಂಚಸ್ತೋತ್ರ–೧೫೫೦, ಭೃಂಗೀಶ್ವರ ಸ್ತೋತ್ರ–ಗುರುದೇವ ೧೫೫೦, ಭೃಂಗೀಶ್ವರ ಸ್ತೋತ್ರ? ಮಲಯರಾಜ ಸ್ತೋತ್ರ–ಗುರುದೇವ ೧೩೫೦, ಮಲ್ಲಿಕಾರ್ಜುನ ಸತೋತ್ರ–ರಾಮಚಂದ್ರಕವಿ ೧೨೦೦, ಮಲುಹಣ ಸ್ತೋತ್ರ–ಗುರುದೇವ ೧೩೫೦, ಮಲ್ಲೇಶ್ವರನ ಸ್ತೋತ್ರ, ಮಹಿಮ್ನಸ್ತೋತ್ರ? ಮಿಶ್ರಸ್ತೋತ್ರ–ಚೆನ್ನಂಜೆದೇವ–೧೬೩೦, ಮುರಿಗೆ ಸ್ವಾಮಿಗಳ ಸ್ತೋತ್ರ–ಮುರಿಗೆಸ್ವಾಮಿ ೧೫೬೦, ಮರಿಗೆಸ್ವಾಮಿಗಳ ಸ್ತೋತ್ರ ಪದ–ಮುರಿಗೆ ಸ್ವಾಮಿ ೧೫೬೦ ರಾಜಶೇಖರ ಪಂಚವಿಂಶತಿ ಲೀಲಾಸ್ತೋತ್ರ? ಲಿಂಗಸ್ತೋತ್ರದ ಪದ? ವೀರಭದ್ರಸಹಸ್ರನಾಮ ಸ್ತೋತ್ರ? ಹಲಾಯುಧ ಸ್ತೋತ್ರ?

ಬೆಳಗಾವಿ ನಾಗನೂರು ರುದ್ರಾಕ್ಷಿಮಠ ಪ್ರಥಮ ಸಂಪುಟವಾಗಿದೆ. ಇದರಲ್ಲಿ ೨೦೦ ಕಟ್ಟುಗಳ ಗ್ರಂಥಗಳ ವಿವರಣೆ ಮಾತ್ರ ದೊರೆಯುತ್ತದೆ. ಇದು ೧೯೭೮ರಲ್ಲಿ ಪ್ರಕಟವಾಗಿದೆ. ಅದರ ನಂತರ ಇನ್ನೂ ಐವತ್ತಕ್ಕೂ ಹೆಚ್ಚು ಹಸ್ತಪ್ರತಿಗಳು ಈ ಕೇಂದ್ರವನ್ನು ಸೇರಿವೆ. ಅವುಗಳ ಸೂಚಿಕಾರ್ಯ ಇನ್ನೂ ನಡೆಯಬೇಕಾಗಿದೆ. ಈ ಸೂಚಿಯಲ್ಲಿ ಸೇರಿಕೊಂಡ ಕನ್ನಡ–ಸಂಸ್ಕೃತದ ಪ್ರಾಚೀನ ಹಸ್ತಪ್ರತಿಗಳನ್ನು ಅವಲೋಕನ ಮಾಡಿದಾಗ ಮತ್ತು ಅಕಾರಾದಿಯಾಗಿ ಜೋಡಣೆ ಮಾಡುತ್ತ ಹೋಗಿರುವ ಗ್ರಂಥಗಳನ್ನು ಗಮನಿಸಿದರೆ ಈ ಹಸ್ತಪ್ರತಿ ಭಂಡಾರದಲ್ಲಿ ಅತಿ ಹೆಚ್ಚಿನ ಗ್ರಂಥಗಳು ವಚನಸಾಹಿತ್ಯಕ್ಕೆ ಸಂಬಂಧಿಸಿದವುಗಳಾಗಿವೆ. ನಂತರದ ಸ್ಥಾನ ಟೀಕೆ ಮತ್ತು ಕಾವ್ಯ–ಗದ್ಯ–ಸ್ತೋತ್ರಗಳು ಹೆಚ್ಚಾಗಿ ದೊರೆಯುತ್ತವೆ. ಈ ಮೇಲಿನ ಗ್ರಂಥಗಳ ಅಕಾರಾದಿಯಲ್ಲಿ ಕೆಲವು ಕಡೆ ಗ್ರಂಥಗಳ ಹೆಸರು ನಮೂದಿಸಿದ್ದರು ಕವಿ–ಕಾಲದ ವಿಚಾರವಾಗಿ ಪ್ರಶ್ನಾರ್ಥಕ ಚಿಹ್ನೆಯನ್ನು ನೀಡಿದ್ದಾರೆ. ಅಂದರೆ ಪ್ರಾಚೀನ ಕವಿಗಳು ತಮ್ಮ ವೈಯಕ್ತಿಕ ವಿವರವನ್ನು ಹೇಳಿಕೊಳ್ಳುವುದಿಲ್ಲ. ಆದರೆ ದ್ವಿತೀಯ ಸಂಪುಟದ ಕಾರ್ಯ ಪ್ರಗತಿಯಲ್ಲಿದೆ. ಇನ್ನು ಅಪರೂಪದ ಮೌಲಿಕ ಗ್ರಂಥಗಳು ಪ್ರಕಟಿತ ಅಪ್ರಕಟಿತವಾಗಿವೆ ಇವುಗಳ ಶೋಧನಾಕಾರ್ಯ ಮುಗಿದ ನಂತರ ಯಾವ ಸಾಹಿತ್ಯದ ಕೃತಿಗಳು ಈ ಭಂಡಾರದಲ್ಲಿ ಸೇರಿವೆ ಎಂಬುದನ್ನು ಕರಾರುವಕ್ಕಾಗಿ ಹೇಳಬಹುದು. ಈ ಒಂದು ಸೂಚಿ ಸಂಪುಟ ಮೂಲಕ ನಿರ್ಣಯಿಸುವುದು ಸಾಧ್ಯವಿಲ್ಲದ ಮಾತು.

ಅದೇ ರೀತಿಯಾಗಿ ಈ ಜಿಲ್ಲೆಯ ಅತೀ ಹೆಚ್ಚು ಹಸ್ತಪ್ರತಿಗಳು ಧಾರವಾಡ ಕನ್ನಡ ಅಧ್ಯಯನಪೀಠ ಸೇರಿವೆ ಎಂಬ ಮಾಹಿತಿಯು ತಿಳಿದು ಬರುತ್ತದೆ. ಅಲ್ಲಿನ ಸೂಚಿಗಳನ್ನು

ಗಮನಿಸಿದಾಗ ಟೀಕೆಗೆ ಸಂಬಂಧಿಸಿದ ಕೃತಿಗಳ ಸಂಖ್ಯೆ ಅಧಿಕವಾಗಿ ನಂತರದಲ್ಲಿ ವಚನ-ಕಂದ-ತ್ರಿಪದಿ-ಸಾಂಗತ್ಯದಂಥ ಅಮೂಲ್ಯವಾದ ಪ್ರಾಚೀನ ಕೃತಿಗಳು ಸಂಗ್ರಹಗೊಂಡಿರುವುದನ್ನು ಕಾಣುತ್ತೇವೆ. ಒಂದು ಅಂದಾಜು ಪ್ರಕಾರ ೪೫೦೦ ಕಟ್ಟುಗಳು ಈ ಜಿಲ್ಲೆಯಿಂದ ತೆಗೆದುಕೊಂಡು ಹೋಗಿದ್ದಾರೆ. ಹೀಗಾಗಿ ಮುಂದೆ ಸೂಚಿಕಾರ್ಯ ಮಾಡಿದರೆ ಜಿಲ್ಲೆಯ ಇನ್ನಷ್ಟು ಗ್ರಂಥಗಳ ಮಾಹಿತಿ ನಮಗೆ ಲಭ್ಯವಾಗುತ್ತದೆ. ಇದೇ ದಿಶೆಯಲ್ಲಿಯೇ ಸಂಗ್ರಹಣ ಕಾರ್ಯ ಮಾಡಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗದಲ್ಲಿಯು ಜಿಲ್ಲೆಗೆ ಸಂಬಂಧಿಸಿದ ಹಸ್ತಪ್ರತಿಗಳ ಕಟ್ಟುಗಳನ್ನು ಸಂಗ್ರಹಿಸಿದ್ದನ್ನು ನೋಡಬಹುದು. ಈಗಾಗಲೇ ೫ ಸೂಚಿ ಸಂಪುಟಗಳನ್ನು ವಿಭಾಗ ಸಿದ್ಧಮಾಡಿದೆ. ಅನೇಕ ಪ್ರಾಚೀನ ಹಸ್ತಪ್ರತಿಗಳು ಅಧಿಕ ಸಂಖ್ಯೆಯಲ್ಲಿರುವುದು ಸಹಜವಾಗಿದೆ. ಇಲ್ಲಿನ ಅಕಾರಾದಿಯನ್ನು ಗಮನಿಸಿದರೆ ಜಿಲ್ಲೆಗೆ ಸಂಬಂಧಪಟ್ಟ ಕೃತಿಗಳಲ್ಲಿ ಲಾವಣಿ, ಚರಿತ್ರೆ, ವಚನದಂಥ ಕೃತಿಗಳನ್ನು ಗರ್ಭೀಕರಿಸಿಕೊಂಡಿರುವುದನ್ನು ಗಮನಿಸಬಹುದು.

ಹೀಗೆ ಸಾಹಿತ್ಯದ ಮೂಲಕವಾಗಿಯೇ ಎಲ್ಲ ಅಂಶಗಳನ್ನು ನೋಡಬಹುದಾಗಿದೆ. ಈ ಸಾಹಿತ್ಯದಿಂದ ಒಟ್ಟಾರೆ ಕವಿಗಳ ಹಾಗೂ ಕೃತಿಗಳ ಬಗೆಗೆ ಹೆಚ್ಚಿನ ಮಾಹಿತಿಗಳನ್ನು ಪಡೆದುಕೊಳ್ಳುವುದರೊಂದಿಗೆ ಕೃತಿಗಳು ವಿವಿಧ ಪ್ರಕಾರಗಳನ್ನು ಒಳಗೊಂಡಂತೆ ರಚನೆಯಾಗಿರುವುದನ್ನು ಈ ಸಾಹಿತ್ಯಿಕ ಅಂಶಗಳ ಮೂಲಕವಾಗಿ ನೋಡಲಾಗಿದೆ.

## ಕೊನೆ ಟಿಪ್ಪಣಿಗಳು


೧. ಪ್ಲೀಟರು ಸಂಗ್ರಹಿಸಿದ ಲಾವಣಿಗಳು-ಕ್ಯಾತನಹಳ್ಳಿ ರಾಮಣ್ಣ ಪು.೫ ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ೧೯೯೧

೨. ಅದೇ ಪುಟ ೧೭

೩. ಅದೇ ಪುಟ ೩೫

೪. ಮಾರ್ಗ ಸಂಪುಟ-೧ : ಎಂ. ಎಂ. ಕಲಬುರ್ಗಿ ಪು. ೪೯೪, ನರೇಶ ಆಂಡ್ ಕಂ. ಬೆಂಗಳೂರು ೧೯೮೮

೫. ಸಮಗ್ರ ದಾಸ ಸಾಹಿತ್ಯ ಸಂ.೨೯ ಭಾಗ-೧ ಸಂ: ಬಸವರಾಜ ಸಬರದ, ಜಯಲಕ್ಷ್ಮಿ ಮಂಗಳಮೂರ್ತಿ ಪು. ೨೫ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ೨೦೦೩

೬. ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ ಸಂ: ಪಿ.ಜಿ.ಕೆಂಪಣ್ಣವರ ಪು.೧೦ ಕನ್ನಡ ಜಾಗೃತಿಮಾಲೆ, ಚಿಂಚಣಿ, ೨೦೦೪

೭. ಬೆಳಗಾವಿ ಬೆಳಕು : ಸಂ: ಎಸ್. ಆರ್. ಗುಂಜಾಳ ಪು. ೪೪೩ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೩

೮. ಗೋಕಾವಿ ಸಿರಿಸಂಪದ–ಸಂ: ಸಿ.ಡಿ.ಅಕ್ಕಿ ಪು. ೧೮೧ ಕ್ರಿಯಾಶೀಲ ಸಾಹಿತ್ಯ ವೇದಿಕೆ, ಗೋಕಾಕ, ೨೦೦೬

೯. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ–೪ ಸಂ: ವೀರೇಶ ಬಡಿಗೇರ ಮತ್ತು ಎಸ್. ಆರ್. ಚೆನ್ನವೀರಪ್ಪ ಪು. ೪೩೨ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೦. ಈ ಲಾವಣಿಕಾರರ ಹೆಸರು ಮತ್ತು ಕಾಲವನ್ನು ಬಿ.ಬಿ. ಹೆಂಡಿ, ಎಂ.ಜಿ. ಬಿರಾದಾರ, ಎಂ. ಎಸ್. ಲಠ್ಠೆ ಅವರು ಸಂಪಾದಿಸಿದ 'ಹರದೇಸಿ–ನಾಗೇಶಿ' (ಲಾವಣಿ) ಗ್ರಂಥದಿಂದ ಆಯ್ದುಕೊಳ್ಳಲಾಗಿದೆ. ಪು. ೨೩, ಗುಲಬರ್ಗಾ, ೧೯೮೮

೧೧. ಭಜನೆಯ ಪದಗಳು (ಅಲಭೈರಿಕವಿ ವಿರಚಿತ) ಸಂ: ಆರ್. ಬಿ. ಚಿಲುಮಿ ಪು. ೧೦ ಪದ್ಮರಾಜ ಕರ್ಣವಾಡಿ ಹಾರೂಗೇರಿ ೨೦೦೭

೧೨. ಅದೇ ಪು. ೬೬

೧೩. ಸಾತು ಕ್ಯಾಮಣ್ಣನ ಲಾವಣಿಗಳು– ಸಂ: ನಿಂಗಣ್ಣ ಸಣ್ಣಕ್ಕಿ ಪು. ೬೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೧೪. ಅದೇ– ಪು. ೮೪

೧೫. ಅದೇ ಪು ೩೭

೧೬. ಅದೇ ಪ್ರಸ್ತಾವನೆ ಪು. ೪

೧೭. ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ಸಂಪುಟ–೪ ಸಂ: ವೀರೇಶ ಬಡಿಗೇರ ಮತ್ತು ಎಸ್. ಆರ್. ಚೆನ್ನವೀರಪ್ಪ ಪು. ೫೫ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩

೧೮. ಬೆಳಗಾವಿ ಸಿರಿ ಸಂ: ಎಸ್. ಎಂ. ಹರದಗಟ್ಟಿ ಪು. ೧೭೯, ಕನ್ನಡ ಸಾಹಿತ್ಯ ಪರಿಷತ್ತು ಬೆಳಗಾವಿ ೨೦೦೩

೧೯. ಅದೇ ಪು. ೧೭೯

೨೦. ಯಂತ್ರಮಂತ್ರ– ಸಂ: ಸಿ.ಬಿ. ಹೊನ್ನಸಿದ್ಧಾರ್ಥ ಪು. ೪೬ ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು, ೨೦೧೪

೨೧. ಬೆಳಗಾವಿ ಸಿರಿ ಸಂ: ಎಸ್. ಎಂ. ಹರದಗಟ್ಟಿ ಪು. ೧೭೮

೨೨. ಅದೇ ಪು. ೧೭೯

೨೩. ಕಂಠಪತ್ರ–೩ : ಎಫ್.ಟಿ. ಹಳ್ಳಿಕೇರಿ ಪು. ೨೭೦ ವಿಕಾಸ ಪ್ರಕಾಶನ, ಹೊಸಪೇಟೆ, ೨೦೦೪

೨೪ ಅದೇ ಪು. ೨೭೭

೨೫. ಹಸ್ತಪ್ರತಿ ಅಧ್ಯಯನ : ಸಮಕಾಲೀನ ಸವಾಲುಗಳು ಸಂ: ಸಿ. ಬಿ. ಹೊನ್ನಸಿದ್ಧಾರ್ಥ ಪು. ೪೯ ಕನ್ನಡ ಅಧ್ಯಯನ ಸಂಸ್ಥೆ, ಬೆಂಗಳೂರು, ೨೦೧೩

೨೬. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ ಸಂ: ಪಂಡಿತ ರಾಠೋಡ ಪು. ೧೩೩, ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ, ಬೆಳಗಾವಿ ೧೯೯೮

೨೭. ಅದೇ ಪು. ೧೩೪

೨೮. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ ಪು. ೧೧೩

೨೯. ಅದೇ ಪು. ೮೫

೩೦. ಅದೇ ಪು. ೩೨೫

೩೧. ಆರ್. ಸಿ. ಹಿರೇಮಠ – ಉರಿ ಬರಲಿ ಸಿರಿ ಬರಲಿ ಆತ್ಮಕಥೆ ಪು. ೨೫೯, ವೀರಶೈವ ಅಧ್ಯಯನ ಅಕಾಡೆಮಿ, ಬೆಳಗಾವಿ, ೧೯೯೬

೩೨. ಹಸ್ತಪ್ರತಿಯ ಪೀಠಿಕಾ ಸಂಧಿ ಪದ್ಯ ೫

೩೩. ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು.

೩೪. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ ಪು. ೧೯೫

೩೫. ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು.

೩೬. ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು. (ನಾಗನೂರು ಮಠದ ಹಸ್ತಪ್ರತಿ ಭಂಡಾರದಲ್ಲಿ ಸೂಚಿಯಾಗದ ಕಟ್ಟು)

೩೭. ಅದೇ–

೩೮. ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು.

೩೯. ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು.

೪೦. ಅಪ್ರಕಟಿತ ಹಸ್ತಪ್ರತಿಯಿಂದ ಆಯ್ದುಕೊಂಡಿದ್ದು.

೪೧. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ ಸಂ–೬ ಪು. ೨೩೫ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೫

## ಅಧ್ಯಾಯ – ಆರು

# ಬೆಳಗಾವಿ ಪರಿಸರದ ಹಸ್ತಪ್ರತಿಗಳು : ಧಾರ್ಮಿಕ ಆಯಾಮ

ಬೆಳಗಾವಿ ಪರಿಸರದ ಹಸ್ತಪ್ರತಿಗಳನ್ನು ವಿವಿಧ ಆಯಾಮಗಳಿಂದ ವಿಶ್ಲೇಷಿಸುವ ಹಿನ್ನೆಲೆಯಲ್ಲಿ ಧಾರ್ಮಿಕ ನೆಲೆಯಲ್ಲಿ ಪರಿಶೀಲಿಸಿದಾಗ ಅನೇಕ ಮಹತ್ತರವಾದ ವಿಷಯಗಳು ನನ್ನ ಗಮನಕ್ಕೆ ಬಂದವು. ಹೀಗಾಗಿ ನನ್ನ ಮಹಾಪ್ರಬಂಧದ ಮೂಲಕ ಕೆಲವು ಹೊಸ ವಿಚಾರಗಳು ಮೊದಲ ಬಾರಿಗೆ ಇಲ್ಲಿ ಚರ್ಚೆಗೆ ಬರುತ್ತವೆ ಎಂದು ನಾನು ಭಾವಿಸಿದ್ದೇನೆ. ಬೆಳಗಾವಿ ಪರಿಸರದಲ್ಲಿ ಹಸ್ತಪ್ರತಿ ವಿಚಾರದಲ್ಲಿ ಲಿಂಗಾಯತ ಧರ್ಮ ಸಿದ್ಧಾಂತದ ಬಗೆಗಿನ ಕೃತಿಗಳೆ ಹೆಚ್ಚು ನಮಗೆ ಲಭ್ಯವಾಗುತ್ತವೆ. ಈ ಜಿಲ್ಲೆಯ ಬಹುತೇಕ ಜೈನ ಹಸ್ತಪ್ರತಿಗಳೆಲ್ಲವು ಕೊಲ್ಲಾಪುರ ಲಕ್ಷ್ಮೀಸೇನ ಭಟ್ಟಾರಕರ ಮಠ ಸೇರಿರುವ ಕಾರಣ, ನಮ್ಮ ವಿವೇಚನೆಗೆ ಲಿಂಗಾಯತ ಧರ್ಮದ ಹಸ್ತಪ್ರತಿಗಳೇ ಹೆಚ್ಚಿನ ಪ್ರಮಾಣದಲ್ಲಿವೆ.

ಲಿಂಗಾಯತ ಮಠಗಳಲ್ಲಿ, ಜೈನ ಬಸದಿಗಳಲ್ಲಿ ಹಸ್ತಪ್ರತಿ ರಚನಾ ಕಾರ್ಯನಿರಂತರವಾಗಿ ನಡೆಯುತ್ತಿತ್ತು. ಅದಕ್ಕಾಗಿಯೇ ಲಿಪಿಕಾರರನ್ನು ವೇತನ ಕೊಟ್ಟು ನಿಯುಕ್ತಿ ಮಾಡುತ್ತಿದ್ದರು. ಕೆಲವು ಹವ್ಯಾಸಿ ಲಿಪಿಕಾರರು ತಮಗೆ ಬೇಕಾದ ಗ್ರಂಥವನ್ನು ಪ್ರತಿ ಮಾಡಿಕೊಳ್ಳುತ್ತಿದ್ದರು. ಆದರೆ ಬೆಳಗಾವಿ ಪರಿಸರದ ವಿಶೇಷವೆಂದರೆ ಅನೇಕ ಮಠಾಧೀಶರೇ ಹಸ್ತಪ್ರತಿ ಲಿಪಿಕಾರರಾಗಿ ಕಾರ್ಯನಿರ್ವಹಿಸಿರುವುದು ಅವರ ಧಾರ್ಮಿಕ ಶ್ರದ್ಧೆಗೆ ಮತ್ತು ಸಾಹಿತ್ಯಪ್ರೀತಿಗೆ ಹಿಡಿದ ನಿದರ್ಶನವೆನ್ನಬಹುದು. ಎಫ್.ಟಿ. ಹಳ್ಳಿಕೇರಿ ಅವರು ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಲಿಪಿಕಾರರ ಚರಿತ್ರೆಯನ್ನು ಶೋಧಿಸಿ ೭೮ ಜನ ಹೊಸ ಲಿಪಿಕಾರರನ್ನು ಬೆಳಕಿಗೆ ತಂದಿದ್ದಾರೆ. ಅವರಲ್ಲಿ ೧೬ ಜನ ಮಠಾಧೀಶರಿರುವುದು ಗಮನಿಸಬೇಕಾದ ಸಂಗತಿಯಾಗಿದೆ.

೧. **ಅಗಡಿಮಠದ ಚೆನ್ನಬಸಯ್ಯ** : ಈತ ಬೆಳಗಾವಿ ಜಿಲ್ಲೆ ಗೋಕಾಕ ತಾಲೂಕಿನ ಯಾದವಾಡ ಗ್ರಾಮದ ಅಗಡಿಮಠದ ಅಧಿಪತಿಯಾಗಿದ್ದ ಗುರುಸಿದ್ಧಸ್ವಾಮಿಯವರ ಮಗ. ನಿರಂಜನ ಜಂಗಮಾವತಾರ ಪರಶಿವನ ಅವತಾರ ಪರಂಜ್ಯೋತಿ ಸ್ವರೂಪ, ಶಕ್ತಿಜ್ಞಾನ, ವೈರಾಗ್ಯ, ಶಿವಪೂಜಾ ದುರಂಧರನೆಂದು

ಹೆಸರುವಾಸಿಯಾದ ಗುರುಸಿದ್ಧಸ್ವಾಮಿಯವರು ಧರ್ಮ, ಸಾಹಿತ್ಯದಲ್ಲಿ ಆಸಕ್ತಿಯುಳ್ಳವರಾಗಿದ್ದರು. ಪಡದಯ್ಯ ಎಂಬ ಲಿಪಿಕಾರನಿಂದ ೧೮೦೧, ಜೂನ್ ೧೫ ರಂದು ಪ್ರೌಢರಾಯನ ಕಾವ್ಯವನ್ನು ಬರೆಸಿರುತ್ತಾರೆ. ಅವರ ಮುಂದುವರಿಕೆಯಾಗಿ ಚೆನ್ನಬಸಯ್ಯನವರು ಹಲವು ಕೃತಿಗಳನ್ನು ಲಿಪಿಗೈದವರು.

೨. **ಈರಸಂಗಯ್ಯ :** ಬೀಳಗಿ ಹಿರೇಮಠದ ಪಟ್ಟಾಧಿಕಾರಿಯಾಗಿದ್ದ ಈರಸಂಗಯ್ಯನು ಶಾಲಿವಾಹನ ಶಕಾನ್ವುತವರ್ಗ ೧೫೭೯ ಪರಿವರ್ತಮಾನ ಜಯಾಭ್ಯುದಯ ಗುರುವಾರ (ಕ್ರಿ.ಶ. ೧೬೫೭) ದಂದು ಷಡಕ್ಷರನ ರಾಜಶೇಖರವಿಳಾಸ ಕೃತಿಯನ್ನು ಬರೆದಿರುತ್ತಾನೆ. ಲಿಪಿಕಾರ ಹೇಳಿದಂತೆ ಶಕೆ ೧೫೭೯ ಜಯಾಭ್ಯುದಯ ಸಂವತ್ಸರವಲ್ಲ. ಅದು ಹೇವಳಂಬಿ ಸಂವತ್ಸರ. ಷಡಕ್ಷರದೇವನ ರಾಜಶೇಖರ ವಿಳಾಸವನ್ನು ರಚಿಸಿದ ಕಾಲ ಕ್ರಿ.ಶ. ೧೬೫೪. ಹೀಗಾಗಿ ಈರಸಂಗಯ್ಯನು ಕವಿಯ ಸಮಕಾಲೀನನಾಗಿದ್ದನೆಂಬುದು ಇದರಿಂದ ತಿಳಿದುಬರುತ್ತದೆ. ಮೇಲಾಗಿ ರಾಜಶೇಖರ ವಿಳಾಸ ರಚನೆಗೊಂಡ ಮೂರೇ ವರ್ಷಗಳಲ್ಲಿ ಇದನ್ನು ಪ್ರತಿಮಾಡಿಕೊಂಡಿದ್ದು ವಿಶೇಷವೆನಿಸುತ್ತದೆ.

೩. **ಗುರುಸಿದ್ಧದೇವರು :** ಬೆಳಗಾವಿ ಜಿಲ್ಲೆಯ ಖಾನಾಪೂರ ತಾಲೂಕಿನ ಇಟ್ಟಗಿ ಗ್ರಾಮದ ಗುರುಸಿದ್ಧದೇವರು ಎರಡು ಕೃತಿಗಳನ್ನು ಲಿಪಿಗೊಳಿಸಿದ್ದಾನೆ. ಜನೇವರಿ ೧೬, ೧೯೨೯ (ಶಾ.ಶ. ೧೮೫೧ ಶುಕ್ಲ ನಾಮ ಸಂವತ್ಸರದ ಪುಷ್ಯ ಶುದ್ಧ ೫ ಬುಧವಾರ ಮೂರು ತಾಸು) ರಂದು ಹರಿಹರನ ಗಿರಿಜಾಕಲ್ಯಾಣವನ್ನು ಶುಕ್ಲನಾಮ ಸಂವತ್ಸರದ ಪುಷ್ಯ ಬಹುಳ ಏಕಾದಶಿ ಮಂಗಳವಾರದಂದು ಷಡಕ್ಷರದೇವನ ಶಬರಶಂಕರ ವಿಳಾಸವನ್ನು ಮರುಪ್ರತಿ ಮಾಡಿರುವನು.

೪. **ಚನ್ನಬಸವೇಶ್ವರದೇವರು :** ಬರಡೂರು ಜಿಗಜಿಣಗಿಮಠದ ವಿಸರಪ್ಪಯ್ಯನವರ ಮರಿಮಗ ಮಗನ ಮೊಂಮಗನಾದ ಚನ್ನಬಸವೇಶ್ವರದೇವರು ಎರಡು ಕೃತಿಗಳ ಲಿಪಿಕಾರ್ಯವನ್ನು ಪೂರೈಸಿದ್ದಾನೆ. ಶಕೆ ೧೭೧೦ ಕೀಲಕನಾಮ ಸಂವತ್ಸರ ಜೇಷ್ಠ ಸಂಚ್ರ ೨ ರ ಮುಂಜಾನೆ ಶುಭದಿನ ಶುಬತಿಥಿ ಶುಭನಕ್ಷತ್ರ ಶುಭಯೋಗ ಕರಣದಲ್ಲಿ ರೇವಣಸಿದ್ಧೇಶ್ವರ ಪುರಾಣವನ್ನೂ ಶಕೆ ೧೭೧೦ ಕೀಲಕನಾಮ ಸಂವತ್ಸರ ವೈಶಾಖ ಶುದ್ಧ ೧೧ ಯೆಕಾದಶಿ ಗುರುವಾರ ಉತ್ರಿನಕ್ಷತ್ರ ಚಂದ್ರಶೋಭನ (೧೬.೫.೧೭೮೮)ದಲ್ಲಿ ಸಿದ್ಧರಾಮಯ್ಯನ ಕಾವ್ಯವನ್ನೂ ಬರೆದು ಮುಗಿಸಿದ್ದಾನೆ. ಈ ಕೃತಿಗಳನ್ನು ಕಸ್ಬೆ ಬರಡೂರು ವೊಗ್ಯೆರೆ ಹಾಡಲಸಂಗ ಪರಗಣೆ ಹೊರ್ತಿ ಸಂಗಪ್ಪನವರ ಪುತ್ರನಾದಂತ ಸಿದ್ಧಪ್ಪನು ಪ್ರೀತಿಯಲ್ಲಿ ವೋದಿ ಪರಿಣಾಮಿಸಿಕೊಳಬೇಕಂತ ಬರೆಸಿಕೊಂಡನು.

೫. **ಚನ್ನಮಲ್ಲಿಕಾರ್ಜುನ ದೇವರು :**ಈಶ್ವರನಾಮ ಸಂವತ್ಸರದ ವೈಶಾಖ ಮಾಸ ಶುದ್ಧ ಪಂಚಮಿಯಲಿ ಬುಧವಾರದಲು ಅಂದರೆ ೧೮೭೭, ಮೇ ೨ ರಂದು ಚಾಮರಸನ ಪ್ರಭುಲಿಂಗ ಲೀಲೆಯನ್ನು ಲಿಪಿಗೊಳಿಸಿರುವನು. ಮೂಲತಃ ಈತ ಬಟ್ಟಕೆರೆಯ ಮಠದದೇವರು.

೬. **ತೋಂಟದ ಮರಿದೇವರು :** ಬಹುಧ್ಯಾನ ಸಂವತ್ಸರದ ಅಶ್ವಿಜ ಬಹುಳ ಚತುರ್ದಶಿ ಚಿತ್ರ್ವರದ ಅರುಣೋದಯ (೨೨.೧೦.೧೯೩೮)ದಲ್ಲಿ ಮುಗಿಯಿತು. ಕಾಶಿ ಸಂಗಪ್ಪ ಸ್ವಾಮಿಗಳ

ಕರಕಮಲೋದ್ಭವರಾದಂಥ ಕಾಶಿ ಶಿವಲಿಂಗಸ್ವಾಮಿಗಳ ಸೇವಾನುಸೇವಕರಾದ ಗೌಡಿಮಗ ಗೌಡಿಗನಾದಂತೆ ತೊತ್ತಿನಮಗ ತೊತ್ತಾದಂತೆ ತೋಂಟದ ಮರಿದೇವರು ತನ್ನ ಸ್ವಹಸ್ತದಿಂದ ಬರೆದ ಷಟ್ಕಾವ್ಯ ಪುಸ್ತಕವು.

೭. **ನೂರೊಂದು ದೇವರು** : ದೂರ್ತಿನಾಮ ಸಂವತ್ಸರದ ಬಾದ್ರಪದ ಕೃಷ್ಣಪಕ್ಷ ಆದಿತ್ಯವಾರ ಹಸ್ತಾನಕ್ಷತ್ರದಲ್ಲಿ ನೂರೊಂದುದೇವರು ಸಿದ್ಧನಂಜೇಶನ ರಾಘವಾಂಕ ಚರಿತೆಯನ್ನು ಬರೆದು ಮುಗಿಸಿದ್ದಾನೆ.

೮. **ಪಟದಯ್ಯ** : ಬೆಳಗಾವಿ ಜಿಲ್ಲೆಯ ಮುರುಗೋಡು ಗ್ರಾಮದ ನಿವಾಸಿ ಪಟದಯ್ಯನು ವಿಭೂತಿಮಠದ ಪರಂಪರೆಗೆ ಸೇರಿದವನು. ಈತ ಶಕ ೧೬೯೦ ಸರ್ವಧಾರಿನಾಮ ಸಂವತ್ಸರ ಜೇಷ್ಠಮಾಸ ಬಹುಳ ೧೪ ಸೋಮವಾರ ಮೃಗಶಿರ ನಕ್ಷತ್ರ ಆನಂದಯೋಗ ಅಮೃತವ್ಯಾಳೈದಲ್ಲಿ ಶೀಲವಂತಯ್ಯನ ತ್ರಿವಿಧ ಎಂಬ ಕಿರುಕೃತಿಯನ್ನು ಪ್ರತಿಮಾಡಿಕೊಂಡಿದ್ದಾನೆ.

೯. **ಪಡದಯ್ಯ** : ವಿಜಾಪುರ ಜಿಲ್ಲೆಯ ಮುಧೋಳ ತಾಲೂಕಿನ ಮಾಚಕನೂರು ಪಡದಯ್ಯನ ಊರು. ತಂದೆ ಕರಬಸಪ್ಪನು ಮಾಚಕನೂರು ಮಠದ ಮಠಾಧಿಪತಿ. ದುರ್ಮತಿನಾಮ ಸಂವತ್ಸರದ ಜೇಷ್ಠ ಬಹುಳ ಏಕಾದಶಿ ಸೋಮವಾರ (೧೫.೬.೧೮೦೧)ದಂದು ಪ್ರೌಢರಾಯನ ಕಾವ್ಯವನ್ನು ಲಿಪ್ಯಂತರಗೊಳಿಸಿದ್ದಾನೆ. ಈ ಕೃತಿಯನ್ನು ಬರೆಸಿದವರಾರೆಂದರೆ ಬೆಳಗಾವಿ ಜಿಲ್ಲೆಯ ಗೋಕಾಕ ತಾಲೂಕಿನ ಯಾದವಾಡ ಅಗಡಿ ನಿರಂಜನ ಜಂಗಮಾವತಾರ ಪರಶಿವನ ಅವತಾರ ಪರಂಜ್ಯೋತಿ ಸ್ವರೂಪರಾದ ಶಕ್ತಜ್ಞಾನ ವೈರಾಗ್ಯ ಶಿವಪೂಜಾದುರಂಧರರಾದ ಗುರುಸಿದ್ಧಸ್ವಾಮಿಗಳು.

೧೦. **ಪುಟ್ಟ ಬಸವಲಿಂಗದೇವರು** : ನೀಲಕಂಠಾರಾಧ್ಯ ವಿರಚಿತ ಆರಾಧ್ಯ ಚರಿತೆ ಎಂಬ ವಾರ್ಧಕ ಷಟ್ಪದಿಯ ಗ್ರಂಥವನ್ನು ಅಂಗೀರಸ ಸಂವತ್ಸರ (ಶಕೆ. ೧೭೩೪)ದ ಮಾರ್ಗಶೀರ ಶುಕ್ಲಪಕ್ಷದ ೧೧ ಏಕಾದಶಿ ಸೋಮವಾರ (೧೪.೧೨.೧೮೧೨) ದಲು ಭಮಕಾಪುರದ ವಿರಕ್ತಮಠದಲಿ ಪುಟ್ಟಬಸವಲಿಂಗದೇವರು ತಮಗಾಗಿ ಬರೆದುಕೊಂಡರು. ಗ್ರಂಥಾಂತ್ಯದಲ್ಲಿ 'ತಪ್ಪಂ ಬರೆದಾತ ಕಡುಜಡನಪ್ಪಾತನೆಂದು ಬೈಯಲ್ಬೇಡಿಂ' ಎಂದು ವಿನಂತಿ ಮಾಡಿಕೊಂಡಿದ್ದಾನೆ.

೧೧. **ಬಸವಲಿಂಗದೇವರು** : ಶಾಲಿವಾಹನ ಶಕೆ ೧೫೭೮ ನೆಯ ಮನ್ಮಥ ಸಂವತ್ಸರದ ವೈಶಾಖ ಬಹುಳ ದಶಮಿಯ ಆದಿತ್ಯವಾರ ರೇವತಿ ನಕ್ಷತ್ರ (೨೦.೫.೧೬೫೫)ದಲ್ಲಿ ರಾಜಶ್ರೀ ಹಂಸಭಾವಿಯ ಸ್ಥಲದಲ್ಲಿ ಆಚಾರ್ಯಗುರು ಬಸವರಾಜದೇವರಿಗೆ ಬರೆದ ಬಸವಲಿಂಗದೇವರು ಪ್ರಭುದೇವರ ಟೀಕಿನ ವಚನಗಳ ಕಟ್ಟೊಂದನ್ನು ಬರೆದುಕೊಟ್ಟಿದ್ದಾರೆ. ಹಂಸಭಾವಿ ಗ್ರಾಮವು ಹಾವೇರಿ ಜಿಲ್ಲೆಯ ಹಿರೇಕೆರೂರ ತಾಲೂಕಿನಲ್ಲಿದೆ. ಲಿಪಿಕಾರರು ಹೇಳಿದಂತೆ ಶಾ.ಶ. ೧೫೭೮ನೇ ವರ್ಷ ಮನ್ಮಥ ಸಂವತ್ಸರ ಆಗುವುದಿಲ್ಲ. ಬದಲಾಗಿ ಶಕೆ ೧೫೭೭ ಒಂದು ವರ್ಷ ಮೊದಲೇ ಬರುತ್ತದೆ.

**೧೨. ಮಲ್ಲಪ್ಪದೇವರು:** ಚಿಗಮಾರ್ಪನಹಳ್ಳಿ ಮಠಕ್ಕೆ ಕಾರಣಕರ್ತನಾಗಿದ್ದ ಮಲ್ಲಪ್ಪದೇವರು ವಿಕೃತನಾಮ ಸಂವತ್ಸರ (ಶಾ.ಶ.೧೮೭೨)ದ ಭಾದ್ರಪದ ಶುದ್ಧ ೧೧ ಏಕಾದಶಿ ಸುಕ್ರವಾರ ದಿವಸ (೨೨.೯.೧೯೫೦) ಕ್ಕೆ ಭೀಮಕವಿಯ ಬಸವಪುರಾಣವನ್ನು ಬರೆದು ಮತ್ತೋಡುವಿನ ಚಿತ್ರಮಠದ ಚನ್ನಬಸವಪ್ಪ ಸ್ವಾಮಿಯವರಿಗೆ ಸಮರ್ಪಿಸಿದ್ದಾನೆ. ಕೊನೆಯಲ್ಲಿ ಉಲ್ಲೇಖಗೊಂಡ ಸಂಪಾದನಾ ಗುರುಪಾದಯ್ಯನ ಪಾದಾರವಿಂದವೇ ಗತಿ ಎಂಬ ಹೇಳಿಕೆಯು ಮಲ್ಲಪ್ಪದೇವರು ಸಂಪಾದನಾ ಸಮಯದ ಗುರುಪಾದಯ್ಯನವರ ಬಗೆಗೆ ಗೌರವವನ್ನು ಹೊಂದಿದ್ದರೆಂಬುದು ಗೊತ್ತಾಗುತ್ತದೆ.

**೧೩. ರಚೋಟಿದೇವರು :** ಸಂಪಗಾವಿ ಕಸಬೆದೊಳಗಿನ ನಾಗನೂರ ಉದಾಸ್ತಿ ಹಿರೇಮಠದ ಗುರುಬಸಪ್ಪದೇವರ ಪುತ್ರನಾದ ಮುದಿಬಸವದೇರಾತ್ಮಜ ಗುರುಬಸವೇಶ್ವರನ ತನುಜ ಗುರುನಾಥನ ಅಣುಗನಾದ ರಾಚೋಟಿದೇವರು ಒಬ್ಬ ಹವ್ಯಾಸಿ ಲಿಪಿಕಾರ. ಈತನ ವಂಶಾವಳಿ ಹೀಗಿದೆ. ಹಿರೇಮಠದ ಗುರುಬಸಪ್ಪದೇವರು>ಮುದಿಬಸಪ್ಪದೇವರು> ಗುರುಬಸವೇಶ್ವರ> ಗುರುನಾಥ> ರಚೋಟಿದೇವರು.

ಈತ ಪ್ರೀತಿಗೋಸ್ಕರವಾಗಿ ಅನುಭವ ಶಿಖಾಮಣಿ ಕೃತಿಯ ಬರವಣಿಗೆಯನ್ನು ಶಾಲಿವಾಹನ ಶಕೆ ೧೭೩೮ ವರ್ಷ ಧಾತುನಾಮ ಸಂವತ್ಸರದ ಶ್ರಾವಣ ಬಹುಳ ಚತುರ್ಥಿ ಸೋಮವಾರ ಪೈಲೆ ಪ್ರಹರದಿ ಪ್ರಹರ ದೀಡ ತಾಸಿನಲ್ಲಿ ಉತ್ತರಾಷಾಢ ನಕ್ಷತ್ರ (೧೨.೮.೧೮೧೬)ದಲ್ಲಿ ಮುಕ್ತಾಯಗೊಳಿಸಿದ್ದಾನೆ. ಸಂಬರಗಿ ಕಸಬೆಯೊಳಗಿನ ಮದಗಿಮಠದಲ್ಲಿರುವ ಜಂಗಮಪ್ರೇಮಿಗಳಾದ ಶಿವಪ್ಪ ಚೌಲಗಿ ಸುಪುತ್ರ ಚೆನ್ನಪ್ಪನ ಮನೆಯಲ್ಲಿದ್ದುಕೊಂಡು ಬರೆದಿರುವನು. ಇಲ್ಲಿ ಮರಾಠಿ ಅಕ್ಷರಗಳೂ ಸೇರಿಕೊಂಡಿರುವುದು ವಿಶೇಷ.

**೧೪. ವೀರಸಂಗಪ್ಪದೇವರು :** ಹಿರೇಕುರಿಬೆಟ್ಟದ ಮಠದ ವೀರಸಂಗಪ್ಪದೇವರು ಯೀಶ್ವರನಾಮ ಸಂವತ್ಸರ (ಶಕೆ ೧೮೫೯) ಉತ್ರಿ ನಕ್ಷತ್ರ ಆಯಿತವಾರ ಪೈಲೆ ತಾಸಿನಲ್ಲಿ ಬಸವ ಶಿಖಾಮಣಿ ಕೃತಿಯ ಬರವಣಿಗೆ ಕಾರ್ಯವನ್ನು ಸಮಾಪ್ತಗೊಳಿಸಿದ್ದಾನೆ. ತಿಗಡಿ ಗೊರವರ ನಿಂಗಪ್ಪ, ನವಲಿ ಸಿರಿಮಲ್ಲಪ್ಪನು ತಮಗೆ ಓದಿಕೊಳ್ಳಲಿಕ್ಕೆಂದು ವೀರಸಂಗಪ್ಪ ದೇವರಿಂದ ಬರಸಿಕೊಂಡಿರುವರು.

**೧೫. ಹಿರೇಮಠದ ರುದ್ರಯ್ಯ :** ಕೃಷ್ಣಾತೀರದ ಚಕ್ರಾವತಿ ಹಿರೇಮಠದ ರುದ್ರಯ್ಯನು ಶಕೆ ೧೭೮೩ ದುರ್ಮತಿನಾಮ ಸಂವತ್ಸರ ಮಾಘ ಮೂಲಾನಕ್ಷತ್ರ ಆದಿತ್ಯವಾರ ಸಾಯಂಕಾಲ (೩.೩.೧೮೬೧)ದಲ್ಲಿ ಶಿವರಾತ್ರಿ ಕಥೆ ಎಂಬ ಕೃತಿಯನ್ನು ಪ್ರತಿಮಾಡಿರುತ್ತಾನೆ.

**೧೬. ಹುಲಿಸಾಂಬಯ್ಯನಮಠದ ಪಟ್ಟದೇವ :** ಸ್ವಸ್ತಿಶ್ರೀ ನೃಪಶಾಲಿವಾಹನ ಶಕೆ ೧೭೬೯ ಪ್ಲವಂಗನಾಮ ಸಂವತ್ಸರ ಮಾಘಮಾಸ ಶುದ್ಧ ೭ ಸಪ್ತಮಿ ಗುರುವಾರ ದಿವಸ ಆರಿದ್ರಾ ನಕ್ಷತ್ರ ೬ ಗಳಿಗಿ ಫಳ ೩೨ ದಿನದಂದು ಷಡಕ್ಷರದೇವನ ರಾಜಶೇಖರನ ವಿಳಾಸವನ್ನು ಹುಲಿಸಾಂಬಯ್ಯನಮಠದ ಪಟ್ಟದೇವಯ್ಯನು ಬರೆದುಕೊಂಡಿರುವನು.

"ಇಲ್ಲಿನ ಹಸ್ತಪ್ರತಿಗಳನ್ನು ಲಿಪಿ ಮಾಡಿದವರು ಲಿಂಗಾಯತರು. ಅದರಲ್ಲಿಯೂ ಮಠಾಧಿಪತಿಗಳು, ಮಠದ ವಾರಸುದಾರರು, ವಿಶೇಷವಾಗಿ ಮಠದ ದೇವರು ಎಂದು ಕರೆಯಿಸಿಕೊಳ್ಳುವ ಸ್ವಾಮಿಗಳು ಅಧಿಕ ಪ್ರಮಾಣದಲ್ಲಿ ಕೃತಿಗಳನ್ನು ಪ್ರತಿಮಾಡಿ ಕೊಂಡಿದ್ದಾರೆ, ಮಾಡಿಕೊಟ್ಟಿದ್ದಾರೆ. ಉದಾಹರಣೆಗಾಗಿ ಪಂಚಾಕ್ಷರಿದೇವರು, ಚನ್ನಬಸವೇಶ್ವರದೇವರು, ಸಂಗಯ್ಯ ದೇವರು, ವೀರಸಂಗಪ್ಪದೇವರು, ತೋಂಟದ ಮರಿದೇವರು, ಹರೀಶ್ವರದೇವರು ಹೀಗೆ ಹದಿನಾಲ್ಕು ವಿವಿಧ ಮಠಾಧಿಪತಿಗಳು ಲಿಪಿಕಾರರಾಗಿ ಕಾರ್ಯನಿರ್ವಹಿಸಿದ್ದಾರೆ. ಇದನ್ನು ಗಮನಿಸಿದರೆ ಇವರು ಶೈಕ್ಷಣಿಕವಾಗಿ ಮುಂದುವರಿದವರಾಗಿದ್ದರೆಂಬುದು ವಿದಿತವಾಗುತ್ತದೆ. ಈ ಕಾರಣದಿಂದಲೇ ನಾಡಿನ ಆಸಕ್ತರು ಇವರಿಂದ ತಮಗೆ ಬೇಕಾದ ಕೃತಿಗಳನ್ನು ಪ್ರತಿಮಾಡಿಸಿಕೊಳ್ಳುತ್ತಿದ್ದರು."[೧]

ಧಾರ್ಮಿಕ ಹಸ್ತಪ್ರತಿಗಳು ಬಹುಸಂಖ್ಯೆಯಲ್ಲಿ ನಮಗೆ ದೊರೆಯುತ್ತವೆ. ರಾಜಾಶ್ರಯದ ಸಾಹಿತ್ಯದ ಹಸ್ತಪ್ರತಿಗಳಿಗಿಂತಲೂ ಧಾರ್ಮಿಕ ಸಾಹಿತ್ಯದ ಹಸ್ತಪ್ರತಿಗಳು ಸಾವಿರಾರು ಸಂಖ್ಯೆಯಲ್ಲಿ ರಚನೆಗೊಂಡಿವೆ. ಇದಕ್ಕೆ ಮುಖ್ಯ ಕಾರಣ ಜನಸಾಮಾನ್ಯರ ಧಾರ್ಮಿಕ ಶ್ರದ್ಧೆ ಮತ್ತು ಮಠಾಧೀಶರಾದವರು ಧಾರ್ಮಿಕ ಸಾಹಿತ್ಯವನ್ನು ಕಡ್ಡಾಯವಾಗಿ ಅಧ್ಯಯನ ಮಾಡಬೇಕೆಂಬ ನಿಯಮ. ಮಠಾಧೀಶರಿಗೆ ಅನುಗ್ರಹ ನೀಡುವ ಮತ್ತು ಶೂನ್ಯಪೀಠದ ಅಧಿಕಾರ ನೀಡುವ ಸಂದರ್ಭದಲ್ಲಿ ಗುರುವಾದವನು ಶಿಷ್ಯನಿಗೆ ವಚನಸಾಹಿತ್ಯಕ್ಕೆ ಸಂಬಂಧಿಸಿದ ಮೌಲಿಕಹಸ್ತಪ್ರತಿಗಳನ್ನು ಕೊಡುತ್ತಾನೆ. ಈ ವಿಷಯವನ್ನು ಲಿಂಗಾಯತ ಮಠಗಳ ಪ್ರಾಚೀನ ಇತಿಹಾಸ ಹೇಳುವ ನಿರಂಜನ ವಂಶರತ್ನಾಕರ ಹೀಗೆ ವಿವರಿಸುತ್ತದೆ.

"ಪ್ರಭು ಚನ್ನಬಸವ ರಾಜೇಂದ್ರರು ಶಿವಮೂರ್ತಿಯಾದ ಸೊನ್ನಲಿಗೆಯ ಸಿದ್ಧರಾಮೇಶಂಗೆ ನಿರೂಪಿಸಿದ ಗೋಹೇಶ್ವರನ ವಚನ, ಕರಣಹಸಿಗೆ, ಮಿಶ್ರಾರ್ಪಣ, ಸಿದ್ಧರಾಮೇಶ್ವರ ಮಂತ್ರಗೋಪ್ಯ, ಅಕ್ಕಗಳ ಸೃಷ್ಟಿಯ ವಚನ, ಪ್ರಭುದೇವರ ಸೃಷ್ಟಿಯ ವಚನ, ಸಿದ್ಧೇಶ್ವರ ವಚನ, ಹಿರಿಯ ಮಂತ್ರಗೋಪ್ಯ, ಶೂನ್ಯಸಂಪಾದನೆ ಮುಂತಾದವುಗಳ ಸಂಗ್ರಹಿಸಿದ ಪುಸ್ತಕವ, ಸಭಾಮಧ್ಯದಲ್ಲಿ ಆ ಶಿವಾನುಭವ ಚರಂತಿಗೆ ತೆಗೆದುಕೊಂಡ ಗುರುವರನ ಕಡೆಯಿಂದ ಆ ಶಾಸ್ತ್ರವಂ ಶಿಷ್ಯೋತ್ತಮನು ಶಿವಮಂತ್ರ ಗುರುಪ್ರಸಾದಮುಖವಾದ, ಅಂಗಲಿಂಗ ಸಾಮರಸ್ಯ ಮುಂತಾಗಿ....೩೬ ತತ್ವಂಗಳಂ ತಿಳಿದಾತನು ಶಾಸ್ತ್ರಮಂ ಗುರುಗಳಿಂದ ಶ್ರವಣಗೊಂಡಾತನಾದ ವಿರಕ್ತನೆ ಶಾಸ್ತ್ರದ ಕಟ್ಟು ಹಿಡಿಯಬೇಕು....ಈತನಿಗೆ ಶಿವಾನುಭವಶಾಸ್ತ್ರವೆ ಆಗಲಿ, ಪುರಾಣ ಪುಸ್ತಕವೆ ಆಗಲಿ, ಇವುಗಳನ್ನು ಗುರುಗಳಾದ ಚರಮೂರ್ತಿಗಳು ಸಭೆಯಲ್ಲಿ ಕೊಟ್ಟು ತಮ್ಮಾಸನದಲ್ಲಿ ಕುಳ್ಳಿರಿಸಿಕೊಳ್ಳಲು, ಆ ಗಣವರನೆ ಚರಮೂರ್ತಿ ಎನಿಸುವನು."[೨]

ಪಟ್ಟಾಧಿಕಾರದ ಸಂದರ್ಭದಲ್ಲಿ ವಚನಕಟ್ಟುಗಳನ್ನು ನೀಡುವ ಪದ್ಧತಿ ಕಾರಣವಾಗಿ ಬಹುತೇಕ ಲಿಂಗಾಯತ ಮಠಗಳಲ್ಲಿ 'ಕರಣ ಹಸಿಗೆ, ಶೂನ್ಯಸಂಪಾದನೆ, ಮಿಶ್ರಾರ್ಪಣ, ಮಂತ್ರಗೋಪ್ಯ, ಉದ್ಧರಣೆ ಪಟಲುಗಳು' ಕಾಣಸಿಗುತ್ತವೆ. ಲಿಂಗಾಯತ ಹಸ್ತಪ್ರತಿಗಳು ಅಧಿಕ ವಾಗಲು ಇನ್ನು ಒಂದು ಕಾರಣವನ್ನು ಎಂ. ಎಂ. ಕಲಬುರ್ಗಿ ಅವರು ಹೀಗೆ ವಿವರಿಸುತ್ತಾರೆ:

“೧೨ನೇ ಶತಮಾನದಲ್ಲಿ ಉದ್ಭವಿಸಿದ ಶರಣರ ಜನಪರ ಚಳುವಳಿಯಿಂದಾಗಿ ಜ್ಞಾನ, ಅಕ್ಷರಜ್ಞಾನ ಸಾಮಾನ್ಯರ ಬಾಗಿಲವರೆಗೂ ಬಂದುದು, ಸ್ತ್ರೀ–ಪುರುಷ, ವಿಪ್ರ–ಶೂದ್ರ ಮೊದಲಾದವರೆಲ್ಲ ಈಗ ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ ಕಾರಣ, ಹಸ್ತಪ್ರತಿಗಳ ಉತ್ಪಾದನೆ ವರ್ಧಿಸಿತು. ಕಾಲಜ್ಞಾನ ಸಾಹಿತ್ಯದಲ್ಲಿ ವಚನಗಳನ್ನು ‘ಮುಚ್ಚಿ ಇಡಿರಿ’ ಎಂಬ ಮಾತು ಪದೇ ಪದೇ ಬರುತ್ತಿದ್ದು, ಇದು ಕಲ್ಯಾಣ ಕ್ರಾಂತಿಯಿಂದಾಗಿ ಅದಕ್ಕೆ ಬಹಿಷ್ಕಾರದ ಗಂಡಾಂತರ ಒದಗಿದುದನ್ನು ಸೂಚಿಸುವಂತಿದೆ. ಹೀಗಾಗಿ ಅವರು ವಚನ ಸಾಹಿತ್ಯದ ಬಹುದೊಡ್ಡ ಭಾಗವನ್ನು ಹಂಪೆಯಲ್ಲಿ ಅಡಗಿಸಿಕೊಟ್ಟರೆಂದು ಕಾಣುತ್ತದೆ. ಕಾಲಜ್ಞಾನ ವಚನದಲ್ಲಿ ಬರುವ ಹಂಪೆಯಲ್ಲಿ ಮುಚ್ಚಿಟ್ಟ ವಾಲಿ ಭಂಡಾರವು ರಾಮಾಯಣ ಕಾಲದ ವಾಲಿಯ ದ್ರವ್ಯಭಂಡಾರವಲ್ಲ; ವಚನಗಳ ತಾಳೆ ಓಲೆಯ ಭಂಡಾರವೇ ಆಗಿರಬೇಕು.”[೩]

ಧಾರ್ಮಿಕ ಸಿದ್ಧಾಂತಗಳು ಜನಸಾಮಾನ್ಯರಿಗೆ ತಲುಪಬೇಕೆಂಬ ಆಶಯದಿಂದ ಕರಣ ಹಸಿಗೆ ಪ್ರತಿಮಾಡಿದ ಲಿಪಿಕಾರನೊಬ್ಬ ಹೀಗೆ ವಿವರಿಸಿದ್ದಾನೆ: “ಕರಣ ಹಸಿಗೆ ತತ್ವಂಗಳ ಸಂಗ್ರಹದ ವರ...ವಿಭಾಗೆಯು ಎಂಬುದೀಗ ಸಮಾಪ್ತ ಎಲ್ಲಾ ಶಿವಗಣಂಗಳ ಶ್ರೋತ್ರ ಮುಖದಲ್ಲಿ ಮುಕ್ತಾಯವಾಯಿತೆಂಬುದೀಗ ಮಂಗಳಂ। ಕಲ್ಯಾಣವು । ಆಹಾ । ಅಗಲಿಯೆಂದು । ಶ್ರೀ ಶ್ರೀ ಯಿಂತಪ್ಪ ಜ್ಞಾನದಾನ್ಯೈಶ್ವರ್ಯವನುಳ್ಳ ಬರದೋದಿ ಹಾಡಿ ಕೇಳಿದಂಥವರುಗಳು ನಿರತಿಶಯಾನಂದದ ನಿಜಮೋಕ್ಷದ ಸುಖವನು ಪಡೆದನುಭವಿಸಿ ನಿತ್ಯಮುಕ್ತಿ ತೃಪ್ತರಾಗಿ ಬಾಳ್ವರೆಂಬುದೀ ಪದ ಶ್ರುತಿಯ ತಾತ್ಪರ್ಯವೆಂಬುದೀಗ...”[೪]

ಜೈಮಿನಿ ಭಾರತದೊಳಗಿನ ಹಂಸಧ್ವಜನ ಕಾಳಗ ಪ್ರಸಂಗ ಪ್ರತಿ ಮಾಡಿದ ಲಿಪಿಕಾರನೊಬ್ಬ ಈ ಕೃತಿಯನ್ನು ಓದುವವರ ಹಾಗೂ ಕೇಳುವವರ ಕರ್ಮಗಳು ದೂರಾಗಲಿ ಎಂದು ಪದ್ಯ ರೂಪದಲ್ಲಿ ಹಾರೈಸಿದ್ದಾನೆ

**ಆರ್ಯಂ ॥**

“ಈ ಕಥನಾಮೃತ ಸ್ವೀಕರಿಸುವ ಜನ
ರಾ ಕರ್ಮಗಳಳಿದುರೆ ಸತತಂ
ಲೋಕನಾಥ ಭೂಲೋಕದೊಳವರಿಗೆ
ನಾಕವಿಭವಮೀವೆನು ವಿತತಂ.”[೫]

“ಜಾತಿ ಧರ್ಮಗಳನ್ನು ಮೀರಿ ಹಸ್ತಪ್ರತಿಗಳನ್ನು ಪ್ರತಿಮಾಡಿಕೊಂಡ ಲಿಪಿಕಾರರನ್ನು ನೋಡಿದಾಗ ಹೆಮ್ಮೆ ಎನಿಸುತ್ತದೆ. ಸವದತ್ತಿ ತಾಲೂಕಿನ ಮುರುಗೋಡಮಠದ ಸಂಗ್ರಹದಲ್ಲಿದ್ದ ಅಖಂಡೇಶ್ವರ ವಚನಗಳು ಹಸ್ತಪ್ರತಿಯನ್ನು ಮಾಡಿಕೊಂಡವನು ಪ್ರಶಸ್ತಿ ಪದ್ಯದಲ್ಲಿ ಹೀಗೆ ಹೇಳುತ್ತಾನೆ. ‘ಈ ವಚನ ಆರದೆಂದೊಡೆ ಭಕ್ತಿ ಸಂಪ್ರದಾಯಿಕರಾದ ಕೃಷ್ಣಪ್ಪ ಬಿನ್ನಭೋಜಪ್ಪ ನಾಯಿಕಸಿದೊಂಗಿಮೊ ॥ ಕುಳಲ್ಲಿ॥ ಪರಗಣಿ ಮುಧೋಳ॥ ಶಕೆ ೧೭೬೨ ಪ್ರಮಾದಿನಾಮ ಸಂವತ್ಸರ ಸನ್ನ ೧೨೮೦

ಘಸಲ್ಲಿ ಶ್ರಾವಣ ಶುದ್ಧ ೧೨ ಸೋಮವಾರ ಪ್ರಹರದೊಳಗೆ ಸಮಾಪ್ತ। ಮಂಗಳ ಮಹಾಶ್ರೀ ಶ್ರೀ."[೬]

ಧಾರ್ಮಿಕ ಅನುಭಾವಿಗಳನ್ನು ಲಿಪಿಕಾರರು ಯಾವ ರೀತಿ ವರ್ಣಿಸುತ್ತಿದ್ದರು ಎಂಬುದಕ್ಕೆ ಮುರಗೋಡ ದುರದುಂಡೀಶ್ವರಮಠದ ಹಸ್ತಪ್ರತಿ ಪರಮಾನುಭವ ಬೋಧೆಯ ಅಂತ್ಯಪ್ರಶಸ್ತಿಯಲ್ಲಿ ಹೀಗೆ ಬರೆದಿದ್ದಾರೆ: "ಸ್ವಸ್ತಿಸಮಸ್ತಸುರ ವಿಸರ ಮಕುಟಮಣಿ ಕಿರಣ ಪ್ರಚುರ ಪ್ರವಾಹತರಂಗೀಣಿ ತಟ ವಿರಾಜಿತ ಪದ ರಾಜೀವಯುಗಳ ಶ್ರೀ ಶಂಭು ಸತ್ಕೃಪಾಕಟಾಕ್ಷ ಸಾಂದ್ರ ಚಂದ್ರಿಕಾ ಸಂಕ್ರಾತ ವಿರಸ್ತನಿಖಿಳ ಸಂಸಾರ ಶ್ರಮವಿಸ್ಫಾರಿತ ನಿಜಾನಂದಾಸ್ವಾದನಾಸಕ್ತ ಚಿತ್ತೋಪೆತ ನಿಜಗುಣ ಶಿವಯೋಗಿ ವಿರಚಿತಮಾದ ಪರಮಾನುಭವ ಬೋಧಾ ನಾಮ ಪ್ರಕರಣಂ ಸಮಾಪ್ತ ॥ಶಕೆ ೧೭೪೪ಳ ಅಂಗಿರಸನಾಮ ಸಂವತ್ಸರ ಅಶ್ವಿಜವಧಿ ಸಪ್ತಮಿ ಮಂಗಳವಾರ ಸಮಾಪ್ತ ಮಂಗಳ ಮಹಾ ಶ್ರೀ ಶ್ರೀ."[೭]

"ಕಡಕೋಳ ವಿರಕ್ತಮಠದ ಪೂಜ್ಯ ಚನ್ನಬಸವ ಸ್ವಾಮಿಗಳು 'ಮಾಘಕಾವ್ಯ ವ್ಯಾಖ್ಯಾನ' ಕೃತಿಯನ್ನು ಪ್ರತಿ ಮಾಡಿಕೊಂಡಿದ್ದಾರೆ."[೮]

ರಾಜರು ಸಂಸ್ಥಾನಿಕರು ಭಕ್ತಿಪೂರ್ವಕವಾಗಿ ಮಠಮಾನ್ಯಗಳಿಗೆ ನಡೆದುಕೊಳ್ಳುತ್ತಿದ್ದರು ಎಂಬುದಕ್ಕೆ ನಿದರ್ಶನವಾಗಿ ಕನಕಪುರದ ಸಂಸ್ಥಾನಿಕರ ಮಗನ ಒಂದು ಪ್ರಶಸ್ತಿ ಪದ್ಯ ಹೀಗಿದೆ : "ಸ್ವಸ್ತಿಶಕ ವರ್ಷ ೧೪೨೩ನೆಯ ರೌದ್ರ ಸಂವತ್ಸರದ ಅಶ್ವಯುಜ ಶು೧ ಗುರುವಾರದಲ್ಲಿ ಶ್ರೀ ಮದಕ್ಷಿಣ ಕನಕಪುರ ವರಾಧೀಶ್ವರನೆನಿಪ ಶ್ರೀ ಮನ್ಮಹಾ ಮಂಡಲೇಶ್ವರ ಶ್ರೀ ವೀರನಂಜರಾರ್ಯ ಒಡೆಯರ ಗರ್ಭ ಸುಧಾಂ ಭೋನಿದಿ ಶ್ರೀ ಸುಧಾಕರನೆನಿಪ ಶ್ರೀ ಚೆನ್ನನಂಜರಾಯನ ಮನೆಯ ಭಂಡಾರದ."[೯] ಈ ಹಸ್ತಪ್ರತಿ ಚತುರ್ಮುಖ ಬೊಮ್ಮರಸನ ರೇವಣಸಿದ್ಧ ಕಾವ್ಯವಾಗಿದೆ. ಈ ಕೃತಿಯನ್ನು ಮುರುಗೋಡ ಮಠದ ಪೂಜ್ಯರಿಗೆ ಭಕ್ತಿಪೂರ್ವಕ ಅರ್ಪಿಸಲಾದ ವಿಷಯ ಇಲ್ಲಿದೆ.

ಮುರುಗೋಡಮಠದ ಲಿಂಗಾಚಾರ ರಚನಾಗಮದ ಟೀಕೆ ಎಂಬ ಹಸ್ತಪ್ರತಿಯ ಕೊನೆಯ ಅಂತ್ಯಪ್ರಶಸ್ತಿಯಲ್ಲಿ–ಮಠಾಧೀಶರಾದವರು ಶಿಷ್ಯರಾದವರಿಗೆ ಆಚಾರಗಳನ್ನು ಕಲಿಸಲು ಆಚಾರದ ನಿಯಮಗಳನ್ನು ಕುರಿತು ವಿವರಿಸುವ ಹಸ್ತಪ್ರತಿಯನ್ನು ಬರೆಯಿಸಿದ ಘಟನೆ ಇಲ್ಲಿ ಕಾಣುತ್ತದೆ. "ಶ್ರೀಗುರುಬಸವಲಿಂಗಾಯ ನಮಃ॥ ಶ್ರೀ ಗುರುಭ್ಯೋ ನಮಃ। ಶ್ರೀ ನಂದೀಶ್ವರಾಯ ನಮಃ। ಶಿಕಾರಿಪುರದ ಹಳಿಯೂರ ಹಿರೇಮಠ ಪಟ್ಟದ್ದೇವರು ನಮ್ಮ ಮುಧೋಳದ ಮಠದ ಪುರಾಣದ ವೀರಬಸಪ್ಪನವರ ತಮ್ಮನಾದ ರುದ್ರಪ್ಪನಿಗೆ ಇವರ ಕುಮಾರರಾದ ಸಂಗಯ್ಯ ಷಡಕ್ಷರಯ್ಯ ಇವರಿಗೆ ನೋಡಿಕೊಳ್ಳುವುದಕ್ಕೆ ಕ್ರಿಯಾಚಾರ, ಲಿಂಗಾಚಾರ ಗ್ರಂಥ ಲೇಖಸ್ಯನೋ ನಿರ್ವಿಘ್ನಮಸ್ತು। ಶುಭಮಸ್ತು। ಶ್ರೀ ಮದ್ವೈದ ಶಿರೋರಹಸ್ಯ ವಿಲಸತತ್ತ್ವ ಪ್ರಬೋಧ ಗುರುರ್ಭಕ್ತಿ ಜ್ಞಾನವಿರಕ್ತಿ ಶಕ್ತಿ ನಹಿತಃ ಕಾರುಣ್ಯ ವಾರಾಂ ನಿಧಿಃ ಭಕ್ತಾ ಭಿಷ್ಟಿಕರ ಪ್ರಸನ್ನವದನೋಂತಿ ವರ್ತಿತೆ ಭೂತಳೆ ತಸ್ಮೈ ಶ್ರೀ ಮರಿಶಾಂತದೇಶಿಕ ಕುಲಾಚಾರ್ಯಯಾ ತಸ್ಮೈನಮಃ।"[೧೦]

ಸಂಸ್ಕೃತ ಭಾಷೆಯನ್ನು ಹೇಗೆ ಬಳಸುತ್ತಿದ್ದರು ಎಂಬುದಕ್ಕೆ ಈ ಪ್ರಶಸ್ತಿ ಗದ್ಯ ನಮಗೆ ಸಾಕ್ಷಿ ಒದಗಿಸುತ್ತದೆ.

ಲಿಪಿಕಾರನು ತಿಥಿ ವಾರ ನಕ್ಷತ್ರಗಳನ್ನು ನೋಡಿಕೊಂಡು ಹಸ್ತಪ್ರತಿ ಲಿಪಿ ಮಾಡುತ್ತಿರುವ ಇತಿಹಾಸವನ್ನು ಕೆಲವು ಅಂತ್ಯಪ್ರಶಸ್ತಿಗಳು ತಿಳಿಸುತ್ತವೆ : "ಶಕ ೧೭೭೭ ರಾಕ್ಷಸ ನಾಮ ಸಂವತ್ಸರ ಆಷಾಡವದಿ ೬ ಶುಕ್ರವಾರ ರೇವತಿ ನಕ್ಷತ್ರ ಅಮೃತ ಸಿದ್ಧಿಯೋಗದಲ್ಲಿ ಶ್ರೀ ಷಡಕ್ಷರ ದೇವ ಕೃತ ವೃಷಭೇಂದ್ರ ವಿಜಯ ಮಹಾಪುರಾಣವನು ಹೊಂಗಲದಾ ಪುರಾಣಿಕ ಮಠದ ದುರದುಂಡೆಪ್ಪಾನೂ ಪಠಿಸಿ ಕೃತಾರ್ಥನಾಗುವಗೋಸ್ಕರವಾಗಿ ಬರಿದುಕೊಂಡಿರ್ಪುದೂ । ಇಂತಿ ಮಂಗಲಮಸ್ತು ಶ್ರೀ ಶ್ರೀ."[೧೧]

ಕರ್ತೃನಿರಪೇಕ್ಷ ಪ್ರಜ್ಞೆಯಿಂದ ಕೃತಿಗಳನ್ನು ಬರೆದವರು ಅನೇಕ ಜನ ವಿದ್ವಾಂಸರು. ಅವರ ಕೃತಿಗಳನ್ನು ಲಿಪಿಕರಣ ಮಾಡಿದ ಲಿಪಿಕಾರರು ಒಮ್ಮೊಮ್ಮೆ ತಮ್ಮ ನಾಮನಿರಪೇಕ್ಷ ಪ್ರಜ್ಞೆಯನ್ನು ಮೆರೆದು, ಗುರುಭಕ್ತಿಯನ್ನು ಮಾತ್ರ ತೋರಿಸಿದ್ದಾರೆ. ಮುಖಬೋಳು ಸಿದ್ಧರಾಮನ ಷಟ್‌ಸ್ಥಲ ತಿಲಕ ಕೃತಿಯನ್ನು ಪ್ರತಿ ಮಾಡಿದ ಲಿಪಿಕಾರ ಅಂತ್ಯದಲ್ಲಿ "ಶಾಲಿವಾಹನ ಶಕ ೧೫೭೦ ವ್ಯಯವತ್ಸರದ ಫಾಲ್ಗುಣ ಮಾಸ ಆದಿತ್ಯವಾರ ಶುದ್ಧ ತದಿಗೆ ಭರಣಿ ನಕ್ಷತ್ರದಲ್ಲು ಬರೆದು ಸಮಾಪ್ತ ಮಂಗಳ ಮಹಾಶ್ರೀ ಶ್ರೀ."[೧೨]

ಲಿಪಿಕಾರರ ಬದುಕು ಧಾರ್ಮಿಕ ಶ್ರದ್ಧೆಯಿಂದ ಕೂಡಿರುವಂಥದ್ದಾಗಿದೆ. ಭಕ್ತಿಯಿಂದ ಹಸ್ತಪ್ರತಿ ಲಿಪಿ ಮಾಡುವ ಕಾರ್ಯವನ್ನು ಅವರು ಮಾಡುತ್ತ ಬಂದಿದ್ದಾರೆ. ಅವರಿಗೆ ಧಾರ್ಮಿಕ ನಂಬಿಕೆಗಳ ಒಂದು ಮಾದರಿ ಚೌಕಟ್ಟು ಇರುವುದನ್ನು ಗಮನಿಸಬಹುದು. ಈ ವಿಷಯವಾಗಿ ಕೆ. ರವೀಂದ್ರನಾಥ ಅವರು ಹೇಳುವ ಮಾತುಗಳು ಹೀಗಿವೆ.

"ಬರಹವನ್ನು ವೃತ್ತಿಯನ್ನಾಗಿಸಿಕೊಂಡ ಪ್ರತಿಕಾರರು ಆ ಕಾಲದಲ್ಲಿ ಅದನ್ನು ಧಾರ್ಮಿಕ ಕಾಯಕವೆಂದು ಭಾವಿಸಿದ್ದರು. ಸಹಜವಾಗಿಯೇ ಈ ಭಾವನೆ ಅವರಲ್ಲಿ ಪೂಜ್ಯತೆಯನ್ನು ತಂದುಕೊಟ್ಟಿತು. ಲೌಕಿಕವಾಗಿ ಇದು ಒಂದು ವೃತ್ತಿ ಎನಿಸಿದರು ಅಲೌಕಿಕವಾಗಿ ಮೋಕ್ಷಸಾಧನೆಯ ಮಾರ್ಗವೆಂದು ಭಾವಿಸಿದ್ದರು. ಒಳ್ಳೆಯ ದಿನ, ಮುಹೂರ್ತಗಳನ್ನು ನೋಡಿ ಕಾರ್ಯೋನ್ಮುಖರಾಗುತ್ತಿದ್ದ ಸಂಗತಿಗಳು ಹಸ್ತಪ್ರತಿಯ ಒಡಲಿನಿಂದ ತಿಳಿದುಬರುತ್ತದೆ. ಲೇಖನ ಆರಂಭಿಸುವ ಸಮಯದಲ್ಲಿ ಲೇಖನಿಯ ತುದಿಯಲ್ಲಿರುವ ಚಾಕುವಿನಿಂದ ಓಲೆಗರಿಯ ಸ್ವಲ್ಪ ಭಾಗವನ್ನು ಕೊಯ್ದು ಆ ತಾಡೋಲೆಯ ಚೂರಿನ ಮೇಲೆ ತಮ್ಮ ಆರಾಧ್ಯ ದೈವದ ಹೆಸರನ್ನು ಬರೆದು ಪೂರ್ವದ ಕಡೆಗೆ ತಿರುಗಿ ದೇವರಿಗೆ ನಮಸ್ಕಾರ ಮಾಡಿ ಚೂರನ್ನು ಹರಿದು ಹಾಕುತ್ತಾರೆ ಎಂಬ ಉಲ್ಲೇಖವನ್ನು ೧೬ನೆಯ ಶತಮಾನದ ದೂ ಆರ್ಥೆಬಾರ್ಬೋಸ್ ಎಂಬ ರಾಯಭಾರಿಯ ವಿಚಾರವನ್ನು ಪ್ರವಾಸಿ ಕಂಡ ಇಂಡಿಯಾ ಸಂಪುಟ ಎರಡರಲ್ಲಿ ದಾಖಲಿಸಲಾಗಿದೆ. ಇದೊಂದು ಧಾರ್ಮಿಕ ಆಚಾರವೆಂಬಂತೆ ನಡೆದುಕೊಂಡು ಬಂದಿದೆ. ಈಗಲೂ ಕೃಷಿ ಮೂಲದಲ್ಲಿ ಬೆಳೆ ಕಟಾವು

ಮಾಡುವಾಗ ಆರಂಭದ ಐದು ಸಾಲುಗಳ ದವಸ ಧಾನ್ಯಗಳನ್ನು ತಮ್ಮ ಮನೆ ದೇವರಿಗೆ ಮೀಸಲು ಎಂದು ತೆಗೆಯುವ ವಾಡಿಕೆಯಿದೆ."[೧೩]

**ಧಾರ್ಮಿಕ ಸಾಹಿತ್ಯದ ಅಪೂರ್ವ ದಾಖಲೆ ಉದ್ಧರಣೆಗಳು :**

ಕರ್ನಾಟಕದ ಲಿಂಗಾಯತಮಠಗಳಲ್ಲಿ ಉದ್ಧರಣೆ ಪಟಲಗಳು ದೊರೆಯುತ್ತವೆ. ಶಿವಾನುಭವ ಶಾಸ್ತ್ರವನ್ನು ಗುರುಗಳಾದವರು ಶಿಷ್ಯನಿಗೆ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಮಂತ್ರಾಕ್ಷರದ ಸೂತ್ರಗಳಿಂದ ವಿವರಿಸುವ ಸಾಹಿತ್ಯ ಪ್ರಕಾರವಾಗಿದೆ. ಸಖರಾಯಪಟ್ಟಣದ ಪೂಜ್ಯ ಶ್ರೀ ಸದಾಶಿವ ಶಿವಾಚಾರ್ಯರು ೧೯೩೦ರಲ್ಲಿ ಪ್ರಕಟಿಸಿದ 'ಆತ್ಮೋದ್ಧರಣ ಸಾಹಿತ್ಯ' ಎಂಬ ಕೃತಿಯೇ ಮೊದಲ ಉದ್ಧರಣೆಗಳ ಇತಿಹಾಸ ತಿಳಿಸುವ ಮೊದಲ ಕೃತಿಯಾಗಿದೆ. ಎಂ. ಚಿದಾನಂದಮೂರ್ತಿ ಅವರು 'ವಚನ ಶೋಧ-೧' ಕೃತಿಯಲ್ಲಿ ಮೊದಲ ಬಾರಿಗೆ ಉದ್ಧರಣೆಗಳ ವರ್ಣ ಚಿತ್ರಗಳನ್ನು ಪ್ರಕಟಿಸಿದರು. ಕೆ. ರವೀಂದ್ರನಾಥ ಅವರು 'ಉದ್ಧರಣ ಸಾಹಿತ್ಯ' ಎಂಬ ಸಂಶೋಧನಾತ್ಮಕ ಗ್ರಂಥವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಪ್ರಕಟಿಸುವ ಮೂಲಕ ಈ ಸಾಹಿತ್ಯಕ್ಕೆ ಒಂದು ಘನತೆ ಗೌರವವನ್ನು ದೊರಕಿಸಿಕೊಟ್ಟರು. ಸಿ. ಬಿ. ಹೊನ್ನುಸಿದ್ಧಾರ್ಥ ಮತ್ತು ಮಮತಾ ಗಿರಿರಾಜ ಅವರು ಸಂಪಾದಿಸಿದ 'ಉದ್ಧರಣೆ ಪಟಲ' ಎಂಬ ಕೃತಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದಿಂದ ಪ್ರಕಟವಾಗಿದೆ.

ಉದ್ಧರಣೆಗಳ ಲಕ್ಷಣವನ್ನು ಜ.ಚ.ನಿ. ಅವರು ಹೀಗೆ ವಿವರಿಸುತ್ತಾರೆ:

೧. ಉದ್ಧರಣೆ ಸಾಹಿತ್ಯ ವಾಚ್ಯವೂ (ವಾಙ್ಮಯ) ಹೌದು; ವರ್ಣಮಯವೂ (ಬಣ್ಣ) ಹೌದು. ಅಂದರೆ ಶ್ರವ್ಯ ಸಾಹಿತ್ಯವೂ ಆಗಿದೆ. ದೃಶ್ಯ ಸಾಹಿತ್ಯವೂ ಆಗಿದೆ.

೨. ರೂಪದ ದೃಷ್ಟಿಯಿಂದ ಅಂಕಿ, ಅಕ್ಷರ, ವರ್ಣ ಪ್ರಧಾನಸಾಹಿತ್ಯ

೩. ಸಮನ್ವಯ ದೃಷ್ಟಿಯಿಂದ ಸಾಂಖ್ಯ-ಯೋಗ-ಮೀಮಾಂಸ ಹಾಗೂ ಜ್ಯೋತಿಷ್ಯಗಳ ಲಕ್ಷಣವುಳ್ಳ ಸಾಹಿತ್ಯ

೪. ವಿಶೇಷವಾಗಿ ಅಂಕಿ-ಸಂಖ್ಯೆಗಳಿಗೆ ತತ್ತ್ವದೀಕ್ಷೆ ಮತ್ತು ಸಾಹಿತ್ಯದೀಕ್ಷೆ ನೀಡಿದ ಸಾಹಿತ್ಯ.

೫. ಸಾಂಕೇತಿಕ ದೃಶ್ಯ ಸಾಹಿತ್ಯ, ಸಂವಹನಶೀಲ ಸಾಹಿತ್ಯ

"ವೀರಶೈವ ತತ್ವಸಿದ್ಧಾಂತಗಳಾದ ಭಕ್ತಿ, ಅಷ್ಟಾವರಣ, ಜಂಗಮ, ಶೂನ್ಯಲಿಂಗ, ಮಹಾಲಿಂಗ, ಭಾವಲಿಂಗ, ನವಚಕ್ರ, ಪಂಚೀಕರಣ, ಷಡಕ್ಷರಿ, ಬಸವಾಕ್ಷರ, ಪ್ರಣಾಮ, ಕುಂಡಲಿನಿ ಮುಂತಾದ ವಸ್ತು ಸ್ವರೂಪಗಳ ವಿನ್ಯಾಸವನ್ನು ಸೂಚ್ಯವಾಗಿ ಸಾಂಕೇತಿಸುವುದೇ ಉದ್ಧರಣೆ ಪಟಲಗಳ ಆಶಯವಾಗಿದೆ. ಚಿತ್ರವಿನ್ಯಾಸದ ವಿವರಣೆಯನ್ನು ವಾಚ್ಯವಾಗಿ ನಿರೂಪಿಸಲಾಗಿದೆ. ಕಾರ್ಯಕಾರಣಗಳೆಂದು ಏಕಕಾಲಕ್ಕೆ ಅರಿಕೆಗೆ ಬರುತ್ತವೆ. ಬೀಜದಂತಿರುವ ಅದೃಶ್ಯಕಾರಣದ ಅಂದರೆ ಮೂಲ ವಸ್ತುವಿನ ಮತ್ತು ಅಂಕುರ(ವೃಕ್ಷ)ದಂತಿರುವ ದೃಶ್ಯದ (ಕಾರ್ಯ ಅಥವಾ ವರ್ಣ) ಪ್ರಜ್ಞೆ ಉಂಟಾಗುತ್ತದೆ.

ಸೂಚ್ಯ ಉದ್ಧರಣೆ ಸೂತ್ರವಾದರೆ, ವಾಚ್ಯ ಉದ್ಧರಣೆ ಭಾಷ್ಯದಂತಿರುತ್ತದೆ. ವರ್ಣ ವಿನ್ಯಾಸದ ಉದ್ಧರಣೆಯ ಅಧ್ಯಯನ ಆರಾಧನಗಳಲ್ಲಿ ನೇತ್ರ, ಮನ, ಪ್ರಾಣಗಳ ಧಾರಣವಾಗುತ್ತದೆ, ಆಗಿ ಉದಾತ್ತೀಕರಣವಾಗುತ್ತದೆ. ಒಂದು ದೊಡ್ಡ ಗ್ರಂಥವಾಗಬಹುದಾದಷ್ಟು ವಿಷಯ ವ್ಯಾಪ್ತಿಯನ್ನು ಒಂದು ಉದ್ಧರಣೆ ಒಳಗೊಂಡಿರುತ್ತದೆ. ಬಯಲಲ್ಲಿ ರಚನೆಯಾದ ಒಂದು ಶಿವಾಲಯ ನಿರ್ಮಾಣದ ಹಿಂದಿರುವ ಶ್ರಮ ಇಲ್ಲಿರದಿದ್ದರೂ ಅಲ್ಲಿಯ ಶಿವಾಲಯದ ಮಹತ್ವಕ್ಕಿಂತ ಹೆಚ್ಚಿನದನ್ನು ಉದ್ಧರಣೆಗಳು ನಿವೇದಿಸುತ್ತವೆ. ಸಮಾಧಾನಿ, ಸಮಚಿತ್ತ, ಸಮಜ್ಞಾನಿಮತಿಗಳಾಗಬೇಕೆಂಬುನ್ನು ಸಾರಿ ಹೇಳುವುದೇ ಉದ್ಧರಣೆ ಸಾಹಿತ್ಯದ ಉದ್ದೇಶ."[೧೪]

ಬೆಳಗಾವಿ ನಾಗನೂರು ರುದ್ರಾಕ್ಷಿಮಠದ ಶತಾಯುಷಿಗಳಾಗಿದ್ದ ಪೂಜ್ಯ ಶ್ರೀ ಶಿವಬಸವ ಮಹಾಸ್ವಾಮಿಗಳವರಿಗೆ ಗುರುಗಳಾದ ಹಾನಗಲ್ಲ ಕುಮಾರ ಶಿವಯೋಗಿಗಳಿಂದ ಬಳುವಳಿಯಾಗಿ ಬಂದ ಒಂದು ಅಪರೂಪದ ವರ್ಣ ಉದ್ಧರಣೆ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿದೆ. ಆ ಉದ್ಧರಣೆಯ ಪಟಲಗಳಲ್ಲಿ ಮಂತ್ರಾಕ್ಷರಗಳು ತುಂಬಿವೆ. ಬಸವೋದ್ಧರಣೆ ನಮ್ಮ ಗಮನ ಸೆಳೆಯುತ್ತದೆ. ಬಸವಾದಿ ಶಿವಶರಣರ ತತ್ವಸಿದ್ಧಾಂತಗಳನ್ನು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಮರುಸೃಷ್ಟಿಸಿದ ಒಂದು ಅಪರೂಪದ ದಾಖಲೆಯಾಗಿ ಈ ಉದ್ಧರಣೆಗಳು ಮೂಡಿಬಂದಿರಬಹುದು.

ನಾಗನೂರುಮಠದ ಗ್ರಂಥಾಲಯದಲ್ಲಿ ಎರಡು ಉದ್ಧರಣೆ ಪಟಲದ ಪ್ರಾಚೀನ ತಾಡೋಲೆಗಳು ಲಭ್ಯವಿವೆ. ಬೇರೆ ಬೇರೆ ವಿಷಯ ವೈವಿಧ್ಯವುಳ್ಳ ಈ ಉದ್ಧರಣೆ ಪಟಲಗಳು ಪ್ರಕಟಗೊಳ್ಳಬೇಕಾಗಿದೆ.

ಇನ್ನೂರ ಹದಿನಾರು ತೆರದ ಅರ್ಪಣೋದ್ಧರಣೆ ಎಂಬ ಹಸ್ತಪ್ರತಿಯ ಆದಿಯಲ್ಲಿ– "ಶ್ರೀಗುರು ಬಸವಲಿಂಗಾಯ ನಮಃ ॥ವಾರ್ಧಿಖ॥ ಷಟ್ಪದಿ ಬರೆಯುವುದಕ್ಕೆ ಶುಭಮಸ್ತು ಗುರು ಸಮರ್ಥ ಷಟ್‌ಸ್ಥಲಜ್ಞಾನ ಕೋವಿದರಾದ ತ್ರಿವಿಧ ಷಟ್ಪದನವಿಧಲಿಂಗಾನುಭಾವವನು ಅಡಿಗೆರಗಿ ಬಂದ ಶಿಷ್ಯ ಭಕ್ತರ್ಗೆ ಬೋಧಿಸುವದಕ್ಕಕರ್ತವಾದ ಮಹಾನುಭಾವ ಗುರುಮೂರ್ತಿ ಚೆನ್ನಬಸವೇಶ್ವರಾಯ ನಮಃ॥ ಶ್ರೀಗುರುವಿನ ಕರುಣತ್ರಯದಿಂದ ಹೃತ್ಕಮಲಯೋಗದೊಳು ಬೋಧಿಸಿದ ಉದ್ಧರಣೆಯ ಪಟಲಗಳು ಗುರುಯೋ....

**ಅಂತ್ಯ** : ನೂರೆಂಟುತ್ತ್ಯರದ್ಧೋರ್ಪಣಯೋದ್ಧರಣೆ ॥೩೦॥ ಯಿನ್ನೂರಾ ಹದಿನಾರು ತೆರದಾರ್ಪಣೋದ್ಧರಣೆ ಮಂಗಳ ಮಹಾಶ್ರೀ ಶ್ರೀ."[೧೫]

**ಇಷ್ಟದೈವದ ಸ್ತುತಿ :**

ಪ್ರತಿಯೊಬ್ಬ ಹಸ್ತಪ್ರತಿ ಲಿಪಿಕಾರನು ತನ್ನ ಇಷ್ಟದೈವವನ್ನು ಸ್ಮರಿಸಿ ಮುಂದೆ ಬರವಣಿಗೆ ಪ್ರಾರಂಭಿಸುವ ಒಂದು ಸತ್‌ಸಂಪ್ರದಾಯವನ್ನು ಕಾಣುತ್ತೇವೆ. ಲಿಂಗಾಯತ ಮಠಗಳಲ್ಲಿ ದೊರೆತ ಸಾವಿರಾರು ಹಸ್ತಪ್ರತಿಗಳ ಪ್ರಾರಂಭದಲ್ಲಿ 'ಶ್ರೀಗುರು ಬಸವಲಿಂಗಾಯ ನಮಃ' ಎಂಬ ಮಂತ್ರ ಇರುವುದು ಗಮನಾರ್ಹವಾದ ಅಂಶ. ತನ್ನ ಇಷ್ಟದೈವಕ್ಕಿಂತಲೂ ಮೊದಲು ಈ ಮಂತ್ರವನ್ನು

ಎಲ್ಲ ಲಿಪಿಕಾರರು ಪರಿಪಾಲಿಸಿಕೊಂಡು ಬಂದುದು ವಿಶೇಷ. ೧೨ನೆಯ ಶತಮಾನದಲ್ಲಿ ಲಿಂಗಾಯತ ಎಂಬ ಹೊಸಧರ್ಮವನ್ನು ಸ್ಥಾಪಿಸಿ, ಜನಸಾಮಾನ್ಯರು ಸಾಹಿತ್ಯ ರಚಿಸಬಹುದೆಂಬುದನ್ನು ತೋರಿಸಿಕೊಟ್ಟ ಕೀರ್ತಿ ಬಸವಣ್ಣನವರದು. ಸೂಳೆ ಸಂಕವ್ವೆಯಂಥವಳು, ಕಸಗೂಡಿಸುವ ಸತ್ಯಕ್ಕನಂಥವಳು ಕೂಡ ವಚನಗಳು ಬರೆದಳು. ಇದೊಂದು ಕನ್ನಡ ಸಾಹಿತ್ಯಲೋಕದಲ್ಲಿ ವಿಸ್ಮಯ–ಸೋಜಿಗ–ಕೌತುಕವೆನ್ನಬಹುದು. ಅಕ್ಷರವಂಚಿತ ಲೋಕಕ್ಕೆ ಬಸವಣ್ಣನವರು ದಾರಿತೋರಿದ ಸವಿನೆನಪಿಗಾಗಿ ಬಹುತೇಕ ಲಿಂಗಾಯತ ಧಾರ್ಮಿಕ ಹಸ್ತಪ್ರತಿಗಳ ಪ್ರಾರಂಭವು 'ಶ್ರೀಗುರು ಬಸವಲಿಂಗಾಯ ನಮಃ' ಎಂಬ ಮಂತ್ರದಿಂದಲೇ ಪ್ರಾರಂಭವಾಗುತ್ತದೆ.

ಲಿಪಿಕಾರರು ತಮ್ಮ ಮನೆದೇವರು, ಗ್ರಾಮದೇವರು, ನಾಡದೇವರು ಹೀಗೆ ತಮಗಿಷ್ಟವಾದ ದೇವರನ್ನು, ಗುರುಗಳನ್ನು ಸ್ಮರಿಸಿಕೊಂಡು ಬರವಣಿಗೆಯನ್ನು ಪ್ರಾರಂಭಿಸುತ್ತಾನೆ.

'ಶ್ರೀಗುರು ಬಸವಲಿಂಗಾಯ ನಮಃ'

ಶ್ರೀ ಸಾಂಬಸದಾಶಿವಾಯನಮಃ, ಶ್ರೀಗುರು ನಿರಂಜನ ಬಸವಲಿಂಗಾಯ ನಮಃ (ಕ್ರ.ಸಂ. ೭೮)

ಶ್ರೀಗುರು ಪ್ರಭುನಿರಂಜನ ಬ್ರಹ್ಮಣೆ ನಮಃ (ಕ್ರ. ಸಂ. ೮೪)

ಶ್ರೀ ಪರ್ವತೇಶ್ವರಾಯ ನಮಃ (ಕ್ರ. ಸಂ. ೯೦),

ಶ್ರೀಗುರು ನೀಲಕಂಠಾಯ ನಮಃ (ಕ್ರ.ಸಂ. ೯೩)

ಶ್ರೀ ಸಂಗಮೇಶಾಯ ನಮಃ (೯೪)

ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ (೧೧೭)

ಶ್ರೀಗುರು ಸಿದ್ಧರಾಮೇಶ್ವರಾಯ ನಮಃ (೧೨೨)

ಶ್ರೀ ಮುರಿಗೇಂದ್ರಾಯ ನಮಃ, ಶ್ರೀ ಶಿವಲಿಂಗಾಯನಮಃ, ಶ್ರೀಗುರು ಹೆಬ್ಬಾಳ ರುದ್ರದೇವರ ಪಾದವೇ ಗತಿ, ಶ್ರೀ ನಿರಂಜನ ಜಗದ್ಗುರು ಮುರಿಗೆ ರಾಜೇಂದ್ರಾಯ ನಮಃ (೧೨೬)

ಶ್ರೀ ಗುರುಸಿದ್ಧಾಯ ನಮಃ (೧೩೧), ಶ್ರೀ ಮಾಹೇಶ್ವರಾಯ ನಮಃ (೧೩೮)

ಶ್ರೀಗುರುಶಾಂತಲಿಂಗಾಯನಮಃ (೩೬೩)

ಜೈನಮತದ ಹಸ್ತಪ್ರತಿಗಳಲ್ಲಿ 'ವೀತರಾಗಾಯ ನಮಃ' ದಂತ ಜೈನ ತೀರ್ಥಂಕರರ, ಜೈನಮುನಿಗಳ, ಶ್ರಾವಕರ ಮಂಗಲ ಪದ್ಯಗಳಿರುವುದನ್ನು ಗಮನಿಸಬಹುದು.

**ಹಸ್ತಪ್ರತಿಗಳ ಧಾರ್ಮಿಕ ಮತ್ತು ಸಾಂಸ್ಕೃತಿಕ ಪಲ್ಲಟ ಕ್ರಿಯೆ :**

ಧಾರ್ಮಿಕ ಸಿದ್ಧಾಂತಗಳನ್ನು ತಿರುಚಿ ಬರೆದ ಹಸ್ತಪ್ರತಿಗಳ ಕುರಿತು ನಾವು ಗಂಭೀರವಾಗಿ ಅಧ್ಯಯನ ಮಾಡಬೇಕಾಗಿದೆ. ಈ ನಿಟ್ಟಿನಲ್ಲಿ ಇನ್ನೂ ಅನೇಕ ಸಂಶೋಧನೆಗಳಾಗಬೇಕಾಗಿದೆ.

ಧಾರ್ಮಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳಿಗೆ ಕಾರಣವಾದ ಎರಡು ಪ್ರಮುಖ ಘಟನೆಗಳು ಬೆಳಗಾವಿ ಪರಿಸರದಲ್ಲಿ ಜರುಗಿರುವುದು ವಿಶೇಷವಾಗಿ ಗಮನಿಸುವ ಅಂಶವಾಗಿದೆ.

**ಸಿದ್ಧರಾಮ ಚಾರಿತ್ರದ ತಿರುಚುವಿಕೆ :**

೧. ೧೩ನೆಯ ಶತಮಾನದ ಮಹಾಕವಿ ರಾಘವಾಂಕ ಬರೆದ 'ಸಿದ್ಧರಾಮ ಚಾರಿತ್ರ'ವನ್ನು ವಿರೂಪಗೊಳಿಸಿ, ಅಲ್ಲಿಯ ಕಥಾ ಹಂದರವನ್ನು ತಿರುಚಿ ಬರೆದ ಹಸ್ತಪ್ರತಿಯೊಂದು ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಹೂಲಿಮಠದಲ್ಲಿ ನಡೆದಿದೆ. ಗುರುವರ್ಗದ ಮಠದಲ್ಲಿ ಶರಣರ ಚಾರಿತ್ರವನ್ನು ಹಾಳು ಮಾಡುವ ಮೂಲಕ ಧಾರ್ಮಿಕ ಮತ್ತು ಸಾಂಸ್ಕೃತಿಕ ಪಲ್ಲಟಕ್ಕೆ ಕಾರಣವಾದ ಘಟನೆ ನಡೆದಿರುವುದು ಇತಿಹಾಸದಲ್ಲಿ ಮರೆಯಲಾರದ ವಿಷಯವಾಗಿದೆ.

ಸೊನ್ನಲಿಗೆಯ ಶಿವಯೋಗಿ ಸಿದ್ಧರಾಮನ ಕುರಿತು ಆತನ ಕಾಲ, ಮತಸಂಪ್ರದಾಯ, ಲಿಂಗಾಯತ ಧರ್ಮಸ್ವೀಕಾರ, ಲಿಂಗದೀಕ್ಷಾ ಪ್ರಸಂಗ ಮುಂತಾದವು ಅಪಾರ ಚರ್ಚೆಗೆ ಗ್ರಾಸವಾದ ವಿಷಯಗಳಾಗಿವೆ. ವಚನಗಳು, ಕಾವ್ಯಗಳು, ಶಾಸನಗಳು ತಾಡೋಲೆಗಳು, ಹಸ್ತಪ್ರತಿಗಳು ಮತ್ತು ಶೂನ್ಯಸಂಪಾದನೆಗಳು ಸಿದ್ಧರಾಮನ ಚರಿತ್ರೆಯ ಮೇಲೆ ಖಂಡಿತವಾಗಿ ಬೆಳಕು ಬೀರಬಲ್ಲ ಮೂಲ ಸಂಪನ್ಮೂಲಗಳು. ಸಿದ್ಧರಾಮನು ತಾನು ೬೮೦೦೦ ವಚನಗಳನ್ನು ಹಾಡಿದೆನೆಂದು ಹೇಳಿಕೊಂಡರೂ ಕೂಡ ನಮಗೆ ಈವರೆಗೆ ದೊರೆತ ಆತನ ವಚನಗಳು ಕೇವಲ ೩೬೨೬ ಮಾತ್ರ. ಇವುಗಳಲ್ಲಿ ಪ್ರಕ್ಷಿಪ್ತ ವಚನಗಳೆಷ್ಟೋ! ವಚನಗಳಲ್ಲದೆ ಸಿದ್ಧರಾಮನು ಸ್ವರವಚನ, ತ್ರಿವಿಧಿಗಳನ್ನು ಕೂಡ ರಚಿಸಿದ್ದಾನೆ. ಸೊನ್ನಲಿಗೆಯ ಹಾಗೂ ಸಿದ್ಧರಾಮನ ಕುರಿತು ವರ್ಣನೆ ಮಾಡುವ ೨೦ಕ್ಕೂ ಹೆಚ್ಚು ಶಾಸನಗಳು ಲಭ್ಯವಾಗಿವೆ. ವಿಪುಲವಾಗಿ ದೊರೆತ ಆಕರಗಳನ್ನು ಮುಂದಿಟ್ಟುಕೊಂಡು ಕಳೆದ ಆರೇಳು ದಶಕಗಳಲ್ಲಿ ಸಿದ್ಧರಾಮನ ಕುರಿತು ಅಪಾರವಾದ ಸಾಹಿತ್ಯ ನಿರ್ಮಾಣವಾಗಿದೆ. ಆದರೆ ದುರ್ದೈವದಿಂದ ವಿದ್ವಾಂಸರ ಕೃತಿಗಳಲ್ಲಿ ವೈಚಾರಿಕ ಸಮಾನತೆ ಮೂಡದೆ, ಆತನನ್ನು ತಮಗೆ ಸರಿಕಂಡಂತೆ ಭಿನ್ನಭಿನ್ನವಾಗಿ ಚಿತ್ರಿಸಿದ್ದೇ ಸಮಸ್ಯೆಯಾಗಿ ಪರಿಣಮಿಸಿದೆ. ಕುರುಡರು ಆನೆಯನ್ನು ಸ್ಪರ್ಶಿಸಿ ಅದರ ವರ್ಣನೆಯನ್ನು ಮಾಡಿದಂತೆ ಸಿದ್ಧರಾಮನು ಚಿತ್ರಿತನಾಗಿದ್ದಾನೆ.

ಕ್ರಿ.ಶ.೧೯೪೧ರಲ್ಲಿ ಡಿ.ಎಲ್.ನರಸಿಂಹಾಚಾರ್ಯ ಮತ್ತು ಟಿ.ಎಸ್.ವೆಂಕಣ್ಣಯ್ಯ ಅವರು ನಾಲ್ಕು ಹಸ್ತಪ್ರತಿಗಳ ಸಹಾಯದೊಂದಿಗೆ ಜಂಟಿಯಾಗಿ ಪ್ರಕಟಿಸಿದ "ರಾಘವಾಂಕನ ಸಿದ್ಧರಾಮ ಚರಿತ್ರೆ" ಹಾಗೂ ತದನಂತರ ಕ್ರಿ.ಶ. ೧೯೫೨ರಲ್ಲಿ ಎಚ್.ದೇವೀರಪ್ಪನವರ ತಾಡೋಲೆಯನ್ನು ಅನುಕರಿಸಿ, ಡಿ.ಎಲ್.ಎನ್.ರ ಕ್ರಿ.ಶ.೧೯೪೧ರ ಪರಿಷ್ಕೃತ ಆವೃತ್ತಿ, ಸಿದ್ಧರಾಮನ ಚರಿತ್ರೆಯ ಕುರಿತ ಆಕ್ಷೇಪಣೆಗಳಿಂದಲೇ ಪ್ರಾರಂಭವಾದ ಮೊದಲ ಹಂತದ ಕೃತಿಗಳು. ಡಿ.ಎಲ್.ಎನ್. ಪ್ರಕಾರ ಈವರೆಗೆ ದೊರೆತ ಸಿದ್ಧರಾಮನ ೩೬೨೬ ವಚನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕ್ಷಿಪ್ತ ವಚನಗಳೇ ಸೇರಿವೆ. ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು ತನ್ನ ಗುರುಗಳೆಂದು, ಅವರಿಂದ ತಾನು ಲಿಂಗೋಪದೇಶ ಪಡೆದೆನೆಂದು ಹೇಳಿಕೊಳ್ಳುವ ಸಿದ್ಧರಾಮನ ವಚನಗಳು ನಿಜವಚನಗಳಲ್ಲ.

ಸ್ಥಾವರಲಿಂಗ ಪೂಜಕನಾದ ಸಿದ್ಧರಾಮನ ಇಷ್ಟಲಿಂಗ ಕುರಿತು ವಚನಗಳು ಪ್ರಕ್ಷಿಪ್ತ ವಚನಗಳಾಗಿರಬೇಕು. ಇಲ್ಲವಾದರೆ ಸಿದ್ಧರಾಮನ ವಚನಗಳನ್ನು ಓದಿದ್ದ ಕವಿ ರಾಘವಾಂಕ ಈ ಕುರಿತು ತನ್ನ ಕಾವ್ಯದಲ್ಲಿ ಪ್ರಸ್ತಾಪಿಸುತ್ತಿದ್ದ ಸಿದ್ಧರಾಮ ಲಿಂಗಾಯತನಾಗಿರದೆ ಶೈವ ಮತ ಸಂಪ್ರದಾಯಕ್ಕೆ ಸೇರಿದವನಾಗಿದ್ದ. ಆತನು ಶೈವನಾಗಿದ್ದಕ್ಕೆ, ರಾಘವಾಂಕನ ಸಿದ್ಧರಾಮನ ಚಾರಿತ್ರದ "....ಸಿದ್ಧನಾಥಂ ಶೈವಸಾಮ್ರಾಜ್ಯಸುಖ..."ದಲ್ಲಿದ್ದನೆಂಬ ವರ್ಣನೆಗಳೆ ನಮಗೆ ಸಾಕ್ಷಿ. ಸಿದ್ಧರಾಮ ಹುಟ್ಟಿದ ಕೂಡಲೇ ಆತನಿಗೆ ಲಿಂಗಧಾರಣೆಯಾಗದೆ, ಜಾತಕರ್ಮಾದಿಗಳು ನಡೆದವು. ಇದು ಲಿಂಗಾಯತ ಸಂಪ್ರದಾಯಕ್ಕೆ ವಿರೋಧವಾದ ಸಂಸ್ಕಾರ. ಸಿದ್ಧರಾಮನು ದೇವಾಲಯ ನಿರ್ಮಾಣ, ನಿತ್ಯ ಹೋಮ ಹವನಾದಿ ಕ್ರಿಯೆಗಳಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದು ಕೂಡ ಲಿಂಗಾಯತಕ್ಕೆ ವಿರೋಧವಾದುದು. ಆತನು ಸ್ಥಾವರಪೂಜಕನಾಗಿದ್ದನೆಂಬುದಕ್ಕೆ ಹರಿಹರ, ರಾಘವಾಂಕರ ಕಾವ್ಯಗಳು, ಬಸವಪುರಾಣ (೧೩೬೯) ಪ್ರಮಾಣ.

ಸಿದ್ಧರಾಮನಿಗೆ ಲಿಂಗದೀಕ್ಷೆ ಕೊಡಿಸುವ ಅಭಿಲಾಷೆಯಿಂದ ತನ್ನ ಕಾವ್ಯದಲ್ಲಿ ಮೊಟ್ಟಮೊದಲು ಆತನನ್ನು ಕಲ್ಯಾಣಕ್ಕೆ ತಂದು ಬಿಟ್ಟವನು ಚಾಮರಸ. ಶಿವಗಣಪ್ರಸಾದಿ ಮಹಾದೇವಯ್ಯನವರ ಶೂನ್ಯಸಂಪಾದನೆಯಲ್ಲಿ ಇಲ್ಲದ ಲಿಂಗದೀಕ್ಷೆಯನ್ನು ಮುಂದಿನ ಎಲ್ಲ ಸಂಪಾದನಾಕಾರರು ಪ್ರಸ್ತಾಪಿಸಿದ್ದಾರೆ. ಅವರು ಚೆನ್ನಬಸವಣ್ಣನಿಂದ ಸಿದ್ಧರಾಮನಿಗೆ ದೀಕ್ಷೆ ಮಾಡಿಸಿದರು. ಲಿಂಗದೀಕ್ಷೆ ಹಾಗೂ ಇನ್ನಿತರ ಕೆಲವು ಕಲ್ಪಿತ ಪ್ರಸಂಗಗಳನ್ನು ತೂರಿಸುವ ಮುಖ್ಯ ಉದ್ದೇಶದಿಂದಲೇ ಶೂನ್ಯಸಂಪಾದನೆಗಳು ಪರಿಷ್ಕೃತಗೊಂಡವು. ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದೊಯ್ಯುವದಾಗಲೀ, ಅಲ್ಲಮನಿಂದ ಆತನಿಗೆ ತತ್ವೋಪದೇಶ ಮಾಡಿಸುವುದಾಗಲಿ, ಹಾಗೆನೆ ಆತನನ್ನು ಚೆನ್ನಬಸವಣ್ಣನ ಶಿಷ್ಯನನ್ನಾಗಿಸುವಂಥ ಯಾವ ಅಂಶಗಳೂ ರಾಘವಾಂಕನ ಸಿದ್ಧರಾಮ ಚಾರಿತ್ರ್ಯದಲ್ಲಿ ಕಾಣುವುದಿಲ್ಲ.

ಈ ಆಕ್ಷೇಪಣೆಗಳನ್ನು ವಿಮರ್ಶಿಸಿ ಸಾಧಾರ ಮತ್ತು ಸೂಕ್ತ ಉತ್ತರ ಕೊಡುವ ಪ್ರಯತ್ನ ಮಾಡಿದವರು ಎಂ.ಬಿ. ನೇಗಿನಹಾಳ.

ಡಿ.ಎಲ್.ಎನ್. ಅವರು ಸಂಪಾದಿಸಿದ ಸಿದ್ಧರಾಮ ಚಾರಿತ್ರದಲ್ಲಿ ೯ ಸಂಧಿಗಳಿವೆ. ಆದರೆ ನೇಗಿನಹಾಳ ಅವರು ೫ನೇ ಸಂಧಿಯಲ್ಲಿ ಕೇವಲ ೧೭ ಪದ್ಯಗಳಿರುವುದನ್ನು ಗಮನಿಸಿ, ಉಳಿದ ಸಂಧಿಗಳು ದೀರ್ಘವಾಗಿದ್ದು, ಇದು ಮಾತ್ರ ಚಿಕ್ಕದಾಗಿರುವುದು ಸಂಶಯಕ್ಕೆ ಎಡೆ ಮಾಡಿಕೊಡುತ್ತದೆ ಎಂದು ಅವರ ಭಾವಿಸುತ್ತಾರೆ.

ಖ್ಯಾತ ಸಂಶೋಧಕ ಎಂ.ಎಂ. ಕಲಬುರ್ಗಿ ಅವರು ಸಿದ್ಧರಾಮ ಚಾರಿತ್ರದ ಕೆಲವು ಭಾಗಗಳು ಮತಾಂಧರ ಕೈಯಲ್ಲಿ ಸಿಕ್ಕು ನಷ್ಟವಾಗಿರುವ ಸಂಭವವಿದೆ ಎಂಬ ಸಂಶಯ ತಾಳುತ್ತಾರೆ. ಅದಕ್ಕೆ ಅವರು ಕೊಡುವ ಆಧಾರವೆಂದರೆ ರಾಘವಾಂಕನನ್ನು ಕುರಿತು ಕಾವ್ಯ ರಚಿಸಿದ ಸಿದ್ಧನಂಜೇಶ 'ರಾಘವಾಂಕ ಚಾರಿತ್ರ'ದಲ್ಲಿ 'ಸಿದ್ಧರಾಮ ಚಾರಿತ್ರ'ದ ಸಾರಾಂಶವನ್ನು ಬರೆಯುತ್ತಾನೆ. ಸಿದ್ಧನಂಜೇಶ ಅಲ್ಲಿ ಅಮುಗಿದೇವನ ಉಪದೇಶ, ಪ್ರಭುವಿನೊಂದಿಗೆ ಕಲ್ಯಾಣಗಮನ, ಚನ್ನಬಸವಣ್ಣನಿಂದ

ಉಪದೇಶ, ಮಧುವಯ್ಯ-ಹರಳಯ್ಯರ ಪ್ರಸಂಗ ಇವು ಪ್ರಕಟಿತ ಸಿದ್ಧರಾಮ ಚಾರಿತ್ರದಲ್ಲಿಲ್ಲ. ಈ ಭಾಗಗಳನ್ನು ಯಾರೋ ಉದ್ದೇಶಪೂರ್ವಕ ನಷ್ಟ ಮಾಡಿರಬಹುದೆಂಬ ಊಹೆ. ಇದನ್ನು ಪರಿಶೀಲಿಸಿದ ನೇಗಿನಹಾಳ ಅವರು ಡಿ.ಎಲ್.ಎನ್. ಅವರ ೯ ಸಂಧಿಗಳ ಬದಲಾಗಿ ೮ ಸಂಧಿಗಳ ಶಾಸ್ತ್ರಶುದ್ಧಪ್ರತಿಯನ್ನು ಸಿದ್ಧಪಡಿಸಿದರು. ಪ್ರಸ್ತುತ ಕೃತಿಗೆ ಸುದೀರ್ಘ ಪ್ರಸ್ತಾವನೆ ಬರೆದ ನೇಗಿನಹಾಳ ಅವರು ಸಿದ್ಧರಾಮನನ್ನು ಕುರಿತ ಶಾಸನಗಳ ಚಾರಿತ್ರಿಕ ಅಂಶ ಮತ್ತು ಸಾಹಿತ್ಯಿಕ ಕೃತಿಗಳಲ್ಲಿ ಅಡಗಿರುವ ಚಾರಿತ್ರಿಕ ಅಂಶಗಳನ್ನು ಅತ್ಯಂತ ವಸ್ತುನಿಷ್ಠವಾಗಿ ವ್ಯವಸ್ಥಿತವಾಗಿ ಶೋಧಿಸುವ ಪ್ರಯತ್ನ ಮಾಡಿದ್ದಾರೆ.

ಆದರೆ ಗುರುಪೀಠದವರು ಸಿದ್ಧರಾಮನನ್ನು ಶಿವಾಚಾರ್ಯನನ್ನಾಗಿ ಮಾಡುವ ಉದ್ದೇಶದಿಂದಲೇ ಮೂಲ ರಾಘವಾಂಕನ ಸಿದ್ಧರಾಮ ಚಾರಿತ್ರವನ್ನು ತಿದ್ದಿ, ಮೂಲ ಕಥೆಯ ವಿನ್ಯಾಸವನ್ನೇ ಬದಲಾಯಿಸಿದ್ದಾರೆ. ಶಿವಯೋಗಿಯಾಗಿದ್ದ ಸಿದ್ಧರಾಮನನ್ನು ಒಬ್ಬ ಶಿವಾಚಾರ್ಯರನ್ನಾಗಿ ಮಾಡಿದ್ದಾರೆ. ಅಲ್ಲಮಪ್ರಭು ಸಿದ್ಧರಾಮನನ್ನು ಕಲ್ಯಾಣಕ್ಕೆ ಕರೆದುಕೊಂಡು ಬಂದು, ಚನ್ನಬಸವಣ್ಣನವರಿಂದ ಲಿಂಗದೀಕ್ಷೆ ಕೊಡಿಸುತ್ತಾನೆ ಎಂಬುದು ಮೂಲ ರಾಘವಾಂಕನ ಕಥೆ. ಆದರೆ ಈ ಕೃತ್ರಿಮ ಸೃಷ್ಟಿಯ ಕೃತಿಯಲ್ಲಿ ಸಿದ್ಧರಾಮನೇ ಚನ್ನಬಸವಣ್ಣನವರಿಗೆ ಲಿಂಗದೀಕ್ಷೆ ಕೊಡುತ್ತಾನೆ. ರಾಘವಾಂಕನ ಹಸ್ತಪ್ರತಿಯನ್ನು ತಿದ್ದುವ ಪ್ರಕ್ರಿಯೆ ನಡೆದದ್ದು **ಸವದತ್ತಿ ತಾಲೂಕಿನ ಹೂಲಿಯ ಮಠದಲ್ಲಿ** ಎಂಬುದು ಗಮನಾರ್ಹ ಸಂಗತಿ.

ಮಹಾಕವಿ ರಾಘವಾಂಕ ಪಂಡಿತ ವಿರಚಿತಮಾದ ಶ್ರೀ ಸಿದ್ಧರಾಮೇಶ್ವರ ಚರಿತ್ರೆಯ ಪ್ರಕಾಶಕರಾದ ಶ್ರೀ ಕೇದಾರ ಆದಿಲಿಂಗಪ್ಪ ಹಬ್ಬು ಅವರು ಪ್ರಕಾಶಕರ ಮಾತನ್ನು ಮತ್ತು ಪ್ರಸ್ತಾವನೆಯನ್ನು ತಾವೇ ಬರೆದಿದ್ದಾರೆ.

"೧. ಶ್ರೀ ಸಿದ್ಧರಾಮೇಶ್ವರರ ಚರಿತ್ರೆಯು ಕನ್ನಡದಲ್ಲಿರುವುದರಿಂದ, ಗಡಿನಾಡಿನಲ್ಲಿರುವ ತಮಗೆ ತಿಳಿದಿರಲಿಲ್ಲ. ೧೯೬೨ ರಲ್ಲಿ ಧಾರವಾಡದ ಕ.ಕಾಲೇಜಿನ ಕಪ್ಪಿಕೇರಿಯವರು ಹಿಂದಿಯಲ್ಲಿ ಬರೆದ ಲೇಖನವನ್ನು ಓದಿದಾಗ ಅದು ಅಸಮಂಜಸವೆಂದು ಗೊತ್ತಾಯಿತು.

೨. ಇದನ್ನು ತಿಳಿದುಕೊಳ್ಳುವ ಸಲುವಾಗಿ ಬಾಬಾಸಾಹೇಬ ಸಿದ್ರಾಮಪ್ಪ ಬಹಿರೋ ಪಾಟೀಲರ ನೇತೃತ್ವದಲ್ಲಿ ಒಂದು ಶಿಷ್ಟಮಂಡಲವನ್ನು ಇ.ಸನ್೧೯೬೨ ರಲ್ಲಿ ಶಂಭುಲಿಂಗ ಶಿವಾಚಾರ್ಯರು ಹಿರಿಯಮಠ ವಿಜಾಪುರ, ಹುಲ್ಯಾಳ ಇವರ ಬಳಿಗೆ ಕಳಿಸಲಾಯಿತು.

೩. ಅವರ ಸಲಹೆಯ ಮೇರೆಗೆ ಎಲ್ಲೆಡೆಯಲ್ಲಿ ಪರಿಶೋಧಿಸಿ ಮೂರು ಹಸ್ತಪ್ರತಿಗಳನ್ನು ಸಂಪಾದಿಸಲಾಯಿತು. ಅವುಗಳಲ್ಲಿ ಸೊಲ್ಲಾಪುರದ ಮಣೂರ ಮಠದ ಗ್ರಂಥಸಂಗ್ರಹದಿಂದ ಒಂದು ತಾಡೋಲೆ ಹಸ್ತಪ್ರತಿ. ಇದನ್ನು 'ಕ' ಎಂದು ಗುರುತಿಸಲಾಯಿತು. ಇನ್ನೊಂದು ರಾಯಚೂರು ಜಿಲ್ಲೆಯ ದೇವದುರ್ಗದ ಹಿರಿಯ ಮಠದ ಹಳೆಯ ತಾಡೋಲೆ ಹಸ್ತಪ್ರತಿ. ಇದನ್ನು 'ಖ' ಎಂದು ಗುರುತಿಸಲಾಯಿತು. ಇನ್ನು ಮೂರನೆಯದು ಬೆಳಗಾವಿ ಜಿಲ್ಲೆಯ, ಸವದತ್ತಿ ತಾಲೂಕಿನ ಹೂಲಿಯ

ಹಿರಿಯ ಮಠದಲ್ಲಿ ದೊರೆತುದು. ಇದನ್ನು 'ಗ' ಪ್ರತಿಯೆಂದು ಗುರುತಿಸಲಾಯಿತು. ಇವುಗಳಲ್ಲಿ 'ಗ' ಪ್ರತಿ ಮಾತ್ರ ಶುದ್ಧವೂ, ಪೂರ್ಣವೂ ಆಗಿದೆ. 'ಖ' ಪ್ರತಿಯು ಶುದ್ಧವಾಗಿದ್ದರೂ ಅರ್ಧಮರ್ಧವಾಗಿದೆ. 'ಕ' ಪ್ರತಿಯು ಅಶುದ್ಧವೂ ಅರ್ಧಮರ್ಧವೂ ಆಗಿದ್ದು ಉಪಯುಕ್ತವಾಗಿರುವುದಿಲ್ಲ.

೪. ಈ ಮೂರು ಹಸ್ತಪ್ರತಿಗಳನ್ನಿಟ್ಟುಕೊಂಡು ಈ ಗ್ರಂಥವನ್ನು ತಮ್ಮ ಶ್ರೀ ಮಹಾಶಿವಯೋಗಿಸಿದ್ಧರಾಮೇಶ್ವರ ದೇವಸ್ಥಾನ ಪೂಜಾರಿ ಹಬ್ಬು ಮಂಡಳ, ಸೊಲ್ಲಾಪೂರದಿಂದ ಪ್ರಕಟಿಸಲಾಯಿತು.

೫. 'ಗ' ಪ್ರತಿಯ ಕೊನೆಯಲ್ಲಿ ಬಿಜ್ಜಳನ ಶಾಸನೋಲ್ಲೇಖವಿದೆ."[೧೬]

ಪ್ರಸ್ತಾವನೆಯಲ್ಲಿ ಹೀಗೆ ವಿವರಿಸಿದ್ದಾರೆ

"೧. ಶ್ರೀ ಜಾಯಪ್ಪ ದೇಸಾಯಿ ಶಿರಸಂಗಿ ಇವರು ಬರೆದ ಶ್ರೀ ಸಿದ್ಧರಾಮೇಶ್ವರ ಚರಿತಾಮೃತವು ಸಪ್ರಮಾಣವಾಗಿರುವುದು.

೨. ೧೫ ನೆಯ ಶತಮಾನದಿಂದ ಇತ್ತೀಚೆಗಿನ ಕೆಲವು ದುರ್ವಿನೀತರು ಸಿದ್ಧರಾಮನಿಗೆ ಅಗೌರವವನ್ನುಂಟುಮಾಡಿದ್ದಾರೆ.

೩. ಅಲ್ಲಮ ಮತ್ತು ಚನ್ನಬಸವಣ್ಣನಿಗೆ ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ.

೪. ದುರ್ವಿನೀತ ದುರಾಚಾರಿಗಳಾದ ಕೆಲವು ಅಹಂಮನ್ಯರಾದ ಸ್ಥಳ–ಪರಸ್ಥಳೀಯ ಲೇಖಕರು ಸಿದ್ಧರಾಮನಿಗೆ ಸಂಬಂಧಿಸಿದಂತೆ ಅಪ್ರಮಾಣವೂ ಅಸಂಬದ್ಧವೂ ಆದ ಸಂಗತಿಗಳನ್ನು ಪ್ರಚಾರ ಮಾಡುತ್ತಿದ್ದಾರೆ.

೫. ಆ ದುರ್ವಿನೀತ ಲೇಖಕರ ದುಷ್ಕೃತಿಯನ್ನು ಸೊಲ್ಲಾಪುರ ನಿವಾಸಿಗಳು ಬಯಲಿಗೆಳೆಯುವ ಸದಾಶಯವುಳ್ಳವರಾಗಿದ್ದಾರೆ.

೬. ಸಿದ್ಧರಾಮ ಶಿವಯೋಗಿಯ ಬಗ್ಗೆ ಮನಬಂದಂತೆ ಅಪ್ರಮಾಣವಾಗಿ ಅಸಮಂಜಸವಾಗಿ ಕನ್ನಡ ಪ್ರಭುಲಿಂಗಲೀಲೆ, ಶೂನ್ಯಸಂಪಾದನೆ, ನಾಮಾಂತರಗೊಳಿಸಲ್ಪಟ್ಟ ಚೆನ್ನಬಸವ ಪುರಾಣಗಳನ್ನು ಬರೆದಿದ್ದಾರೆ.

೭. ಶ್ರೀ ಸಿದ್ಧೇಶ್ವರ ಪಂಚಕಮಿಟಿಯವರು ಶ್ರೀ ಸಿದ್ಧರಾಮಸ್ವಾಮಿ ಕುಂಟೋಜಿಮಠ ಸೊಲ್ಲಾಪುರ, ಶ್ರೀಮತಿ ಜಯದೇವಿತಾಯಿ ಲಿಗಾಡೆ ಸೊಲ್ಲಾಪುರ, ಕೈ. ಕಲ್ಯಾಣಶೆಟ್ಟಿ ವಕೀಲರು ಸೊಲ್ಲಾಪುರ, ಕೊಪ್ಪಿಕೇರಿ ಧಾರವಾಡ, ಸಿ. ಎನ್. ಮಹಾದೇವಯ್ಯ ತಿಪಟೂರ ಮತ್ತು ಇವರ ಅಂಧಾನುಕರಣ ಮಾಡುವ ಅನುಯಾಯಿಗಳಿಗೆ ನಿಷೇಧ ಹಾಕಿ, ದಿ ೧೬–೧೦–೧೯೬೨ ರಂದು ಜಾಹಿರಾತನ್ನು ಪ್ರಕಟಿಸಿದ್ದರು ಮತ್ತು ಉತ್ತರಿಸಲು ತಿಳಿಸಿದ್ದರು.

೮. ಯಾರಿಂದಲೂ ಉತ್ತರ ಬಾರದಿದ್ದರಿಂದ ಸಿ.ಬ. ಧುಮ್ಮಾ ವಕೀಲರ ಅಧ್ಯಕ್ಷತೆಯಲ್ಲಿ ದಿ ೨೦–೧೧–೧೯೬೨ ರಂದು ಸಭೆ ಸೇರಿ ಮೇಲಿನ ಗ್ರಂಥಗಳನ್ನು ನಿಷೇಧಿಸುವ ಠರಾವನ್ನು ಸರ್ವಾನುಮತದಿಂದ ಪಾಸು ಮಾಡಲಾಯಿತು.

೯. ದಿ ೧೬–೧೦–೧೯೬೨ ರಂದು ಪ್ರಕಟಿಸಿದ ಜಾಹಿರಾತನ್ನು ಕುರಿತು, ಪಂಚಪೀಠಾಧೀಶರಿಂದಲೂ ಶಂಭುಲಿಂಗ ಶಿವಾಚಾರ್ಯರು ವಿಜಾಪೂರ (ಹುಲ್ಯಾಳ), ನೀಲಕಂಠ ಶಿವಾಚಾರ್ಯರು ಹೂಲಿ, ಚನ್ನವೀರ ಶಿವಾಚಾರ್ಯರು ಬಿಚ್ಚಾಲೆಮಠಮರಿ, ಯೋಗಿರಾಜೇಂದ್ರ ಶಿವಾಚಾರ್ಯರು ಹೊಟಗಿ ಮುಂತಾದವರಿಂದಲೂ ಬಂದ ಸಂದೇಶಗಳನ್ನು

ದಿ ೨೦–೧೧–೧೯೬೨ ರಂದು ಸೇರಿದ ಸಭೆಯಲ್ಲಿ ಓದಲಾಯಿತು.

೧೦. ಈ ಠರಾವನ್ನು ವಿರೋಧಿಗಳಿಗೆಲ್ಲಾ ಕಳಿಸಲಾಯಿತಾದರೂ ಅವರಿಂದ ಉತ್ತರ ಬಾರದಿದ್ದರಿಂದ ಆ ಬರಹಗಳೆಲ್ಲ ಬನಾವಟೆ ಎಂದು ತಿರಸ್ಕರಿಸಲ್ಪಟ್ಟವು.

೧೧. ನೀಲಕಂಠ ಶಿವಾಚಾರ್ಯರು ಹೂಲಿ ಇವರ ಸಂದೇಶವನ್ನು ಪಂ.ಚನ್ನಬಸವಶರ್ಮಾ ಮಂದ್ರೂಪಕರ ಇವರು ಮರಾಠಿ ಭಾಷೆಗೆ ಅನುವಾದಿಸಿದ್ದನ್ನು 'ಸತ್ಯದರ್ಶನ' ಎಂಬ ಹೆಸರಿನಿಂದ ಸಿದ್ಧರಾಮೇಶ್ವರ ಗ್ರಂಥಮಾಲೆಯ ೧ನೆಯ ಪುಷ್ಪವಾಗಿ ಪ್ರಕಟಿಸಲಾಯಿತು. ಕನ್ನಡ 'ಸತ್ಯದರ್ಶನ' ೨ನೆಯ ಪುಷ್ಪವಾಗಿ, ಅಲ್ಲಮ ಪ್ರಭುದೇವರ ರಗಳೆಯು ೩ನೆಯ ಪುಷ್ಪವಾಗಿ ಪ್ರಕಾಶಿತವಾದವು ಮತ್ತು ಪುಕ್ಕಟೆಯಾಗಿ ಹಂಚಲ್ಪಟ್ಟವು.

೧೨. ಶ್ರೀ ಸಿದ್ಧರಾಮೇಶ್ವರ ಚರಿತ್ರೆಯನ್ನು ೨೦–೬–೧೯೬೭ ರಂದು ಪ್ರಕಟಿಸಲಾಯಿತು."[೧೭]

ಈ ಮಾತುಗಳನ್ನು ಗಮನಿಸಿದರೆ, ಇದೊಂದು ಸುಳ್ಳು ಸೃಷ್ಟಿಯೆಂಬುದು ಮೇಲುನೋಟಕ್ಕೆ ತಿಳಿದು ಬರುತ್ತದೆ. ಮೂಲ ರಾಘವಾಂಕನ ಕೃತಿಗೆ ಪರ್ಯಾವಾಗಿ ಇವರು ಸೇರಿಸಿದ ಕೃತಕ ಸೃಷ್ಟಿಯ ಪದ್ಯಗಳ ವಿವರ ಹೀಗಿದೆ:

**ಸೊಲ್ಲಾಪುರ ಸಂಪಾದನೆಯಲ್ಲಿ ಸೇರ್ಪಡೆಯಾದ ಪದ್ಯಗಳು :**

ಸಂಧಿ ೧– ೨, ೩೨, ೩೩, ೩೪, ೩೫, ೩೬, ೩೭, ೩೮, ೩೯, ೪೦, ೪೧, ೪೨, ೪೩, ೪೪, ೪೫, ೪೭, ೪೮, ೪೯, ೫೦, ೫೪, ೫೫, ೭೪, ೭೫, ೭೬, ೭೭, ೮೦, ೮೨, ೮೩, ೮೪, ೮೫, ೮೬, ೮೭, ೮೮, ೮೯, ೯೦, ೯೧, ೯೨, ೯೪, ೯೫, ೯೮, ೯೯, ೧೦೦, ೧೦೧=೪೩

ಸಂಧಿ ೨– ೪೫, ೪೬, ೪೭, ೪೮, ೪೯, ೫೦ =೬

ಸಂಧಿ ೩–೧೩, ೧೪, ೧೫, ೧೬, ೧೭, ೧೮, ೨೧, ೫೫, ೫೬, ೫೮, ೫೯, ೬೦, ೬೧, ೬೨, ೬೩, ೬೪, ೬೫, ೬೬, ೬೭, ೬೮, ೬೯, ೭೦, ೭೧, ೭೨, ೭೩, ೭೪, ೭೫, ೭೬, ೭೭, ೭೮, ೭೯, ೮೦, ೮೧ =೩೩

ಸಂಧಿ ೪–೬೦, ೬೧ =೨

ಸಂಧಿ ೫–೦೦

ಸಂಧಿ ೬–೦೦

ಸಂಧಿ ೭-೦೦

ಸಂಧಿ ೮-೦೦

ಸಂಧಿ ೯- ೧, ೧೮, ೨೨, ೨೩, ೨೪, ೨೫, ೨೬, ೨೭, ೨೮, ೨೯, ೩೦, ೩೧, ೪೮, ೪೯, ೫೦, ೫೧, ೫೨, ೫೩, ೫೪, ೫೫, ೫೬, ೫೭, ೫೮, ೫೯, ೬೦, ೬೧, ೬೨, ೬೩, ೬೪, ೬೫, ೬೬, ೬೭, ೬೮, ೬೯, ೭೦, ೭೧, ೭೨, ೭೩, ೭೪, ೭೫, ೭೬, ೭೭, ೭೮, ೭೯, ೮೦, ೮೧, ೮೨, ೮೩, ೮೪, ೮೫, ೮೬, ೮೭, ೮೮, ೮೯, ೯೦, ೯೧, ೯೨, ೯೩, ೯೪, ೯೫, ೯೬, ೯೭, ೧೧೦, ೧೧೧, ೧೧೪, ೧೧೫, ೧೨೩, ೧೨೪, ೧೨೯ = ೬೯ ಒಟ್ಟು ೧೫೩ ಪದ್ಯಗಳು.

ಸೊಲ್ಲಾಪುರದ ಸಂಪಾದನೆಯಲ್ಲಿ ಪ್ರಭುದೇವರ ರಗಳೆಯಿಂದ ಬಂದ ೬೪ ಸಾಲುಗಳು, ಇಲ್ಲಿ ೧೬ ಪದ್ಯಗಳಾಗಿ ಮಾರ್ಪಟ್ಟಿವೆ.

ಸಂಧಿ ೯- ೩೨, ೩೩, ೩೪, ೩೫, ೩೬, ೩೭, ೩೮, ೩೯, ೪೦, ೪೧, ೪೨, ೪೩, ೪೪, ೪೫, ೪೬, ೪೭ =೧೬

ನೇಗಿನಹಾಳ ಅವರ ಸಂಪಾದನೆಯಿಂದ ಬಿಟ್ಟು ಹೋದ ಪದ್ಯಗಳು

ಗತಿ ೧- ೩೧, ೩೨, = ೦೨

ಗತಿ ೨- ೧, ೩, ೪, ೬, ೭ = ೦೫

ಗತಿ ೩- ೪೭, ೪೮, ೪೯ = ೦೩

ಗತಿ ೫- ೦೦

ಗತಿ ೬- ೦೦

ಗತಿ ೭- ೦೦

ಗತಿ ೮- ೭, ೮, ೯, ೧೦, ೧೧, ೧೨, ೧೩, ೧೪, ೩೭, ೩೮, ೩೯, ೪೦, ೪೪, ೪೫, ೫೨ = ೧೫

ಒಟ್ಟು ೨೫ ಪದ್ಯಗಳು.

ಇನ್ನು ನೇಗಿನಹಾಳ ಅವರ ಸಂಪಾದನೆಯಲ್ಲಿರುವ ಪದ್ಯಗಳಲ್ಲಿ ಕೆಲವು ಶಬ್ದಗಳನ್ನು, ಕೆಲವು ಸಾಲುಗಳನ್ನು ತೆಗೆದು ಹಾಕಿ, ಸೊಲ್ಲಾಪುರ ಸಂಪಾದನೆಯಲ್ಲಿ ಕೆಲವು ಶಬ್ದಗಳನ್ನು, ಕೆಲವು ಸಾಲುಗಳನ್ನು ಸೇರಿಸಲಾಗಿದೆ. ಈ ಪದ್ಯಗಳನ್ನು ಗುರುತಿಸುವುದು ಬಹಳ ಕಷ್ಟದ ಕೆಲಸವಾಗಿದೆ.

ಸೊಲ್ಲಾಪುರ ಸಂಪಾದನೆಯಲ್ಲಿ ಹರಿಹರನ ಪ್ರಭುದೇವರ ರಗಳೆಯಿಂದ ೬೪ ಸಾಲುಗಳನ್ನು ಕೃತಿಚೌರ್ಯಮಾಡಿ ೧೪ ಪದ್ಯಗಳನ್ನಾಗಿ ಮಾಡಿರುವುದು ದುರಂತದ ವಿಷಯವಾಗಿದೆ. ಅವುಗಳ ವಿವರ ಹೀಗಿದೆ:

**ಖೊಟ್ಟಿ ಸಿದ್ಧರಾಮ ಚಾರಿತ್ರದ ಪ್ರಮಾದಗಳು :**

ಸೊಲ್ಲಾಪುರ ಪ್ರಕಾಶನದವರು ಶ್ರೀ ಸಿದ್ಧರಾಮೇಶ್ವರ ಚರಿತ್ರೆಯಲ್ಲಿ ಸಾಕಷ್ಟು ಪರಿವರ್ತನೆಗಳನ್ನು ಮಾಡಿಕೊಂಡಿದ್ದಾರೆ. ಈ ಪರಿವರ್ತನೆಯಲ್ಲಿ ಬುದ್ಧಿಪೂರ್ವಕವಾಗಿ ಮಾಡಿದವುಗಳೇ ಹೆಚ್ಚು. ಕೆಲವೊಮ್ಮೆ ಅಜ್ಞತೆಯಿಂದಲೂ ಆದವುಗಳಿವೆ. ಈ ಎರಡು ರೀತಿಯಲ್ಲಿಯೂ ಕೆಲವು ಪ್ರಮಾದಗಳು ಸಂಭವಿಸಿರುವುದಂತೂ ನಿಜವೆ. ಅಂತಹ ಕೆಲವು ಇಲ್ಲಿವೆ.

೧. 'ಸೊನ್ನಲಿಗಿ ಪುರದಲ್ಲಿ ಸೋಮದೇವನ ಸುತನು.... ಮುದ್ದಗೌಡನು'(೧/೪೩) ಇಲ್ಲಿ ಸೊನ್ನಲಿಗೆಯನ್ನು ಪುರವೆಂದು ಕರೆಯಲಾಗಿದೆ. ಮೂಲದಲ್ಲಿ ಅದು 'ಕಿಱುವಳ್ಳಿ'ಯೆಂದೇ ಬರುತ್ತದೆ. ಇದೇ ಸರಿಯಾದುದು. ಏಕೆಂದರೆ ಮುಂದೆ ಸೋಮಧರನು 'ಚಾಮವ್ವೆ ಮಗಳೆ ನಿನ್ನೂರೊಳೊಂದು ಕ್ರೋಶ ಭೂಮಿಯಂ ಸಿದ್ಧರಾಮಂಗೆ ಕೊಡು. ಕೊಟ್ಟಡಭಿರಾಮದಿಂದೆಮಗೆ ಪುರಮಂ ರಚಿಸಿದಪಂ' (೩/೪೬) ಎಂದು ತನಗಾಗಿ ಪುರನಿರ್ಮಿಸಲು ಕ್ರೋಶ ಭೂಮಿಯನ್ನು ಚಾಮವ್ವೆಗೆ ಬೇಡುತ್ತಾನೆ. ಕಿಱುವಳ್ಳಿಯಿದ್ದುದು ಸಿದ್ಧರಾಮನಿಂದ ಪುರವಾಗುತ್ತದೆ.

೨. 'ಮುದ್ದಗೌಡನು ಬೆಳೆದು....ಅಷ್ಟವಯದವನಾಗಲು ತಂದೆಯು ಪುರದಲ್ಲಿರುವ ವೀರಮಾಹೇಶ್ವರರ ಸನ್ನಿಧಿಯಲ್ಲಿ ಪಂಚಕಳಶಗಳನ್ನು ಹೂಡಿ ಅಯ್ಯಾಚಾರ-ಗುರುದೀಕ್ಷೆಯನ್ನಿತ್ತು ಅನುಗ್ರಹ ಮಾಡುತ್ತಾನೆ. (೧/೪೩) ಮುಂದೆ ಉಪನಯನ ಸಂಸ್ಕಾರವನ್ನೂ ನೆರವೇರಿಸುತ್ತಾನೆ. (೧/೪೪) ಇಲ್ಲಿ ಅಯ್ಯಾಚಾರ, ಗುರುದೀಕ್ಷೆ ಮತ್ತು ಉಪನಯನ ಸಂಸ್ಕಾರ ಎಲ್ಲವನ್ನೂ ಹೇಳಲಾಗಿದೆ. ಲಿಂಗಾಯತರಿಗೆ ಉಪನಯನ ಸಂಸ್ಕಾರವಿರುವುದಿಲ್ಲ. ಮುದ್ದಗೌಡನಿಗೆ ಉಪನಯನ ಸಂಸ್ಕಾರವಿದೆಯೆಂದರೆ ತಂದೆಯೆ ಮಾಡಿಸಿದ್ದಾನೆಂದರೆ, ಈ ಮನೆತನದವರು ಲಿಂಗಾಯತರಾಗಿರಲಿಕ್ಕಿಲ್ಲ. ಬೇರೆ ಜಾತಿಯವರಾಗಿರಬೇಕು. ಆದರೆ ಇವರನ್ನು ಹಿರಿಯ ಮಠದವರೆಂದು ಕರೆಯಲಾಗಿದೆ. ಅಂದರೆ ಹಿರಿಯ ಮಠದವರು ಲಿಂಗ ಮತ್ತು ಜನಿವಾರ ಎರಡನ್ನೂ ಧರಿಸುತ್ತಾರೆಯೆ? ಹೀಗಿದ್ದರೆ, ಇವರು ಲಿಂಗಾಯತರಿಗೆ ಗುರುಗಳಾಗಲು ಅರ್ಹರಲ್ಲ.

ಆಂಧ್ರಪ್ರದೇಶ ಮತ್ತು ದಕ್ಷಿಣ ಕರ್ನಾಟಕದಲ್ಲಿರುವ ಹಳೆಯ ಮೈಸೂರಿನಲ್ಲಿರುವ-ಆರಾಧ್ಯರು ತಮ್ಮನ್ನು 'ಲಿಂಗಿಬ್ರಾಹ್ಮಣ'ರೆಂದು ಕರೆದುಕೊಳ್ಳುವಲ್ಲಿ ಹೆಮ್ಮೆಪಡುತ್ತಾರೆ. ಸೊಲ್ಲಾಪುರದಲ್ಲಿ ಒಂದು 'ವೀರಶೈವಲಿಂಗಿ ಬ್ರಾಹ್ಮಣ ಗ್ರಂಥಮಾಲೆ'ಯೇ ಇದೆ. ಇದರ ಪ್ರಕಾಶಕರು ಅದೇ ಸೊಲ್ಲಾಪುರದ ಮಣೂರು ಮಠಾಧಿಪತಿಗಳು. ಇವರ ಹೆಚ್ಚಿನ ಒಲವಿದ್ದುದು ಬ್ರಾಹ್ಮಣ್ಯದ ಕಡೆಗೆ. ಆದ್ದರಿಂದ ಇಂದೂ ಕೂಡ ಅಯ್ಯಾಚಾರ ಮಾಡುವಾಗ ಯಜ್ಞ ಮಾಡುತ್ತಾರೆ, ಜುಟ್ಟಬಿಡುತ್ತಾರೆ. ಮುಂಜಿವೆಯಲ್ಲಿ ಮಾಡಬೇಕಾದ ಎಲ್ಲ ಕಾರ್ಯಗಳನ್ನು ಮಾಡುತ್ತಾರೆ.

೩. ಹದಿನಾರು ಕರ್ಮಗಳಲ್ಲಿ ಒಂದಾದ ಜಾತ ಕರ್ಮವೂ ಲಿಂಗಾಯತರಲ್ಲಿ ಇರುವುದಿಲ್ಲ. ಆದರೆ ಸುಗ್ಗಲಾದೇವಿಗೆ 'ಕೂಸಿಗಾನಂದದಿಂದಿಷ್ಟಲಿಂಗವ ಧರಿಸಿ.. ಜಾತಕರ್ಮವನೆಸಗು'ತ್ತಾರೆ.

(೧/೪೨) ಇದೂ ಕೂಡ ಮೇಲಿನ ದಾರಿಯಲ್ಲಿಯೇ ಮುಂದುವರಿಯುತ್ತದೆ. ಹಾಗೆಯೆ ಮುದ್ದದೇವ ಸಿದ್ಧರಾಮನಿಗೂ ಜಾತಕರ್ಮ ಮಾಡಿಸುತ್ತಾನೆ. (೧/೮೩)

ಹಿರಿಯಮಠದವರು ಈ ಒಳತಂತ್ರವನ್ನು ಸಾಮಾನ್ಯ ಲಿಂಗವಂತರಿಗೆ ತಿಳಿಯಗೊಡದೆ ಅಜ್ಞತೆಯಲ್ಲಿರಿಸಿದ್ದಾರೆ. ತಾವೇ ಗುರುಗಳೆಂಬುದನ್ನು ಬಿಂಬಿಸುತ್ತ ಹೊರಟಿದ್ದಾರೆ. ಈ ಗ್ರಂಥದುದ್ದಕ್ಕೂ ಇದರ ಛಾಯೆಯೇ ಕಂಡು ಬರುತ್ತದೆ. ಆದರೆ ಶರಣರಲ್ಲಿ ಇಂತಹ ಗುರುವರ್ಗವೆನ್ನುವುದು ಒಂದು ಇರುವುದಿಲ್ಲ. ಯೋಗ್ಯತೆಯುಳ್ಳವನು ಗುರುವಾಗುತ್ತಾನೆ.

೪. ಅಯ್ಯಾಚಾರವೆನ್ನುವುದು ಇತ್ತೀಚೆಗೆ ಬಂದು ಸೇರಿದ ಪ್ರಕ್ರಿಯೆ. ೧೨ನೆಯ ಶತಮಾನವನ್ನು ಮೊದಲು ಮಾಡಿಕೊಂಡು ಷಣ್ಮುಖ ಸ್ವಾಮಿಯವರೆಗಿನ ಯಾವ ವಚನಕಾರರೂ ಈ ಕ್ರಿಯೆಯನ್ನು ಕುರಿತು ಹೇಳಿಲ್ಲ. ವೀರಶೈವ ಪ್ರಕ್ರಿಯೆಗಳನ್ನು ವಿವರಿಸುವ ಯಾವ ಶಿವಾಗಮದಲ್ಲಿಯೂ ಅಯ್ಯಾಚಾರದ ವಿಷಯದ ಪ್ರಸ್ತಾಪವಿಲ್ಲ. ಬಹುತರವಾಗಿ ಅಲ್ಲಿ ಬರುವ ಸಾಧ್ಯತೆಯೂ ಇಲ್ಲ. ಏಕೆಂದರೆ ಕನ್ನಡ ಶಬ್ದ ಅಯ್ಯ ಸಂಸ್ಕೃತ ಶಬ್ದ ಆಚಾರ. ಇವೆರಡು ಕೂಡಿಆದ ಶಬ್ದ 'ಅಯ್ಯಾಚಾರ'. ಆಗಮಗಳಿರುವುದು ಸಂಸ್ಕೃತದಲ್ಲಿ. ಆದ್ದರಿಂದ ಅಲ್ಲಿ ಬರಲು ಹೇಗೆ ಸಾಧ್ಯ? ಆದರೆ ಇಂದು ಮಠಸ್ಥರಲ್ಲಿ ಅಯ್ಯಾಚಾರ ವ್ಯವಸ್ಥಿತವಾಗಿ ನಡೆಯುತ್ತಿದೆ. ಚತುರಾಚಾರ್ಯರಲ್ಲಿ ೧೭ನೆಯ ಶತಮಾನದಲ್ಲಿ ಕಾಶೀಪೀಠ ಸೇರಿ ಪಂಚಾಚಾರ್ಯರಾದಂತೆ, ಅದೇ ಕಾಲದಲ್ಲಿ ಈ 'ಅಯ್ಯಾಚಾರ'ವೂ ಮಠಸ್ಥರಲ್ಲಿ ಬಂದು ಸೇರಿರಬೇಕು. 'ಮಠಪತಿ'ಗಳಿಗೆ ಈ ಅಯ್ಯಾಚಾರವಿಲ್ಲದಿರುವುದನ್ನು ಗಮನಿಸಬೇಕು.

ಬಹುತರವಾಗಿ ಹಿರಿಯ ಮಠದವರು 'ಲಿಂಗಿಬ್ರಾಹ್ಮಣ'ರೆಂದು ಅಭಿಮಾನದಿಂದ ಹೇಳಿಕೊಳ್ಳುತ್ತಿರುವುದರಿಂದ ಬ್ರಾಹ್ಮಣರಲ್ಲಿ ನಡೆಯುವ 'ಉಪನಯನಕ್ಕೆ' ಸಂವಾದಿಯಾಗಿ ಈ 'ಅಯ್ಯಾಚಾರ'ವನ್ನು ಪ್ರಾರಂಭಿಸಿರಬೇಕು. ಈ ಶ್ರೀ ಸಿದ್ಧರಾಮೇಶ್ವರ ಚರಿತ್ರೆಯಲ್ಲಿ ಸಿದ್ಧರಾಮನ ತಂದೆಯಾದ ಮುದ್ದಯ್ಯನು 'ಉಪನಯನ ಸಂಸ್ಕಾರಹೊಂದಿ' (೧/೪೪) ಎಂದಿರುವುದರಿಂದ ಈ ಪದ್ಯವು ೧೩ನೆಯ ಶತಮಾನದವನಾದ ಮಹಾಕವಿ ರಾಘವಾಂಕನದಾಗಿರದೆ, ೧೭ನೆಯ ಶತಮಾನದಿಂದೀಚೆಗಿನದಾಗಿರಬೇಕು. ೧ನೆಯ ಅಧ್ಯಾಯದಲ್ಲಿ ಸೇರ್ಪಡೆಯಾದ ೪೩ ಪದ್ಯಗಳು ಸಿದ್ಧರಾಮನ ಮನೆತನವು ಹಿರಿಯಮಠದವರದೆನ್ನುವುದನ್ನು ಪ್ರತಿಪಾದನ ಮಾಡುವುದಕ್ಕಾಗಿಯೆ ಮೀಸಲಾಗಿವೆ. ಇವುಗಳಲ್ಲಿರುವ ವ್ಯಾಕರಣ ದೋಷಗಳು, ಶಿಥಿಲಬಂಧ ಇವುಗಳಿಂದ ಈ ಪದ್ಯಗಳು ಇತ್ತೀಚಿನ ರಚನೆಗಳೆಂಬುದನ್ನು ದೃಢಪಡಿಸುತ್ತವೆ.

೫. ರೇವಣಸಿದ್ಧನು ದಂಡಿಗೆಯಿಂದಿಳಿದು ಬಂದು 'ಸುಗ್ಗವ್ವೆಯುದರಮಂ ಮುಟ್ಟಿ ಸಿದ್ಧರ ದೇವನೆಜಗಿದಡೆ ಹೆದಜೆ ಕೇಳ್ದಳು ರಾಣಿ ಹೊಡವಂಟ ಕಾರಣವನು (೧/೩೯) ಎಂದು ಮೂಲದಲ್ಲಿರುವುದನ್ನು....'ಸಿದ್ಧರದೇವ ಹರಸಿದಡೆ ಹೆದಜೆ ಕೇಳ್ದಳು ಹರಸಿರ್ದಕಾರಣಮನು' (೧/೫೮) ಎಂದು ಬದಲಾಗಿಸಲಾಗಿದೆ. ಇಲ್ಲಿ ರೇವಣಸಿದ್ಧನು ಸುಗ್ಗವ್ವೆಯ ಉದರಮುಟ್ಟಿ

ಎರಗುವುದೇ ಸುಯೋಗ್ಯವೆನಿಸುತ್ತದೆ. ಸಿದ್ಧರಾಮನು 'ಉದಕವಿಲ್ಲದ ತೀರ್ಥ ನೆಲೆ ಶಿಲಾನಾಮವಿಲ್ಲದ ಶಿವಂ ತನುಧರ್ಮ ಕರ್ಮ ಕಲ್ಮಷತೆಯಿಲ್ಲದ ಹಿರಿಯನೆನಿಪ ಶಿವಸಿದ್ಧನು' (೧/೩೭) ಎಂಬುದು ಅವನಿಗೆ ಗೊತ್ತಿದೆ. 'ತ್ರಿಕಾಲೋಚಿತಜ್ಞಾನಿ' (೧/೩೮) ಎನ್ನುವುದೂ ಅವನಿಗೆ ತಿಳಿದಿದೆ. ಇದೂ ಅಲ್ಲದೆ ಸಿದ್ಧರಾಮನು ಬೇರಾರೂ ಆಗಿರದೆ ಸಾಕ್ಷಾತ್ ಶಿವನೇ ಆಗಿದ್ದಾನೆನ್ನುವುದೂ ವೇದ್ಯವಿದೆ. ಇದೆಲ್ಲವು ರೇವಣಸಿದ್ಧನಿಗೆ ಗೊತ್ತಿದ್ದುದರಿಂದಲೇ ಅವನು ಸುಗ್ಗವ್ವೆಯ ಗರ್ಭಕ್ಕೆ ನಮಸ್ಕರಿಸುತ್ತಾನೆ. ಬಹುತರವಾಗಿ ಸೊಲ್ಲಾಪುರದವರು ಮೂಲದಲ್ಲಿ ಇಲ್ಲದೆ ಇರುವ ಸಿದ್ಧರಾಮನಿಗೆ ಲಿಂಗದೀಕ್ಷೆಯನ್ನು, ಗುರುಪಟ್ಟಾಧಿಕಾರವನ್ನು ರೇವಣಸಿದ್ಧನಿಂದ ಮಾಡಿಸುವವರಿದ್ದಾರೆ. ಆದ್ದರಿಂದ ಸುಗ್ಗವ್ವೆಗೆ ಅವನು ನಮಿಸದೆ ಆಶೀರ್ವಾದ ಮಾಡುತ್ತಾನೆ. ಒಂದೆಡೆ ಸಿದ್ಧರಾಮನನ್ನು ಅಲೌಕಿಕ ವ್ಯಕ್ತಿಯನ್ನಾಗಿಸುವುದು, ಇನ್ನೊಂದೆಡೆ ರೇವಣಸಿದ್ಧನನ್ನು ರೇಣುಕಾಚಾರ್ಯನೆಂಬಂತೆ ಬಿಂಬಿಸುವುದು. ಎರಡೂ ಏಕಕಾಲದಲ್ಲಿ ಹೇಗೆ ಸಂಭವಿಸಬೇಕು? ಸಂಭವಿಸಲಿ, ಸಂಭವಿಸದಿರಲಿ ಸಿದ್ಧರಾಮನನ್ನು ಹಿರಿಯಮಠದವನನ್ನಾಗಿಯೂ ರೇವಣಸಿದ್ಧನನ್ನು ರೇಣುಕಾಚಾರ್ಯನ್ನಾಗಿಯೂ ಮುಂದಿನ ಹತ್ತಾರು ಪದ್ಯಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಆ ಕಾರಣದಿಂದ ಇತಿಹಾಸಕ್ಕೆ ವಿರುದ್ಧವಾಗಿದ್ದರೂ ಈ ಕೆಲಸಕ್ಕೆ ಕೈ ಹಾಕಿದ್ದಾರೆ ಹತ್ತಾರು ಪದ್ಯಗಳನ್ನು ಸೃಷ್ಟಿಸಿ ಸೇರಿಸಿದ್ದಾರೆ.

ತನ್ನ ಗರ್ಭಮುಟ್ಟಿ ಹರಸಿದ ಕಾರಣವನ್ನು ಸುಗ್ಗವ್ವೆಯು ಕೇಳಲು 'ಅಪ್ರತಿಮ ಶಿವಯೋಗಯುತ ನಿನಗೆ ಪುತ್ರನಾದಪನು' ಎಂದು ರೇವಣಸಿದ್ಧನು ಉತ್ತರಿಸುವನು. ತನ್ನ ಹರೆಜಾರಿದೆ, ಮುಪ್ಪುಆವರಿಸಿದೆ, ಹೊಲೆಗೆಟ್ಟಿದೆ, ಧಾತು ಪಲ್ಲಟಿಸಿದೆ. ಹೀಗಿರುವಾಗ ಇನ್ನು ತನಗೆ ಮಕ್ಕಳಾಗುವ ಬಗೆಯೆಂತು ಎಂಬುದು ಸುಗ್ಗವ್ವೆಯ ಆತಂಕ. ಅದಕ್ಕೆ ರೇವಣಸಿದ್ಧನು ಕೊಟ್ಟ ಉತ್ತರ ಮಾರ್ಮಿಕವಾದುದು.

"ಪುರುಷರೆಲ್ಲಂ ಕಂಡು ಕೂಡಲೆಳಸುವ ನಿನ್ನ
ಹರೆಯದೊಳು ಹೊಲೆಗೆ ನೆಲೆಯಪ್ಪ ಋತುಕಾಲದೊಳು
ಪರಮ ದಂಪತಿಗಳ ವಿಕಾರದನುಭವ ಹೇಯದ ಶುಕ್ಲಶೋಣಿತದೊಳು ।
ಬೆರಸಿ ಜನಿಯಿಸಲಾರ್ಪನೇ ಮರುಳೆ."[೧೮]

ಎಂದು ತಿಳಿಹೇಳಿ ಹೊರಡಲನುವಾಗಿ

"ಮಡದಿಯರ ಮಾಣಿಕವೆ ಹೋಹೆನೇ ಎಂದೊಡಲ
ತಡವಿ ಬಲಗೊಂಡು ಪೊಡಮಟ್ಟು."[೧೯]

ಹೋಗುತ್ತಾನೆ ರೇವಣಸಿದ್ದ. ಇದು ಮೂಲದಲ್ಲಿರುವಂತಹದು. ಇದರಲ್ಲಿರುವ 'ಹರೆಯದೊಳು....ಎಂಬಲ್ಲಿಂದ ಎರಡು ಸಾಲುಗಳನ್ನು

"ಗಡನೆ ನಿನ್ನಯ ಯೌವನಾವಸ್ಥೆ ಮರು ಬಂದು
ದೃಢ ಗರ್ಭಧರಿಸೆಂದು ನುಡಿದು."[೨೦]

ಎಂದು ಬದಲಿಸಿದ್ದಾರೆ. ಈ ಬದಲಾವಣೆಯು ಸಿದ್ಧರಾದಿತ್ಯನಾದ ರೇವಸಿದ್ಧನನ್ನು ಮೂರ್ಖರಾದಿತ್ಯನನ್ನಾಗಿ ಮಾಡಿದಂತಾಗಿದೆ. ಹರೆಯದಲ್ಲಿ ಸಿದ್ಧರಾಮನು ಜನಿಸಲಾರನು ಎಂದು ಹೇಳಿರುವವನು (೧/೬೧) 'ಯೌವನಾವಸ್ಥೆ ಮರುಬಂದು'... 'ಗರ್ಭಧರಿಸೆಂದು' (೧/೬೨) ಹೇಗೆ ಹೇಳುತ್ತಾನೆ? ಯಾವುದನ್ನು ದೋಷವೆಂದಿದ್ದನೋ ಅದನ್ನೇ ಈಗ ಶುಚಿ, ಶುದ್ಧ ಎಂದು ಹೇಳಿದಂತಾಗಿದೆ. ಇಷ್ಟಕ್ಕೆ ನಿಲ್ಲದೆ,

"ಸಂದ ರೇವಣಸಿದ್ಧನಾಡಿ ತಪ್ಪುವನೆ ಆ
ವಂದದೊಳೆರಡು ಮೂಱು ತಿಂಗಳಂದಿಂಗೆ ತರು
ಣೇಂದುಮುಖಿಗಂಕುರಿಸಲನುವಾದ ಗರ್ಭವನದಾವ ಕವಿ ಬಣ್ಣಿಸುವನು."[೨೧]

ಎಂದು ಮೂಲದಲ್ಲಿರುವುದನ್ನು

"ಸಂದ ರೇವಣಸಿದ್ಧನಾಡಿದ್ದು ತಪ್ಪುವುದೆ
ಎಂದಿರಲು ತಾರುಣ್ಯಬಂದೊದಗಿ ಸುಗ್ಗಲೆಗೆ
ಮುಂದಿನಾ ಮಾಸದಂಕುರಿಸಲನುವಾದ ಗರ್ಭವನಾವ ಬಣ್ಣಿಸುವನು."[೨೨]

ಹೀಗೆ ಬದಲಿಸಿ, ಸಿದ್ಧರಾಮನನ್ನು ಹೊಲೆಯಲ್ಲಿಯೆ ಹುಟ್ಟುವಂತೆ ಮಾಡಿದ್ದಾರೆ. ಇದು ಸಿದ್ಧರಾಮನ ಚಾರಿತ್ರ್ಯಕ್ಕೆಸಗಿದ ಒಂದು ಬಹುದೊಡ್ಡ ದ್ರೋಹವಾಗಿದೆ. ಸಂಪಾದಕರು ಇದನ್ನು ಗಮನಿಸಬಹುದಾಗಿತ್ತು. ಸಿದ್ಧರಾಮನ ಚರಿತ್ರೆಯನ್ನು ಉನ್ನತೀಕರಿಸುವುದಕ್ಕೆ ಹೊರಟು ಈ ರೀತಿ ಮಾಡುವುದು ಮಹಾಪರಾಧ.

೬. 'ಗಾಯತ್ರಿ' ಎಂಬುದು ಪ್ರತಿಯೊಂದು ಸಾಲಿನಲ್ಲಿಯೂ ಎಂಟು ಅಕ್ಷರಗಳುಳ್ಳ ಮೂರು ಸಾಲಿನ ಒಂದು ವೈದಿಕ ಮಂತ್ರ. ಬ್ರಾಹ್ಮಣರು ತ್ರಿ ಸಂಧ್ಯೆಯಲ್ಲಿಯೂ ಜಪಿಸುವ 'ತತ್ಸವಿತುರ್ವರೇಣ್ಯಂ ಭರ್ಗೋದೇವಸ್ಯ ಧೀಮಹಿ ಧಿಯೋ ಯೋನಃ ಪ್ರಚೋದಯಾತ್' ಎಂಬ ಮಂತ್ರ. ಈ ಮಂತ್ರವನ್ನು ಲಿಂಗದೀಕ್ಷೆಯನಿತ್ತು ಕೊಡಲಾಗದು. ಅವರಿಗೆ ಪಂಚಾಕ್ಷರಿ ಇಲ್ಲವೆ ಷಡಕ್ಷರಿ ಮಂತ್ರವನ್ನು ಕೊಡಲಾಗುತ್ತದೆ. ಆದರೆ ಇಲ್ಲಿ ಬಸವಣ್ಣನಿಗೆ ಜಾತವೇದ ಗುರುಗಳು ಎರಡೂ ಮಂತ್ರಗಳನ್ನು ಕೊಡುತ್ತಾರೆ. ಲಿಂಗಾಯತ ಧರ್ಮಕ್ಕೆ ಇದು ವಿರೋಧವಾದುದಾಗಿದೆ. ಆದರೂ 'ವೀರ ಶಿವಧರ್ಮ ಶಾಸ್ತ್ರೋಕ್ತ ಸುವಿಧಾನದಿಂ' ಎಂದು ಘಂಟಾಘೋಷವಾಗಿ ಹೇಳಿದ್ದಾರೆ. (೯/೬೯) ಅಲ್ಲದೆ 'ಸಕುಟುಂಬ ಲಿಂಗದೀಕ್ಷೆಯನಿತ್ತು' (೯/೬೯) ಎಂದು ಹೇಳಿರುವುದರಿಂದ ಮಾದರಸ–ಮಾದಲಾಂಬಿಕೆಯರಿಗೂ ಲಿಂಗದೀಕ್ಷೆಯಾಯಿತೆಂದಾಗುತ್ತದೆ. ಆದರೆ ಇವರು ವೀರಶೈವರಾದ ವಿಷಯ ಎಲ್ಲಿಯೂ ಉಕ್ತವಾಗಿಲ್ಲ. ಇದನ್ನು ಇತಿಹಾಸ ಒಪ್ಪುವುದಿಲ್ಲ.

೭. ಸಾಮಾನ್ಯವಾಗಿ ಮುಂಬಯಿ ಕರ್ನಾಟಕ, ಹೈದರಾಬಾದ ಕರ್ನಾಟಕದ ಗಡಿಭಾಗದಲ್ಲಿ ಒಂದೊಂದು ಮನೆತನಕ್ಕೆ ಒಂದೊಂದು ಗಂಡು ದೇವರು, ಒಂದೊಂದು ಹೆಣ್ಣು ದೇವರು

ಇರುವುದುಂಟು. ಕೆಲವೊಮ್ಮೆ ಹೆಚ್ಚೂ ಆಗಬಹುದು. ಮಲ್ಲಿಕಾರ್ಜುನ, ಕಾಡಸಿದ್ಧ, ರೇವಣಸಿದ್ಧ, ಬಸವಣ್ಣ ಮುಂತಾದ ಗಂಡು ದೇವರು, ಯಲ್ಲಮ್ಮ, ದಾನಮ್ಮ, ದುರ್ಗಮ್ಮ, ಬನಶಂಕರಿ ಮುಂತಾದ ಹೆಣ್ಣು ದೇವರು ಇವರನ್ನು ಹೆಸರಿಸಬಹುದು. ಈ ಪದ್ಧತಿಗನುಗುಣವಾಗಿ ಸೊನ್ನಲಿಗೆಯ ಮುದ್ದಗೌಡನ ಮನೆಯ ದೇವರು 'ಧೂಳಿಮಾಕಾಳ'. ಈ ದೇವರನ್ನು ಅವರು ನಿತ್ಯ, ನೆಮಿತ್ತಿಕವಾಗಿ ಆರಾಧಿಸುತ್ತಿದ್ದರು. ಶ್ರೀಶೈಲದಿಂದ ಬಂದ 'ನಿರ್ಮಳ ದಿವ್ಯ ಲಿಂಗವನಿದಿರ್ಗೊಂಡು ಕೊಂಡು ನಿಜ ನಿಳಯಕೈತಂದು' (೩/೪೧) ಸಿದ್ಧರಾಮನು 'ಸುಖಸಂಕಥಾವಿನೋದದೊಳಗಿದ್ದನು.'

ಹೀಗಿರುತ್ತಿರುವ ಪ್ರಸಂಗದಲ್ಲಿ ಒಂದು ದಿವಸ 'ಮನೆದೈವವಹ ಧೂಳಿಮಾಕಾಳನಂ ನೋನಲೆಂದು ತಂದೆ ತಾಯ್ಗಳುದ್ಯೋಗಿಸಿದಡೆ ಸಿದ್ಧರಾಮನು ಸಿಟ್ಟಿಗೆದ್ದು, ಬೇಡಿತಂ ಕೊಡಬಲ್ಲ ಶೂಲಿ ಬಂದಿರೆ ಬಗೆಯದಕಟಕಟ ಬೂದಿಯೊಳು ಬೇಳುವಂತಧಮದೈವವ ಮಾಡಿದಪರೆಂದು ಹೊಱವಂಟ ನಿಜಗೃಹವನು' (೩/೩೩) ಎಂದು ಮೂಲದಲ್ಲಿರುವುದನ್ನು 'ಮಠ ಕಾವಲಿಹ ಧೂಳಿಮಾಕಾಳನಂ' (೩/೪೨) ಎಂದು ಬದಲಿಸಲಾಗಿದೆ. ಇನ್ನೊಂದೆಡೆಗೆ 'ಕುಲದೈವವೆಂದೆನಿಪ ಧೂಳಿಮಾಕಾಳಂಗೆ ಕಱುಗಾವ ಬೆಸನನಿತ್ತು' (೨/೧೫) ಎಂದಿರುವುದನ್ನು 'ಹೊಲದೇವರೆಂದೆನಿಪ' (೨/೭) ಎಂದು ಮಾಡಿಕೊಳ್ಳಲಾಗಿದೆ. ಇಲ್ಲಿ 'ಮನೆ'ಯನ್ನು 'ಮಠ'ವನ್ನಾಗಿಸಲಾಗಿದೆ. ಅದರಂತೆ 'ಮನೆದೈವ'ವೆಂಬುದನ್ನು 'ಮಠಕಾವಲಿಹ' ಎಂದು ಮಾಡಲಾಗಿದೆ. ಮನೆದೈವವನ್ನು ಕುರಿತು ವ್ರತ ಮಾಡಬಹುದು ಆದರೆ ಮಠಕಾವಲಿರುವವರನ್ನು ಕುರಿತು ವ್ರತ ಮಾಡುವುದು, ಸೇವೆ ಮಾಡವುದು ಆಗದು. ಆದ್ದರಿಂದ ಅದು ಧೂಳಿಮಾಕಾಳನೆಂಬ ಮನೆಯ ದೈವವೇ ಹೊರತು ಮನೆಯ ಕಾವಲುಗಾರನಲ್ಲ.

೮. ಲಿಂಗ ಪ್ರತಿಷ್ಠೆಗೆ ಸರ್ವಧರ್ಮರೂಪನಾದ ವೃಷಭನು ಬರುವನೆಂದು ಮಲ್ಲಿಕಾರ್ಜುನನು ಹೇಳಿದಾಗ, ಅವನು ಬರುವ ಕುರುಹನ್ನು ಕೇಳುವನು ಸಿದ್ಧರಾಮ. ಆಗ ಮಲ್ಲಿಕಾರ್ಜುನನು,

"...ನಿನ್ನೂರ ತುಱುವಿನೊಳು
...ಬಱಡುಗವಿಲೆಯ ತೆಱದೊಳೈದಳಾ ಗರ್ಭದೊಳಗೆ ।
ಆ ದಿನದಲೇ ಮೂಡಿಯಾ ದಿನದಲೇ ಜನಿಸಿ
ಯಾ ದಿನದೊಳೇ ಯೌವನಂದಳೆದು ಬೆಳೆದು ಪ್ರ
ಮೋದಲಲಿ ಬಂದಪ್ಪನಱಿತುಕೊಳ್..."[೨೩]

ಎಂದು ಹೇಳುವನು. ಇದನ್ನೇ ಪರಿವರ್ತಿಸಿ

"....ನಿನ್ನೂರ ಪಡುವಣದಿ
...ಗುರುಭೆಟ್ಟಿ ಪಾವನದ ಶಿಲೆಯ ಗರ್ಭದೊಳು ಮುದದಿ ।
ಆ ದಿನದೊಳೊಡಮೂಡಿಯಾ ದಿನದಲವತರಿಸಿ
ಯಾದಿನದೊಳೇ ನಿನ್ನ ಶಿವಲಿಂಗ ಸ್ಥಾಪನೆಗೆ
ಮೋದದಿಂ ನೆಱವೀವನಱಿತುಕೊಳ್..."[೨೪] (೩/೩೦)

ಎಂದು ಮಾಡಿಕೊಂಡಿದ್ದಾರೆ.

ಇಲ್ಲಿ ಬರಡು ಕವಿಲೆಯ ಗರ್ಭದಿಂದ ವೃಷಭನು ಒಂದೇ ದಿನದಲ್ಲಿ ಮೂಡಿ, ಹುಟ್ಟಿ, ಬೆಳೆದು ಬರುವನೆಂದಿರುವುದನ್ನು, ಗುರುಭೆಟ್ಟಿ ಶಿಲೆಯಿಂದ ಒಂದೆ ದಿನದಲ್ಲಿ ಮೂಡಿ, ಅವತರಿಸಿ ಬಂದು ಶಿವಲಿಂಗ ಸ್ಥಾಪನೆಗೆ ನೆರವಾಗುವನೆಂದು ಬದಲಾಯಿಸಿದ್ದಾರೆ. ಈ ಬದಲಾವಣೆಯಲ್ಲಿ ವೃಷಭನು ಹುಟ್ಟಬೇಕಾದ ಕವಿಲೆಯ ಸ್ಥಳದಲ್ಲಿ ಶಿಲೆಬಂದಿದೆ. ಕಾಲ ಗತಿಸುತ್ತದೆ, ವೃಷಭನು ಅವತರಿಸುತ್ತಾನೆ. ಅದನ್ನು ...ಆವೂರ ತುಱುವಿನೊಳು ಸಿದ್ಧಪತಿ ನೋಡುತಿರೆ ಮುಂದೆಲ್ಲರು ।

"ಬಲ್ಲ ಬಡ ಬಱಡುಗವಿಲೆಗೆಯಾಗಳೇ ಗರ್ಭ
ಪಲ್ಲವಿಸಿ ಬೆಳೆವೆತ್ತು ಬೆಸಲಾಯ್ತು ಸುರಭಿಗಳ
ನಲ್ಲನಂ..."[೨೫]

ಮೂಲದಲ್ಲಿ ಹೀಗೆ ಹೇಳಲಾಗಿರುವುದನ್ನು,

"....ಆವೂರ ಕುಱುಹಿನೊಳು ಸಿದ್ಧಪತಿ ನೋಡುತಿರೆ ಮುಂದೆಲ್ಲರು ।
ಬಲ್ಲ ಗುರುಭೆಟ್ಟಿಯಾ ನಿರ್ಮಲ ಶಿಲಾಗರ್ಭ
ಪಲ್ಲವಿಸಿ ಶಿವಮೂರ್ತಿ ಬೆಸಲಾಯ್ತು ಭಕ್ತರುಂ
ಸಲ್ಲಿಸುವ ಭಕ್ತಿಯಂ ಕೈಕೊಂಡು ವೃಷಭೇಶನವತರಿಪದೇನೆಂಬೆನು."[೨೬]

ಹೀಗೆ ಬದಲಿಸಲಾಗಿದೆ. ಹಿಂದೆ ಹೇಳಿದಂತೆ ಬರಡುಗವಿಲೆಯಿಂದ ವೃಷಭನು ಹುಟ್ಟಿಬರುತ್ತಾನೆ– ಮೂಲದಲ್ಲಿ. ಬದಲಾವಣೆಯಲ್ಲಿಯೂ ವೃಷಭನು ಹುಟ್ಟಿ ಬರುತ್ತಾನೆ. ಆದರೆ ಇಲ್ಲಿ ವೃಷಭನು ಅವತರಿಸಿದ್ದು ಯಾರಿಂದ ಎಂಬುದು ಸ್ಪಷ್ಟವಾಗಿಲ್ಲ. 'ಶಿವಮೂರ್ತಿಬೆಸಲಾಯ್ತು' ಎನ್ನುವುದರಿಂದ ಶಿವಮೂರ್ತಿಯೆ ವೃಷಭನನ್ನು ಹಡೆಯಿತು ಎಂದರ್ಥವಾಗುತ್ತದೆ. ಆದರೆ ವೃಷಭೇಶ ಹುಟ್ಟುವುದು– ಹುಟ್ಟಬೇಕಾದುದು–ಶಿಲಾಗರ್ಭದಿಂದ. ಹಾಗಿದ್ದರೆ ಈ ಶಿವಮೂರ್ತಿ ಬೆಸಲಾಯ್ತು ಎನ್ನುವುದರ ಪ್ರಯೋಜನವೇನು? ಶಿವಮೂರ್ತಿಯಂ ಬೆಸಲಾಯ್ತು ಎಂದಿಟ್ಟುಕೊಳ್ಳಬಹುದೆ? ಆದರೆ ಶಿಲಾಗರ್ಭದಿಂದ ಹುಟ್ಟಬೇಕಾದವನು ವೃಷಭನೇ ಹೊರತು ಶಿವಮೂರ್ತಿಯಲ್ಲ. ಇಷ್ಟು ಗೊಂದಲಮಯವಾದ ಈ ಪದ್ಯವನ್ನು ಮಹಾಕವಿ ರಾಘವಾಂಕನಂತೂ ಬರೆಯುವುದು ಅಸಂಭವ. ಯಾವನೋ ಸಾಮಾನ್ಯ ಕವಿ ಇದನ್ನು ಬದಲಾಯಿಸಿಕೊಂಡು ಸೇರಿಸಿರುವನೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಹಾಗಿದ್ದರೆ ಈ ಬದಲಾವಣೆಗೆ ಕಾರಣವೇನು? ಬಹುತರವಾಗಿ ಇಲ್ಲಿ ಪಂಚಾಚಾರ್ಯತನ ಕೆಲಸ ಮಾಡಿದಂತಿದೆ. ರೇಣುಕಾದಿ ಪಂಚಾಚಾರ್ಯರು ಕಲ್ಲಿನ ಲಿಂಗದಿಂದಲೇ ಉದ್ಭವಿಸಿದ್ದಾರೆ. ಹಾಗೆಯೇ, ವೃಷಭೇಶನೂ 'ಗುರುಭೆಟ್ಟಿ' ಎಂಬ ಶಿಲೆಯಿಂದಲೆ ಹುಟ್ಟಿದನು ಎಂದು ಇಲ್ಲಿ ಹೇಳಲಾಗಿದೆ. ಈ 'ಗುರುಭೆಟ್ಟಿ' ಎಲ್ಲಿದೆಯೊ ಸಂಶೋಧಿಸಬೇಕು.

೯. ಶಿವಸಿದ್ಧರಾಮನ ಅಣ್ಣನಾದ ಸೋಮದೇವನ ಮಗ ಹಬ್ಬೇಶನನ್ನು ಹಿರಿಯಮಠಕ್ಕೆ ಅಧಿಪತಿಯಾಗಿ ಮಾಡುತ್ತಾರೆ. (೩/೭೨) ಹಾಗೆಯೆ ಬೇರೆ–ಬೇರೆ ಮಠಗಳಿಗೆ ಬೇರೆ–ಬೇರೆಯವರನ್ನು ನಿಯಮಿಸುತ್ತಾರೆ. ಈ ಹಬ್ಬೇಶ ವಂಶದವರೇ ಶಿವಸಿದ್ಧರಾಮನೆ ಮೊದಲಾಗಿರುವ ಸಕಲ ದೇವತೆಗಳ ಆರಾಧನೆಯನ್ನು, ಪೂಜೋಪಚಾರಗಳನ್ನು ಮಾಡುತ್ತ, ಸುಖ, ಸೌಭಾಗ್ಯಗಳನ್ನು ಪಡೆಯುತ್ತ ಸತತ ಮೆರೆಯುತ್ತಿರುವರು (೩/೭೪) ಎಂದು ಹೇಳಲಾಗಿದೆ. ಈಗಲೂ 'ಹಬ್ಬು' ಮನೆತನದವರೇ ಪೂಜಾರಿಗಳಾಗಿದ್ದಾರೆ. ಶ್ರೀ ಸಿದ್ಧೇಶ್ವರ ಸಂಸ್ಥೆಯ ವಿಶ್ವಸ್ಥಮಂಡಳದ ಮುಖ್ಯಸ್ಥರೂ ಆಗಿದ್ದಾರೆ. ಇವರು ಹಿರಿಯ ಮಠದವರಾಗಿರುವುದರಿಂದ ಪೂಜಾರಿಗಳಾಗುತ್ತಾರೆಯೇ? ಪೂಜಾರಿಗಳಾದವರನ್ನು ಹಿರಿಯ ಮಠದವರೆನ್ನಬಹುದೆ? ಇದೆಲ್ಲ ಗೊಂದಲಮಯವಾಗಿದೆ, ವಿಸಂಗತವಾಗಿದೆ.

೧೦. 'ಅಂತ್ಯಜಕುಲದ ಹರಳಯ್ಯನಾತ್ಮಜಗೆ...ದ್ವಿಜಕುಲದ ಮಧುವಯ್ಯನೆಂಬವನ ಸತ್ಪುತ್ರಿಯನ್ನು ಕೊಡಿಸಿ, ಅಸಮ ಜಾತಿಗಳಲ್ಲಿ ವೈವಾಹ ಸಂಸ್ಕಾರ ಮಾಡಿ' (೯/೯೦) ಜಾತಿ ಸಾಂಕರ್ಯವಾಯಿತೆಂದು ಹರಳಯ್ಯ–ಮಧುವರಸರನ್ನು ಬಿಜ್ಜಳನು ಕೊಲೆಮಾಡಿ'ದನೆಂದು ಹೇಳಲಾಗಿದೆ. ಇಷ್ಟಲಿಂಗಧಾರಿಗಳಾಗುವುದಕ್ಕಿಂತ ಮೊದಲು ಅವರು ಅಸಮ ಜಾತಿಯವರಾಗಿರುವದೇನೊ ನಿಜವೆ. ಆದರೆ ಲಿಂಗಧಾರಿಗಳಾದ ಮೇಲೆ ಅವರಿಬ್ಬರೂ ಲಿಂಗಾಯತರೇ ಆದರು. ಅಸಮ ಜಾತಿ ಅಳಿಯಿತು ಒಂದೇ ಜಾತಿಯವರಾದರು. ಈಗ ಜಾತಿ ಸಂಕರವೆಲ್ಲಿ ಬಂದಿತು? ಇಲ್ಲಿ 'ಇರ್ವರನು ಕೊಲೆಮಾಡಿ' ಎಂದು ಹೇಳಲಾಗಿದೆ. ಆದರೆ ಇದು ಕೊಲೆಯಲ್ಲ. ಬಿಜ್ಜಳನು ರಾಜನಾದುದರಿಂದ ಅದು ರಾಜದಂಡನೆಯಾಗುತ್ತದೆ. ಈ ಕವಿಗೆ ಕೊಲೆಯಾವುದು, ರಾಜದಂಡನೆಯಾವುದು ಇವುಗಳಲ್ಲಿರುವ ವ್ಯತ್ಯಾಸವೆ ತಿಳಿದಿಲ್ಲ!

ಜಾತಿ ಸಂಕರಕ್ಕಿಂತ ಧರ್ಮ ಸಂಕರ ಇನ್ನೂ ಘೋರತರವಾದ ಅಪರಾಧ. ಇಂತಹ ಅಪರಾಧ ಮಾಡಿದವ ಬಿಜ್ಜಳ. ತಾನು ಜೈನ ಧರ್ಮೀಯನಾದರೆ ಪದ್ಮಾವತಿ ಲಿಂಗಧಾರಣಮಾಡಿಕೊಂಡು ಲಿಂಗಾಯತಳಾದವಳು. ಅಂಥವಳನ್ನು ತಾನು ಮದುವೆಯಾಗಿರುವಾಗ, ಒಂದೇ ಧರ್ಮದವರಾದ ಹರಳಯ್ಯ–ಮಧುವರಸರನ್ನು ಶಿಕ್ಷಿಸುವ ಅಧಿಕಾರ ಬಿಜ್ಜಳನಿಗೆ ಹೇಗೆ ಬರುತ್ತದೆ?

೧೧. ಬಿಜ್ಜಳನ ಕೊಲೆಯಾದ ಮೇಲೆ ಬಸವ ಸೈನಿಕರು ಚೆನ್ನಬಸವಣ್ಣನನ್ನು ಸಿಂಹಾಸನದಲ್ಲಿ ಕುಳ್ಳಿರಿಸಿ, ಪಟ್ಟಾಭಿಷೇಕ ಮಾಡಿದರು. ರಾಯಮುರಾರಿಯು ಮಾತುಳನ ಸೈನ್ಯದ ಸಹಾಯದಿಂದ ಕ್ರಾಂತಿಕಾರನನ್ನು ಕೊಂದು ನೈಜ ಸಿಂಹಾಸನವನ್ನಾಕ್ರಮಿಸಿದನು. ಎಂದು ಇವರು ಹೇಳುತ್ತಾರೆ. (೯/೯೨) ಇದು ಸತ್ಯ ದೂರವಾದುದು. ಈ ವಿಷಯ ಯಾವ ಇತಿಹಾಸದಲ್ಲಿಯೂ ಉಕ್ತವಾಗಿಲ್ಲ. ಯಾವ ಪುರಾಣದಲ್ಲಿಯೂ ಬಂದಿರುವುದಿಲ್ಲ. ರಾಯಮುರಾರಿಯ ಸಾಕಷ್ಟು ಶಾಸನಗಳಿವೆ. ಇಂತಹ ಮಹತ್ವ ಪೂರ್ಣವಾದ ವಿಷಯ ಯಾವುದಾದರೊಂದು ಶಾಸನದಲ್ಲಿ

ಉಲ್ಲೇಖವಾಗದಿರುತ್ತಿರಲಿಲ್ಲ ಹಾಗೆ ನೋಡಿದರೆ ಇದು ಶರಣರ ತತ್ತ್ವಕ್ಕೆ ವಿರೋಧವಾದುದಾಗಿದೆ. ಬಿಜ್ಜಳನ ಸಾವಿನ ನಂತರ ಶರಣರು ದಿಕ್ಕಾಪಾಲಾಗಿ ಓಡಿ ಹೋದರು. ಕೆಲವರು ಉಳವಿಯ ಕಡೆಗೆ, ಕೆಲವರು ಸೊಲ್ಲಾಪುರದ ಕಡೆಗೆ, ಕೆಲವರು ಕೂಡಲ ಸಂಗಮದ ಕಡೆಗೆ, ಮತ್ತೆ ಕೆಲವರು ಶ್ರೀಶೈಲದ ಕಡೆಗೆ ಹೋದರೆನ್ನುವುದರ ಬಗ್ಗೆ ಪುರಾವೆಗಳು ದೊರೆಯುತ್ತವೆ. ಶರಣರು ಹೋಗುವಾಗ ತಮ್ಮ ಜೊತೆಗೆ ವಚನ ಕಟ್ಟುಗಳನ್ನು ಒಯ್ದಿದ್ದು, ಅವುಗಳನ್ನು ಅಲ್ಲಲ್ಲಿಯೆ ಸುರಕ್ಷಿತ ಸ್ಥಳಗಳಲ್ಲಿ ಇಡುತ್ತ ಹೋದರು. ಅವು ದೊರೆತ ಸ್ಥಳಗಳಿಂದ ಅವರು ಹೋದ ದಾರಿಯನ್ನು ಗುರುತಿಸಬಹುದಾಗಿದೆ.

**ಕಾಲ್ಪನಿಕ ವರ್ಷಗಳು ಮೂಲ ಸಿದ್ಧರಾಮ ಚಾರಿತ್ರದಲ್ಲಿ ಇಲ್ಲ**

ಸಿದ್ಧರಾಮನ ಜನನವನ್ನು ಹಿಡಿದು ಯೋಗಸಮಾಧಿಗೆ ಹೋಗುವವರೆಗಿನ ಅನೇಕ ಘಟನೆಗಳಿಗೆ ಮೂಲದಲ್ಲಿ ಇಲ್ಲದೆ ಇರುವ ದಿನಾಂಕಗಳನ್ನು ಶಾಲಿವಾಹನ ಶಕೆಯೊಂದಿಗೆ ಕೊಟ್ಟಿದ್ದಾರೆ.

೧. "ಸಿದ್ಧರಾಮನ ಜನನ: ಶಕೆ-೧೦೧೦
ಶ್ರೀಶಕದಹತ್ತುನೂರಱ ಮೇಲೆ ಹತ್ತನೆಯ
ಭಾಸುರದ ವಿಭವ ಸಂವತ್ಸರದೊಳೊದಗಿದಾ
ಪೌಷ್ಯಮಾಸದ ಮಕರ ರಾಶಿಯೊಳ್ ಸೂರ್ಯಸಂಕ್ರಮಣ ಸುಮೂಹೂರ್ತದಲ್ಲಿ."[೨೭]

ಸುಗ್ಗಲೆಯು ಸಿದ್ಧರಾಮನನ್ನು ಬಲಗಡೆಯಲ್ಲಿ ಕಾಣುತ್ತಾಳೆ. ಇಲ್ಲಿ ಶಕ ೧೦೧೦, ವಿಭವ ಸಂವತ್ಸರ, ಪೌಷ್ಯಮಾಸ, ಮಕರರಾಶಿ, ಸೂರ್ಯಸಂಕ್ರಮಣ ಇಷ್ಟನ್ನು ಜನನದ ಕಾಲವೆಂದು ಹೇಳಲಾಗಿದೆ.

೨. "ಸಿದ್ಧರಾಮನಿಗೆ ಮಲ್ಲಯ್ಯನಿಂದ ಸಂಸ್ಕಾರ: ಶಕ-೧೦೧೮
ಶ್ರೀಶಕದಲೊಂದು ಸಾಸಿರದ ಪದಿನೆಂಟನೆಯ
ಲೇಸೆನಿಪ ಧಾತೃಸಂವತ್ಸರದೊಳೊಂದನೆಯ
ಮೇಷ ಮಾಸದ ಷಷ್ಠಿ ತಿಥಿಯ ಪ್ರಾತಃ ಕಾಲದಲ್ಲಿ..."[೨೮]

ಸಿದ್ಧರಾಮನಿಗೆ ಶ್ರೀಶೈಲದ ಮಲ್ಲಿಕಾರ್ಜುನನು ಶಿವಸಂಸ್ಕಾರ ಮಾಡುತ್ತಾನೆ. ಇದರತೇದಿಯು-ಶಕ-೧೦೧೮, ಧಾತೃಸಂವತ್ಸರ, ಮೇಷರಾಶಿ, ಷಷ್ಠಿ ತಿಥಿಯ ಪ್ರಾತಃ ಕಾಲದಲ್ಲಿ ಈ ವಿಧಿಯು ನಡೆಯುತ್ತದೆ.

೩. "ವೃಷಭನಿಂದ ಲಿಂಗ ಪ್ರತಿಷ್ಠಾಪನೆ: ಶಕ-೧೦೧೯
....ಶಕದೊಂದು ಸಾಸಿದದ ಪತ್ತೊಂಬತ್ತ
ರಸಮೇಶ ವರ್ಷ ಮೇಷದ ಶುದ್ಧ ಪ್ರಥಮ ದಿನ
ಮಿಸುಪುದಯದೊಳು ಲಿಂಗವಂ ನಿಲ್ಲಿಸುತ್ತಾನೆ...."[೨೯]

ಮಲ್ಲಿಕಾರ್ಜುನನ ಆಜ್ಞೆಯ ಮೇರೆಗೆ ಬಂದ ವೃಷಭನು ಸೊನ್ನಲಿಗೆಯಲ್ಲಿ ಲಿಂಗ ಸ್ಥಾಪಿಸಿದ್ದು-ಶಕ-೧೦೧೯, ಈಶ ಸಂವತ್ಸರ, ಮೇಷರಾಶಿ, ಶುದ್ಧ ಪ್ರತಿಪದೆಯಂದು ಪ್ರಾತಃಕಾಲದಲ್ಲಿ ಲಿಂಗವನ್ನು ಪ್ರತಿಷ್ಠಾಪಿಸುತ್ತಾನೆ.

೪. “ಸಿದ್ಧರಾಮನಿಗೆ ಗುರುಪಟ್ಟಾಧಿಕಾರ: ಶಕ-೧೧೧೯
ಶಿರಿಶಕದ ಪತ್ತುನೂಱಪತ್ತೊಂಬತ್ತನೆಯ
ವರುಷ ವೃಷಮಾಸ ಪಂಚಮಿಯ ಸಮುಹೂರ್ತದೊಳು.”[೩೦]

ಸಿದ್ಧರಾಮನಿಗೆ ರೇವಣಸಿದ್ಧನು ಮತ್ತು ಕಪಿಲಸಿದ್ಧೇಶನು-ಶಕ-೧೧೧೯ ವೃಷಭ ರಾಶಿ, ಪಂಚಮಿಯ ಶುಭ ಮುಹೂರ್ತದಲ್ಲಿ ಗುರುಪಟ್ಟಾಧಿಕಾರವನ್ನು ದಯಪಾಲಿಸುತ್ತಾರೆ.

೫. “ಯೋಗಗುಹಾ ಪ್ರವೇಶ: ಶಕ-೧೦೫೦
ಶಕದೊಂದು ಸಾಸಿರದ ಮೇಲಿಹೈವತ್ತನೆಯ
ಸುಕರ ಕೀಲಕ ವತ್ಸರದಲಾದಿ ಸುದಿನ...”[೩೧]

ಸಿದ್ಧರಾಮನು ಮೊದಲಸಾರೆ ಯೋಗಗುಹೆಯನ್ನು ಪ್ರವೇಶಿಸುತ್ತಾನೆ. ಅಂದು ಶಕ-೧೦೫೦, ಕೀಲಕ ಸಂವತ್ಸರದ ಯುಗಾದಿಯಾಗಿರುತ್ತದೆ.

೬ “ಸಿದ್ಧರಾಮನಿಂದ ಅಲ್ಲಮನಿಗೆ ಶಿವದೀಕ್ಷೆ: ಶಕ-೧೦೭೫
ಶ್ರೀಶಕದ ಹತ್ತುನೂಱೆಪ್ಪತ್ತು ಮೇಲೈದ
ನೇಸುವತ್ಸರವೆನಿಪ ಶ್ರೀ ಮುಖಾಬ್ದದೊಳುಱೆ
ಮೇಷಮಾಸದೊಳೆಸೆವ ಪಂಚಮೀತಿಥಿಯಲ್ಲಿ...ಶಿವದೀಕ್ಷೆ.”[೩೨]

ಸಿದ್ಧರಾಮನು ಅಲ್ಲಮನಿಗೆ ಶಿವದೀಕ್ಷೆ, ಲಿಂಗದೀಕ್ಷೆ ಮಾಡಿದ್ದು, ಶಕ-೧೦೭೫, ಶ್ರೀಮುಖ ಸವಂತ್ಸರ, ಮೇಷಮಾಸದ ಪಂಚಮೀತಿಥಿಯಂದು.

೭ “ಬಸವಣ್ಣನ ಜನನ: ಶಕ-೧೦೪೮
ಶ್ರೀಶಕದಲೊಂದು ಸಾಸಿರದ ನಾಲ್ವತ್ತೆಂಟ
ನೇಸಮ ಪರಾಭವದ ವೃಷಭನಾಮದಲೆಸೆವ
ಮಾಸದೊಳು ಮಾದಲಾಂಬಿಕೆಯ ಗರ್ಭದಿಂದ...”[೩೩]

ಬಸವಣ್ಣನು ಜನಿಸಿ ಬರುತ್ತಾನೆ. ಆಗ ಶಕ-೧೦೪೮, ಪರಾಭವ ಸಂವತ್ಸರ ವೃಷಭ ರಾಶಿಯು ಇರುತ್ತದೆ.

೮. “ಚೆನ್ನಬಸವಣ್ಣನ ಜನನ: ಶಕ-೧೦೬೮
....ಶ್ರೀಶಕದಲೊಂದು ಸಾಸಿರವನುಂ
ಮಿಕ್ಕಿಹಱವತ್ತೆಂಟನೇಕ್ಷಯದ ವೃಶ್ಚಿಕದ
ಶುಕ್ಲದ ದ್ವಾದಶೀತಿಥಿಯ ಸುಮುಹೂರ್ತದಲ್ಲಿ..”[೩೪]

ಚೆನ್ನಬಸವಣ್ಣನನ್ನು ಅಕ್ಕನಾಗಮ್ಮನು ಹಡೆಯುತ್ತಾಳೆ. ಅಂದು ಶಕ-೧೦೭೮ ಅಕ್ಷಯನಾಮ ಸಂವತ್ಸರ, ವೃಶ್ಚಿಕ ರಾಶಿ, ಶುಕ್ಲ ಪಕ್ಷ, ದ್ವಾದಶಿ ತಿಥಿಯು ಇರುತ್ತದೆ.

೯. “ಚೆನ್ನಬಸವಣ್ಣನಿಗೆ ಶಿವದೀಕ್ಷೆ: ಶಕ-೧೦೭೬
ಶ್ರೀಶಕದ ಸಾವಿರೆಪ್ಪತ್ತಾಱನೇವರ್ಷ
ದಾಸುಕರ ಭಾವ ಸಂವತ್ಸರದಲಿ ವೃಷಭ
ಮಾಸ ಪಂಚಮಿ ತಿಥಿಯ ಸಮುಹೂರ್ತದಲ್ಲಿ...”[೩೫]

ಸಿದ್ಧರಾಮನು ಚೆನ್ನಬಸವಣ್ಣನಿಗೆ ಶಿವದೀಕ್ಷೆ ಕೊಡುತ್ತಾನೆ. ಅಂದರೆ ಶಕೆ-೧೦೭೬ ಭಾವ ಸವಂತ್ಸರ, ವೃಷಭಮಾಸ, ಪಂಚಮಿ ತಿಥಿಯಾಗಿರುತ್ತದೆ.

೧೦. “ಸಿದ್ಧರಾಮನ ನಿಜಸಮಾಧಿ ಶಕ-೧೧೧೧
ಶ್ರೀಶಕದ ಹನ್ನೊಂದುನೂಱ ಹನ್ನೊಂದನೆಯ
ಆ ಸೌಮ್ಯ ವತ್ಸರದ ಮಕರ ರವಿ ಸಂಕ್ರಮಣ
ದಾ ಶುಭ ಮುಹೂರ್ತದಲ್ಲುತ್ತರಾಯಣದೈದನೆಯದಿನದೊಳುದಯದಲ್ಲಿ.”[೩೬]

ಸಿದ್ಧರಾಮನ ನಿಜಸಮಾಧಿ ಹೊಂದುತ್ತಾನೆ. ಆಗ ಶಕೆ-೧೧೧೧ ಸೌಮ್ಯ ಸಂವತ್ಸರ, ಮಕರಸಂಕ್ರಮಣ, ಉತ್ತರಾಯಣದ ಐದನೆಯ ದಿನ, ಸೂರ್ಯೋದಯವಾಗಿರುತ್ತದೆ.

೧೧. **ರಾಘವಾಂಕ ಪಂಡಿತನಿಂದ ಬರೆಯಲ್ಪಟ್ಟ ಶಾಸನ:** ಶಕ-೧೧೬೫ ಶ್ರೀಶಕದ ಪಂಚಷಷ್ಟ್ಯುತ್ತರೈಕಾದಶ ಶತತಮೇ ಶೋಭನನಾಮ ಸಂವತ್ಸರೇ ಮಾಘ ಶುಕ್ಲ ರಥ ಸಪ್ತಮ್ಯಾಂ ತಿಥೌ-ಶಕ-೧೧೬೫ ಶೋಭನಾಮ ಸಂವತ್ಸರ, ಮಾಘಮಾಸ, ಶುಕ್ಲಪಕ್ಷ, ರಥಸಪ್ತಮಿ ತಿಥಿಯಲ್ಲಿ ಬರೆಯಲಾಯಿತು.

೧೨. **ಸಿದ್ಧರಾಮೇಶ್ವರ ಚರಿತೆಯ ಪ್ರತಿ ಮಾಡಿದ್ದು:** ಶಕ-೧೨೬೫(೧೫ನೆಯ ಶತಮಾನಕ್ಕಿಂತ ತಮ್ಮದು ಹಿಂದಿನದೆಂಬುದನ್ನು ತೋರಿಸುವ ಸಲುವಾಗಿ ಈ ಕಾಲ್ಪನಿಕ ದಿನಾಂಕವನ್ನು ಇಲ್ಲಿ ಹೇಳಲಾಗಿದೆ.) ಶ್ರೀಕರ ಹನ್ನೆರಡುನೂಱ ಅಱವತ್ತೈದನೇ ಸುಭಾನು ಸಂವತ್ಸರ ಜೇಷ್ಠ ಶುಕ್ಲ ಚತುರ್ದಶೀ ಬೆಳಗಿನೊಳು-ಅಂದರೆ ಶಕ-೧೨೬೫, ಸುಭಾನು ಸಂವತ್ಸರ, ಜೇಷ್ಠಮಾಸ, ಶುಕ್ಲಪಕ್ಷ, ಚತುರ್ದಶಿ.

ಈ ಪುಸ್ತಕದಲ್ಲಿ ಪ್ರಮುಖವಾಗಿ ಈ ಹನ್ನೆರಡು ಉಲ್ಲೇಖಗಳ ಮಿತಿಯನ್ನು ಕೊಡಲಾಗಿದೆ. ಈ ಎಲ್ಲ ಮಿತಿಗಳಲ್ಲಿ ಶಕ, ಸಂವತ್ಸರ, ಮಾಸ, ರಾಶಿ, ಪಕ್ಷ, ತಿಥಿ, ಅಯನ, ವೇಳೆ ಇವೆಲ್ಲವುಗಳನ್ನು ಕೊಡಲಾಗಿಲ್ಲವಾದರೂ ಕೆಲವನ್ನು ಉಲ್ಲೇಖಿಸಲಾಗಿದೆ. ಸಂವತ್ಸರಗಳಿರುವುದು ಅರುವತ್ತು. ಅವು ೬೦ ವರ್ಷಕ್ಕೊಮ್ಮೆ ಪುನರಾವರ್ತನಗೊಳ್ಳುತ್ತವೆ. ಹಾಗೆಯೇ ಮಾಸಾದಿಗಳೂ ಮರುಕಳಿಸುತ್ತವೆ. ಇದರಿಂದ ಇದೇ ದಿನ ಖಚಿತವೆಂದು ಹೇಳುವುದು ಶಕ್ಯವಾಗುವುದಿಲ್ಲ. ಹಾಗೆ ಖಚಿತತೆ ಬರಬೇಕಾದರೆ ಅಲ್ಲಿ ವಾರದ ಆವಶ್ಯಕತೆ ಇರುತ್ತದೆ. ವಾರದ ಉಲ್ಲೇಖವಿಲ್ಲದೆ ನಿಶ್ಚಿತತೆ ಬರುವುದಿಲ್ಲ.

ಇಲ್ಲಿ ಬಂದ ಯಾವ ಉಲ್ಲೇಖದಲ್ಲಿಯೂ ವಾರದ ಹೇಳಿಕೆಯಿಲ್ಲ. ವಾರದ ಹೇಳಿಕೆ ಇಲ್ಲದಿರುವ ಮಿತಿಗೆ ಯಾವುದೇ ಬೆಲೆಯಿಲ್ಲ. ಇವು ಬಂದಿರುವುದು ಹೆಚ್ಚಿಗೆ ಸೇರ್ಪಡೆಯಾದ ೧೫೩ ಪದ್ಯಗಳಲ್ಲಿ ಮಾತ್ರವೆಂಬುದು ಗಮನಿಸಬೇಕಾದ ವಿಷಯ. ಅಂದರೆ ಇವು ಮಹಾಕವಿ ರಾಘವಾಂಕನು ಬರೆದ ಪದ್ಯಗಳಾಗಿರದೆ, ಬೇರೆಯವರು ಬರೆದು ಸೇರಿಸಿದವುಗಳಾಗಿವೆ ಎಂಬುದರಲ್ಲಿ ಯಾವ ಸಂಶಯವೂ ಇಲ್ಲ. ಒಂದು ವೇಳೆ ರಾಘವಾಂಕನೆ ಬರೆದಿದ್ದರೆ ವಾರದ ಉಲ್ಲೇಖ ಮಾಡುತ್ತಿದ್ದ.

ರಾಘವಾಂಕನು ಬರೆದ ಶಾಸನವೆಂದು ಒಂದು ಸಂಸ್ಕೃತ ಶಾಸನವನ್ನು ಕೊಡಲಾಗಿದೆ. ಅದರಲ್ಲಿಯೂ ವಾರವನ್ನು ಹೇಳಲಾಗಿಲ್ಲ. ಶಿಲಾಶಾಸನವನ್ನಾಗಲಿ, ತಾಮ್ರ ಶಾಸನವನ್ನಾಗಲಿ ನೋಡಿದರೆ ಯಾವುದರಲ್ಲಿಯೂ ವಾರದ ಸೇರ್ಪಡೆ ಇಲ್ಲದೆ ಇರುವುದೆ ಇಲ್ಲ. ಸೇರ್ಪಡೆ ಇದ್ದೇ ಇರುತ್ತದೆ. ಎಷ್ಟೋ ಸಾರೆ, ಕಣ್ಣು ಪಿಳ್ಳೆಯವರ ಜಂತ್ರಿಯನ್ನು ಹಿಡಿದುಕೊಂಡು ಪಂಡಿತರು ವಾರವು ಹೆಚ್ಚು ಕಡಿಮೆಯಾದುದರ ಬಗ್ಗೆ ಭಿನ್ನಾಭಿಪ್ರಾಯ ತಾಳಿದ್ದೂ ಉಂಟು.

ಈ ಹಿನ್ನೆಲೆಯಲ್ಲಿ ವಿಚಾರಿಸಿದರೆ ಇವೆಲ್ಲ ಮೂಲದವಾಗಿರದೆ ಮುಂದಿನವರು ಬರೆದು ಸೇರಿಸಿದ ಕಾಲ್ಪನಿಕ ದಿನಾಂಕವನ್ನು ಇಲ್ಲಿ ಹೇಳಲಾಗಿದೆ.

ಇಂಥ ಒಂದು ಖೊಟ್ಟಿ ಗ್ರಂಥವನ್ನು ಬೆಳಗಾವಿ ಜಿಲ್ಲೆಯ ಹೂಲಿ ಮಠದಲ್ಲಿ ರಚಿಸಲಾಯಿತು ಎಂಬುದು ಹಸ್ತಪ್ರತಿ ಅಧ್ಯಯನದ ಸಂದರ್ಭದಲ್ಲಿ ತಿಳಿದುಕೊಂಡ ಸತ್ಯಸಂಗತಿಯಾಗಿದೆ.

**೨. ಸಿದ್ಧಾಂತ ಶಿಖಾಮಣಿ ತಿರುಚುವಿಕೆ :**

ಸಿದ್ಧಾಂತ ಶಿಖಾಮಣಿ ಎಂಬ ಗ್ರಂಥದ ಮೂಲ ಹಸ್ತಪ್ರತಿಗಳಲ್ಲಿದ್ದ ವಿಷಯವನ್ನು ಬಿಟ್ಟು ಹೊಸದಾಗಿ ೫೦ಕ್ಕೂ ಹೆಚ್ಚು ಕೃತಕ ಸಂಸ್ಕೃತ ಶ್ಲೋಕಗಳನ್ನು ರಚಿಸಿದ ನಾಗನೂರು ಬೃಹನ್ಮಠದ ಕಾಶೀನಾಥ ಶಾಸ್ತ್ರಿ ಮಾಡಿದ ದೋಷವನ್ನು ಸಂ. ಶಿ. ಭೂಸನೂರಮಠ ಮತ್ತು ಬೆಳಗಾವಿ ಹಿರಿಯ ವಿದ್ವಾಂಸ ಎಸ್.ಜಿ. ಫೀವಾರಿ ಅವರು ಸರಿಪಡಿಸಿ, 'ಸಿದ್ಧಾಂತ ಶಿಖಾಮಣಿ' ಎಂಬ ಶಾಸ್ತ್ರಶುದ್ಧ ಮೂಲ ಪಠ್ಯವನ್ನು ತಾತ್ಪರ್ಯ ದೀಪಿಕೆಯೊಂದಿಗೆ ಪ್ರಕಟಿಸಿದರು.

'ಸಿದ್ಧಾಂತ ಶಿಖಾಮಣಿ' ಗ್ರಂಥವು ಸಂಸ್ಕೃತ ಶ್ಲೋಕಗಳಲ್ಲಿ ಬರೆಯಲ್ಪಟ್ಟಿದೆ. ಇದು ಬಸವಾದಿ ಶರಣರ ಕ್ರಾಂತಿಯ ಕಾಲವಾದ ೧೨ನೇ ಶತಮಾನಕ್ಕಿಂತ ಸಾವಿರಾರು ವರುಷಗಳ ಪೂರ್ವದಲ್ಲಿ ಬರೆಯಲ್ಪಟ್ಟಿದೆಯೆಂದು ಭಾವಿಸಲಾಗಿದೆ. ಶಿವಯೋಗಿ ಶಿವಾಚಾರ್ಯರು ಇದಕ್ಕೆ ಕರ್ತೃಗಳೆಂದು ಹೇಳಲಾಗಿದೆ. ಇದು ವೀರಶೈವ ಧರ್ಮದ ಮೂಲಕೃತಿ ಮತ್ತು ಪಾರಾಯಣಕ್ಕೆ ಅರ್ಹ ಕೃತಿಯೆಂದು ಕಳೆದ ಒಂದುನೂರು ವರ್ಷಗಳ ಅವಧಿಯಲ್ಲಿ ಪ್ರವಚನ, ಉಪನ್ಯಾಸ ಹಾಗೂ ಪುಸ್ತಕ ಪ್ರಕಟಣೆ ಇವುಗಳ ಮೂಲಕ ಪ್ರಚಾರ ಮಾಡುತ್ತ ಬರಲಾಗಿದೆ. ಜನ ಮನದಲ್ಲಿ, ಸಂಶೋಧಕ ವಲಯದಲ್ಲಿ ಗಲಿಬಿಲಿಯುನ್ನುಂಟು ಮಾಡಿದೆ. ಈ ಗಲಿಬಿಲಿಯಿಂದಾಗಿ ಪಂಡಿತ ವಲಯದಲ್ಲಿ ಮುಖ್ಯವಾಗಿ

ಎರಡು ಪಂಗಡಗಳುಂಟಾಗಿವೆ. ಒಂದು ಪಕ್ಷದವರು ಸಿದ್ಧಾಂತ ಶಿಖಾಮಣಿಯ ಕಾಲ ಬಸವಾದಿ ಶರಣರ ಪೂರ್ವದಲ್ಲಿದೆಯೆಂದು ವಾದಿಸಿದರೆ, ಪ್ರತಿಪಕ್ಷದವರು ಬಸವಾದಿ ಶರಣರ ಕಾಲದಿಂದೀಚೆಗೆಂದು ವಾದಿಸುತ್ತ ಬಂದಿದ್ದಾರೆ. ೧೨ನೇ ಶತಮಾನಕ್ಕೆ ಮೊದಲು ಎಂಬ ಅಭಿಪ್ರಾಯ ವ್ಯಕ್ತಪಡಿಸಿ ಕೆಲವರು ಗ್ರಂಥ ಲೇಖನ ಬರೆದಿರುವರು. ಇನ್ನೂ ಕೆಲವರು ೧೩ನೇ ಶತಮಾನದ ನಂತರ ರಚಿತವಾಗಿದೆಯೆಂದು ಅಭಿಪ್ರಾಯ ವ್ಯಕ್ತಪಡಿಸಿ ಗ್ರಂಥ–ಲೇಖನಗಳನ್ನು ಪ್ರಕಟಿಸಿರುವರು. ಕೆಲವರು ಉಗ್ರವಾದಿಗಳಾಗಿ ಕಂಡರೆ ಮತ್ತೆ ಕೆಲವರು ಸೌಮ್ಯವಾದಿಗಳಾಗಿ ಕಾಣುತ್ತಾರೆ. ಇಂಥ ವಿಭಿನ್ನ ವಿಚಾರಗಳಿಂದಾಗಿ ಎರಡೂ ಪಕ್ಷಗಳ ನಡುವಿನ ವಿವಾದ–ವಿಮರ್ಶೆಗಳು ಒಮ್ಮೊಮ್ಮೆ ತಾರಕಕ್ಕೇರಿದುದುಂಟು. ಈ ಚರ್ಚೆಗಳಿಂದ ಎದ್ದ ಕಾರ್ಮೋಡವು ಲಿಂಗಾಯತ ಸಮಗ್ರ ಸಮಾಜವನ್ನು ಆವರಿಸಿಕೊಂಡು ಅವರನ್ನು (ವೀರಶೈವರನ್ನು) ಗೊಂದಲದಲ್ಲಿ ತಳ್ಳಿತು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಜ್ಞಾನಸೂರ್ಯನಂತೆ ಇಮ್ಮಡಿ ಶಿವಬಸವ ಸ್ವಾಮಿಗಳ 'ಸಿದ್ಧಾಂತ ಶಿಖಾಮಣಿ ಹಾಗೂ ಶ್ರೀಕರ ಭಾಷ್ಯ: ನಿಜದ ನಿಲವು' ಗ್ರಂಥ ಉದಯವಾಯಿತು. (೨೦೦೩)

ಇಮ್ಮಡಿ ಶಿವಬಸವ ಸ್ವಾಮಿಗಳ ಈ ಕೃತಿಯು ಸಿದ್ಧಾಂತ ಶಿಖಾಮಣಿ ಬಗೆಗೆ ಕಳೆದ ಒಂದುನೂರು ವರುಷಗಳ ಅವಧಿಯಲ್ಲಿ ತಲೆಯೆತ್ತಿದ್ದ ಎಲ್ಲ ಸಮಸ್ಯೆಗಳಿಗೆ ಸೂಕ್ತ ಪರಿಹಾರ ಒದಗಿಸಿದೆಯೆಂದೇ ಹೇಳಬೇಕಾಗುತ್ತದೆ. ಅವರ ಸಂಶೋಧನಾತ್ಮಕ ಈ ಗ್ರಂಥಕ್ಕೆ ಎಸ್.ಎಸ್.ಭೂಸನೂರಮಠ ಪ್ರತಿಷ್ಠಾನದ ಪ್ರಶಸ್ತಿ ಬಂದಿದೆ. ಅಲ್ಲದೆ ಕರ್ನಾಟಕ ವಿದ್ಯಾವರ್ಧಕ ಸಂಘವು ಒಂದು ವಿಚಾರ ಸಂಕಿರಣವನ್ನು ಏರ್ಪಡಿಸಿ ವಿದ್ವಾಂಸರಿಂದ ಸಂಶೋಧನ ಪ್ರಬಂಧಗಳನ್ನು ಬರೆಯಿಸಿ ಚರ್ಚೆಯನ್ನು ಮಾಡಿತು. ಅದರಲ್ಲಿ ಮಂಡಿತವಾದ ಪ್ರಬಂಧಗಳಲ್ಲಿ ಶ್ರೀಗಳ ಆಳವಾದ ಪಾಂಡಿತ್ಯವನ್ನೂ ಸಂಶೋಧನಾ ರೀತಿಯನ್ನೂ ಪ್ರಶಂಸಿಸಲಾಯಿತು. ಸಂಶಯಗಳ ಸುಳಿಯಲ್ಲಿ ಸಿಲುಕಿದ್ದ ಲಿಂಗಾಯತ ಸಮಾಜ ಬಾಂಧವರನ್ನು ಬೆಳಕಿನೆಡೆಗೆ ನಡೆಯಿಸಿಕೊಂಡು ಹೋಗಲು ಈ ಗ್ರಂಥ ಉತ್ತಮ ಮಾರ್ಗದರ್ಶಿಯಾಗಿದೆಯೆಂದು ಹೇಳಬಹುದು. ಪೂಜ್ಯರು ಸಿದ್ಧಾಂತ ಶಿಖಾಮಣಿ ಕುರಿತು ನೀಡುವ ಎರಡು ಮಹತ್ವದ ನಿರ್ಣಯಗಳನ್ನು ಇಲ್ಲಿ ಪ್ರಸ್ತಾಪಿಸಿದ್ದೇನೆ.

೧೫ನೇ ಶತಮಾನಕ್ಕಿಂತ ಹಿಂದಿನ ಯಾವುದೇ ಸಂಸ್ಕೃತ ಹಾಗೂ ಕನ್ನಡ ಗ್ರಂಥಗಳಲ್ಲಾಗಲಿ, ವಚನ ಸಾಹಿತ್ಯದಲ್ಲಾಗಲಿ ಸಿದ್ಧಾಂತ ಶಿಖಾಮಣಿಯ ಉಲ್ಲೇಖ ದೊರಕುವುದಿಲ್ಲ. ಒಟ್ಟಿನಲ್ಲಿ ಸಿದ್ಧಾಂತ ಶಿಖಾಮಣಿಯ ಕಾಲ ೧೫ನೇ ಶತಮಾನಕ್ಕಿಂತ ಹಿಂದಿರಲು ಅಸಾಧ್ಯ. ಪುರಾಣ ಆಗಮಗಳಲ್ಲಿರುವ ಅತ್ಯುತ್ತಮ ಶ್ಲೋಕ ಕುಸುಮಗಳನ್ನು ಆರಿಸಿ ಸಿದ್ಧಾಂತ ಶಿಖಾಮಣಿಯೆಂಬ ಮಾಲೆಯನ್ನು ಶಿವಯೋಗಿಗಳು ಸಿದ್ಧಪಡಿಸಿದ್ದಾರೆ. ಇದೊಂದು ಸಂಗ್ರಹ ಗ್ರಂಥ. ಸಿದ್ಧಾಂತ ಶಿಖಾಮಣಿಯನ್ನು ಕುರಿತು ಇಮ್ಮಡಿ ಶಿವಬಸವಸ್ವಾಮಿಗಳು ಕಂಡು ಹೇಳಿದ ಫಲಶೃತಿಯಿದು.

ಇಮ್ಮಡಿ ಶಿವಬಸವ ಸ್ವಾಮಿಗಳು ಸಿದ್ಧಾಂತ ಶಿಖಾಮಣಿ ಮತ್ತು ಶ್ರೀಕರ ಭಾಷ್ಯ ಕೃತಿಗಳನ್ನು ಕುರಿತು ಇದ್ದ ಎಲ್ಲ ಸಮಸ್ಯೆಗಳಿಗೆ ತಮ್ಮ ನಿಜದ ನಿಲವು ಗ್ರಂಥದ ಮೂಲಕ

ಸದುತ್ತರಗಳನಿತ್ತಿರುವರೆಂಬುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಆದರೆ ಅವರು ಸಾಂದರ್ಭಿಕವಾಗಿ ಸಿದ್ಧಾಂತ ಶಿಖಾಮಣಿಯ ಪಠ್ಯವನ್ನು ಕುರಿತು ತಮಗೆ ತಾವೇ ಕೆಲವು ಪ್ರಶ್ನೆಗಳನ್ನು ಹಾಕಿಕೊಂಡಿದ್ದಾರೆ. ಆ ಪ್ರಶ್ನೆಗಳಿಗೆ ಸದುತ್ತರಗಳನ್ನು ನಾವಿಲ್ಲಿ ಸಾಧಾರವಾಗಿ ಕೊಡಲೆತ್ನಿಸಿದ್ದೇವೆ. ಉತ್ತರಗಳನ್ನು ಕೊಡುವ ಮುನ್ನ ಅವರು ಎತ್ತಿದ ಪ್ರಶ್ನೆಗಳನ್ನು ಕೆಳಗೆ ಉಲ್ಲೇಖಿಸಿದ್ದೇವೆ:

ಸಿದ್ಧಾಂತ ಶಿಖಾಮಣಿ ಗ್ರಂಥದ ಬಗೆಗೆ ಒಂದು ಸಂಭಾವ್ಯ ಊಹೆ ಅನಿವಾರ್ಯವಾಗಿದೆ. ವಿರಕ್ತ ತೋಂಟದಾರ್ಯನು ಬಳಸಿಕೊಂಡಿರುವ ಸಿದ್ಧಾಂತ ಶಿಖಾಮಣಿಯು ಪ್ರಸ್ತುತ ನಮ್ಮ ಬಳಕೆಯಲ್ಲಿರುವ ಸಿದ್ಧಾಂತ ಶಿಖಾಮಣಿಯಲ್ಲಿನ ಹಲವು ಶ್ಲೋಕಗಳಿಲ್ಲದಿರುವ ಸಂಸ್ಕರಣವಾಗಿದ್ದಿರಬಹುದು. ಈ ಊಹೆಗೆ ಪೋಷಕವಾಗಿ ಕ್ರಿ.ಶ.ಸು. ೧೬೫೦ರಲ್ಲಿದ್ದ ಸಂಪಾದನೆ ಸಿದ್ಧವೀರಣ್ಣನ 'ಅನಾದಿ ವೀರಶೈವ ಸಂಗ್ರಹ', ಕ್ರಿ.ಶ. ಸು. ೧೭ನೆಯ ಶತಮಾನದಲ್ಲಿದ್ದ ಶಾಂತದೇವರ 'ಷಟ್ಸ್ಥಲ ಸಂಗ್ರಹ', ಕ್ರಿ.ಶ.ಸು ೧೫ನೇ ಶತಮಾನದಲ್ಲಿದ್ದ ಜಾಳಿಗೆ ಕಂತೆ ಸಿದ್ಧಲಿಂಗ ಶಿವಯೋಗಿಗಳ 'ಶಿವಯೋಗ ಚಿಂತಾಮಣಿ' ಹಾಗೂ ಕ್ರಿ.ಶ. ೧೭ನೆಯ ಶತಮಾನದ ಶ್ರೀಗುರು ದೇವನ 'ವೀರಶೈವಾಚಾರ ಪ್ರದೀಪಿಕಾ'–ಈ ನಾಲ್ಕು ಕೃತಿಗಳನ್ನು ಪರಿಶೀಲಿಸಬಹುದು. ಈ ಕೃತಿಗಳಲ್ಲಿ ಸಿದ್ಧಾಂತ ಶಿಖಾಮಣಿಯನ್ನು ಹೆಸರಿಸುತ್ತಾ ಬಹಳಷ್ಟು ಶ್ಲೋಕಗಳನ್ನು ಉದಾಹರಿಸುತ್ತಾರೆ. ಆದರೆ ಪ್ರಸ್ತುತ ಲಭ್ಯವಿರುವ ಸಿದ್ಧಾಂತ ಶಿಖಾಮಣಿಯಲ್ಲಿ ಅಲ್ಲಿನ ಹಲವು ಶ್ಲೋಕಗಳು ದೊರಕುತ್ತಿಲ್ಲ. (ಪುಸ್ತಕದಲ್ಲಿ ನೋಡಿ ಅನುಬಂಧ–೩) "ಈ ನಾಲ್ವರಿಗೂ ಲಭ್ಯವಾಗಿರುವ ಸಿದ್ಧಾಂತ ಶಿಖಾಮಣಿಯ ಪಠ್ಯ ಈಗಿನ ಸಿದ್ಧಾಂತ ಶಿಖಾಮಣಿ ಪಠ್ಯದಂತೆ ಇರಲಿಲ್ಲ ಎಂಬುದು ಇದರಿಂದ ಸ್ಪಷ್ಟ. ಈ ಊಹೆಗೆ ಪುಷ್ಟಿಕೊಡುವ ಮತ್ತೊಂದು ಆಧಾರ ಕ್ರಿ.ಶ. ೧೭ನೇ ಶತಮಾನದಲ್ಲಿದ್ದ ಬಸವೋತ್ತರ ಯುಗದ ಮಹತ್ವಪೂರ್ಣ ವಚನಕಾರರಾದ ಷಣ್ಮುಖ ಶಿವಯೋಗಿಗಳ ಒಂದು ವಚನ, ಇದರಲ್ಲಿ ಸಿದ್ಧಾಂತ ಶಿಖಾಮಣಿಯದೆಂದು ಎರಡು ಶ್ಲೋಕಗಳನ್ನು ಹೇಳಿದ್ದರೂ ಆ ಶ್ಲೋಕಗಳು ಪ್ರಸ್ತುತ ಸಿದ್ಧಾಂತ ಶಿಖಾಮಣಿಯಲ್ಲಿ ದೊರಕುತ್ತಿಲ್ಲ." ಆ ವಚನ ಇಂತಿದೆ.....(ಸಮಗ್ರ ವಚನ ಸಂಪುಟ–೧೪, ವ. ೮೦೮, ಪು.೩೭೩)"[೩೭]

ಸ್ವಾಮೀಜಿಯವರು ಎತ್ತಿದ ಎಲ್ಲ ಪ್ರಶ್ನೆಗಳಿಗೆ ಕೆಲವು ಮಟ್ಟಿಗಾದರೂ ಸಮಾಧಾನಕರ ಉತ್ತರ ಕೊಡುವುದಕ್ಕೆ ಸಾಧ್ಯವಿದೆ. ಇದು ಪಿಎಚ್.ಡಿ. ಮಹಾಪ್ರಬಂಧ ಬರೆಯಬೇಕೆನ್ನುವವರಿಗೆ ಮಹತ್ವದ ವಿಷಯವಾಗಬಹುದೆಂದು ಹೇಳಬಹುದು. ಆ ನಿಟ್ಟಿನಲ್ಲಿ ಸಂಶೋಧನೆಗೆ ಪೂರಕವಾದ ಕೆಲವು ಅಂಶಗಳನ್ನು ನಾನು ಹೀಗೆ ಗ್ರಹಿಸಿದ್ದೇನೆ.

೧. ನಮ್ಮ ವಿಶ್ಲೇಷಣೆಗೆ ಕೆಳಕಂಡ ಪ್ರಚಲಿತವಿರುವ ಎರಡು ಸಿದ್ಧಾಂತ ಶಿಖಾಮಣಿಯ ಮುದ್ರಿತ ಆವೃತ್ತಿಗಳನ್ನು ಬಳಸಿಕೊಂಡಿದ್ದೇವೆ.

(ಅ) ವೀರಶೈವ ಸಿದ್ಧಾಂತ ಶಿಖಾಮಣಿ, (ಸಂ), ಸಂ.ಶಿ.ಭೂಸನೂರಮಠ ಮತ್ತು ಎಸ್.ಜಿ.ಖಿವಾರಿ ಪ್ರಕಾಶಕರು, ಕಾರಂಜಿಮಠ, ಬೆಳಗಾವಿ, ೧೯೯೨

(ಆ) ಸಿದ್ಧಾಂತ ಶಿಖಾಮಣಿ : ಸಂಪಾದಕರು: ಕಾಶೀನಾಥ ಶಾಸ್ತ್ರೀ, ಕಾಶೀನಾಥ ಗ್ರಂಥಮಾಲೆ, ಮೈಸೂರು, ೧೯೭೨

ಮೇಲಿನ ಎರಡು ಸಿದ್ಧಾಂತ ಶಿಖಾಮಣಿ ಆವೃತ್ತಿಗಳು ಕರ್ನಾಟಕದಲ್ಲಿ ಹೆಚ್ಚು ಪ್ರಚಾರದಲ್ಲಿವೆ. ಕಾಶೀನಾಥ ಶಾಸ್ತ್ರಿಗಳ ಸಿದ್ಧಾಂತ ಶಿಖಾಮಣಿಯನ್ನು ವಿಮರ್ಶೆಗೆ ಒಳಪಡಿಸಿದಾಗ ಕಂಡು ಬರುವ ವಿಷಯಗಳು ಇಂತಿವೆ.

೧. "ಈ ಸಂಶೋಧನೆಯಲ್ಲಿ ಉಜ್ಜಯನೀ ಮಹಾಸಂಸ್ಥಾನದ ಪ್ರಾಚೀನ ಗ್ರಂಥಭಂಡಾರದಲ್ಲಿ ದೊರೆತ ತಾಳಪತ್ರ ಗ್ರಂಥವೂ, ಈಗ್ಗೆ ಬಹುದಿನಗಳ ಪೂರ್ವದಲ್ಲಿ ಆಂಧ್ರಾಕ್ಷರಗಳಿಂದ ಮುದ್ರಿತವಾದ 'ಶೈವಸಿದ್ಧಾಂತ ಪಂಚಕ'ದಲ್ಲಿರುವ ಪ್ರತಿಯೂ ವಿಶೇಷ ಸಹಾಯ ಮಾಡಿದವು." ಎಂದು ಪಂ. ಕಾಶೀನಾಥ ಶಾಸ್ತ್ರಿಗಳು ತಾವು ಬರೆದ ಪ್ರಸ್ತಾವನೆಯಲ್ಲಿ (ಪು.೯) ಹೇಳಿದ್ದಾರೆ. ಆಂಧ್ರಾಕ್ಷರಗಳಲ್ಲಿ ಪ್ರಥಮವಾಗಿ ಪ್ರಕಟವಾದ್ದು ಕರಿಬಸವಶಾಸ್ತ್ರಿಗಳಿಂದ ೧೮೮೪ರಲ್ಲಿ ಪ್ರಕಟಿಸಲಾದ ಸಿದ್ಧಾಂತ ಶಿಖಾಮಣಿ ಎಂದು ಹೇಳಬಹುದು. ಆ ದೃಷ್ಟಿಯಿಂದ ಪ್ರೊ. ಭೂಸನೂರಮಠರು ಸಂಪಾದಿಸಿ ಪ್ರಕಟಿಸಿದ ಆವೃತ್ತಿಯನ್ನು ವಿಮರ್ಶೆಗಾಗಿ ಆಯ್ಕೆ ಮಾಡಿಕೊಂಡಿರುವೆ ಪಂ. ಕಾಶೀನಾಥ ಶಾಸ್ತ್ರಿಗಳು ತಾವು ಅವಲೋಕಿಸಿದ ತೆಲಗು ಲಿಪಿಯಲ್ಲಿ ಪ್ರಕಾಶಿತವಾದ ಗ್ರಂಥದ ಸಂಪಾದಕರ, ಪ್ರಕಾಶಕರ ಹೆಸರುಗಳನ್ನು ಸ್ಪಷ್ಟಪಡಿಸಿಲ್ಲ. ಅದು ಪ್ರಕಟವಾದ ಸ್ಥಳ ಮತ್ತು ವರ್ಷಗಳನ್ನೂ ಮರೆಮಾಡಿದ್ದಾರೆ. ಇದು ಗ್ರಂಥಸಂಪಾದನ ಶಾಸ್ತ್ರಕ್ಕೆ ಶೋಭಿಸತಕ್ಕ ಮಾತಲ್ಲ.

೨. ಪಂ. ಕಾಶೀನಾಥ ಶಾಸ್ತ್ರಿಗಳು ತಮ್ಮ ಅದೇ ಪ್ರಸ್ತಾವನೆಯಲ್ಲಿ ತಾವು ಸಂಪಾದಿಸಿದ ಸಿದ್ಧಾಂತ ಶಿಖಾಮಣಿ ಕುರಿತು "ಈ ಗ್ರಂಥಕ್ಕೆ ಇಲ್ಲಿಯವರೆಗೆ ಅನೇಕ ಜನರು ಕನ್ನಡ–ಸಂಸ್ಕೃತ–ಮಹಾರಾಷ್ಟ್ರಾದಿ ಭಾಷೆಗಳಲ್ಲಿ ವ್ಯಾಖ್ಯಾನವನ್ನು ಬರೆದಿದ್ದಾರೆ.

ಆದರೆ ಅವರೆಲ್ಲರೂ ಕೆಲವು ಸ್ಥಲಗಳಲ್ಲಿ ಭಗವತ್ಪಾದರ ಹಾರ್ದಿಕಾಭಿಪ್ರಾಯವನ್ನು ತಿಳಿಯದೆ, ಮನಸ್ಸಿಗೆ ಬಂದಂತೆ ವ್ಯಾಖ್ಯಾನವನ್ನು ಬರೆದು, ಈ ಮತಸಿದ್ಧಾಂತವೇ ಜನರಿಗೆ ತಿಳಿಯದಂತೆ ಮಾಡಿಬಿಟ್ಟಿದ್ದಾರೆ. ಕೆಲವು ಸ್ಥಲಗಳಲ್ಲಿ ಮೂಲಶ್ಲೋಕಗಳನ್ನೇ ಬಿಟ್ಟುಬಿಟ್ಟಿದ್ದಾರೆ. ಇದಲ್ಲದೆ ವ್ಯಾಕರಣರೀತ್ಯಾ ಶುದ್ಧಾಶುದ್ಧತೆಗಳನ್ನಂತೂ ಕಣ್ದೆರೆದು ನೋಡಿಯೇ ಇರುವುದಿಲ್ಲ, ಇದನ್ನೆಲ್ಲ ಕೂಲಂಕಷವಾಗಿ ಪರಾಮರ್ಶಿಸಿದರೆ ಪ್ರತಿಯೊಬ್ಬ ಮತಾಭಿಮಾನಿಗೂ ವ್ಯಸನವಾಗದಿರದು. ಈ ವಿಷಯವು ಸರ್ವರಿಗೂ ತಿಳಿಯಲೆಂಬ ಉದ್ದೇಶದಿಂದ, ಕೆಲವು ಶ್ಲೋಕಗಳು ಈ ಕೆಳಗೆ ಉದಾಹರಿಸಲ್ಪಟ್ಟಿರುತ್ತವೆ. ಪಾಠಕರು ಪರಾಮರ್ಶಿಸಬೇಕು.

"ಶಿವಾದ್ಯಾ[೧]ದಿಸಮುತ್ಪನ್ನ ಶಾಂತ್ಯತೀತ[೨]ಪರೋತ್ತರಾಂ।
ಮಾತರಂ ತಾಂ ಸಮಸ್ತಾನಾಂ ವಂದೇ ಶಿವಕರೀಂ ಶಿವಾಂ॥
ಶಿವಭಕ್ತಿಃ ಸ್ಥಿರಾ ಯಸ್ಮಿನ್[೩] ಯಜ್ಞೇವಿಗತವಿಪ್ಲವಾಃ

ವಿದಧತು ಮತಿಮಸ್ಮಿನ್[೪] ವೀರಶೈವೇ ವಿಶಿಷ್ಟಾಃ (ಪರಿಚ್ಛೇದ-೧)

ಆಚಾಂತೇ[೫] ಭವತಾ ಪೂರ್ವಂ ಪಂಕಶೇಷಾಃ ಪಯೋಧಯಃ (ಪರಿಚ್ಛೇದ೪)

ಏತಾನಿ ಮಾನಭೂತಾನಿ[೬] ನೋಪಹನ್ಯಾನಿ ಯುಕ್ತಿಭಿಃ (ಪರಿಚ್ಛೇದ-೫)

ಪೃಥ್ವ್ಯಾದಿಕಮಿದಂ ಸರ್ವಂ ಕಾರ್ಯಂ ಕರ್ತಾ ಮಹೇಶ್ವರಃ

ನೈತತ್ ಸಾಕ್ಷಾನ್ಮಹೇಶೋಯಂ[೭] ಕುಲಾಲೋ ಮೃತ್ತಿಕಾ ಯಥಾ (ಪರಿಚ್ಛೇದ-೧೦)

ಪ್ರಾಣೋ ಯತ್ರ ಲಯಂ ಯಾತಿ[೮] ಭಾಸ್ಕರೇ ತುಹಿನಂ ಯಥಾ

ತತ್ಪ್ರಾಣಲಿಂಗಮುದ್ದಿಷ್ಟಂ ತದ್ಧಾರೀ ಸ್ಯಾತ್ತದಾಕೃತಿಃ

ಏವಂವಿಧೈ[೯]ರ್ಭಾವಪುಷ್ಪೈರುಪಚಾರೈರದೂಷಿತೈಃ

ಪ್ರತ್ಯುನ್ಮುಖಮನಾ[೧೦] ಭೂತ್ವಾ ಪೂಜೆಯೇಲ್ಲಿಂಗಮಾಂತರಂ (ಪರಿಚ್ಛೇದ-೧೨)

ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾವಿಶ್ವವಸ್ತು ಪ್ರಕಾಶಿನೀ

ತಥಾ[೧೧]ಶಕ್ತಿರ್ವಿಮರ್ಶಾತ್ಮಾ[೧೨] ಪ್ರಕಾರೇ ಬ್ರಹ್ಮಣಿ ಸ್ಥಿತಾ[೧೩]

ಇದಾನೀಮೇವ ಮೇ ಜಾತಂ[೧೪] ಮುನಿರಾಜೋತ್ತಮೋತ್ತಮಂ

ಶ್ರುತ್ವಾ ಮೇ ಮೋದತೇ ಚಿತ್ತಂ ಜ್ಯೋತಿಃ ಪಶ್ಯೇ."[೧೫] ಶಿವಾಭಿಧಂ (ಪರಿಚ್ಛೇದ೨೦)

ಈ ಶ್ಲೋಕಗಳಲ್ಲಿ ಕೆಳಗೆ ರೂಲು ಹಾಕಿರುವಂಥವುಗಳು ಕೇವಲ ತಪ್ಪಾಗಿರುವವು. ಇವು ತಾಳಪತ್ರಗ್ರಂಥಗಳ ಸಹಾಯದಿಂದ ಈ ಕೆಳಗೆ ಉಲ್ಲೇಖಿಸಿದಂತೆ ಅನುಕ್ರಮವಾಗಿ ಸರಿಮಾಡಲ್ಪಟ್ಟಿರುವುವು.

೧. ಸಮುತ್ಪನ್ನಾ ೨. ಪದೋತ್ತರಾ ೩. ಜಜ್ಞೇ ವಿಗತವಿಪ್ಲವಾ ೪. ವೀರಶೈವಾಃ ೫. ಆಚಾಂತಾಃ ೬. ನ ಹಂತವ್ಯಾನಿ ೭. ಕುಲಾಲಃ ಕಲಶೋ ಯಥಾ ೮. ಭಾಸ್ಕರೇಂದು ವಿಘಟ್ಟನಾತ್ ೯. ಭಾವಶುದ್ಧ್ಯೈಃ ೧೦. ಪ್ರತ್ಯಙ್ಮುಖ ೧೧. ವಿಮರ್ಶಾಖ್ಯಾ ೧೨. ಪ್ರಕಾಶೇ ೧೩. ಸ್ಥಿರಾ ೧೪. ಮುನಿರಾಜಮುತ್ತಮಂ ೧೫. ಪಶ್ಯತ್

"ಇದೇ ರೀತಿಯಾಗಿ ಈ ಮೊದಲು ಮುದ್ರಿತವಾದ ಗ್ರಂಥಗಳಲ್ಲಿ ಅನಂತಾನಂತ ಅರ್ಥದೋಷಗಳೂ, ವ್ಯಾಕರಣ ದೋಷಗಳೂ ತುಂಬಿರುವವು. ಈಗ ಮುದ್ರಿತವಾಗಿರುವ ಗ್ರಂಥವನ್ನು ಪರಿಶೀಲಿಸಿದರೆ ಸಿದ್ಧಾಂತ ಶಿಖಾಮಣಿಯು ಎಷ್ಟುಮಟ್ಟಿಗೆ ಪರಿಶುದ್ಧಿಗೊಂಡಿರುವುದೆಂಬುದು ಧರ್ಮಶಾಸ್ತ್ರಜ್ಞರಿಗೆ ವೇದ್ಯವಾಗುವುದು."[೩೮]

ಮೇಲಿನ ಅವತರಣಿಕೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇಮ್ಮಡಿ ಶಿವಬಸವ ಸ್ವಾಮಿಗಳು ಎತ್ತಿದ ಕೆಲವಾದರೂ ಪ್ರಶ್ನೆಗಳಿಗೆ ಉತ್ತರಗಳು ಇದರಲ್ಲಿ ಸಿಗುತ್ತವೆ ಎಂದು ಹೇಳಬಹುದು.

ಕನ್ನಡ-ಸಂಸ್ಕೃತ-ಮರಾಠಿ ಭಾಷೆಗಳಲ್ಲಿ ಸಿದ್ಧಾಂತ ಶಿಖಾಮಣಿಗೆ ಯಾರು ಯಾರು ತಪ್ಪು ವ್ಯಾಖ್ಯಾನ ಬರೆದಿದ್ದಾರೆ? ಯಾರು ಯಾರು ಸಿದ್ಧಾಂತ ಶಿಖಾಮಣಿಯ ಯಾವ ಯಾವ ಮೂಲಶ್ಲೋಕಗಳನ್ನು ಕೈ ಬಿಟ್ಟಿದ್ದಾರೆ? ಎಂಬ ವಿಷಯಗಳನ್ನು ಖಚಿತವಾಗಿ ಆಧಾರ ಸಹಿತವಾಗಿ

ಕಾಶೀನಾಥ ಶಾಸ್ತ್ರಿಗಳು ಹೇಳಬೇಕಾಗಿತ್ತು. ಊಹಾತ್ಮಕ ಹೇಳಿಕೆ ನೀಡುವುದಕ್ಕೆ ಗ್ರಂಥಸಂಪಾದನ ಶಾಸ್ತ್ರದಲ್ಲಿ ಸ್ಥಾನವಿಲ್ಲ.

೨. ಆದರೆ ತಮ್ಮ ದೃಷ್ಟಿಯಲ್ಲಿ ತಪ್ಪೆಂದು ಕಾಣುವ ೧೦ ಶ್ಲೋಕಗಳನ್ನು ತಪ್ಪೆನಿಸಿದ ಸಾಲುಗಳ ಕೆಳಗೆ ರೂಲು ಹಾಕಿದ್ದಾರೆ. ಇನ್ನೂ ಮುಂದೆ ಹೋಗಿ ತಾವು ತಪ್ಪೆಂದೆನಿಸಿದ ಅಡ್ಡಗೆರೆ ಎಳೆದ ಶ್ಲೋಕಗಳ ವಾಕ್ಯಾವಳಿಯ ಬದಲಾಗಿ ತಮಗೆ ಸರಿಯೆನಿಸಿದ ವಾಕ್ಯಗಳನ್ನು ಸೇರಿಸಿರುವುದಾಗಿ ಹೆಮ್ಮೆಪಟ್ಟುಕೊಂಡಿದ್ದಾರೆ. ಹೀಗೆಯೇ ಶಾಸ್ತ್ರಿಗಳು ತಿದ್ದಿ ಹಾಕಿದ ವಾಕ್ಯಗಳಲ್ಲಿ ದೋಷಗಳನ್ನು ಕಂಡು ಮತ್ತೊಬ್ಬ ವಿದ್ವಾಂಸನು ಅವುಗಳ ಬದಲಾಗಿ ತನ್ನ ವಾಕ್ಯಾವಳಿಗಳನ್ನು ಸೇರಿಸುವುದು ಸಾಧ್ಯವಿಲ್ಲವೇ? ಹೀಗೆ ಒಬ್ಬೊಬ್ಬರೂ ಒಂದೊಂದು ರೀತಿಯಲ್ಲಿ ವಾಕ್ಯ ಶ್ಲೋಕಗಳನ್ನು ತಿರುಚುತ್ತ ಹೋದರೆ ಗ್ರಂಥದ ಮೂಲ ಕರ್ತೃವಿಗೆ ಅನ್ಯಾಯ-ಅಪಚಾರ ಮಾಡಿದಂತಾಗುವುದಿಲ್ಲವೇ? ಇದು ಸಹ ಸಂಪಾದಕನ ಅಧಿಕಾರ ವ್ಯಾಪ್ತಿಯೊಳಗೆ ಬರುವುದಿಲ್ಲ. ಶಾಸ್ತ್ರಿಗಳು ಸಂಪಾದನಾಶಾಸ್ತ್ರದ ಕಾರ್ಯವ್ಯಾಪ್ತಿಯನ್ನು ಮೀರಿ ನಡೆದಿರುವುದು ಮೇಲ್ನೋಟಕ್ಕೆ ಸಾಬೀತಾಗುತ್ತದೆ.

೩. ಶಾಸ್ತ್ರಿಗಳು ಮೇಲೆ ಉದಾಹರಿಸಿದ ಶ್ಲೋಕಗಳ ಅನುಕ್ರಮ ನಂಬರುಗಳನ್ನು ಹೇಳದೆ ಕೇವಲ ಪರಿಚ್ಛೇದಗಳ ಸಂಖ್ಯೆಗಳನ್ನು ಕೊಟ್ಟಿದ್ದಾರೆ. ನಾವು ಆಯಾ ಪರಿಚ್ಛೇದವನ್ನು ಪರಿಶೀಲಿಸಿ ಅನುಕ್ರಮ ಸಂಖ್ಯೆಗಳನ್ನು ಪತ್ತೆಹಚ್ಚಿ ಅವುಗಳನ್ನು ಕರಿಬಸವಶಾಸ್ತ್ರಿಗಳು ವ್ಯಾಖ್ಯಾನದೊಂದಿಗಿನ ಭೂಸನೂರಮಠ ಮತ್ತು ಎಸ್. ಜಿ. ಘಿವಾರಿ ಅವರು ಸಂಪಾದಿಸಿದ ಸಿದ್ಧಾಂತ ಶಿಖಾಮಣಿಯಲ್ಲಿಯ ಶ್ಲೋಕಗಳನ್ನು ಪರಿಶೀಲಿಸಿದೆ. ಅವೇ ಶ್ಲೋಕಗಳನ್ನು ಪಂ. ಕಾಶೀನಾಥ ಶಾಸ್ತ್ರಿಗಳು ಅನಾಮತ್ತಾಗಿ ಎತ್ತಿಕೊಂಡು ತಮ್ಮ ಆವೃತ್ತಿಯಲ್ಲಿ ತಿದ್ದಿರುವುದು ಸ್ಪಷ್ಟವಾಯಿತು.

| | | | |
|---|---|---|---|
| ಪರಿಚ್ಛೇದ | ೧ | ಶ್ಲೋಕ | ೧೦,೧೯,೩೨ |
| ಪರಿಚ್ಛೇದ | ೪ | ಶ್ಲೋಕ | ೩೯ |
| ಪರಿಚ್ಛೇದ | ೫ | ಶ್ಲೋಕ | ೪ |
| ಪರಿಚ್ಛೇದ | ೧೦ | ಶ್ಲೋಕ | ೫೨ |
| ಪರಿಚ್ಛೇದ | ೧೨ | ಶ್ಲೋಕ | ೭, ೨೦ |
| ಪರಿಚ್ಛೇದ | ೨೦ | ಶ್ಲೋಕ | ೩೭, ೭೬ |

ಇಲ್ಲಿಯವರಿಗೆ ಅನೇಕ ಜನರು ಕನ್ನಡ-ಸಂಸ್ಕೃತ-ಮಹಾರಾಷ್ಟ್ರಾದಿ ಭಾಷೆಗಳಲ್ಲಿ ವ್ಯಾಖ್ಯಾನ ಬರೆದು ಶುದ್ಧಾಶುದ್ಧತೆಗಳನ್ನು ಕಣ್ತೆರೆದು ನೋಡದೆ ತಿದ್ದಿರುವರೆಂದು ಶಾಸ್ತ್ರಿಗಳು ಆರೋಪಿಸಿರುವುದಕ್ಕೆ ಎಳ್ಳಷ್ಟೂ ಬೆಲೆ ಇಲ್ಲ. ಯಾಕೆಂದರೆ ತಾವೇ ಹೀಗೆ ತಿದ್ದಿರುವುದಕ್ಕೆ ಪ್ರತ್ಯಕ್ಷ ಸಾಕ್ಷಿಯಾಗಿದ್ದಾರೆ. ಆದ್ದರಿಂದ 'ಅನೇಕ ಜನರು' ಎಂದು ಹೇಳಿದ ಅವರ ಶಬ್ದಗಳಿಗೆ ಅರ್ಥವಿಲ್ಲ. ಅವರು ಮೂಲ ಕರಿಬಸವಶಾಸ್ತ್ರಿಗಳ ಕನ್ನಡ-ಮರಾಠಿ ವ್ಯಾಖ್ಯಾನಗಳ ಆವೃತ್ತಿಗಳನ್ನು ಮಾತ್ರ ಅವಲೋಕಿಸಿರುವುದು ವ್ಯಕ್ತವಾಗುತ್ತದೆ.

೪. ಪಂ. ಕಾಶೀನಾಥ ಶಾಸ್ತ್ರಿಗಳು ಹಸ್ತಪ್ರತಿ ಮೂಲಪ್ರತಿಗಳನ್ನು ಮನಬಂದಂತೆ ತಿದ್ದುವುದರಲ್ಲಿ ಬಲ್ಲಿದರಾಗಿದ್ದರೆಂಬ ವಿಷಯವನ್ನು ಪಂ. ಎನ್. ಗುಂಡಾಶಾಸ್ತ್ರಿ ಎನ್ನುವವರು ತಾವು ಬರೆದ "ಪಂ.ಕಾಶೀನಾಥ ಶಾಸ್ತ್ರಿಗಳ ನಿಜ ಜೀವನ ಚರಿತ್ರೆ" ಎಂಬ ಗ್ರಂಥದಲ್ಲಿ ಅನೇಕ ಉದಾಹರಣೆಗಳನ್ನು ಕೊಟ್ಟು ವಿವರಿಸಿರುವರು. "೧೯೩೪ನೇ ಸೆಪ್ಟೆಂಬರ ೨೫ನೇ ಮಂಗಳವಾರ ನನಗೂ ಕಾಶೀನಾಥ ಶಾಸ್ತ್ರಿಗಳಿಗೂ ಪ್ರಾರಂಭವಾದ ವಿರಸವು ವಿಜಯದಶಮಿ (೦೭-೧೦-೧೯೩೫) ಸೋಮವಾರ ಈ ಗ್ರಂಥ ಪ್ರಕಟನಾ ರೂಪದಲ್ಲಿ ಮುಕ್ತಾಯ"ವಾಯಿತೆಂದು ತಮ್ಮ ಮುನ್ನುಡಿಯಲ್ಲಿ ಬರೆದಿದ್ದಾರೆ. ಇದನ್ನು ೧೯೩೫ ರಲ್ಲಿ ಮೈಸೂರಿನಲ್ಲಿ ಪ್ರಕಟಿಸಿರುವರು. ಪ್ರಾಜ್ಞರು ಅವಶ್ಯ ಅವಲೋಕಿಸಬೇಕಾದ ಗ್ರಂಥ.

೫. ನನಗೆ ದೊರೆತ ಮತ್ತೊಂದು ಮಹತ್ವದ ಆಧಾರವು ಪಂ.ಕಾಶೀನಾಥ ಶಾಸ್ತ್ರಿಗಳು ಸಂಪಾದಿಸಿದ ಸಿದ್ಧಾಂತ ಶಿಖಾಮಣಿಯ ಕೊನೆಯ ಮೂರು ಪುಟಗಳಲ್ಲಿ ದೊರೆಯುತ್ತದೆ. ಇಲ್ಲಿ ಸುಮಾರು ೫೩ ಸಿದ್ಧಾಂತ ಶಿಖಾಮಣಿಯ ಮೂಲ ಗ್ರಂಥದಲ್ಲಿಯ ಶ್ಲೋಕಗಳನ್ನು ಹೆಕ್ಕಿ ತೆಗೆದು ಪ್ರತ್ಯೇಕಿಸಿ ಕೊಟ್ಟಿದ್ದಾರೆ:

"ಶಿವಾದ್ವೈತ ಸಿದ್ಧಾಂತ ಪ್ರತಿಪಾದಕ ಗ್ರಂಥಗಳಲ್ಲಿ ಶಿಖಾಮಣಿಯಂತೊಪ್ಪುತ್ತಿರುವೀ ಸಿದ್ಧಾಂತ ಶಿಖಾಮಣಿಯು, ಈ ಮೊದಲು ಅನೇಕ ಕಡೆಗೆ ಮುದ್ರಿಸಲ್ಪಟ್ಟಿರುವುದು. ಆದರೆ ಮುದ್ರಾಪಕರೂ ಶಾಸ್ತ್ರಜ್ಞರೂ ಸಂಶೋಧನ ದೃಷ್ಟಿಯುಳ್ಳವರೂ ಆಗದಿದ್ದುದರಿಂದ, ಅವರು ಮುದ್ರಣ ಮಾಡಿಸಿದ ಗ್ರಂಥಗಳಲ್ಲಿ ಅಶುದ್ಧ ವಾಕ್ಯಗಳು ಹೇರಳವಾಗಿ ಬಿದ್ದಿರುವುದಲ್ಲದೆ, ವೀರಶೈವ ಸಿದ್ಧಾಂತಕ್ಕೆ ಅತ್ಯಂತ ವಿರುದ್ಧವಾಗಿರುವ ಕೆಲವು ಶ್ಲೋಕಗಳೂ ಸಹ ಮುದ್ರಿತವಾಗಿರುವವು. ವೀರಶೈವ ಸಿದ್ಧಾಂತವು ಪರಿಣಾಮವಾದವನ್ನೂ ಜಗತ್ಸತ್ಯತ್ವವನ್ನೂ ಘಂಟಾಘೋಷವಾಗಿ ಸಾರುತ್ತಿದ್ದರೂ, ಇದಕ್ಕೆ ಅತ್ಯಂತ ವಿರುದ್ಧವಾಗಿರುವ ವಿವರ್ತವಾದ ಮಿಥ್ಯಾವಾದ ಪ್ರತಿಪಾದಕ ಶ್ಲೋಕಗಳು ಅಲ್ಲಲ್ಲಿ ಸೇರಿಹೋಗಿವೆ. ಇದಲ್ಲದೆ ಭಗವತ್ಪಾದರ ಭೂಲೋಕಾವತಾರ ವಿಷಯದಲ್ಲಿ ಶಿವಾಗಮಾಭಿಪ್ರಾಯಕ್ಕೆ ಅತ್ಯಂತ ವಿರುದ್ಧವಾಗಿರುವ ಕೆಲವು ಶ್ಲೋಕಗಳೂ ಮುದ್ರಿತವಾಗಿವೆ. ಆದುದರಿಂದ ಅಲ್ಲಲ್ಲಿ ಸೇರ್ಪಡೆಯಾಗಿರುವ ಶ್ಲೋಕಗಳನ್ನೆಲ್ಲ ಬೇರ್ಪಡಿಸಿ ಈ ಗ್ರಂಥಾಂತ್ಯದಲ್ಲಿ ಒತ್ತಟ್ಟಿಗೆ ಶೇಖರಿಸಿದೆ." ೬೯

ಶಿವಾಗಮಾಭಿಪ್ರಾಯಕ್ಕೂ ವೀರಶೈವ ಸಿದ್ಧಾಂತಕ್ಕೂ ಅತ್ಯಂತ ವಿರುದ್ಧವಾಗಿರುವ ಶ್ಲೋಕಗಳು ಈ ಗ್ರಂಥದಿಂದ ಬೇರ್ಪಡಿಸಲ್ಪಟ್ಟ ವಿವರ:

"ತೇಷು ಪ್ರಮಥವರ್ಗೇಷು ಸೃಷ್ಟೇಷು ಪರಮಾತ್ಮನಾ। ರೇಣುಕೋ ದಾರುಕಶ್ಚೇತಿದ್ವಾವಭೂತಾಂ ಶಿವಪ್ರಿಯೌ॥ ಸರ್ವವಿದ್ಯಾವಿಶೇಷಜ್ಞೌ ಸರ್ವಕಾರ್ಯವಿಚಕ್ಷಣೌ ಮಾಯಾ ಮಲ ವಿನಿರ್ಮುಕ್ತೌಮಹಿಮಾತಿಶಯೋಜ್ವಲೌ॥ ಆತ್ಮಾನಂದಪರಿಸ್ಫೂರ್ತಿ ರಸಾಸ್ವಾದನಲಂಪಟೌ। ಶಿವತತ್ವಪರಿಜ್ಞಾನತಿರಸ್ಕೃತ ಭವಾಮಯೌ॥ ನಾನಾಪಥ ಮಹಾಶೈವತಂತ್ರನಿರ್ವಾಹತತ್ಪರೌ। ವೇದಾಂತಸಾರ

ಸರ್ವಸ್ವವಿವೇಚನವಿಚಕ್ಷಣೌ॥ ನಿತ್ಯ ಸಿದ್ಧೌ ನಿರಾತಂಕೌ ನಿರಂಕುಶಪರಾಕ್ರಮೌ। ತಾದೃಶೌತೌ ಮಹಾಭಾಗೌ ಸಂವೀಕ್ಷ್ಯ ಪರಮೇಶ್ವರಃ॥ ಸಮರ್ಥೌ ಸರ್ವಕಾರ್ಯೇಷು ವಿಶ್ವಾಸ ಪರಮಾಶ್ರಿತೌ। ಅಂತಃಪುರದ್ವಾರ ಪಾತೌ ನಿರ್ಮಮೇ ನಿಯತೌ ವಿಭುಃ॥ ಗಣೇಶ್ವರೌ ರೇಣುಕದಾರುಕಾವುಭೌ ವಿಶ್ವಾಸಭೂತೌ ನವಚಂದ್ರಮೌಲೇಃ। ಅಂತಃಪುರದ್ವಾರಗತೌ ಸದಾ ತೌ ವಿತೇನ ತುರ್ವಿಶ್ವಪತೇಸ್ತು ಸೇವಾಂ॥ (ಪರಿ-೭) ಶಂಭೋರಾಹ್ವಾನಸಂತೋಷಸಂಭ್ರಮೇಣೈವದಾರುಕಂ। ಉಲ್ಲಂಘ್ಯ ಪಾರ್ಶ್ವಮಗಮಲ್ಲೋಕನಾಥಸ್ಯ ರೇಣುಕಃ॥ ತಮಾಲೋಕ್ಯವಿಭುಸ್ತತ್ರ ಸಮುಲ್ಲಂಘಿತದಾರುಕಂ। ಮಹಾತ್ಮ್ಯಂ ನಿಜಭಕ್ತಾನಾಂ ದ್ಯೋತಯನ್ನಿದಮಬ್ರವೀತ್॥ ರೇರೇರೇಣುಕ ದುರ್ಬುದ್ಧೇಕಥಮೇಷ ತ್ವಯಾಧುನಾ। ಉಲ್ಲಂಘಿತಸ್ಸಭಾಮಧ್ಯೇ ಮಮಭಕ್ತೋಹಿ ದಾರುಕಃ॥ ಲಂಘನಂ ಮಮಭಕ್ತಾನಾಂ ಪರಮಾರ್ಥ ಕಾರಣಂ। ಆಯುಃ ಶ್ರೀಯಂಕುಲಂಕೀರ್ತಿಂ ನಿಹಂತಿ ಹಿ ಶರೀರಿಣಾಂ॥ ಮಮಭಕ್ತ ಮವಜ್ಞಾಯ ಮಾರ್ಕಂಡೇಯಂ ಪುರಾ ಯಮಃ। ಮತ್ಪಾದತಾಡ ನಾದಾಸೀತ್ ಸ್ಮರಣೀಯಕಲೇವರಃ॥ ಭೃಗೋಶ್ಚಶಂಕುಕರ್ಣಸ್ಯ ಮಮಭಕ್ತಿ ಮತೋಸ್ತಯೋಃ। ಕೃತ್ವಾನಿಷ್ಟ ಮಭೂದ್ವಿಷ್ಣುರ್ವಿಕೇಶೋ ದಶಯೋನಿಭಾಕ್॥ ಮದ್ಭಕ್ತೇನ ದಧೀಚೇನ ಕೃತ್ವಾಯುದ್ಧಂ ಜನಾರ್ಧನಃ। ಭಗ್ನಚಕ್ರಾಯುಧಃಪೂರ್ವಂ ಪರಾಭವಮುಪಾಗಮತ್॥ ಕೃತ್ವಾಶ್ವಮೇಧೋದಕ್ಷೋಪಿ ಮದ್ಭಕ್ತಾಂಶ್ಚ ಗಣೇಶ್ವರಾನ್। ಅವಮತ್ಯಸಭಾಮಧ್ಯೇ ಮೇಷವಕ್ತ್ರೋಭಾವತ್ಪುರಾ॥ ಶ್ವೇತಸ್ಯ ಮಮಭಕ್ತಸ್ಯ ದುರತಿಕ್ರಮ ತೇಜಸಃ। ಔದಾಸೀನ್ಯೇನ ಕಾಲೋಪಿಮಯಾದಗ್ಧಃ ಪುರಾಭವತ್॥ ಏಮಮನ್ಯೇಪಿ ಬಹವೋ ಮದ್ಭಕ್ತಾನಾಮತಿಕ್ರಮಾತ್। ಪರಿ ಭೂತಾಹತಾಶ್ಚಾಸನ್ ಭಕ್ತಾ ಮೇ ದುರತಿಕ್ರಮಾಃ॥ ಅವಿಚಾರೇಣ ಮದ್ಭಕ್ತೋಲಂಘಿತೋ ದಾರುಕಸ್ತ್ವಯಾ। ಏಷ ತ್ವಂ ರೇಣುಕಾನೇನ ಜನ್ಮವಾನ್ ಭವಭೂತಲೇ॥ ಇತ್ಯುಕ್ತಃ ಪರಮೇಶೇನ ಭಕ್ತಮಹಾತ್ಮ್ಯ ಶಂಸಿನಾ। ಪ್ರಾರ್ಥಯಾಮಾಸದೇವೇಶಂ ಪ್ರಣಿಪತ್ಯ ಸರೇಣುಕಃ॥ ಮಾನುಷೀಂ ಯೋನಿಮಾಸಾದ್ಯ ಮಹಾದುಃಖವಿವರ್ಧಿನೀಂ। ಜಾತ್ಯಾಯುರ್ಭೋಗವೈಷಮ್ಯಹೇತು ಕರ್ಮೋಪ ಪಾದಿನೀಂ॥ ಸಮಸ್ತದೇವ ಕೈಂಕರ್ಯ ಕಾರ್ಪಣ್ಯಪ್ರಸವಸ್ಥಲೀಂ। ಮಹಾ ತಾಪತ್ರಯೋಪೇತಾಂ ವರ್ಣಾಶ್ರಮನಿಯಂತ್ರಿತಾಂ॥ ವಿಹಾಯತ್ವತ್ಪದಾಂಭೋಜ ಸೇವಾಂ ಕಿಂವಾ ವಸಾಮ್ಯಹಂ। ಯಥಾ ಮೇ ಮಾನುಷೋ ಭಾವೋ ನಭವೇತ್ಕ್ಷಿತಿಮಂಡಲೇ। ತಥಾ ಪ್ರಸಾದಂದೇವೇಶ ವಿಧೇಹಿ ಕರುಣಾನಿಧೇ॥ ಇತಿ ಸಂಪ್ರಾರ್ಥಿತೋ ದೇವೋ ರೇಣುಕೇನ ಮಹೇಶ್ವರಃ। ಮಾಭೈಷೀರ್ಮಮ ಭಕ್ತಾನಾಂ ಕುತೋಭೀತಿರಿಹೇಷ್ಯತೇ॥ (ಪರಿ-೮) ಆತ್ಮತ್ವಮೀಶ್ವರತ್ವಂಚ ಬ್ರಹ್ಮಣ್ಯೇಕತ್ರ ಕಲ್ಪಿತಂ। ಬಿಂಬತ್ವಂಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಂ॥ ಗುಣತ್ರಯವಿಭೇದೇನ ಪರತತ್ವೇ ಚಿದಾತ್ಮನಿ। ಭೋಕ್ತೃತ್ವಂ ಚೈವ ಭೋಜ್ಯತ್ವಂ ಪ್ರೇರಕತ್ವಂಚ ಕಲ್ಪಿತಂ॥ ಅಖಂಡೇಬ್ರಹ್ಮಚೈತನ್ಯೇ ಕಲ್ಪಿತಂ ಗುಣಭೇದತಃ॥(ಪರಿ-೯) ತಸ್ಮಾಚ್ಛಿವಮಯಂ ಸರ್ವಂ ಜಗದೇಚ್ಚರಾಚರಂ ತದಭಿನ್ನತಯಾ ಭಾತಿ ಸರ್ಪತ್ವಮಿವರಜ್ಜುತಃ॥ ರಜ್ಜೌ ಸರ್ಪವದ್ಭಾತಿ ಶುಕ್ತೌಚ ರಜತತ್ವವತ್। ಚೋರತ್ವವದಪಿ ಸ್ಥಾಣೌಮರೀಚ್ಯಾಂಚ ಜಲತ್ವವತ್॥ ಗಂಧರ್ವಪುರವದ್ವ್ಯೋಮ್ನಿ ಸಚ್ಚಿದಾನಂದಲಕ್ಷಣೇ। ನಿರಸ್ತಭೇದಸದ್ಭಾವೇ ಶಿವೇವಿಶ್ವಂ ವಿರಾಜತೇ॥ (ಪರಿ-೧೦) ಬ್ರಾಹ್ಮಣಃ

ಕ್ಷಿತ್ರಿಯೋವಾಪಿ ವೈಶ್ಯೋವಾಶೂದ್ರಏವವಾ। ಅಂತ್ಯಜೋವಾ ಶಿವೇಭಕ್ತಃ ಶಿವವನ್ಮಾನ್ಯೇವಸಃ॥ ಶಿವಭಕ್ತಿಸಮಾವೇಶೇ ಕ್ವಜಾತಿಪರಿಕಲ್ಪನಾ। ಇಂಧನೇಷ್ವಗ್ನಿದಗ್ಧೇಷು ಕೋವಾಭೇದಃ ಪ್ರಕೀರ್ತ್ಯತೇ॥ (ಪರಿ–೧೧) ವೇದಾಂತವಾಕ್ಯಜಾಂವಿದ್ಯಾಂ ಲಿಂಗ ಮಾಹುಸ್ತಥಾಪರೇ। ತದಸಜ್ಜ್ಞೇಯರೂಪತ್ವಾಲ್ಲಿಂಗಸ್ಯ ಬ್ರಹ್ಮರೂಪಿಣಃ॥ (ಪರಿ–೧೨) ಮಿಥ್ಯೇತಿ ಭಾವಯನ್ ವಿಶ್ವಂವಿಶ್ವಾತೀತಂ ಶಿವಸ್ಮರನ್। ಸತ್ತಾನಂದಚಿದಾಕಾರಂ ಕಥಂಬದುಮಿಹಾರ್ಹತಿ॥ ಶಿವಾದನ್ಯಜ್ಜಗನ್ಮಿಥ್ಯಾ ಶಿವಸ್ಸಂವಿತ್ಸ್ವರೂಪಕಃ। ಶಿವಸ್ತ್ವಮಿತಿ ನಿರ್ದಿಷ್ಟೋ ಗುರುಣಾಮುಕ್ತ ಏವಸಃ॥ ಅಯಥಾರ್ಥಪ್ರಪಂಚೋಯಂ ಪ್ರತಿತಿಷ್ಠತಿ ಶಂಕರೇ। ಸದಾತ್ಮನಿಯಥಾ ಶುಕ್ತೌರಜತ್ತ್ವಂವ್ಯವಸ್ಥಿತಂ॥ (ಪರಿ–೧೭) ಪರಕಾಯೇ ಕ್ರಿಯಾಪತ್ತಿಃ ಕಲ್ಪಿತೈವ ಪ್ರಕಾಶತೇ। ರಜ್ಜೌಭುಜಂಗವದ್ಯಸ್ಮಾತ್ ಕ್ರಿಯಾನಿಷ್ಪತ್ತಿಮಾನಯಂ॥ ಚಂದ್ರಸ್ಯ ಮೇಘಸಂಬಂಧಾತ್ ಯಥಾಗಮನಕಲ್ಪನಾ। ತಥಾ ದೇಹಸ್ಯ ಸಂಬಂಧಾದಾರೋಪ್ಯಾ ಸ್ಯಾತ್ ಕ್ರಿಯಾತ್ಮನಃ॥ ಭಾವಃ ಪ್ರತೀಯಮಾನೋಪಿ ಪರಕಾಯೇತು ಕಲ್ಪಿತಃ। ಶುಕ್ತೌ ರಜತವದ್ಯಸ್ಮಾದ್ಭಾವನಿಷ್ಪತ್ತಿಮಾನಯಂ॥ ಜ್ಞಾನಸ್ಯವ್ಯವಹಾರೇಪಿ ಜ್ಞೇಯಾಭಾವಾತ್ ಸ್ವಭಾವತಃ। ಸ್ವಪ್ನವದ್‌ಜ್ಞಾನನಿಷ್ಪತ್ಯಾ ಜ್ಞಾನನಿಷ್ಪನ್ನ ಇತ್ಯಸೌ॥ ಸ್ವಪ್ನಜಾತಂಯಥಾಜ್ಞಾನಂ ಸಹಸ್ವಾರ್ಥೈರ್ನಿವರ್ತತೇ। ತಥಾತ್ಮನಿ ಪ್ರಕಾಶೇತುಜ್ಞಾನಂ ಜ್ಞೇಯಂ ನಿವರ್ತತೇ॥ ಅಖಂಡಾನಂದ ಸಂವಿತ್ತಿಸ್ವರೂಪಂ ಬ್ರಹ್ಮಕೇವಲಂ। ಮಿಥ್ಯಾ ತದನ್ಯದಿತ್ಯೇಷಾಂ ಸ್ಥಿತಿರ್ಜ್ಞಾನಮಿಹೋಚ್ಯತೆ॥ ಸತ್ತಾತ್ಮನಾನುವೃತ್ತಂ ಯದ್ಘಟಾದಿಷು ಪರಂಹಿ ತತ್। ಪ್ಯಾ ವರ್ತಮಾನಾ ಮಿಥ್ಯೇತಿ ಸ್ಥಿತಿರ್ಜ್ಞಾನಮಿಹೋಹ್ಯತೇ॥ ಅಕಾರಣಮಕಾರ್ಯಂ ಯದಶೇಷೋಪಾಧಿವರ್ಜಿತಂ। ತದ್ಬ್ರಹ್ಮತದಹಂ ಚೇತಿ ನಿಷ್ಠಾಜ್ಞಾನಮುದೀರ್ಯತೇ॥ ಪರಾತ್ಮನಿ ಕ್ರಿಯಾ ಸರ್ವಾ ಗಂಧರ್ವನಗರೀವ ಖೇ। ಪ್ರಕಾಶತ ಇತಿಪ್ರೋಕ್ತಂ ಕ್ರಿಯಾಯಾಸ್ತು ಪ್ರಕಾಶನಂ॥ ಮುಖ್ಯಾರ್ಥೇ ಸಂಭವೇ ಜಾತೇ ಲಕ್ಷಣಾಯೋಗಸಂಶ್ರಯಾತ್। ತದ್‌ಜ್ಞಾನಯೋಜನಂಯತ್ತದುಕ್ತಂ ಜ್ಞಾನಪ್ರಕಾಶನಂ॥ (ಪರಿ–೧೯) ಮುಖ್ಯಾರ್ಥೋ ಲಕ್ಷಣಾರ್ಥಶ್ಚ ಯತ್ರನಾಸ್ತಿ ಚಿದಾತ್ಮನಿ। ವಿಶೃಂಖಲತಯಾ ತಸ್ಯ ಪ್ರಸಾದಃಸ್ವೀಕೃತೋಭವೇತ್॥ ಅನಾದ್ಯ ವಿದ್ಯಾಮೂಲಾಹಿಪ್ರತೀತಿರ್ಜಗತಾಮಿಯಂ। ಸ್ವಾತ್ಮೈಕಬೋಧಾತ್ತನ್ನಾಶೇ ಕುತೋವಿಶ್ವಪ್ರಕಾಶನಂ॥ ಸ್ವಪ್ನೇದೃಷ್ಟಂ ಯಥಾವಸ್ತು ಪ್ರಬೋಧೇ ಲಯಮಶ್ನುತೇ। ತಥಾಸಾಂಸಾರಿಕಂ ಸರ್ವಮಾತ್ಮಜ್ಞಾನೇ ವಿನಶ್ಯತಿ॥ ಅಸದೇವ ಜಗತ್ಸರ್ವಂ ಸದಿವ ಪ್ರತಿಭಾಸತೇ। ಜ್ಞಾತೇಶಿವೇ ತದಜ್ಞಾನಂ ಸ್ವರೂಮುಪಪದ್ಯತೇ॥ ಯಸ್ಮಿನ್ ಜ್ಯೋತಿಷಿ ಚಿದ್ರೂಪೇ ದೃಶ್ಯತೇ ನೈವಕಿಂಚನ। ಸದ್ರೂಪಂ ವಾಪ್ಯಸದ್ರೂಪಂ ಭಾವಾಭಾವಂವಿಮುಂಚತಃ॥ ಜ್ಞೇಯಾಭಾವಾದ್ವಿಶೇಷೇಣ ಶೂನ್ಯಕಲ್ಪಂ ವಿಭಾವ್ಯತೇ। ಜ್ಞಾತೃಜ್ಞೇಯಾದಿಭಿಶೂನ್ಯಂ ಶೂನ್ಯಂ ಜ್ಞಾನಾದಿ ಭಿರ್ಗುಣೈಃ॥ ಆದಾವಂತೇಚ ಮಧ್ಯೇಚ ಶೂನ್ಯಂಸರ್ವತ್ರ ಸರ್ವದಾ। ದ್ವಿತೀಯೇನ ಪದಾರ್ಥೇನ ಶೂನ್ಯಂಶೂನ್ಯಂ ವಿಭಾವ್ಯತೇ॥ ಶೂನ್ಯಜ್ಞಾನಾದಿ ಸಂಕಲ್ಪೇ ಶೂನ್ಯ ಸರ್ವಾರ್ಥ ಸಾಧನೇ॥ ಯಸ್ಯ ಕಾರ್ಯದಶಾ ನಾಸ್ತಿ ಕಾರಣತ್ವಮಥಾಪಿವಾ। ಶೇಷತ್ವಂ ನೈವಶೇಷಿತ್ವಂ ಸ ಯುಕ್ತಃ ಪರ ಉಚ್ಯತೇ॥ (ಪರಿ–೨೦)."[೪೦]

೬. ಮೇಲಿನ ತಿರಸ್ಕರಿಸಲ್ಪಟ್ಟ ಸಿದ್ಧಾಂತ ಶಿಖಾಮಣಿಯ ಪಠ್ಯದೊಳಗಿನ ೫೩ ಶ್ಲೋಕಗಳಿಗೆ ಕೊಟ್ಟ ತಲೆ ಬರಹವನ್ನು ಮತ್ತೊಮ್ಮೆ ಮನನ ಮಾಡಬೇಕೆಂಬ ಸದಿಚ್ಛೆಯಿಂದ ಇಲ್ಲಿ ಪುನರುಚ್ಚರಿಸುವೆವು. "ಶಿವಾಗಮಾಭಿಪ್ರಾಯಕ್ಕೂ ವೀರಶೈವ ಸಿದ್ಧಾಂತಕ್ಕೂ ಅತ್ಯಂತ ವಿರುದ್ಧವಾಗಿರುವ ಶ್ಲೋಕಗಳು ಈ ಗ್ರಂಥದಿಂದ ಬೇರ್ಪಡಿಸಲ್ಪಟ್ಟ ವಿವರ"ಮೂಲ ಸಿದ್ಧಾಂತ ಶಿಖಾಮಣಿಯಲ್ಲಿಯ ಒಂದಲ್ಲ, ಎರಡಲ್ಲ ೫೩ ಶ್ಲೋಕಗಳನ್ನು ತಿರಸ್ಕರಿಸುವ ಅಥವಾ ತೆಗೆದುಹಾಕುವ ಹಕ್ಕು ಅದರ ಸಂಪಾದಕರಿಗೆ ಇರುವುದಿಲ್ಲ. ಆದರೆ ಪಂ.ಕಾಶೀನಾಥ ಶಾಸ್ತ್ರಿಗಳು ಮಾಡಿದ 'ಹಕ್ಕುಚ್ಯುತಿ' ನಿಚ್ಚಳವಾಗಿ ಇಲ್ಲಿ ಕಂಡು ಬರುತ್ತದೆ. ಮೂಲ ಸಿದ್ಧಾಂತ ಶಿಖಾಮಣಿಯಲ್ಲಿಯ ಶ್ಲೋಕಗಳನ್ನು ಶಾಸ್ತ್ರಿಗಳು ತಿದ್ದಿದ್ದಾರೆ; ತೆಗೆದು ಹಾಕಿದ್ದಾರೆ ಎಂಬುದಕ್ಕೆ ಇದಕ್ಕಿಂತ ಹೆಚ್ಚಿನ ಆಧಾರಗಳೇನು ಬೇಕು?

೭. ಇನ್ನು ಈ ತಲೆಬರೆಹದ ಒಳಾರ್ಥವನ್ನು ಗಮನಿಸುವುದು ವಿಹಿತ. ವೀರಶೈವ ಧರ್ಮ ಬೌದ್ಧ ಧರ್ಮಕ್ಕೆ ವಿರೋಧವಾಗಿ ೨೦೦೦ ವರುಷಗಳ ಪೂರ್ವದಲ್ಲಿತ್ತೆಂದು ಅದೇ ಪ್ರಸ್ತಾವನೆಯಲ್ಲಿ ಶಾಸ್ತ್ರಿಗಳು ಹೇಳಿ ಅದರ ಪ್ರಾಚೀನತ್ವನ್ನು ಸ್ಥಾಪಿಸಲೆತ್ನಿಸಿದ್ದಾರೆ. (ಪು.೭) ಆದರೆ ಆ ಕಾಲದಲ್ಲಿ ಸೃಷ್ಟಿಸಲ್ಪಟ್ಟ ಈ ಗ್ರಂಥವು ಆಗಮ ಪ್ರಣೀತ ವೀರಶೈವ ಧರ್ಮಕ್ಕೆ ಅತ್ಯಂತ ವಿರೋಧವಾದ ಅಂಶಗಳನ್ನು ಒಳಗೊಂಡಿತ್ತೆಂಬ ವಿಷಯವನ್ನು ಶಾಸ್ತ್ರಿಗಳು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಂಡಿರುವುದು ಸಂತೋಷಪಡುವ ಸಂಗತಿ. ಯಾಕೆಂದರೆ ಸಿದ್ಧಾಂತ ಶಿಖಾಮಣಿಯು ವೀರಶೈವ ಸಿದ್ಧಾಂತಕ್ಕೆ, ಧರ್ಮಕ್ಕೆ ವಿರೋಧವಾಗಿ ರೂಪುಗೊಂಡ ಗ್ರಂಥ ಎಂಬುದನ್ನು ಒಪ್ಪಿ ಅವರೇ ಹೇಳಿದಂತಾಗಿದೆ. ಇಮ್ಮಡಿ ಶಿವಬಸವ ಸ್ವಾಮಿಗಳು ವ್ಯಕ್ತಪಡಿಸಿದ ಸಂಶಯಾತ್ಮಕ ಊಹೆಗಳನ್ನು (ಪು.೧೦) ನಿವಾರಿಸುವಲ್ಲಿ ಇದು ಪ್ರಬಲವಾದ ಆಧಾರವಾಗಬಹುದೆಂದು ನಮ್ಮ ಎಣಿಕೆ. ಇಂಥ ವಿರೋಧಾಭಾಸಗಳಿಂದ ಕೂಡಿದ ಮೂಲ ಸಿದ್ಧಾಂತ ಶಿಖಾಮಣಿ ಗ್ರಂಥವನ್ನು ವೀರಶೈವ ಧರ್ಮದ ಆಧಾರಗ್ರಂಥವೆಂದು ನಂಬುವುದು, ನಂಬಿಸುವುದು ಎಷ್ಟರಮಟ್ಟಿಗೆ ಉಚಿತವೆಂಬುದನ್ನು ಪ್ರಾಜ್ಞರೇ ನಿರ್ಣಯಿಸಬೇಕು.

೮. ಪಂ.ಕರಿಬಸವ ಶಾಸ್ತ್ರಿಗಳ ಸಿದ್ಧಾಂತ ಶಿಖಾಮಣಿಯಲ್ಲಿ ನೂರೊಂದು ಸ್ಥಲಗಳಿಗೆ ಮತ್ತು ಪಂ.ಕಾಶೀನಾಥ ಶಾಸ್ತ್ರಿಗಳ ಸಿದ್ಧಾಂತ ಶಿಖಾಮಣಿಯ ನೂರೊಂದು ಸ್ಥಲಗಳಿಗೆ ಒರೆಹಚ್ಚಿ ನೋಡಿದಾಗ ವ್ಯತ್ಯಾಸ ಅಷ್ಟೊಂದು ಕಾಣುವುದಿಲ್ಲ. ಆದರೆ ಮೂರು ಕಡೆಗಳಲ್ಲಿ ಅತ್ಯಂತ ಮಹತ್ವದ ಬದಲಾವಣೆಯನ್ನು ಮಾಡಿಕೊಂಡಿದ್ದಾರೆ. ಪಂ. ಕರಿಬಸವಶಾಸ್ತ್ರಿಗಳ ಗ್ರಂಥದಲ್ಲಿ ಉಪಾಧಿಮಾಟಸ್ಥಲ, ನಿರುಪಾಧಿ ಮಾಟಸ್ಥಲ ಮತ್ತು ಸಹಜ ಮಾಟಸ್ಥಲಗಳಿದ್ದರೆ ಅವೇ ಸ್ಥಲಗಳು ಕಾಶೀನಾಥ ಶಾಸ್ತ್ರಿಗಳ ಕೃತಿಯಲ್ಲಿ ಸೋಪಾಧಿ ದಾನ ಸ್ಥಲ, ನಿರುಪಾಧಿ ದಾನಸ್ಥಲ ಮತ್ತು ಸಹಜ ದಾನಸ್ಥಲಗಳೆಂದು ಬದಲಾವಣೆಗೊಂಡಿವೆ. ಕರಿಬಸವ ಶಾಸ್ತ್ರಿಗಳ ಕೃತಿಯಲ್ಲಿ 'ಮಾಟ' ಎಂಬ ಕನ್ನಡಪದ ಸೇರಿಕೊಂಡಿರುವುದನ್ನು ಕಾಣುತ್ತೇವೆ. ಇದು ಮಾಡು ಎಂಬ ಕನ್ನಡ ಕ್ರಿಯಾಪದದಿಂದ ಉತ್ಪನ್ನವಾದ ನಾಮಪದವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಕನ್ನಡ ವ್ಯಾಖ್ಯಾನದಲ್ಲೂ ಕರಿಬಸವ

ಶಾಸ್ತ್ರಿಗಳು ಮಾಟ ಶಬ್ದವನ್ನೇ ಬಳಸಿಕೊಂಡಿದ್ದಾರೆ. ಆದರೆ ಪಂ. ಕಾಶೀನಾಥಶಾಸ್ತ್ರಿಗಳು ತಮ್ಮ ಸಿದ್ಧಾಂತ ಶಿಖಾಮಣಿಯಲ್ಲಿ ಮಾಟ ಶಬ್ದವನ್ನು ತೆಗೆದು, ವ್ಯಾಖ್ಯಾನದಲ್ಲೂ ಬಿನ್ನಾಭಿಪ್ರಾಯವನ್ನು ಬರೆದಿರುವರು. ಪಂ. ಕರಿಬಸವಶಾಸ್ತ್ರಿಗಳು ಅನುಸರಿಸಿದ ಸಿದ್ಧಾಂತ ಶಿಖಾಮಣಿಯು ಮರಿತೋಂಟದಾರ್ಯರು ಬರೆದ ಮೂಲ ಸಂಸ್ಕೃತ ವ್ಯಾಖ್ಯಾನವಾಗಿದೆ. ಇದು ಸೋಸಲೆ ರೇವಣಾರಾಧ್ಯರು ಸಿದ್ಧಾಂತ ಶಿಖಾಮಣಿಗೆ ಕನ್ನಡದಲ್ಲಿ ಬರೆದ ವ್ಯಾಖ್ಯಾನದ ಅನುವಾದವೆಂದು ಇಮ್ಮಡಿ ಶಿವಬಸವ ಸ್ವಾಮಿಗಳು ಹೇಳಿರುವರು. ಏನೇಇದ್ದರೂ ಕಾಶೀನಾಥ ಶಾಸ್ತ್ರಿಗಳು ಈ ಕನ್ನಡ ಶಬ್ದವನ್ನು ತೆಗೆದುಹಾಕಿ ಸಿದ್ಧಾಂತ ಶಿಖಾಮಣಿಯ ಪ್ರಾಚೀನತ್ವವನ್ನು ಸಾಧಿಸುವ ಉದ್ದೇಶ ಹೊಂದಿದಂತೆ ಭಾಸವಾಗುತ್ತದೆ. ಈ ಅಭಿಪ್ರಾಯವನ್ನು ಇನ್ನೂ ಖಚಿತಪಡಿಸಲು ಕೆಳಗಿನ ಮತ್ತೊಂದು ಪೂರಕ ಅಂಶದಲ್ಲಿ ಚರ್ಚಿಸಲಾಗಿದೆ.

೯. "ಸಿದ್ಧಾಂತ ಶಿಖಾಮಣಿ ಮತ್ತು ಶ್ರೀಕರ ಭಾಷ್ಯ : ನಿಜದ ನಿಲವು" ಗ್ರಂಥದ 'ನೂರೊಂದು ಸ್ಥಲಗಳು ಹಾಗು ಸಿದ್ಧಾಂತ ಶಿಖಾಮಣಿ' ಎಂಬ ಅಧ್ಯಾಯದಲ್ಲಿ ಇಮ್ಮಡಿ ಶಿವಬಸವ ಸ್ವಾಮಿಗಳು ಪಾಂಡಿತ್ಯಪೂರ್ವಕವಾಗಿ ವಿವೇಚಿಸಿದ್ದಾರೆ. ಸಿದ್ಧಾಂತ ಶಿಖಾಮಣಿಯಲ್ಲಿಯ ನೂರೊಂದು ಸ್ಥಲಗಳ ಮೇಲೆ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿ ಮಹತ್ವದ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಆದರೆ ಮಹಲಿಂಗದೇವನ ಏಕೋತ್ತರ ಶತಸ್ಥಲ ಎಂಬ ಬೃಹತ್ತಾದ, ಮಹತ್ತಾದ ಕೃತಿ ಸ್ವಾಮಿಗಳ ದೃಷ್ಟಿಯಿಂದ ಹೇಗೆ ತಪ್ಪಿಸಿಕೊಂಡಿದೆ ಎಂಬುದು ನಿಜವಾಗಿಯೂ ಆಶ್ಚರ್ಯಕರ ಸಂಗತಿಯಾಗಿದೆ. ಈ ಗ್ರಂಥವನ್ನು ಭೂಸನೂರಮಠ ಅವರು ಸಂಪಾದಿಸಿದ್ದು, ಬೆಳಗಾವಿ ನಾಗನೂರ ರುದ್ರಾಕ್ಷಿಮಠದಿಂದ ೧೯೭೪ ರಲ್ಲಿ ಪ್ರಕಟವಾಗಿದೆ. ೪೬೬ ಪುಟಗಳ ಈ ಗ್ರಂಥದಲ್ಲಿ ೪೧ ಶರಣ-ಶರಣೆಯರ ೧೧೧೫ ವಚನಗಳು ೫೧ ಪದಗಳು ನೂರೊಂದು ಸ್ಥಲಗಳಲ್ಲಿ ಸುಂದರವಾಗಿ ಹೆಣೆಯಲ್ಪಟ್ಟಿವೆ.

ವಿಜಯನಗರದ ಪ್ರೌಢದೇವರಾಯನ (೧೪೨೯-೧೪೪೬) ದಂಡನಾಯಕ ಮತ್ತು ಮಂತ್ರಿಯಾಗಿದ್ದ ಜಕ್ಕಣಾರ್ಯನು ಕುಮಾರ ಬಂಕನಾಥದೇವರ ಶಿಷ್ಯನು. ಮಹಾಲಿಂಗದೇವರು ಕುಮಾರ ಬಂಕನಾಥರ ಗುರುಗಳು. ಅಂದರೆ ಜಕ್ಕಣಾರ್ಯನಿಗೆ ಮಹಾಲಿಂಗದೇವರು ಗುರುವಿನ ಗುರು.

"ಆ ಶ್ರೀಗುರುರಾಯಂಗೆ ಬಿನ್ನಪಂಗೆಯ್ದು ಪರಮ ಗುರುವೇ ನಿಮ್ಮಡಿಗಳು ಎನ್ನ ಪೂರ್ವಜನ್ಮ ನಿವೃತ್ತಿಯಂ ಮಾಡಿ, ಪುನರ್ಜಾತನೆನಿಸಿ, ಅಂಗದಲ್ಲಿ ಲಿಂಗ ಪ್ರತಿಷ್ಠೆಯ ಮಾಡಿ, ಪ್ರಣವ ಪಂಚಾಕ್ಷರಿಯ ಪ್ರಾಣಸ್ಥಲದಲ್ಲಿ ಸ್ಥಾಪಿಸಿ ಎನ್ನ ಕೃತಾರ್ಥನ ಮಾಡಿದಿರಿ ದೇವಾ! ಇನ್ನು ಎನ್ನ ಷಡಂಗವೂ ಲಿಂಗದಲ್ಲಿ ಲೀಯವಹ ಭೇದವ ನಿರೂಪವ ಕೊಟ್ಟು ಪಾಲಿಸುವುದೆಂದರೆ, ಆ ಶ್ರೀಗುರುಸ್ವಾಮಿ ತಮ್ಮ ಪರಮಜ್ಞಾನಾನುಭವ ಪ್ರಸನ್ನ ಪ್ರಕಾಶದಿಂ ಷಡುಸ್ಥಲವನು ಬಸವರಾಜದೇವರು ಚನ್ನಬಸವರಾಜದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ಪರಮ ವಾಕ್ಯಾಮೃತಮಪ್ಪ ಮನಗಳಿಂದ ಆ ತಚ್ಛಿಷ್ಯಂಗೆ ಬೋಧಿಸುತ್ತಿರಲು, ಆ ಷಡುಸ್ಥಲದಲ್ಲಿ ಲಿಂಗಸ್ಥಲ ನಾಲ್ವತ್ತು ನಾಲ್ಕು, ಅಂಗಸ್ಥಲ ಐವತ್ತೇಳು ಉಭಯ ಏಕೋತ್ತರ ಶತಸ್ಥಲಂಗಳಾದವು."[೪೧] ಇದೇ ಗ್ರಂಥದ ಮತ್ತು ಕೊನೆಯಲ್ಲಿ

"........ಮಹಾಲಿಂಗದೇವರು ತಮ್ಮ ದಿವ್ಯಜ್ಞಾನಾನಂದಸಿದ್ಧ ವರ ಪ್ರಸನ್ನಪ್ರಸಾದವನು ನಿಜ ತಚ್ಛಿಷ್ಯ ಭಕ್ತಿ ಭಂಡಾರಿ ಜಕ್ಕಣಾರ್ಯರಿಗೆ ಸತ್ಪ್ರೇಮ ಮಹಾನುಭಾವಸಂಬೋಧೆ ಸಂಬಂಧ ನಿರೂಪಕಾರಣಾರ್ಥ ವಿರಚಿತಮಪ್ಪ ಏಕೋತ್ತರ ಶತಸ್ಥಲದೊಳು ಐಕ್ಯಸ್ಥಲಕ್ಕೆ ಸಂಬಂಧವಾದ ಲಿಂಗಸ್ಥಲ ನವಮ ದ್ವಾದಶ ಪರಿಚ್ಛೇದ ಮಂಗಳ ಮಹಾ ಶ್ರೀ ಶ್ರೀ ಶ್ರೀ..."[೪೨]

ಮೇಲಿನ ಮಹಲಿಂಗದೇವರು ಸಂಕಲಿಸಿದ 'ಏಕೋತ್ತರ ಶತಸ್ಥಲ' ಗ್ರಂಥವೇ ಅವರ ಪ್ರಶಿಷ್ಯ ಜಕ್ಕಣಾರ್ಯನ ಸಂಸ್ಕೃತ ಏಕೋತ್ತರ ಶತಸ್ಥಲ ಗ್ರಂಥಕ್ಕೆ ಮೂಲ ಆಕರ ಗ್ರಂಥವೆಂಬುದು ವಿದಿತವಾಗುತ್ತದೆ. ಈ ನಮ್ಮ ಅಭಿಪ್ರಾಯವನ್ನು ಅನುಮೋದಿಸುವ ರೀತಿಯಲ್ಲಿ ಇಮ್ಮಡಿ ಶಿವಬಸವಸ್ವಾಮಿಗಳು ಹೇಳಿದ ಅವತರಣಿಕೆ ಹೀಗಿದೆ.

"ವೀರಶೈವ ಧರ್ಮವನ್ನು ವ್ಯಾಖ್ಯಾನಿಸಿದವನು ಬಸವ ದಂಡನಾಯಕ ಪ್ರಭುವೇ ಎಂದು ಜಕ್ಕಣಾರ್ಯನು ಮತ್ತೊಂದು ಶ್ಲೋಕದಲ್ಲಿ ಹೇಳಿದ್ದಾನೆ. ಪುರಾತನರು ಹೇಳಿದ ವಚನಗಳ ಸ್ಥಲಗಳ ಹಾಗೂ ಅವುಗಳ ಸ್ವರೂಪವನ್ನು ತಿಳಿಸಬೇಕೆಂದು ಅಮಾತ್ಯನಾದ ಜಕ್ಕಣ್ಣನ ಪ್ರಾರ್ಥನೆಯ ಮೇರೆಗೆ ಮಹಾಲಿಂಗದೇವನು ಆಯಾ ಸ್ಥಲಗಳ ವಿವರವನ್ನು ನಿರೂಪಿಸಿದನು...."[೪೩]

ಮೇಲಿನ ಅಭಿಪ್ರಾಯವನ್ನು ನಿಶ್ಚಿತವಾಗಿ ಜಕ್ಕಣಾರ್ಯನ 'ಏಕೋತ್ತರಶತಸ್ಥಲ' ಸಂಸ್ಕೃತ ಕೃತಿಯ ಆಧಾರದ ಮೇಲೆ ಹೇಳಿದುದಾಗಿದೆಯೇ ಹೊರತು ಭೂಸನೂರಮಠರು ಸಂಪಾದಿಸಿದ 'ಏಕೋತ್ತರ ಶತಸ್ಥಲ' ಗ್ರಂಥವನ್ನು ಅವಲೋಕಿಸಿ ಹೇಳಿದುದಲ್ಲವೆನಿಸುತ್ತದೆ. ಈ ಉದ್‌ಗ್ರಂಥವನ್ನು ಸ್ವಾಮಿಗಳು ಪರಿಶೀಲಿಸಿದ್ದರೆ ವ್ಯಾಖ್ಯಾನಕಾರ ಗಿರೀಂದ್ರನ, ಮಹಾಮೇಧಾವಿ ಮಗ್ಗೆಯ ಮಾಯಿದೇವರ ಅಭಿಪ್ರಾಯಗಳನ್ನು ಹೇಳುವ ಅವಶ್ಯಕತೆ ಬೀಳುತ್ತಿದ್ದಿಲ್ಲವೇನೋ.

ಏಕೋತ್ತರ ಶತಸ್ಥಲಗಳನ್ನು ಕುರಿತು ಬೆಳಗಾವಿ ರುದ್ರಾಕ್ಷಿಮಠದ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದಲ್ಲಿ ಇನ್ನೂ ಕೆಲವು ಗ್ರಂಥಗಳು ಲಭ್ಯವಿವೆ. ಎಸ್.ಶಿವಣ್ಣನವರ ವೀರಶೈವ ಅಪ್ರಕಟಿತ ಗ್ರಂಥ ಸೂಚಿಯಲ್ಲಿ ೬ ಅಪ್ರಕಟಿತ ಹಸ್ತಪ್ರತಿಗಳ ಮಾಹಿತಿ ದೊರೆಯುತ್ತದೆ.

ಕೃತಕವಾಗಿ ಸೃಷ್ಟಿಸಲ್ಪಟ್ಟಿದ್ದ 'ಸಿದ್ಧಾಂತ ಶಿಖಾಮಣಿ' ಕೃತಿಯನ್ನು ಮತ್ತೆ ಮೂಲಪಠ್ಯದೊಂದಿಗೆ ಸಂಪಾದಿಸಿದ ಭೂಸನೂರಮಠ ಮತ್ತು ಬೆಳಗಾವಿಯ ಎಸ್.ಜಿ. ಫಿವಾರಿ ಅವರ ಕಾರ್ಯ ಅತ್ಯಂತ ಮಹತ್ವವಾದುದು. ಶಾಸ್ತ್ರಶುದ್ಧ ಹಸ್ತಪ್ರತಿಯೊಂದನ್ನು ಉಳಿಸಿದ ಶ್ರೇಯಸ್ಸು ಅವರದು.

ಈ ಅಧ್ಯಯನದ ಮೂಲಕ ನಾನು ಕಂಡುಕೊಂಡ ಅಂಶವೆಂದರೆ ಒಂದು (ರಾಘವಾಂಕ ಚಾರಿತ್ರ) ಕೃತಕವಾಗಿ ಈ ನೆಲದಲ್ಲಿ ಸೃಷ್ಟಿಯಾಯಿತು. ಇನ್ನೊಂದು (ಸಿದ್ಧಾಂತ ಶಿಖಾಮಣಿ) ಕೃತಕಗೊಂಡಿದ್ದ ಕೃತಿಯೊಂದು ಶಾಸ್ತ್ರಶುದ್ಧವಾಗಿ ಸಂಪಾದನೆಗೊಂಡಿತು. ಹಸ್ತಪ್ರತಿಗಳ ಧಾರ್ಮಿಕ ಪಲ್ಲಟಕ್ರಿಯೆಗೆ ಹೇಗೆ ತುತ್ತಾದವು ಎಂಬುದಕ್ಕೆ ಈ ಎರಡು ಘಟನೆಗಳು ಮಹತ್ವದ ಸಾಕ್ಷಿಯನ್ನು ಒದಗಿಸುತ್ತವೆ.

## ಕೊನೆ ಟಿಪ್ಪಣಿಗಳು

೧. ಎಫ್.ಟಿ. ಹಳ್ಳಿಕೇರಿ : ಕಂಠ ಪತ್ರ   ಪು. ೫೫ ವಿಕಾಸ ಪ್ರಕಾಶನ, ಹೊಸಪೇಟೆ, ೨೦೦೫

೨. ಫ.ಗು.ಹಳಕಟ್ಟಿ– ನಿರಂಜನ ವಂಶರತ್ನಾಕರ ಪು. ೪೦ ಶಿವಾನುಭವ ಗ್ರಂಥಮಾಲೆ, ವಿಜಯಪುರ, ೧೯೪೦

೩. ಎಂ. ಎಂ. ಕಲಬುರ್ಗಿ : ಕನ್ನಡ ಹಸ್ತಪ್ರತಿ ಶಾಸ್ತ್ರ ಪು. ೪೯ ಸ್ವಪ್ನ ಬುಕ್ ಹೌಸ್, ೨೦೧೧

೪. ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ಸಂ–೧೦, ಪು. ೨೭ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೫. ಅದೇ ಪು. ೧೯೮

೬. ಅದೇ ಪು. ೫

೭. ಅದೇ ಪು. ೭೮

೮. ಅದೇ ಪು. ೧೧೮

೯. ಅದೇ ಪು. ೧೩೦

೧೦. ಅದೇ ಪು. ೧೩೨

೧೧. ಅದೇ ಪು.  ೧೬೨

೧೨. ಅದೇ ಪು. ೧೯೨

೧೩. ಕೆ. ರವೀಂದ್ರನಾಥ– ಹಸ್ತಪ್ರತಿಗಳು : ಕನ್ನಡಿಗರ ಬದುಕು ಪು. ೮೦ ಕನ್ನಡ ವಿ.ವಿ. ಹಂಪಿ, ೨೦೧೪

೧೪. ಕೆ. ರವೀಂದ್ರನಾಥ : ಅಗ್ನಿದಿವ್ಯ ಪು. ೮, ಅಮರ ಪ್ರಕಾಶನ ಗುಲಬರ್ಗಾ, ೨೦೦೩

೧೫. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ ಪು. ೪೭ ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯ, ಬೆಳಗಾವಿ ೧೯೯೮

೧೬. ಸಿದ್ಧರಾಮೇಶ್ವರ ಚರಿತ್ರೆ ಪ್ರಕಾಶಕರ ನುಡಿ ೫ ಸಿದ್ಧರಾಮೇಶ್ವರ ದೇವಸ್ಥಾನ ಹಬ್ಬು ಮಂಡಳಿ, ಸೊಲ್ಲಾಪುರ, ೨೦೧೧

೧೭. ಅದೇ ಪು. ೩೫

೧೮. ಅದೇ ಸಂಧಿ ೧ ಪದ್ಯ ೪೨

೧೯.  ಅದೇ ಸಂಧಿ ೧ ಪದ್ಯ ೪೩

೨೦.  ಅದೇ ಸಂಧಿ ೧ ಪದ್ಯ ೬೨

೨೧.  ಸಿದ್ಧರಾಮ  ಚಾರಿತ್ರ ಸಂ: ಎಂ. ಬಿ. ನೇಗಿನಹಾಳ ಸಂಧಿ ೧ ಪದ್ಯ ೪೫ ತೋಂಟದಾರ್ಯಮಠ, ಗದಗ, ೧೯೯೯

೨೨. ಸಿದ್ಧರಾಮೇಶ್ವರ ಚರಿತ್ರೆ ಸೊಲ್ಲಾಪುರ ಅದೇ ಸಂಧಿ ೧ ಪದ್ಯ ೬೪

೨೩. ಸಿದ್ಧರಾಮ ಚಾರಿತ್ರ ಸಂ: ಎಂ. ಬಿ. ನೇಗಿನಹಾಳ ಸಂಧಿ ೩ ಪದ್ಯ ೩೨

೨೪. ಸಿದ್ಧರಾಮೇಶ್ವರ ಚರಿತ್ರೆ ಸೊಲ್ಲಾಪುರ ಅದೇ ಸಂಧಿ ೩ ಪದ್ಯ ೩೦

೨೫. ಸಿದ್ಧರಾಮ ಚಾರಿತ್ರ ಸಂ: ಎಂ. ಬಿ. ನೇಗಿನಹಾಳ ಸಂಧಿ ೩ ಪದ್ಯ ೪೩

೨೬. ಸಿದ್ಧರಾಮೇಶ್ವರ ಚರಿತ್ರೆ ಸೊಲ್ಲಾಪುರ ಅದೇ ಸಂಧಿ ೩ ಪದ್ಯ ೫೨

೨೭. ಅದೇ ಸಂಧಿ ೧ ಪದ್ಯ ೭೫

೨೮. ಅದೇ ಸಂಧಿ ೧ ಪದ್ಯ ೧೫

೨೯. ಅದೇ ಸಂಧಿ ೩ ಪದ್ಯ ೫೬

೩೦. ಅದೇ ಸಂಧಿ ೩ ಪದ್ಯ ೬೮

೩೧. ಅದೇ ಸಂಧಿ ೯ ಪದ್ಯ ೨೬

೩೨. ಅದೇ ಸಂಧಿ ೯ ಪದ್ಯ ೫೫

೩೩. ಅದೇ ಸಂಧಿ ೯ ಪದ್ಯ ೬೭

೩೪. ಅದೇ ಸಂಧಿ ೯ ಪದ್ಯ ೭೪

೩೫. ಅದೇ ಸಂಧಿ ೯ ಪದ್ಯ ೮೧

೩೬. ಅದೇ ಸಂಧಿ ೯ ಪದ್ಯ ೧೨೯

೩೭. ಇಮ್ಮಡಿ ಶಿವಬಸವ ಸ್ವಾಮಿಗಳು : ಸಿದ್ಧಾಂತ ಶಿಖಾಮಣಿ ಮತ್ತು ಶ್ರೀಕರ ಭಾಷ್ಯದ ನಿಜದ ನಿಲುವು ಪು. ೯–೧೦, ಸಂವಹನ ಪ್ರಕಾಶನ, ಮೈಸೂರು, ೨೦೦೩

೩೮. ಕಾಶೀನಾಥ ಶಾಸ್ತ್ರಿ : ಸಿದ್ಧಾಂತ ಶಿಖಾಮಣಿ ಪ್ರಸ್ತಾವನೆ ಪು. ೯–೧೦

೩೯. ಅದೇ ಪು. ೮

೪೦. ಅದೇ ಪು. ೩೨೦

೪೧. ಎಸ್. ಎಸ್. ಭೂಸನೂರಮಠ : ಏಕೋತ್ತರ ಶತಸ್ಥಲ ಪು. ೨, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೭೪

೪೨. ಅದೇ ಪು. ೩೯೭

೪೩. ಇಮ್ಮಡಿ ಶಿವಬಸವ ಸ್ವಾಮಿಗಳು : ಸಿದ್ಧಾಂತ ಶಿಖಾಮಣಿ ಮತ್ತು ಶ್ರೀಕರ ಭಾಷ್ಯದ ನಿಜದ ನಿಲುವು ಪು. ೪೯

## ಅಧ್ಯಾಯ – ೭

# ಬೆಳಗಾವಿ ಪರಿಸರದ ಹಸ್ತಪ್ರತಿಗಳ ಪರಿಚಲನೆ

೭.೧. ಸಂಗ್ರಹಕಾರರು

೭.೨. ಕವಿಗಳು

೭.೩. ಲಿಪಿಕಾರರು

## ಅಧ್ಯಾಯ – ಏಳು

# ಬೆಳಗಾವಿ ಪರಿಸರದ ಹಸ್ತಪ್ರತಿಗಳ ಪರಿಚಲನೆ

'ಹಸ್ತಪ್ರತಿಗಳು ನಮ್ಮ ಸಂಸ್ಕೃತಿಯ ನಿಧಿಯೂ ಹೌದು. ಪ್ರತಿನಿಧಿಯೂ ಹೌದು. ರಾಜ್ಯದ ಒಳ ಹೊರಗಿನ ಅನೇಕ ಮಠ–ಮಂದಿರಗಳಲ್ಲಿ ಮತ್ತು ಅಭ್ಯಾಸಪ್ರಿಯ ವ್ಯಕ್ತಿಗಳ ವಶದಲ್ಲಿರುವ ಇವು, ಇಂದು ವಾಚನವಿದೂರ ವಸ್ತುಗಳಾಗಿ ಉಪೇಕ್ಷೆಗೆ ಗುರಿಯಾಗಿವೆ. ಕೆಲವಡೆ ದೇವರ ಜಗುಲಿಯ ಮೇಲೆ ಪೂಜಾವಸ್ತುಗಳಾಗಿ ನೀರು, ಗಂಧಗಳಿಂದ ಕೊಳೆಯುತ್ತಲಿವೆ. ಇವುಗಳ ರಕ್ಷಣೆ ನಮ್ಮ ಪರಮಕರ್ತವ್ಯ' **ಎಂ. ಎಂ. ಕಲಬುರ್ಗಿ** (ಮಾರ್ಗ ಸಂ. ೫ ಪು. ೬೬೮)

ಹಸ್ತಪ್ರತಿಗಳು ನಮ್ಮ ನಾಡಿನ ಸಾಹಿತ್ಯ–ಸಂಸ್ಕೃತಿಯ ಇತಿಹಾಸವನ್ನು ತಿಳಿಸುವ ಪ್ರಮುಖ ಆಕರಗಳು. ಇವುಗಳ ಸಂಗ್ರಹ, ಸಂರಕ್ಷಣೆಯ ಪರಿಕಲ್ಪನೆ ನಮ್ಮಲ್ಲಿ ಮೂಡಿ ನಿಂತಿದ್ದು ಆಂಗ್ಲರ ಆಡಳಿತದ ಕಾಲದಲ್ಲಿ. ಅದಕ್ಕೂ ಪೂರ್ವದಲ್ಲಿ ರಾಜಾಶ್ರಯದಲ್ಲಿ, ಮಠ–ಬಸದಿಗಳಲ್ಲಿ ಮಾತ್ರ ಸಂರಕ್ಷಣೆಗೊಂಡಿದ್ದ ಹಸ್ತಪ್ರತಿಗಳನ್ನು ಒಂದು ಶೈಕ್ಷಣಿಕ ಶಿಸ್ತಿನಲ್ಲಿ ಸಂಗ್ರಹ ವ್ಯವಸ್ಥೆಗೆ ಒಳಪಡಿಸಿದವರು ಸಾಹಿತ್ಯ ಸಂಸ್ಕೃತಿ ಪ್ರಿಯರಾದ ಆಂಗ್ಲಅಧಿಕಾರಿಗಳು. ವೈಯಕ್ತಿಕ ಒಡೆತನದಲ್ಲಿದ್ದ ಹಸ್ತಪ್ರತಿಗಳ ಕುರಿತು ಇರುವ ಅನಾಸಕ್ತಿ ಕಂಡ ಈ ಆಂಗ್ಲ ಅಧಿಕಾರಿಗಳು ಅವುಗಳ ಸಂಗ್ರಹ ಸಂರಕ್ಷಣೆಗೆ ಮುಂದಾದರು. ೧೮ನೇ ಶತಮಾನದ ಉತ್ತರಾರ್ಧ ಮತ್ತು ೧೯ನೆಯ ಶತಮಾನದ ಆರಂಭದ ಘಟ್ಟದಲ್ಲಿ ಇಡೀ ದೇಶದಲ್ಲಿ ನಡೆದ ಇಂಥ ಒಂದು ಪ್ರಕ್ರಿಯೆ ಕುರಿತು ಬಿ.ಕೆ. ಹಿರೇಮಠ ಅವರು ಹೀಗೆ ವಿವರಿಸಿದ್ದಾರೆ.

"ಸರ್ ವಿಲಿಯಂ ಜೋನ್ಸ್‌ರವರು ೧೮೦೭ರ ಹೊತ್ತಿಗೆ ಹಸ್ತಪ್ರತಿಗಳ ಸೂಚೀ ಪ್ರಕಟಿಸಿದ್ದನ್ನು ಗಮನಿಸಿದರೆ, ಇದಕ್ಕೂ ಪೂರ್ವದಲ್ಲಿ ಅಂದರೆ ೧೮ನೆಯ ಶತಮಾನದ ಉತ್ತರಾರ್ಧದಲ್ಲಿಯೇ ಹಸ್ತಪ್ರತಿ ಸಂಗ್ರಹಣಕಾರ್ಯ ಆರಂಭಗೊಂಡಿರಬಹುದು. ಹಸ್ತಪ್ರತಿ ಸಂಗ್ರಹಣ ಹಾಗೂ ಹಸ್ತಪ್ರತಿ ಸೂಚಿಗಳನ್ನು ರಚಿಸುವ ಈ ಕಾರ್ಯವನ್ನು ಅಂದು 'Critical Scholarship' ಎಂದು ಗುರುತಿಸಿದ್ದರು. ಕೆಲಕಾಲ ಬಂಗಾಲದ ಏಸಿಯಾಟಿಕ್ ಸಂಸ್ಥೆಯ ಅಧ್ಯಕ್ಷರಾಗಿದ್ದ ಸರ್ ರೊಬರ್ಟ್

ಚೇಂಬರ್ಸ್ ಅವರು ೧೭೭೪ ರಿಂದ ೧೭೭೮ರವರೆಗೆ ಭಾರತೀಯ ಗ್ರಂಥಗಳನ್ನು ಸಂಗ್ರಹಿಸಿ ಒಂದು ಭಂಡಾರವನ್ನು ರೂಪಿಸಿದ್ದರು. ಅಮೂಲ್ಯವಾದ ಈ ಸಂಗ್ರಹವನ್ನು ಪರ್ಷಿಯನ್ ಸರಕಾರವು ೧೮೪೨ರಲ್ಲಿ ಖರೀದಿಸಿ ಬರ್ಲಿನ್‌ನ ಇಂಪಿರಿಯಲ್ ಲೈಬ್ರರಿ ಸಂಗ್ರಹಕ್ಕೆ ಸೇರ್ಪಡೆಗೊಳಿಸಿದ ಸಂಗತಿಯು ತಿಳಿದುಬರುತ್ತದೆ. ಇದು ಅಷ್ಟು ಹಿಂದೆಯೇನಡೆದ ಹಸ್ತಪ್ರತಿ ಸಂಗ್ರಹದ ಒಂದು ನಿದರ್ಶನವಾಗಿದೆ."[೧]

ಮೇಲಿನ ಮಾತುಗಳಿಗೆ ಪೂರಕವಾಗಿ ಅಂದಿನ ಬ್ರಿಟಿಷ್ ಸರಕಾರವು ಈ ಹಸ್ತಪ್ರತಿ ಸಂಗ್ರಹ ಸಂರಕ್ಷಣ ಕಾರ್ಯವನ್ನು ಅತ್ಯಂತ ಕಾಳಜಿಯಿಂದ ನಿರ್ವಹಿಸಿದ ವಿಷಯ ತಿಳಿದುಬರುತ್ತದೆ. ೧೮೬೬ರಷ್ಟು ಹಿಂದೆಯೇ ಮುಂಬೈ ರಾಜ್ಯ ಸರ್ಕಾರವು ಬ್ಯೂಲರ್ ಎಂಬುವರು ಹಸ್ತಪ್ರತಿಗಳನ್ನು ಸಂಗ್ರಹಿಸಲು, ಖರೀದಿಸಲು ಆರ್ಥಿಕ ಸಹಾಯನುದಾನ ಮಾಡಿತ್ತು. ಆ ಅವಧಿಯಲ್ಲಿ ಸಂಗ್ರಹಿಸಿದ ಹಸ್ತಪ್ರತಿಗಳ ಬೃಹತ್ ಭಂಡಾರವೇ ಮುಂದೆ ಭಂಡಾರಕರ್ ಓರಿಯಂಟಲ್ ರಿಸರ್ಚ್ ಸಂಸ್ಥೆಯಾಯಿತು. ಕನ್ನಡ ನಾಡಿನ ಹಸ್ತಪ್ರತಿಗಳ ವಿಷಯದಲ್ಲಿ ಹೇಳುವುದಾದರೆ ೧೭೮೨ರ ಹೊತ್ತಿಗೆ ಕರ್ನಲ್ ಮೆಕೆಂಜೆ ಮದ್ರಾಸ್ ಪ್ರಾಂತ್ಯಕ್ಕೆ ಎಂಜನೀಯರ್ ಆಗಿ ಸೇವೆಸಲ್ಲಿಸಲು ಬಂದರು. ಮೆಕೆಂಜೆ ಅವರ ಆಸಕ್ತಿಯ ಕಾರಣವಾಗಿ ಹಸ್ತಪ್ರತಿಗಳ ಸಂಗ್ರಹಕ್ಕೆ ಹೆಚ್ಚು ಒತ್ತುಕೊಟ್ಟರು.

"ಮಠ, ಮಂದಿರ, ಬಸದಿ, ವಿದ್ಯಾಕೇಂದ್ರ ಪಂಡಿತರ ಮನೆಗಳಲ್ಲಿ ಕ್ಷೇತ್ರಕಾರ್ಯ ಮಾಡಿದ ಅಗಾಧ ಪ್ರಮಾಣದ ಹಸ್ತಪ್ರತಿಗಳನ್ನು ಮೆಕೆಂಜಿ ಅವರು ಸಂಗ್ರಹಿಸಿದರು. ತನ್ನ ವೃತ್ತಿಯ ಜೊತೆಜೊತೆಗೆ ಮೆಕೆಂಜಿ ವೈಯಕ್ತಿಕ ಪ್ರೀತಿ ಮತ್ತು ಕಾಳಜಿಯಿಂದ ೩೮ ವರ್ಷಗಳ ದೀರ್ಘಅವಧಿಯಲ್ಲಿ ಕೃಷ್ಣೆಯಿಂದ ಕನ್ಯಾಕುಮಾರಿವರೆಗೆ ಸಂಚರಿಸಿ ಒಟ್ಟು ೧೩ ಭಾಷೆಗಳಲ್ಲಿ ೧೫೬೮ ಹಸ್ತಪ್ರತಿಗಳನ್ನು ಸಂಗ್ರಹಿಸಿ ದೊಡ್ಡ ಸಾಹಸವನ್ನೇ ಮಾಡಿದರು."[೨]

ಮೆಕೆಂಜಿ ಅವರ ಕೆಲಸವನ್ನು ಸಿ.ಪಿ.ಬ್ರೌನ್ ಮೊದಲಾದ ಬ್ರಿಟಿಷ ಅಧಿಕಾರಿಗಳು ಮುಂದುವರಿಸಿದರು. ಸಿ.ಪಿ.ಬ್ರೌನ್ ಅವರು ಇದೇ ಅವಧಿಯಲ್ಲಿ ಬಸವಪುರಾಣ–ಚೆನ್ನಬಸವ ಪುರಾಣ–ಪ್ರಭುಲಿಂಗಲೀಲೆ ಮೊದಲಾದ ಕೃತಿಗಳನ್ನು ಅಧ್ಯಯನಮಾಡಿ ಜಂಗಮರ ಮತ ಸಂಪ್ರದಾಯ ಆಚರಣೆಗಳ ಕುರಿತು ಒಂದು ಸುದೀರ್ಘವಾದ ಲೇಖನವನ್ನೇ ಬರೆದರು. "೧೮೫೮ರಲ್ಲಿ ಮದ್ರಾಸ್ ಪ್ರಾಚ್ಯಸಂಶೋಧನಾಲಯದಲ್ಲಿ ಕನ್ನಡದ ಸಾವಿರಾರು ಹಸ್ತಪ್ರತಿಗಳು ಸಂಗ್ರಹವಾದವು. ಕರ್ನಾಟಕ ಏಕೀಕರಣದ ನಂತರ, ಮದ್ರಾಸ್ ಪ್ರಾಂತ ತಮಿಳುನಾಡಿಗೆ ಸೇರಿದ ಪರಿಣಾಮವಾಗಿ 'ಈ ಸಂಪತ್ತಿನ ಕೆಲಭಾಗವನ್ನು ೧೯೬೭ರಲ್ಲಿ ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ, ಧಾರವಾಡದ ಕನ್ನಡ ಸಂಶೋಧನ ಸಂಸ್ಥೆ, ಮೈಸೂರಿನ ರಾಜ್ಯಪುರಾತತ್ವ ಇಲಾಖೆಗಳಿಗೆ ಹಂಚಿಕೊಡಲಾಯಿತು. ಒಟ್ಟಿನಲ್ಲಿ ನಮ್ಮ ಹಸ್ತಪ್ರತಿಗಳ ಸಂಗ್ರಹ ಕಾರ್ಯ ಮೊಟ್ಟಮೊದಲು ಮದ್ರಾಸ್ ನೆಲೆಯಿಂದಲೇ ಆರಂಭವಾಯಿತೆಂದು ತಿಳಿದುಬರುತ್ತದೆ."[೩] ಎಂದು ಎಂ.ಎಂ. ಕಲಬುರ್ಗಿ ಅವರು ಹೇಳಿರುವುದು ನಿಜವೆನಿಸುತ್ತದೆ.

ಕರ್ನಾಟಕದಲ್ಲಿ ೧೮೮೮ರಲ್ಲಿ ಮೈಸೂರಿನ ಪುರಾತತ್ವ ಇಲಾಖೆ ಅಸ್ತಿತ್ವಕ್ಕೆ ಬಂದಿತು. ಇದರ ಮುಖ್ಯಸ್ಥರಾಗಿ ಬಂದ ಬಿ.ಎಲ್. ರೈಸ್‌ರವರು ಸಾವಿರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿ, ಈ ಇಲಾಖೆಗೆ ಒಂದು ಜೀವಂತಿಕೆಯನ್ನು ತಂದುಕೊಟ್ಟರು. ಇದರ ಪರಿಣಾಮವಾಗಿ ೧೮೯೧ರಲ್ಲಿ ಈ ಇಲಾಖೆಯಿಂದ ಹಸ್ತಪ್ರತಿ ಭಂಡಾರ ಬೇರೆಯಾಗಿ 'ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿ' ಎಂಬ ಹೆಸರಿನಲ್ಲಿ ಮುಂದುವರಿಯುತು. ಮುಂದೆ ಈ ಸಂಸ್ಥೆಯು ಮೈಸೂರು ವಿಶ್ವವಿದ್ಯಾಲಯದಲ್ಲಿ ವಿಲೀನವಾಗಿ ಕನ್ನಡ ಅಧ್ಯಯನ ಸಂಸ್ಥೆಯ ಒಂದು ಭಾಗವಾಗಿ ಬೆಳೆದುಬಂದಿತು. ಇದರ ಪರಿಣಾಮವಾಗಿ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿಯೇ ಮೈಸೂರು ವಿಶ್ವವಿದ್ಯಾಲಯವು ನೂರಾರು ಹಳಗನ್ನಡ ಕಾವ್ಯಕೃತಿಗಳನ್ನು ಪ್ರಕಟಿಸಿ, ಕನ್ನಡ ಸಾಹಿತ್ಯ-ಸಂಸ್ಕೃತಿ ಅಧ್ಯಯನಕ್ಕೆ ಒಂದು ಮಾರ್ಗಸೂಚಿಯನ್ನು ಒದಗಿಸಿಕೊಟ್ಟಿತು. ಕನ್ನಡ ಹಸ್ತಪ್ರತಿಗಳನ್ನು ಸಂಗ್ರಹಿಸಿದ ಸರ್ಕಾರದ ಮೊದಲ ಸಂಸ್ಥೆಯೆಂಬ ಕೀರ್ತಿ ಈ ಸಂಸ್ಥೆಗೆ ಸಲ್ಲಬೇಕು. ಮುಂದೆ ಸರಕಾರ ೧೮೯೯ರಲ್ಲಿ ಉತ್ತರ ಕರ್ನಾಟಕದ ಧಾರವಾಡದಲ್ಲಿ 'ಕನ್ನಡ ಸಂಶೋಧನ ಸಂಸ್ಥೆ'ಯನ್ನು ಪ್ರಾರಂಭಿಸಿತು. ಇದಕ್ಕೂ ಪೂರ್ವದಲ್ಲಿ ೧೮೩೭ರಲ್ಲಿ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯು ಸಾಹಿತ್ಯ ಸಮಿತಿ ಎಂಬ ವಿಭಾಗ ಪ್ರಾರಂಭಿಸಿ, ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆಗೆ ಮುಂದಾಯಿತು. ಈ ಸಂದರ್ಭದಲ್ಲಿ ಶಿ. ಚೆ. ನಂದೀಮಠ ಅವರು ಬೆಳಗಾವಿ, ವಿಜಯಪುರ ಪ್ರಾಂತಗಳಲ್ಲಿ ಕ್ಷೇತ್ರಕಾರ್ಯ ಮಾಡಿ, ೮೦೦ಕ್ಕೂ ಮಿಕ್ಕಿ ಹಸ್ತಪ್ರತಿಗಳನ್ನು ಸಂಗ್ರಹಿಸಿ, ಈ ಸಂಸ್ಥೆಗೆ ನೀಡಿದರು. ಈ ವಿಷಯವನ್ನು ಈ ಪ್ರಬಂಧದ ಮೂರನೆಯ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

ಉತ್ತರ ಕರ್ನಾಟಕದಲ್ಲಿ ಪ್ರಾರಂಭವಾದ ಕರ್ನಾಟಕ ವಿಶ್ವವಿದ್ಯಾಲಯವು ಆರ್. ಸಿ.ಹಿರೇಮಠ ಅವರ ನೇತೃತ್ವದಲ್ಲಿ ಕನ್ನಡ ಅಧ್ಯಯನಪೀಠದ ಆಶ್ರಯದಲ್ಲಿ ೪೦೦೦ ಹಸ್ತಪ್ರತಿಗಳನ್ನು ಸಂಗ್ರಹಿಸಿದರು. ಎಂ. ಎಂ. ಕಲಬುರ್ಗಿ ಅವರ ವಿಶೇಷ ಪ್ರಯತ್ನದಿಂದ ಈ ಸಂಖ್ಯೆ ಹತ್ತು ಸಾವಿರ ಮುಟ್ಟಿತು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಸಂಗ್ರಹಿಸಿದ ಹಸ್ತಪ್ರತಿಗಳ ನೆರವಿನಿಂದ ಹಳೆಗನ್ನಡ ಸಾಹಿತ್ಯವನ್ನು ಬೆಳಕಿಗೆ ತಂದಂತೆ, ಆರ್. ಸಿ. ಹಿರೇಮಠ ಅವರ ನೇತೃತ್ವದಲ್ಲಿ 'ಸಮಗ್ರ ವಚನವಾಙ್ಮಯ ಸಂಗ್ರಹ, ಸಂಸ್ಕರಣ ಮತ್ತು ಪ್ರಕಟಣ ಯೋಜನೆ' ಅಸ್ತಿತ್ವಕ್ಕೆ ಬಂದಿತ್ತು. ಐವತ್ತು ವಚನ ಸಾಹಿತ್ಯ ಕೃತಿಗಳು ಪ್ರಕಟಗೊಂಡು, ವಚನ ಸಾಹಿತ್ಯದ ಹಾಸುಬೀಸುಗಳು ಲೋಕದ ಕಣ್ಣಿಗೆ ಕಾಣುವಂತಾಯಿತು.ಈ ಸಂದರ್ಭದಲ್ಲಿ ಫ.ಗು.ಹಳಕಟ್ಟಿ, ಶಿ.ಚೆ.ನಂದೀಮಠ, ಕೆ.ಜಿ.ಕುಂದಣಗಾರ ಮೊದಲಾದ ವಿದ್ವಾಂಸರ ವೈಯಕ್ತಿಕ ಸಂಗ್ರಹದಲ್ಲಿಯೂ ನೂರಾರು ಹಸ್ತಪ್ರತಿಗಳ ಸಂಗ್ರಹ ಕಾರ್ಯ ನಡೆಯಿತು.

ಬೆಂಗಳೂರು ವಿಶ್ವವಿದ್ಯಾಲಯ, ಗುಲಬರ್ಗಾ ವಿಶ್ವವಿದ್ಯಾಲಯ, ಮಂಗಳೂರು ವಿಶ್ವವಿದ್ಯಾಲಯ, ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದ್ರಾಬಾದ, ಕನ್ನಡ ಸಾಹಿತ್ಯ ಪರಿಷತ್ತು, ಬಿ.ಎಂ.ಶ್ರೀ ಪ್ರತಿಷ್ಠಾನ, ಧರ್ಮಸ್ಥಳ ಮಂಜುನಾಥೇಶ್ವರ ಸಂಸ್ಕೃತಿ ಪ್ರತಿಷ್ಠಾನ, ಸಂಸ್ಕೃತ ಮಹಾಪಾಠಶಾಲೆ, ಮೈಸೂರು,

ದಿ. ಅಕಾಡೆಮಿ ಸಂಸ್ಕೃತ ರೀಸರ್ಚ, ಮೇಲುಕೋಟೆ ಮೊದಲಾದ ಸಂಘ-ಸಂಸ್ಥೆಗಳು ಶೈಕ್ಷಣಿಕ ಸಂಸ್ಥೆಗಳು ಅಪಾರ ಪ್ರಮಾಣದಲ್ಲಿ ಹಸ್ತಪ್ರತಿಗಳನ್ನು ಸಂಗ್ರಹಿಸಿವೆ.

ಧಾರ್ಮಿಕ ಕೇಂದ್ರಗಳಾದ ಶಿವಯೋಗಮಂದಿರ, ಚಿತ್ರದುರ್ಗ ಬೃಹನ್ಮಠ, ಗದುಗಿನ ಜಗದ್ಗುರು ತೋಂಟದಾರ್ಯಮಠ, ಹುಬ್ಬಳ್ಳಿ ಮೂರುಸಾವಿರಮಠ, ನಾಗನೂರು ರುದ್ರಾಕ್ಷಿಮಠ, ಕೋಥಳಿ ಜೈನ ಮುನಿಗಳ ಆಶ್ರಮ ಮೊದಲಾದ ಕಡೆಗಳಲ್ಲಿ ಅಪಾರ ಪ್ರಮಾಣದ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ.

ಸಂಗ್ರಹವಾದ ಹಸ್ತಪ್ರತಿಗಳ ಜೊತೆಗೆ ಇನ್ನೂ 'ಕನ್ನಡ ನಾಡಿನ ಒಳಗೆ ಹೊರಗೆ ಒಂದು ಲಕ್ಷಕ್ಕಿಂತ ಹೆಚ್ಚು ಕನ್ನಡದ ಕೈಬರಹಗಳು ಸೆರೆಸಿಕ್ಕುತ್ತವೆ' (ಕನ್ನಡ ಹಸ್ತಪ್ರತಿಗಳ ಇತಿಹಾಸ ಪು. ೧೧೮) ಎಂದು ಎಚ್. ದೇವೀರಪ್ಪ ಅಭಿಪ್ರಾಯಪಟ್ಟರೆ, "ಒಟ್ಟಿನಲ್ಲಿ ಈಗ ಸರಕಾರಿ ಸಂಸ್ಥೆಗಳಲ್ಲಿ ಧಾರ್ಮಿಕ ಕೇಂದ್ರಗಳಲ್ಲಿ, ವ್ಯಕ್ತಿಗಳ ವಶದಲ್ಲಿ ರಕ್ಷಿತ, ಅರೆರಕ್ಷಿತ ಸ್ಥಿತಿಯಲ್ಲಿ ಸಂಗ್ರಹಿತವಾಗಿರುವ ಒಟ್ಟು ಕಟ್ಟುಗಳು ೨೭ ಸಾವಿರ, ಬಹುಶಃ ನಾಡಿನ ಒಳ ಹೊರಗೆ ಅರಕ್ಷಿತ ಸ್ಥಿತಿಯಲ್ಲಿ ಬಿಡಿಯಾಗಿ, ಸಂಗ್ರಹರೂಪವಾಗಿ ಬಿದ್ದುಕೊಂಡಿರುವ ಹಸ್ತಪ್ರತಿಗಳು ೧೩ ಸಾವಿರ ಎಂದು ಲೆಕ್ಕ ಹಾಕಿದರೂ ಈ ಸಂಖ್ಯೆ ೪೦ ಸಾವಿರವನ್ನು ಮೀರದು. ಇದು ಕನ್ನಡ ಹಸ್ತಪ್ರತಿಗಳ ಒಟ್ಟು ಸಂಪತ್ತು."[೪] ಎಂದು ಎಂ.ಎಂ. ಕಲಬುರ್ಗಿ ಅವರು ಅಭಿಪ್ರಾಯ ಪಡುತ್ತಾರೆ. ಕಲಬುರ್ಗಿ ಅವರ ಅಭಿಪ್ರಾಯ ಒಂದು ಅಂದಾಜು ಎಂದು ಹೇಳಬಹುದು. ಇದಕ್ಕಿಂತಲೂ ಹೆಚ್ಚು ಹಸ್ತಪ್ರತಿಗಳ ಇರುವ ನಿರೀಕ್ಷೆ ಇದೆ. ಇದಕ್ಕೆ ನಿದರ್ಶನವೆಂದರೆ ಕೇವಲ ೨೦ ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗವು ೫ ಸಾವಿರ ಹಸ್ತಪ್ರತಿಗಳನ್ನು ಸಂಗ್ರಹಿಸಿದ್ದು ದೊಡ್ಡ ಸಾಧನೆಯಾಗಿದೆ. ಈ ವರೆಗೆ 'ಕನ್ನಡ ವಿಶ್ವವಿದ್ಯಾಲಯದ ಐದು ಹಸ್ತಪ್ರತಿ ಸಂಪುಟಗಳು' ಪ್ರಕಟಗೊಂಡಿವೆ. ಉಪೇಕ್ಷೆಗೊಳಗಾದ ಅನೇಕ ಶಾಸ್ತ್ರಗಳ ಅಮೂಲ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಿದ ಕೀರ್ತಿ ಈ ಹಸ್ತಪ್ರತಿ ವಿಭಾಗಕ್ಕೆ ಸಲ್ಲುತ್ತದೆ. ಶಕುನಶಾಸ್ತ್ರ, ಅಶ್ವಶಾಸ್ತ್ರ, ವೈದ್ಯಶಾಸ್ತ್ರ, ಕಾಮಶಾಸ್ತ್ರ, ಸಮಾಧಿಕ್ರಿಯಾಶಾಸ್ತ್ರ, ಯೋಗಶಾಸ್ತ್ರ, ಪ್ರಶ್ನಶಾಸ್ತ್ರ, ಜ್ಯೋತಿಷ್ಯಶಾಸ್ತ್ರ, ನಿಧಿಶಾಸ್ತ್ರ, ನಾಣ್ಯಶಾಸ್ತ್ರ, ಜಲಶಾಸ್ತ್ರ ಮೊದಲಾದ ತುಂಬಾ ಉಪೇಕ್ಷೆಗೆ ಒಳಗಾಗಿದ್ದ ಶಾಸ್ತ್ರಸಾಹಿತ್ಯದ ಹಸ್ತಪ್ರತಿಗಳ ವಿವರಗಳನ್ನು ಮೊದಲ ಬಾರಿಗೆ ಲೋಕದ ಮುಂದಿಟ್ಟ ಕೀರ್ತಿ ಈ ವಿಭಾಗದ ಪ್ರಾಧ್ಯಾಪಕರಿಗೆ ಸಲ್ಲಬೇಕು. ಎಸ್.ಆರ್. ಚನ್ನವೀರಪ್ಪ, ಕೆ. ರವೀಂದ್ರನಾಥ, ವೀರೇಶ ಬಡಿಗೇರ, ಎಸ್.ಎಸ್. ಅಂಗಡಿ ಮತ್ತು ಎಫ್.ಟಿ.ಹಳ್ಳಿಕೇರಿ ಅವರು ಹಸ್ತಪ್ರತಿಗಳ ಸಂಗ್ರಹ-ಸಂರಕ್ಷಣೆ-ಪರಿಷ್ಕರಣೆ-ಸಂಪಾದನೆ-ಸಂಶೋಧನೆ ಮೊದಲಾದ ಘಟ್ಟಗಳಲ್ಲಿ ದುಡಿದು ಕನ್ನಡ ಸಾರಸ್ವತ ಪ್ರಪಂಚಕ್ಕೆ ಒಂದು ಹೊಸ ದಿಕ್ಕುದಿಶೆಯನ್ನು ತೋರಿಸಿಕೊಟ್ಟಿದ್ದಾರೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಹಸ್ತಪ್ರತಿ ಸಂಗ್ರಹಕಾರರ ಮಹತ್ವವನ್ನು ಕುರಿತು ಎಂ.ಉಷಾ ಅವರು ಮಾಡಿದ ಚಿಂತನೆ ಸಮಯೋಚಿತವಾಗಿದೆ. ಅವರು ಹೇಳುವ ಮಾತುಗಳು ಹೀಗಿವೆ. "ಹಸ್ತಪ್ರತಿಗಳನ್ನು ಸಂಗ್ರಹಿಸುವವರಿಗೆ

ಹಸ್ತಪ್ರತಿಗಳ ಮಹತ್ವವೇ ತಿಳಿದಿರುವುದಿಲ್ಲ. ಮೂಢತನದಿಂದ ದೇವರ ಕೋಣೆಯಲ್ಲಿಟ್ಟು, ಹೂವು, ನೀರುಹಾಕಿ ಪೂಜೆಮಾಡುತ್ತಾರೆ. ಈ ತಲೆಮಾರಿನವರು ಅದನ್ನು ನಿರ್ಲಕ್ಷಿಸುವುದರಿಂದ ಅವು ಹಾಳಾಗುತ್ತಿವೆ. ಅವರ ಮನವೊಲಿಸಿ ತರುವುದೇ ಒಂದು ದೊಡ್ಡ ಜವಾಬ್ದಾರಿ ಎಂಬ ತಿಳುವಳಿಕೆ ದಟ್ಟವಾಗಿದೆ. ಆದರೆ ಇದಿಷ್ಟೇ ವಾಸ್ತವ ಎಂದೇನಲ್ಲ. ಎಷ್ಟೋ ಕುಟುಂಬಗಳಲ್ಲಿ ಕಳೆದ ತಲೆಮಾರಿನಲ್ಲಿ ಕೂಡ ಹಸ್ತಪ್ರತಿಗಳನ್ನು ಓದುವವರಿದ್ದರು ಕನ್ನಡ ಹಸ್ತಪ್ರತಿಗಳ ರಕ್ಷಣೆಯನ್ನು ಧಾರ್ಮಿಕ ಕಾರಣಕ್ಕಾಗಿ ಮಾಡುತ್ತಿದ್ದರು ಎಂಬುದು ಮುಖ್ಯ ವಿಚಾರವಾದರೂ ಆ ಧಾರ್ಮಿಕ ಕಾರಣವನ್ನು ಕೇವಲ ಪೂಜೆ ಮಾಡುವುದಕ್ಕೆ ಮಾತ್ರ ಎಂದು ಭಾವಿಸುವುದು ಸರಿಯಲ್ಲ. ಹಸ್ತಪ್ರತಿಗಳ ರಚನೆಯ ಅಗತ್ಯ ಆಧುನಿಕ ಸಮಾಜದ ಧಾರ್ಮಿಕರಿಗೆ ಇಲ್ಲದಿದ್ದರೂ ಇರುವ ಹಸ್ತಪ್ರತಿಗಳ ರಕ್ಷಣೆಯ ಸಾಮಾಜಿಕ ಅಗತ್ಯ ಇವತ್ತಿಗೂ ಇದೆ. ಮಠಗಳಂತೆಯೇ ಎಷ್ಟೋ ಜನ ವ್ಯಕ್ತಿಗಳು ತಮ್ಮ ತಮ್ಮ ಪ್ರಾಂತ್ಯದಲ್ಲಿ ತಾವು ನಂಬಿದ ಧಾರ್ಮಿಕತೆಯನ್ನು ಜೀವಂತವಾಗಿರಿಸುವ ಮುಖ್ಯ ಅಂಶವಾಗಿ ಹಸ್ತಪ್ರತಿಗಳ ರಕ್ಷಣೆ, ಸಂಗ್ರಹಣೆ, ಪೂರ್ವದಿಂದಲೂ ಕೈಗೊಂಡಿದ್ದಾರೆ. ಬರಹವನ್ನು ನಿಲುಕಿಸಿಕೊಂಡ ಸಮುದಾಯಗಳಲ್ಲಿ ಪ್ರಮುಖರು ಅನ್ನಿಸಿಕೊಂಡವರು ಸಮುದಾಯದಲ್ಲಿನ ತಮ್ಮ ಸ್ಥಾನವನ್ನು ಗುರುತಿಸಿಕೊಳ್ಳುವ ಹಲವು ಸಾಧನಗಳಲ್ಲಿ ಹಸ್ತಪ್ರತಿ ಸಂಗ್ರಹಣೆಯನ್ನು ಒಂದೆಂದು ಭಾವಿಸಿದ್ದಾರೆ. ಹಾಗಾಗಿ ಇಂದು ನಮಗೆ ಹಸ್ತಪ್ರತಿಗಳನ್ನು ಒದಗಿಸುತ್ತಿರುವ ಸಮುದಾಯಗಳು ಯಾವುವು? ಅವುಗಳ ಸಾಮಾಜಿಕ ಸ್ಥಾನಮಾನಗಳೇನು? ಅವರ ಸಂಗ್ರಹಣೆಯ ವ್ಯಾಪ್ತಿ ಅಭಿರುಚಿ ಯಾವುದು? ಈ ಹೊತ್ತಿನ ಸಾಕ್ಷರತೆಯ ಅಂಕಿ ಅಂಶಗಳಿಗೂ ಅದಕ್ಕೂ ಇರುವ ಸಂಬಂಧ ಸ್ವರೂಪವೇನು ಇತ್ಯಾದಿ ವಿವರಗಳಲ್ಲಿ ಹಸ್ತಪ್ರತಿ ಸಂಗ್ರಹವನ್ನು ಗ್ರಹಿಸಿದರೆ ಭಾರತೀಯ ಸಮಾಜವು ಬರಹಾಧಾರಿತ ಜ್ಞಾನವನ್ನು ಸಾಹಿತ್ಯವನ್ನು ಸಾಮಾಜೀಕರಣಗೊಳಿಸಿಕೊಂಡ ಬಗೆ ಎಂತದ್ದು ಎಂಬುದನ್ನು ಅರಿಯಬಹುದಾಗಿದೆ."[೫]

ಕ್ಷೇತ್ರಕಾರ್ಯ ಮಾಡುವ ಮೂಲಕ ಅನೇಕ ಅಪ್ರಕಟಿತ ಹಸ್ತಪ್ರತಿಗಳನ್ನು ಕಣ್ಣಾರೆ ಕಂಡು, ಕೈಯಾರೆ ಮುಟ್ಟಿ, ನನ್ನ ಅಧ್ಯಯನಕ್ಕೆ ಬೇಕಾದ ಟಿಪ್ಪಣಿಗಳನ್ನು ಮಾಡಿಕೊಂಡೆ. ಇದು ನನಗೆ ಸಂತೋಷವನ್ನುಂಟು ಮಾಡಿದೆ. ವ್ಯಕ್ತಿಗತ ಸಂಗ್ರಹ ಕುರಿತು ಈ ಅಧ್ಯಾಯದಲ್ಲಿ ವಿಶೇಷವಾಗಿ ಪ್ರಸ್ತಾಪಿಸಿರುವೆ. ಹಳ್ಳಿಗಳಿಗೆ ಹೋದಾಗ ನನಗೆ ಬಯಲಾಟದ ಹಸ್ತಪ್ರತಿಗಳೇ ಹೆಚ್ಚಾಗಿ ದೊರೆತವು. ವಯೋವೃದ್ಧರೂ, ಜ್ಞಾನವೃದ್ಧರೂ ಆಗಿರುವ ಕೆಲವು ಹಿರಿಯರ ಹತ್ತಿರ ಧಾರ್ಮಿಕ ಆಧ್ಯಾತ್ಮಿಕ ಹಸ್ತಪ್ರತಿಗಳು ನೋಡಲು ದೊರೆತವು. ಕೆಲವರು ಹಸ್ತಪ್ರತಿಗಳನ್ನು ಅವಲೋಕಿಸಲು ಅವಕಾಶವನ್ನೇ ಕೊಡಲಿಲ್ಲ. ಮೂಡಲಗಿ ಮಠದಲ್ಲಿರುವ ಶ್ರೀಗಳು ಸಂಪ್ರದಾಯ ಮನೋಭಾವದವರು. ಅವರ ಸಂಗ್ರಹದಲ್ಲಿರುವ ಪ್ರಾಚೀನ ಹಸ್ತಪ್ರತಿಗಳನ್ನು ಪೂರ್ಣಪ್ರಮಾಣದಲ್ಲಿ ಅವಲೋಕಿಸಲು ಸಾಧ್ಯವಾಗಲಿಲ್ಲ. ಅಮ್ಮಣಗಿಯ ಬಾಬುರಾವ ದೇಸಾಯಿಯವರ ವೃತ್ತಿರಂಗಭೂಮಿ ಸಾಹಿತ್ಯ ಕುರಿತು ಸುಮಾರು ೨೦೦ಕ್ಕೂ ಮಿಕ್ಕಿದ ಕೃತಿಗಳ, ಹಸ್ತಪ್ರತಿಗಳು ಇದ್ದವು. ಅವರು ಆಕಸ್ಮಿಕವಾಗಿ ಅಪಘಾತವೊಂದರಲ್ಲಿ

ನಿಧನರಾದರು. ಅವರ ಮಗ ಒಬ್ಬ ನ್ಯಾಯಾಧೀಶರಾಗಿ ಚಿತ್ರದುರ್ಗದಲ್ಲಿ ಸೇವೆಸಲ್ಲಿಸುತ್ತಿದ್ದಾರೆ. ಅಮ್ಮಣಗಿ ಗ್ರಾಮದ ಅವರ ಮನೆಯಲ್ಲಿ ನಾನು ನೋಡಿ ಟಿಪ್ಪಣಿ ಮಾಡಿಕೊಂಡು ಬಂದ ನಂತರ ಆ ಹಸ್ತಪ್ರತಿಗಳ ಸ್ಥಿತಿಯೇನಾಗಿದೆ ಎಂಬುದು ಗೊತ್ತಿಲ್ಲ. ಹೀಗೆ ಬೆಳಗಾವಿ ಪರಿಸರದ ವ್ಯಕ್ತಿಗತ ಒಡೆತನದಲ್ಲಿರುವ ಹಸ್ತಪ್ರತಿಗಳ ವಿವರವನ್ನು ಎರಡನೆಯ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಿದ್ದೇನೆ. ಆದ್ದರಿಂದ ಈ ಅಧ್ಯಾಯದಲ್ಲಿ ನಾನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಿದ ಅಪ್ರಕಟಿತ ಮತ್ತು ಪ್ರಕಟಿತ ಹಸ್ತಪ್ರತಿಗಳ ವಿವರವನ್ನು ಅದರಲ್ಲೂ ವಿಶೇಷವಾಗಿ ಬಯಲಾಟ ಹಸ್ತಪ್ರತಿಗಳ ವಿವರವನ್ನು ನೀಡಲು ಪ್ರಯತ್ನಿಸಿದ್ದೇನೆ.

**೭.೧ ಸಂಗ್ರಹಕಾರರು :**

**ಬಾಬುರಾವ ದೇಸಾಯಿ, ಅಮ್ಮಣಗಿ :**

ಇವರು ಸ್ವತಃ ಶ್ರೀ ಮಲ್ಲಿಕಾರ್ಜುನ ನಾಟ್ಯಸಂಘ ಎಂಬ ವೃತ್ತಿರಂಗಭೂಮಿ ಸಂಸ್ಥೆಯನ್ನು ಕಟ್ಟಿಕೊಂಡು ಕರ್ನಾಟಕ ಮಹಾರಾಷ್ಟ್ರದ ತುಂಬೆಲ್ಲ ನಾಟಕವಾಡಿದ್ದಾರೆ. ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯಸಂಘದಲ್ಲಿ ಮ್ಯಾನೇಜರ್ ಆಗಿ ಕೆಲಸ ಮಾಡಿದ್ದ ಬಾಬುರಾವ್ ಅವರು ರಂಗಭೂಮಿ ಸಾಹಿತ್ಯದ ಕುರಿತು ಅಪಾರವಾದ ಆಸಕ್ತಿಯುಳ್ಳವರಾಗಿದ್ದರು. ಒಮ್ಮೆ ನನಗೆ ಅವರು ಶಾಂತಕವಿಗಳ ಮೊಟ್ಟಮೊದಲ ನಾಟಕ 'ಉಷಾ ಪರಿಣಯ' ನಾಟಕದ ಪ್ರತಿಯನ್ನು ತೋರಿಸಿದ್ದರು. ಸ್ವತಃ ನಾಟಕಗಳನ್ನು ಬರೆದಿದ್ದ ಅವರು ಮೋಡಿಲಿಪಿಯನ್ನು ಬಲ್ಲವರಾಗಿದ್ದರು. ವಂಟಮುರಿಸಂಸ್ಥಾನದ ವಂಶಜರಾಗಿದ್ದ ಅವರು ವಂಟಮುರಿ ಸಂಸ್ಥಾನದ ಮೋಡಿ ಲಿಪಿಗಳನ್ನು ಅಧ್ಯಯನ ಮಾಡಿ ನೂರು ಪುಟದ 'ವಂಟಮುರಿ ಸಂಸ್ಥಾನ' ಎಂಬ ಕೃತಿಯನ್ನು ಸಿದ್ಧಪಡಿಸಿದ್ದರು. ಆದರೆ ಅದು ಹಸ್ತಪ್ರತಿ ರೂಪದಲ್ಲಿಯೇ ಇದೆ. ಈ ವರ್ಷ ಅವರ ಜನ್ಮಶತಮಾನೋತ್ಸವ ವರ್ಷ. ಈ ಸವಿನೆನಪಿಗಾಗಿ ಅವರ ಅಪ್ರಕಟಿತ ಮೂರು ಕೃತಿಗಳನ್ನು ಪ್ರಕಟಿಸಲು ಅವರ ಮಕ್ಕಳು ಆಲೋಚಿಸಿದ್ದಾರೆ. ಅವರ ಸಂಗ್ರಹದಲ್ಲಿದ್ದ ನಾಟಕ ಕೃತಿಗಳ ಹಸ್ತಪ್ರತಿಗಳ ವಿವರ ಹೀಗಿದೆ:

೧. ಉಷಾಹರಣ ೨.ವತ್ಸಲಾಹರಣ ೩. ಕೀಚಕವಧ ೪. ಶ್ರೀಯಾಳಸತ್ವ ಪರೀಕ್ಷಾ ೫. ಚಂದ್ರಾವಳಿ ೬.ಸೀತಾರಣ್ಯ ಪ್ರವೇಶ ನಾಟಕ ೭. ಸುಂದೋಪಸುಂದ ವಧೆ ೮. ಸುಧನ್ವ ವಧೆ ೯. ಸೀತಾಸ್ವಯಂವರ ೧೦. ಕಾಳಿದಾಸ ೧೧. ಹರಗರ್ವ ಪರಿಹಾರ ೧೨. ಮಯೂರಧ್ವಜ ಪ್ರತಾಪ ೧೩. ಕೃಷ್ಣರಾಧಿಕಾ ವಿಲಾಸ ೧೪. ಆಂಜನೇಯ ವಿಜಯ ೧೫. ಪಾರ್ವತಿ ಪರಿಣಯ (ಗಿರಿಜಾ ಕಲ್ಯಾಣ) ೧೬. ನಾಗಾನಂದ ೧೭. ಗಾಲವ ಚಿತ್ರಸೇನ, ೧೮. ಬೃಹಂಜ್ಜಂಬೂ ಚರಿತ್ರ ೧೯. ರಾವಣವಧ ೨೦. ನಾರದ ಕುಚೇಷ್ಟಾ ೨೧. ಜರಾಸಂಧ ವಧ ೨೨. ಭುಜಂಗೋಪದೇಶ ೨೩. ವ್ಯಭಿಚಾರಾನಾರ್ಥಸಿಂಧು ೨೪. ವಾಸಪ್ಪ ನಾಯಕನ ಫಾರ್ಸು ೨೫. ವಿಶ್ವಾಮಿತ್ರ ತಪೋಭಂಗ ಅಥವಾ ಶಕುಂತಲಾ ಉತ್ಪತ್ತಿ ೨೬. ಹರಿಶ್ಚಂದ್ರ ಸತ್ವಪರೀಕ್ಷಾ ಭಾಗ ೧–೨

**ಬಸವಣ್ಣೆಪ್ಪ ಹೊಸಮನಿ :**

ಗೋಕಾಕದ ಶಾರದಾ ನಾಟಕ ಮಂಡಳಿ ಒಡೆಯರಾಗಿದ್ದ ಬಸವಣ್ಣೆಪ್ಪ ಹೊಸಮನಿ ಅವರು ತಮ್ಮ ವೃತ್ತಿರಂಗಭೂಮಿ ಸೇವೆಯ ಮೂಲಕ ನಾಡಿನ ಗಮನ ಸೆಳೆದವರು. ಅವರ ತಂದೆ ತುಕಾರಾಮಪ್ಪನವರು ಗರುಡ ಸದಾಶಿವರಾಯರ 'ದತ್ತಾತ್ರೇಯ ನಾಟಕ ಮಂಡಳಿ'ಯಲ್ಲಿ ಸೇವೆ ಸಲ್ಲಿಸುತ್ತಿದ್ದರು. ಹೀಗಾಗಿ ಗರುಡರು ಬರೆದ ಅನೇಕ ಅಪ್ರಕಟಿತ ಮತ್ತು ಪ್ರಕಟಿತ ನಾಟಕಗಳ ಸಂಗ್ರಹ ಅವರಲ್ಲಿತ್ತು. ಅದನ್ನು ಬಸವಣ್ಣೆಪ್ಪ ಹೊಸಮನಿ ಅವರು ಜತನವಾಗಿ ಸಂಗ್ರಹಿಸಿಟ್ಟಿದ್ದರು.

೧. ಅಜ್ಞಾತವಾಸ ೨.ಅನಸೂಯಾ ೩.ಕಚದೇವಯಾನಿ ೪.ಗಿರಿಜಾ ಕಲ್ಯಾ (ಸಂತಹೃದಯ) ೫. ಗೋಪಿಚಂದ್ ೬. ಚವತಿಯ ಚಂದ್ರ ೭. ದುರಾತ್ಮ ರಾವಣ ೮. ದ್ರೌಪದಿ ಸ್ವಯಂವರ ೯. ಧರ್ಮ ಸಾಮ್ರಾಜ್ಯ ೧೦. ಪಂಚಗವ್ಯ ೧೧. ಭಸ್ಮಾಸುರ ಮೋಹಿನಿ ೧೨. ಮಾತೃಬಂಧ ವಿಮೋಚನ (ಕಂಸವಧ) ೧೩. ಮಾಯಾ ಬಜಾರ ೧೪.ರುಕ್ಮಿಣೀ ಸ್ವಯಂವರ ೧೫. ಲಂಕಾದಹನ (ಸ್ವಜನೋದ್ಧಾರ) ೧೬. ಶಕ್ತಿವಿಲಾಸ ೧೭. ಶ್ರೀಕೃಷ್ಣ ಪರಂಧಾಮ ೧೮. ಶ್ರೀಕೃಷ್ಣಲೀಲಾ ೧೯. ಶ್ರೀಕೃಷ್ಣ ಸುದಾಮ ೨೦. ಶ್ರೀನಿವಾಸ ಕಲ್ಯಾಣ ೨೧.ಶ್ರೀರಾಮ ಪಾದುಕಾ ಪಟ್ಟಾಭಿಷೇಕ ೨೨. ಸತ್ಯ ಹರಿಶ್ಚಂದ್ರ ೨೩. ಸತ್ಯಾಗ್ರಹಿ ಪ್ರಹ್ಲಾದ ೨೪.ಸಂಪೂರ್ಣ ರಾಮಾಯಣ ೨೫. ಸತ್ಯವಾನ್ ಸಾವಿತ್ರಿ ೨೬. ಸೌಭದ್ರ ೨೭. ಹಿಡಂಬಿ ೨೮. ಹೇಮರಡ್ಡಿ ಮಲ್ಲಮ್ಮ ೨೯. ಉಗ್ರಕಲ್ಯಾಣ ೩೦. ಎಚ್ಚಮ ನಾಯಕ (ಕನ್ನಡ ಕಡುಗಲಿ ೩೧. ವಿದ್ಯಾರಣ್ಯ ವಿಜಯ ೩೨. ಸಿರಸಂಗಿ ದೇಸಾಯರು(ತ್ಯಾಗವೀರ ಲಿಂಗರಾಜ) ೩೩. ಕಾಲಚಕ್ರ ೩೪. ಕ್ರಾಂತಿ ೩೫. ನಮ್ಮ ಭಾಗ್ಯೋದಯ ೩೬.ನಾನು ಒಕ್ಕಲಿಗ ೩೭. ನಾನು ಕನ್ನಡಿಗ ೩೮. ವಿಷಮ ವಿವಾಹ (ಪಶ್ಚಾತ್ತಾಪ) ೩೯. ಸತ್ಯಸಂಕಲ್ಪ ೪೦. ಆದರ್ಶ ಕನ್ಯಾ ೪೧. ಆಶಾಭಂಗ ೪೨. ಪ್ರಭಾವತಿ ೪೩. ಬಲಸಿಂಹತಾರಾ ೪೪. ವರೋಪಚಾರ ೪೫. ವಿಕ್ರಮ ಶಶಿಕಲಾ ೪೬. ವಿವೇಕ ವಿಜಯ ೪೭. ಅಕ್ಕಮಹಾದೇವಿ ೪೮. ತುಕಾರಾಮ ೪೯.ದಾಮಾಜಿ ಪಂತ ೫೦. ಪುರಂದರದಾಸರು ೫೧. ಮಹಾತ್ಮಾ ಏಸುಕ್ರಿಸ್ತ ೫೨. ಮಹಾವಿಭೂತಿ ಬಸವಣ್ಣ ೫೩. ಮಹಾಸಾಧು ಕಬೀರ ೫೪. ರಾಮ ರಹೀಮ ೫೫. ಶರಣಬಸವ ೫೬. ಸದ್ಧರ್ಮ ವಿಜಯ ೫೭. ಸಿದ್ಧರಾಮೇಶ್ವರ ೫೮. ಪ್ರೇಮ ವಿವಾಹ

ಕೆಲವು ವರ್ಷಗಳ ಹಿಂದೆ ಗರುಡರ ನಾಟಕ ಸಂಪುಟಗಳನ್ನು ಪ್ರಕಟಿಸುವ ಕಾಲಕ್ಕೆ ಬಸವಣ್ಣೆಪ್ಪ ಹೊಸಮನಿ ಅವರ ಧರ್ಮಪತ್ನಿ ನಾಗರತ್ನ ಅವರಿಂದ ಗರುಡರ ಮೊಮ್ಮಗ ಪ್ರಕಾಶ ಗರುಡರು ಈ ಹಸ್ತಪ್ರತಿಗಳನ್ನು ಪಡೆದುಕೊಂಡು ಪ್ರಕಟಿಸಿದರು. ಇಷ್ಟು ನಾಟಕದ ಹಸ್ತಪ್ರತಿಗಳನ್ನು ಗರುಡರ ಮೇಲಿನ ಅಭಿಮಾನದಿಂದ ಸಂಗ್ರಹಿಸಿಟ್ಟಿದ್ದ ಬಸವಣ್ಣೆಪ್ಪ ಹೊಸಮನಿ ಅವರ ಶ್ರಮ ಸಾರ್ಥಕವಾಯಿತು.

**ಕಾಡಸಿದ್ಧೇಶ್ವರ ಸ್ವಾಮಿಗಳು ಮರಡಿಮಠ :**

ಶಿವಮೂರ್ತಿ ಸ್ವಾಮಿ ಕಣಬರಗಿಮಠ ಅವರು ಕೊಣ್ಣೂರು ಮಠದಲ್ಲಿಯೇ ೧೯೦೪ರಲ್ಲಿ ಶ್ರೀ ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಳಿಯನ್ನು ಅಸ್ತಿತ್ವಕ್ಕೆ ತಂದರು. ಈ ನಾಟಕ ಮಂಡಳಿ ಆಡಿದ ಮೊದಲ ನಾಟಕ 'ಇಂದ್ರಜಿತ ವಧೆ'. ಈ ನಾಟಕವನ್ನು ಬರೆದವರು ವಂಟಮುರಿಯ ಚನ್ನಮಲ್ಲಪ್ಪ ಬಸಪ್ಪ ಬಸಾಪುರಿ ಅವರು. ಕೆಲವು ನಾಟಕದ ಹಸ್ತಪ್ರತಿಗಳು ಮರಡಿಮಠದ ಸಂಗ್ರಹದಲ್ಲಿವೆ. ಅವುಗಳಲ್ಲಿ ಮುಖ್ಯವಾಗಿ

೧. ಇಂದ್ರಜಿತ ವಧೆ

೨. ಪಾಂಡುಪ್ರತಾಪ

೩. ಸೌಭದ್ರ (ಮರಾಠಿಯಿಂದ ಅನುವಾದ)

೪. ಶಾರದಾ (ಮರಾಠಿಯಿಂದ ಅನುವಾದ)

೫. ತುಕಾರಾಮ (ಮರಾಠಿಯಿಂದ ಅನುವಾದ)

ಈ ಬಯಲಾಟದ ಹಸ್ತಪ್ರತಿಗಳು ಅಲ್ಲಿವೆ. ಶ್ರೀಮಠದಲ್ಲಿ ಪೂಜ್ಯರು ಬಹಳಷ್ಟು ಜೋಪಾನದಿಂದ ಸಂಗ್ರಹಿಸಿಟ್ಟಿದ್ದನ್ನು ನೋಡಬಹುದು.

**ಎಂ.ಎಸ್. ಉಕ್ಕಲಿ, ಅಥಣಿ :**

ಅಥಣಿಯ ಪದವಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಎಂ. ಎಸ್. ಉಕ್ಕಲಿ ಅವರು ಗುಡ್ಡಾಪುರ ದಾನಮ್ಮನ ಕುರಿತು ಪಿಎಚ್.ಡಿ. ಸಂಶೋಧನೆ ಮಾಡುವ ಕಾಲಕ್ಕೆ, ಅವರಿಗೆ ದೊರೆತ ಒಂದು ಹಸ್ತಪ್ರತಿ 'ಗುರುಸಿದ್ಧ ಕವಿಯ ಗುಡ್ಡಾಪುರ ದಾನಮ್ಮದೇವಿ ಪುರಾಣ' ಎಂಬ ಭಾಮಿನಿ ಷಟ್ಪದಿ ಕಾವ್ಯ ಇನ್ನೂ ಪ್ರಕಟವಾಗಿಲ್ಲ.

**ಈಶ್ವರ ಮುದಪಾಕಿ ಉಳ್ಳಾಗಡ್ಡಿ ಖಾನಾಪುರ (ತಾ: ಹುಕ್ಕೇರಿ) :**

ಇವರ ಹತ್ತಿರ ಈ ಕೆಳಗಿನ ನಾಟಕದ ಹಸ್ತಪ್ರತಿಗಳೂ ನೋಡಲು ನಮಗೆ ದೊರೆಯುತ್ತವೆ.

೧. ರಾಧಾನಾಟ

೨. ಸಂಗ್ಯಾಬಾಳ್ಯಾ

೩. ನಿಜಗುಣ ಶಿವಯೋಗಿ

೪. ಶ್ರೀಕೃಷ್ಣ ಪಾರಿಜಾತ

ಈ ನಾಟಕಗಳನ್ನು ಅವರು ಊರೂರಿಗೆ ತಂಡವನ್ನು ಕಟ್ಟಿಕೊಂಡು ಹೋಗಿ ತಮ್ಮ ಪ್ರತಿಭೆಯನ್ನು ಕಲೆಯನ್ನು ಪ್ರದರ್ಶಿಸಿದ್ದಾರೆ.

**ಎಂ. ಬಿ. ನೇಗಿನಹಾಳ, ಬೆಳಗಾವಿ :**

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಎಂ. ಬಿ. ನೇಗಿನಹಾಳ ಅವರು ಬಹುದೊಡ್ಡ ಸಂಶೋಧಕರು. ತತ್ವಪದಕಾರ ಅಲಭೈರಿ ಕುರಿತು ಲೇಖನ ಬರೆದು, ನಾಡಿಗೆ ಪರಿಚಯಿಸಿದ ಕೀರ್ತಿ ಅವರದು. ಮೈಲಾರಲಿಂಗನ ಕುರಿತು ಸಂಶೋಧನೆ ಮಾಡಿದ್ದಾರೆ. ಹಳಗನ್ನಡ ಶಾಸನಗಳ ಸಾಹಿತ್ಯಿಕ ಅಧ್ಯಯನ ಕುರಿತು ಪಿಎಚ್.ಡಿ. ಸಂಶೋಧನೆ ಮಾಡಿದ್ದ ಅವರು ಸವದತ್ತಿ ಎಲ್ಲಮ್ಮನ ಕುರಿತು ಸಂಶೋಧನಾತ್ಮಕ ಕೃತಿಯೊಂದನ್ನು ರಚಿಸುತ್ತಿದ್ದರು. ಆ ಕೃತಿ ಅಪೂರ್ಣವಾಯಿತು. ಅಲ್ಲದೆ ಮೈಲಾರಲಿಂಗನ ಪದಗಳು ಸಂ. ೧–೨ ಭಾಗ ಪ್ರಕಟಿಸಿದ್ದರು. ಇನ್ನು ೨೦೦ ಪದಗಳ ಮೈಲಾರಲಿಂಗನ ಪದಗಳು ಎಂಬ ಹಸ್ತಪ್ರತಿಯನ್ನು ಪ್ರಕಟಣೆಗೆ ಸಿದ್ಧಗೊಳಸಿದ್ದರು. ಅವರ ಅಕಾಲಿಕ ಮರಣದಿಂದ 'ಸವದತ್ತಿ ಎಲ್ಲಮ್ಮ : ಒಂದು ಸಮಾಜೋಸಾಂಸ್ಕೃತಿಕ ಅಧ್ಯಯನ' ಮತ್ತು 'ಮೈಲಾರಲಿಂಗನ ಪದಗಳು–೩' ಈ ಕೃತಿಗಳು ಹಸ್ತಪ್ರತಿ ರೂಪದಲ್ಲಿಯೇ ಉಳಿದಿವೆ.

**೭.೨ ಕವಿಗಳು :**

ಕವಿಗಳ ಮೂಲ ಹಸ್ತಾಕ್ಷರದಲ್ಲಿಯ ಹಸ್ತಪ್ರತಿಗಳು ಇಂದು ದೊರೆಯುವುದು ದುರ್ಲಭ. ಆದರೂ ೧೮ನೇ ಶತಮಾನದ ಉತ್ತರಾರ್ಧ, ೧೯ನೇ ಶತಮಾನದ ಆರಂಭ ಕಾಲದಿಂದ ನಮಗೆ ದೊರೆಯುವ ಕೆಲವು ಕೃತಿಗಳಾದರೂ ಮೂಲ ಕವಿಗಳ ಹಸ್ತಾಕ್ಷರದಲ್ಲಿರುವುದನ್ನು ಗಮನಿಸಬಹುದು.

**ಸಾತು ಕ್ಯಾಮಣ್ಣ :**

ಸಾತು ಕ್ಯಾಮಣ್ಣ ಬರೆದ ಸುಮಾರು ೨೦ ಸ್ವಹಸ್ತಾಕ್ಷರದ ಲಾವಣಿಗಳನ್ನು ಸುರೇಶ ಹನಗಂಡಿ ಅವರು ಸಂಗ್ರಹಿಸಿದ್ದಾರೆ.

ಶಂಬಾ ಜೋಶಿ ಅವರು ನಮ್ಮ ನಾಡಿನ ಶ್ರೇಷ್ಠ ಸಂಶೋಧಕರು. ಅವರು ಬರೆದ ಸ್ವಹಸ್ತಾಕ್ಷರದ ಅನೇಕ ಹಸ್ತಪ್ರತಿಗಳನ್ನು ಜ್ಯೋತಿ ಹೊಸೂರ ಅವರು ಸಂಗ್ರಹಿಸಿದ್ದಾರೆ. ಅವುಗಳಲ್ಲಿ ಈ ಕೆಳಗಿನ ಶಂಬಾ ಹಸ್ತಾಕ್ಷರದ ಹಸ್ತಪ್ರತಿಗಳನ್ನು ನನಗೆ ಕೊಟ್ಟು, ನನ್ನ ಅಧ್ಯಯನಕ್ಕೆ ಮಾರ್ಗದರ್ಶನ ಮಾಡಿದ್ದಾರೆ.

೧. ಮನುಜ ಎಂದರೆ ಯಾರು
೨. ಸತ್ಯಾನ್ವೇಷಣೆಯ ವರದಿ
೩. ಪುರಾತನರ ನಿಷ್ಠೆಯ ಸ್ವರೂಪ
೪. ಅರ್ಧ ಸತ್ಯ ಇದು ಕಾಲ್ಪನಿಕವಲ್ಲ
೫. ಮನುವಿನ ವಿಚಾರ ಕುರಿತು
೬. ಸದೃಶಃ ಪ್ರಜ್ಞೆ; ಆಕೃತಿ ಮತ್ತು ಗುಣ
೭. ಭಾರತೀಯ ಸಂಸ್ಕೃತಿಯಲ್ಲಿ ತಿರುವು ಮುರುವು
೮. ನಿಜವಾದ ದೇವರು ಯಾರು?

೯. ಮಾನವಧರ್ಮ
೧೦. ಸಾಂಸ್ಕೃತಿಕ ಸ್ತರಗಳ ಭೂಮಿಕೆಯಿಂದ
೧೧. ಜ್ಞಾನಸಿದ್ಧಿಯ ಇಬ್ಬಗೆಗಳು
೧೨. ಭಗವಂತನು ವಿಶ್ವನಿಯವಲ್ಲ
೧೩. ಪ್ರಜ್ಞೆ (ಮನಸ್ಸು) ಮತ್ತು ಬುದ್ಧಿ
೧೪. ವಾಸ್ತವ ಸತ್ಯವನ್ನು ಬಚ್ಚಿಡುವ ಒಳಸಂಚು
೧೫. ಸ್ವಭಾವ ಇದು ಸ್ವಾಭಾವಿಕ
೧೬. ಕಲ್ಪದ ಸನಾತನ ಆಕೃತಿಗಳು
೧೭. ಭಾಷೆ ಸಂಸ್ಕೃತಿಯ ಬುದ್ಧಿಗೂ ಮುಂಚಿನದು
೧೮. ಬಿತ್ತಿದ್ದನ್ನು ಬೆಳಕೊ (ತಾರ್ಕಿಕ ಹಿನ್ನೆಲೆ)

ಬೈಲಹೊಂಗಲ ತಾಲೂಕಿನ ಹಣ್ಣಿಕೇರಿ ಗ್ರಾಮಕ್ಕೆ ಕ್ಷೇತ್ರಕಾರ್ಯಕ್ಕೆಂದು ಹೋದಾಗ, ಅಲ್ಲಿ ಈರಣ್ಣ ಪಾಟೀಲ ಅವರ ಸಹಕಾರದಿಂದ ಶಿವಾನಂದ ಕವಿಯ ಮೊಮ್ಮಗನ ಮನೆಗೆ ಭೇಟಿಕೊಟ್ಟೆ. ಅವರ ಮನೆಯಲ್ಲಿದ್ದ ಅಪಾರ ಹಸ್ತಪ್ರತಿಗಳನ್ನು ಎಂ.ಎಸ್. ಲಠ್ಠೆ, ಚಂದ್ರಶೇಖರ ಕಂಬಾರ, ಸಿ. ಕೆ. ನಾವಲಗಿ ಮೊದಲಾದವರು ತೆಗೆದುಕೊಂಡು ಹೋಗಿದ್ದಾರೆ ಎಂಬ ವಿಷಯ ತಿಳಿಯಿತು. ಆದರೂ ಒಂದೆರಡು ನಾಟಕಗಳು ಶಿವಾನಂದ ಕವಿಗಳ ಮೂಲ ಹಸ್ತಾಕ್ಷರದಲ್ಲಿ ದೊರೆಯುತ್ತಿರುವುದು ನಮ್ಮ ಸೌಭಾಗ್ಯವಾಗಿದೆ. ಶಿವಾನಂದ ಕವಿಗಳು ಹತ್ತು ಸಣ್ಣಾಟ ಮತ್ತು ಹತ್ತು ದೊಡ್ಡಾಟಗಳನ್ನು ರಚಿಸಿದ್ದಾರೆ.

| **ಸಣ್ಣಾಟಗಳು** | **ದೊಡ್ಡಾಟಗಳು** |
|---|---|
| ೧. ಅಲ್ಲಮಪ್ರಭು | ೧. ಸಂಪೂರ್ಣ ಮಹಾಭಾರತ |
| ೨. ನಿಜಗುಣ ಶಿವಯೋಗಿ | ೨. ಐರಾವಾಣ–ಮೈರಾವಣ |
| ೩. ಸತ್ಯಶೀಲ | ೩. ಕುಂಭಕರ್ಣ |
| ೪. ಜೋಧಾಬಾಯಿ | ೪. ಜಲಂಧರ |
| ೫. ಬಸವಂತ–ಬಲವಂತ | ೫ . ಇಂದ್ರಕೀಲ |
| ೬. ಭಕ್ತ ಕಬೀರದಾಸ | ೬. ಶಿಬಿ ಚಕ್ರವರ್ತಿ |
| ೭. ವಸಂತ ಮಾಲತಿ | ೭. ಧರ್ಮಸಾಮ್ರಾಜ್ಯ |
| ೮. ಉಡುತಡಿ ಮಹಾದೇವಿ | ೮. ಜೀವನ್ಮುಕ್ತಿ |
| ೯. ವೈದೇವಿ ಸಾದೇವಿ | ೯. ಶ್ವೇತರಾಜ |
| ೧೦. ಮಹಾಸತಿ ಅನುಸೂಯಾ | ೧೦. ರುಕ್ಮಾಂಗರಾಜ |

ಈ ನಾಟಕದ ಹಸ್ತಪ್ರತಿಗಳು ಶಿವಣ್ಣಪ್ಪ ಯಲ್ಲಪ್ಪ ಮುನೆನ್ನಿ (ಶಿವಾನಂದ ಕವಿಯ ಮೊಮ್ಮಗ), ಗುರುಸ್ವಾಮಿಗಳು, ಶಿವಲಿಂಗಪ್ಪ ಸೋಮಪ್ಪ ಮುನೆನ್ನಿ, ಗಂಗಾಧರ ದೈವಜ್ಞ, ಎಲ್ಲಪ್ಪ ಶಿವಪ್ಪ ಮುನೆನ್ನಿ, ಗಂಗಪ್ಪ ಹನುಮಂತಪ್ಪ ಚಿಕ್ಕಣ್ಣವರ, ಲಿಂಗಯ್ಯಸ್ವಾಮಿ ಬಸಲಿಂಗಸ್ವಾಮಿ ಹಿರೇಮಠ

ಇವರ ಹತ್ತಿರ ಕ್ರಮವಾಗಿ ನಿಜಗುಣ ಶಿವಯೋಗಿ, ಭಕ್ತ ಕಬೀರದಾಸ, ಜಲಂಧರ, ಸತ್ಯಶೀಲಾ, ಜೋಧಾಬಾಯಿ, ಸಂಪೂರ್ಣ ಭಾರತದ ಹಸ್ತಪ್ರತಿಗಳು ಇವೆ. ಇತ್ತೀಚೆಗೆ ಸಿ. ಕೆ. ನಾವಲಗಿ ಅವರು 'ನಿಜಗುಣ ಶಿವಯೋಗಿ' ಹಸ್ತಪ್ರತಿಯನ್ನು ಸಂಪಾದಿಸಿ, ಜಾನಪದ ಅಕಾಡೆಮಿಯಿಂದ ಪ್ರಕಟಿಸಿದ್ದಾರೆ.

**ಕಾದ್ರೊಳ್ಳಿ ನೀಲಕಂಠ ಕವಿ :**

ಕಾದ್ರೊಳ್ಳಿಯ ನೀಲಕಂಠ ಕವಿ ಕೂಡ ಶಿವಾನಂದ ಕವಿಯಂತೆ, ಅದ್ಭುತ ಕವಿ–ನಾಟಕಕಾರ. ಸಣ್ಣಾಟ ಸಾಹಿತ್ಯಕ್ಕೆ ಒಂದು ಘನತೆ ಗೌರವವನ್ನು ತಂದುಕೊಟ್ಟ ಕೀರ್ತಿ ನೀಲಕಂಠ ಕವಿಯದು. ಕಾದ್ರೊಳ್ಳಿ ಗ್ರಾಮದ ಸೀಮಿಮಠದಲ್ಲಿ, ಆ ಊರಿನ ಹಿರಿಯರಾದ ಶಿವಜಾತಯ್ಯ ದಳವಾಯಿ (ನಿವೃತ್ತ ಐ. ಆರ್.ಎಸ್. ಅಧಿಕಾರಿ), ಬಿ.ವಿ. ಕಟ್ಟಿ (ನಿವೃತ್ತ ಐ.ಎ.ಎಸ್. ಅಧಿಕಾರಿ) ಇವರ ವೈಯಕ್ತಿ ಸಂಗ್ರಹದಲ್ಲಿ ನೀಲಕಂಠ ಕವಿಯ ಬಯಲಾಟ ಪ್ರತಿಗಳ ಸಂಗ್ರಹವಿದೆ. ಕವಿಯು ತನ್ನ ಸ್ವಹಸ್ತಾಕ್ಷರದಿಂದ ಬರೆದ ಕೆಲವು ನಾಟಕಗಳ ವಿವರ ಹೀಗಿದೆ:

| | |
|---|---|
| ೧. ತಿರುನೀಲಕಂಠ | ೨. ಮಹಾದೇವಿಯಕ್ಕ |
| ೩. ಶ್ವೇತರಾಜ | ೪. ಪಂಚಾಕ್ಷರೀ ಮಹಾತ್ಮೆ |
| ೫. ದಾಸಾರ್ಯರಾಜನ ಚರಿತೆ | ೬. ಶ್ರೀನಿವಾಸ |
| ೭. ದೇವಸೇನ | ೮. ಚೂಡಾಲಿ |
| ೯. ತಿಲಕಾಂಬೆ | ೧೦. ವೀರಸಂಗಮಾರ್ಯ |
| ೧೧. ಗುರುಭಕ್ತಾಂಡಾರಿ | ೧೨. ನಿಜಗುಣ ಶಿವಯೋಗಿ |
| ೧೩. ಸೌಂದರನಂಬಿ | ೧೪. ಧರ್ಮಸಾಮ್ರಾಜ್ಯ |
| ೧೫. ಮೋನೇಶ್ವರ ಚರಿತೆ | ೧೬. ಕುಣಾಲನ ಚರಿತೆ |
| ೧೭. ಧ್ರುವ ಚರಿತೆ | ೧೮. ಭಕ್ತಕೋಶನ ಚರಿತೆ |
| ೧೯. ತಿಲಕಾಂಬೆ ಚರಿತೆ | ೨೦. ಸಾನಂದ ಋಷಿಯ ಚರಿತೆ |
| ೨೧. ಮಹಾನಂದೆಯ ಚರಿತೆ | ೨೨. ಮೇದಾರ ಕೇತಯ್ಯ |
| ೨೩. ಅದೃಶ್ಯಯ್ಯ ಚರಿತೆ | |

**ಭಾಳಂಭಟ್ಟ ಕವಿ :**

ಕಿತ್ತೂರು ಸಮೀಪದ ಗಂದಿಗವಾಡ ಗ್ರಾಮದ ಬಾಳಂಭಟ್ಟ ಮೂವತ್ತಕ್ಕೂ ಮಿಕ್ಕಿ ಬಯಲಾಟಗಳನ್ನು ಬರೆದ ವಿವರ ದೊರೆಯುತ್ತದೆ. ಆದರೆ ಕವಿಯ ವಂಶಜರು ಯಾರೂ ಗಂದಿಗವಾಡದಲ್ಲಿ ಈಗ ಇಲ್ಲ. ಅವರು ಬರೆದ ನಾಟಕಗಳನ್ನು ಇಂದಿಗೂ ಗಂದಿಗವಾಡ ಮತ್ತು ಸುತ್ತಮುತ್ತಲಿನ ಜನರು

ಆಡುತ್ತಾರೆ. ಕವಿ ಭಾಳಂಭಟ್ಟ ಬರೆದ ಸ್ವಹಸ್ತಾಕ್ಷರದ ಪ್ರತಿಗಳಲ್ಲದೆ, ತಾವು ಮತ್ತೆ ಪ್ರತಿ ಮಾಡಿಕೊಂಡ ಅನೇಕರು, ಕವಿಯ ಹೆಸರನ್ನು ತೆಗೆದು ಹಾಕಿ ತಮ್ಮ ಹೆಸರನ್ನು ನಮೂದಿಸಿಕೊಂಡಿದ್ದಾರೆ. ಇನ್ನಷ್ಟು ಕ್ಷೇತ್ರಕಾರ್ಯ ಮಾಡಿ ಕವಿಯ ಹಸ್ತಾಕ್ಷರದ ಹಸ್ತಪ್ರತಿಗಳನ್ನು ಹುಡುಕಿ ಪ್ರಕಟಿಸಬೇಕಾದ ಅವಶ್ಯಕತೆ ಇದೆ. ಲಿಂಗರಾಜ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಶಿವಾನಂದ ಮೂಲಿಮನಿ ಅವರು ಗಂದಿಗವಾಡ ಗ್ರಾಮದವರು. ಅವರು ಈ ಕವಿಯ ಕುರಿತು ವಿಶೇಷ ಆಸಕ್ತಿವಹಿಸಿ, ಹಸ್ತಪ್ರತಿಗಳನ್ನು ಹುಡುಕುವ ಪ್ರಯತ್ನ ನಡೆಸಿದ್ದಾರೆ. ಅವರ ಪ್ರಯತ್ನ ಯಶಸ್ವಿಯಾದರೆ, ಒಬ್ಬ ಮಹಾನ್ ಅಜ್ಞಾತ ಕವಿ ಬೆಳಕಿಗೆ ಬಂದಂತಾಗುವುದು. ಕವಿಯ ಕೃತಿಗಳ ವಿವರ ಹೀಗಿದೆ:

| | | | |
|---|---|---|---|
| ೧. | ತಾಮ್ರಧ್ವಜ | ೨. | ಲವ ಕುಶರ ಕಾಳಗ |
| ೩. | ಐರಾವಣ–ಮೈರಾವಣ | ೪. | ಲಂಕಾದಹನ |
| ೫. | ರಾವಣವಧೆ | ೬. | ವೀರ ಅಭಿಮನ್ಯು |
| ೭. | ಕರ್ಣಾರ್ಜುನರ ಕಾಳಗ | ೮. | ವಿರಾಟಪರ್ವ |
| ೯. | ಮಯೂರಧ್ವಜ | ೧೦. | ವಿಜಯನಗರ ಸಾಮ್ರಾಜ್ಯ |
| ೧೧. | ಸತ್ಯ ಹರಿಶ್ಚಂದ್ರ | ೧೨. | ಭಕ್ತ ಕಬೀರ |
| ೧೩. | ಸಿರಿಯಾಳ ಸತ್ವಪರೀಕ್ಷಾ | ೧೪. | ಮಾಧವ ಕರುಣಾ ವಿಲಾಸ |

ಮಾಧವ ಕರುಣಾವಿಲಾಸ ಎಂಬುದು ಗಳಗನಾಥರ ಕಾದಂಬರಿಯೊಂದನ್ನು ಓದಿ, ಬರೆದ ನಾಟಕವಾಗಿದೆ.

**ಕೃಷ್ಣ ಪಾಟೀಲ :**

ಕೃಷ್ಣಾ ಪಾಟೀಲ ಅವರು ಗೋಕಾಕ ತಾಲೂಕಿನ ಬೆಟಗೇರಿ ಗ್ರಾಮದವರು. ಕವಿಭೂಷಣ ಬೆಟಗೇರಿ ಕೃಷ್ಣಶರ್ಮರ ಸಹೋದರರು. ಅಲ್ಪಾವಧಿಯಲ್ಲಿ ತೀರಿಕೊಂಡರು. ಅವರು ಅನೇಕ ಕಥೆ–ಕಾದಂಬರಿಗಳನ್ನು ರಚಿಸಿದ್ದಾರೆ. ಅವರು ಬದುಕಿದ್ದಾಗ ಕೆಲವು ಕಾದಂಬರಿಗಳು ಪ್ರಕಟಗೊಂಡಿದ್ದವು. ಆದರೆ ಹಸ್ತಪ್ರತಿ ರೂಪದಲ್ಲಿರುವ ಅವರ ನಾಲ್ಕು ಕಾದಂಬರಿಗಳು ಇನ್ನೂ ಪ್ರಕಟವಾಗಬೇಕಾಗಿದೆ. ಅವು ಕೃಷ್ಣಾ ಪಾಟೀಲರ ಅವರ ಸ್ವಹಸ್ತಾಕ್ಷರದಿಂದಲೇ ಬರೆಯಲ್ಪಟ್ಟಿವೆ. ಈ ಕಾದಂಬರಿಯ ಹಸ್ತಪ್ರತಿಗಳನ್ನು ಕೃಷ್ಣಾ ಪಾಟೀಲ ಅವರ ಮಗಳು ಬೆಳಗಾವಿಯ ಜಯಶ್ರೀ ಭಾಗೋಜಿ ಅವರಿಗೆ ಕೊಟ್ಟಿದ್ದಾರೆ. ಜಯಶ್ರೀ ಭಾಗೋಜಿ ಅವರು ಬೆಳಗಾವಿಯ ಖ್ಯಾತಸಾಹಿತಿ ವಿದ್ವಾಂಸ ಪ್ರಲ್ಹಾದಕುಮಾರ ಭಾಗೋಜಿ ಅವರ ಮಗಳು. ಕೃಷ್ಣಾ ಪಾಟೀಲ ಅವರ ಸ್ವಹಸ್ತಾಕ್ಷರದ ಅಪ್ರಕಟಿತ ಕಾದಂಬರಿಗಳೆಂದರೆ.

೧. ನೆಲದ ಸಾಲ

೨. ವೈಷ್ಣವ ಜನ ಹೊ

೩. ಪಾಲಾಪೂ

೪. ಲಕ್ಷ್ಮೀ

**ರವೀಂದ್ರ ತೋಟಗೇರ :**

ಬೆಳಗಾವಿಯ ನ್ಯಾಯವಾದಿಗಳಾದ ರವೀಂದ್ರ ತೋಟಗೇರ ಅವರು ಬೆಳಗಾವಿ ಅಚ್ಚಗನ್ನಡದ ಪ್ರದೇಶವೆಂದು ಸಿದ್ಧಪಡಿಸಿಲು ಸಂಗ್ರಹಿಸಿದ ಹತ್ತುಸಾವಿರ ದಾಖಲೆಗಳ ಸಂಗ್ರಹ ಅತ್ಯಂತ ಮಹತ್ವದ್ದಾಗಿದೆ. ಗಡಿವಿವಾದ ಇಂದು ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲೇರಿದೆ. ಕೇಂದ್ರ ಸರಕಾರ ಈ ವಿಷಯದಲ್ಲಿ ಹಿಂದೆ ನೆಹರು ಕಮಿಶನ್, ಜೆ.ವಿ.ಪಿ. ವರದಿ, ಮಿಶ್ರಾ ವರದಿ, ಧರ ಆಯೋಗ, ಫಜಲಅಲಿ ಆಯೋಗ, ಏಕಸದಸ್ಯ ಆಯೋಗ ಮುಂತಾದ ಆಯೋಗಗಳನ್ನು ನೇಮಿಸಿತು. ಇದು ಮಹಾರಾಷ್ಟ್ರದ ಜನತೆಗೆ ಸರಿ ಬರಲಿಲ್ಲ. ಕೊನೆಗೆ ಮಹಾರಾಷ್ಟ್ರದ ವಾದಕ್ಕೆ ಮಣಿದು ಮೆಹರಚಂದ ಮಹಾಜನ ಅವರ ಏಕಸದಸ್ಯ ಆಯೋಗವೊಂದನ್ನು ನಿಯಮಿಸಿತು. ಮಹಾಜನರು ಬೆಳಗಾವಿ ಗಡಿ ಪ್ರದೇಶವನ್ನು ಸೂಕ್ಷ್ಮವಾಗಿ ಪರಿಶೀಲಿಸಿ 'ಬೆಳಗಾವಿ ಕರ್ನಾಟಕದ ಅವಿಭಾಜ್ಯ ಅಂಗ'ವೆಂದು ತಮ್ಮ ವರದಿಯಲ್ಲಿ ದಾಖಲಿಸಿದರು. ಆದರೆ, ಮಹಾಜನ ವರದಿ ಅಂಗೀಕಾರವಾಗಲೇ ಇಲ್ಲ. ಮಹಾರಾಷ್ಟ್ರದವರು ಗಡಿವಿವಾದವನ್ನು ಸರ್ವೋಚ್ಚ ನ್ಯಾಯಾಲಯಕ್ಕೆ ಒಯ್ದು ದಾವೆ ಹೂಡಿದ್ದಾರೆ. ಈ ಸಂದರ್ಭದಲ್ಲಿ ಮುಂಬೈ ಹೈಕೋರ್ಟಿನ ಮೂರು ಅಚ್ಚಕನ್ನಡದಲ್ಲಿರುವ ನೋಟಿಸ್ ಪ್ರತಿಗಳನ್ನು ಅಪ್ಪಾಸಾಹೇಬ ಸುಬೇದಾರ ಮತ್ತು ಶ್ರೀಶೈಲ ಕುಪಾಟಿ ಅವರಿಂದ ಸಂಗ್ರಹಿಸಿದ ರವೀಂದ್ರ ಅವರು ನ್ಯಾಯಾಲಯಕ್ಕೆ ಸಲ್ಲಿಸಿದ್ದಾರೆ.

ರವೀಂದ್ರ ಅವರು ಈ ವಿಷಯವಾಗಿ ತುಂಬಾ ಆಸಕ್ತಿ ವಹಿಸಿ ಸಾಕ್ಷಿಗಳನ್ನು ಸಂಗ್ರಹಿಸುವಾಗ ಅಪೂರ್ವ ದಾಖಲೆಗಳು ದೊರೆತವು. ಇಂಗ್ಲೆಂಡ್ ರಾಣಿ ಕಳಿಸಿದ ಅಚ್ಚಕನ್ನಡದ ಆಹ್ವಾನ ಪತ್ರ ಮತ್ತು ಆಭಾರ ಮನ್ನಣೆ ಪತ್ರ, ಪೋಲಿಸ್ ನೇಮಕಾತಿ ಪತ್ರಗಳು, ವಿದ್ಯಾಖಾತೆಯ (ಶಿಕ್ಷಣ ಇಲಾಖೆ) ಮುಂಬೈ ನೀಡಿರುವ ಅಚ್ಚಕನ್ನಡದ ಪ್ರಮಾಣ ಪತ್ರಗಳು, ಕಂದಾಯ ಇಲಾಖೆಯ ಪಹಣಿ ಪತ್ರಿಕೆಗಳು, ಹಕ್ಕು ಪತ್ರಿಕೆಗಳು, ಉಪ ನೋಂದಣಾಧಿಕಾರಿಯ ಕಚೇರಿಯಲ್ಲಿಯ ಕ್ರಯಪತ್ರಗಳು, ಭಕ್ಷೀಸ ಪತ್ರಗಳು, ಲೀಲಾವ ಪತ್ರಗಳು ಹೀಗೆ ವೈವಿಧ್ಯಮಯವಾಗಿರುವ ಹತ್ತು ಸಾವಿರ ದಾಖಲೆಗಳನ್ನು ಸಂಗ್ರಹಿಸಿ ಸರ್ಕಾರದ ಗಮನ ಸೆಳೆದಿದ್ದಾರೆ. ಇವರು ೧೮೩೦ರಿಂದ ೧೯೫೬ರವರೆಗಿನ ಸುಮಾರು ಹತ್ತುಸಾವಿರ ಇಂಥ ದಾಖಲೆಗಳನ್ನು ಸಂಗ್ರಹಿಸಿದ್ದು ಒಂದು ಅಪೂರ್ವ ಕಾರ್ಯವೆಂದೇ ಹೇಳಬೇಕು. ಸರಕಾರದ ಮತ್ತು ನ್ಯಾಯಾಲಯದಲ್ಲಿ ಇಲ್ಲದ ಸಾವಿರಾರು ಹೊಸದಾಖಲೆಗಳನ್ನು ಮೊದಲ ಬಾರಿಗೆ ನೀಡಿದ ಕೀರ್ತಿ ರವೀಂದ್ರ ಅವರದು. ಅವರ ಸಂಗ್ರಹ ಕಾರ್ಯದ ಸಂದರ್ಭದಲ್ಲಿ ನಾನೂ ಕ್ಷೇತ್ರಕಾರ್ಯ ಮಾಡುತ್ತಿದ್ದೆ. ನನಗೆ ಸಿಕ್ಕ ದಾಖಲೆಗಳನ್ನು ಅವರಿಗೆ, ಅವರಿಗೆ ಸಿಕ್ಕ ದಾಖಲೆಗಳನ್ನು ನನಗೆ ವಿನಿಮಯ ಮಾಡಿಕೊಳ್ಳುತ್ತಿದ್ದೆವು.

ಹೀಗೆ ಅನೇಕ ಸಂಗ್ರಹಕಾರರಿಂದ ಬಹಳಷ್ಟು ಹಸ್ತಪ್ರತಿಗಳು ಉಳಿದು ಬಂದಿವೆ. ಆದರೆ ಅಷ್ಟೇ ಪ್ರಮಾಣದಲ್ಲಿ ಹಾಳು ಆಗಿರುವುದನ್ನು ಮತ್ತು ಹಸ್ತಪ್ರತಿಗಳ ನಾಶಗೊಂಡು ಹುಳುಗಳ ಬಾಯಿಗೆ ಆಹಾರವಾಗಿರುವುದನ್ನು ಕಾಣುತ್ತೇವೆ.

ಹಸ್ತಪ್ರತಿಗಳ ನಾಶಕ್ಕೆ ಬಹುಮುಖ್ಯ ಕಾರಣಗಳನ್ನು ಎಚ್. ದೇವೀರಪ್ಪನವರು ತಮ್ಮ 'ಹಸ್ತಪ್ರತಿಗಳ ಇತಿಹಾಸ' ಕೃತಿಯಲ್ಲಿ ಹೀಗೆ ವಿವರಿಸಿದ್ದಾರೆ:

೧. ಕೈಬರಹಗಳನ್ನಿಟ್ಟುಕೊಂಡಿರುವ ಅನೇಕ ಸಂಸ್ಥೆಗಳು ಅಥವಾ ವ್ಯಕ್ತಿಗಳು ಸಂರಕ್ಷಣೆ ಮಾಡದಿರುವುದು

೨. ಕೆಲವು ಹಸ್ತಪ್ರತಿಗಳು ಇದ್ದಲ್ಲಿಯೇ ಜೀರ್ಣಗೊಂಡು ನಾಶಗೊಂಡು ಹೋಗಿವೆ.

೩. ಪಂಡಿತಾರಾದಿಯಾಗಿ ಕೆಲವರು ಹಸ್ತಪ್ರತಿಗಳನ್ನು ಹೊಳೆ ಹಳ್ಳ ನದಿಗಳಲ್ಲಿ ಎಸೆದಿರುವುದು

೪. ತಿಳಿದೋ ಅಥವಾ ತಿಳಿಯದೆಯೋ ಹಸ್ತಪ್ರತಿ ಕಟ್ಟುಗಳ ಮೇಲೆ ನೀರು ಕುಂಕುಮ ವಿಭೂತಿಯನ್ನು ಹಚ್ಚಿರುವುದು.

೫. ಅಣ್ಣ ತಮ್ಮಂದಿರು ಪಿತ್ರಾರ್ಜಿತ ಆಸ್ತಿ ಎಂಬಂತೆ ಹಸ್ತಪ್ರತಿಗಳನ್ನು ಹಂಚಿಕೊಂಡಿರುವುದು.

೬. ಪೆಟ್ಟಿಗೆ–ಸಂದೂಕ–ಕಪಾಟುಗಳಲ್ಲಿದ್ದ ಹಸ್ತಪ್ರತಿಗಳನ್ನು ಹೊರತೆಗೆಯದಿರುವುದು.

೭. ಓಲೆ ಕಟ್ಟುಗಳನ್ನು ಉರಿ ಹಚ್ಚಲು ಒಲೆಗೆ ಬಳಸಿಕೊಂಡಿರುವುದು.

೮. ಭಾಷೆಯ ತಿಳುವಳಿಕೆಯ ಕೊರತೆಯಿಂದಾಗಿ ಅನೇಕ ಹಸ್ತಪ್ರತಿಗಳು ನೇಪಥ್ಯಕ್ಕೆ ಸರಿದುದು.

೯. ಓದಲು ಬಾರದವರು ಹಸ್ತಪ್ರತಿಗಳನ್ನು ಗೌಪ್ಯವಾಗಿ ತಮ್ಮಲ್ಲಿಯೇ ಇಟ್ಟುಕೊಂಡಿರುವುದು.

"ಕನ್ನಡ ನಾಡಿನ ಸಾಂಸ್ಕೃತಿಕ ಸಂಪತ್ತು, ಭರತಖಂಡದ ಇತರ ಪ್ರಾಂತಗಳ ಪ್ರಾಚ್ಯ ಸಂಪತ್ತಿನಂತೆಯೇ ಕಾಲಕಾಲಕ್ಕೆ ಬೆಳೆಯುತ್ತ, ಕಾರಣಾಂತರಗಳಿಂದ ಭಾಗಶಃ ಅಳಿಯುತ್ತ ಮತ್ತೆ ಚೇತರಿಸಿಕೊಳ್ಳುತ್ತ ಬಂದಿರುತ್ತದೆ. ಇದು ಇನ್ನೂ ಜೀವಂತವಾಗಿದೆ. ಮುಂದೆಯೂ ಬದುಕಿ ಬೆಳೆಯಬಲ್ಲದು ಎಂಬುದಕ್ಕೆ ಈಗಲೂ ಉಪಲಬ್ಧವಿರುವ ಗ್ರಂಥ ಸಂಪತ್ತೇ ಸಾಕ್ಷಿ ಹೇಳುತ್ತದೆ. ಆದರೆ ಗಾತ್ರದ ದೃಷ್ಟಿಯಿಂದ ನೋಡಿದಾಗ ಉಳಿದಿರುವುದಕ್ಕಿಂತ ಅಳಿದಿರುವುದೇ ಹೆಚ್ಚೋ ಏನೋ' ಎಂದು ತಮ್ಮ ನೋವನ್ನು ತೋಡಿಕೊಂಡಿದ್ದಾರೆ."[೬]

ಖ್ಯಾತ ವಿದ್ವಾಂಸರಾದ ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಹಸ್ತಪ್ರತಿಗಳು ಹಾಳಾಗಲು ಇನ್ನೂ ಮಹತ್ವದ ಕಾರಣಗಳನ್ನು ಹೇಳುತ್ತಾರೆ: "ಪೂರ್ವ ಚರಿತ್ರೆ, ಚಾರಿತ್ರಿಕ ಪ್ರಾಮುಖ್ಯದ ಸಂಗತಿಗಳಲ್ಲಿ ನಮ್ಮ ಜನಕ್ಕೆ ಒಲವಿಲ್ಲ. ಕಿಟ್ಟೆಲ್, ರೈಸ್, ಫ್ಲೀಟ್, ಮೆಕೆಂಜಿ ಮೊದಲಾದವರು ನಮಗಾಗಿ ಕೆಲಸ ಮಾಡಿದರು. ನಮ್ಮ ಜನ ಹಸ್ತಪ್ರತಿಗಳನ್ನು ನಿರರ್ಥಕ ವಸ್ತುಗಳೆಂದು ಚೀಲದಲ್ಲಿ ಕಟ್ಟಿ ಅಟ್ಟಕ್ಕೆ ಹಾಕಿರುವುದುಂಟು; ತಿಪ್ಪೆಯಾಗಿ ಕಸದ ತೊಟ್ಟಿಗೆ, ಕಟ್ಟಿಗೆಯಾಗಿ ಉರಿಯುವ ಒಲೆಗೆ ಹಾಕಿರುವುದೂ ಉಂಟು. ಹಳೆಯ ಪೀಳಿಗೆಯವರು ಸರಸ್ವತಿಯ ಪ್ರತಿರೂಪವಾಗಿ ಕಂಡು ಉಪಾಸಿಸುತ್ತಿದ್ದ

ಹಸ್ತಪ್ರತಿಗಳನ್ನು ವಿದ್ಯಾವಂತ ಮಕ್ಕಳೇ ಅಲಕ್ಷಿಸಿದ್ದಾರೆ. ಪ್ರಾಚೀನ ಹಸ್ತಪ್ರತಿಗಳು ಪವಿತ್ರವಾದವೆಂದೂ ಅವನ್ನು ಆಸ್ತಿಕರಲ್ಲ ಆಧುನಿಕರು ಮುಟ್ಟಿ ಮೈಲಿಗೆ ಮಾಡಬಾರದೆಂದೂ ನಂಬಿ ತಾನು ಸತ್ತ ನಂತರ ಅವನು ತೇಲಿಬಿಡಬೇಕೆಂದು ಉಯಿಲು ಬರೆದು ಸತ್ತ.....ಹಸ್ತಪ್ರತಿಗಳು ಹಾಳಾಗಿ ಜ್ಞಾನಸಂಪತ್ತು ಕರಗಿ ಹೋಗಲು ಬೇರೆ ಕಾರಣಗಳೂ ಇವೆ. ಭರತಪುರದ ಮಹಾರಾಜನ ಅರಮನೆಯನ್ನು ಲೂಟಿ ಮಾಡುವಾಗ ಅಲ್ಲಿ ದೊರೆತ ಗ್ರಂಥ ಭಂಡಾರದ ಹಸ್ತಪ್ರತಿಗಳನ್ನು ಸೇನಾಪತಿಯೊಬ್ಬ ಆಂಗ್ಲದೇಶಕ್ಕೆ ಕಳಿಸಿದ ವಿಚಾರ ಲಂಡನ್ನಿನ ರಾಯಲ್ ಏಷಿಯಾಟಿಕ್ ಸೊಸೈಟಿಯಲ್ಲಿ ದೊರೆತ ಪತ್ರವೊಂದರಿಂದ ತಿಳಿಯುತ್ತದೆ. ಮತಾಂಧತೆ ಇನ್ನೊಂದು ಕಾರಣ. ಬಿಹಾರದ ಪಾಟ್ನ ರಾಜಗಿರ್ ಬಾರಗಾಂವ್‌ಗಳ ನಡುವೆ ಒಂದು ಕಾಲಕ್ಕೆ ಹಬ್ಬಿದ್ದ ನಾಲಂದ ವಿದ್ಯಾಪೀಠದ ಪ್ರಾಚ್ಯವಿದ್ಯಾ ಕೇಂದ್ರ ಕ್ರಿ.ಶ. ೧೨–೧೩ನೆಯ ಶತಮಾನಗಳಲ್ಲಿ ಮತಾಂಧ ಮುಸ್ಲಿಂ ದೊರೆಗಳ ವಿಧ್ವಂಸನ ಕಾರ್ಯಗಳಿಂದ ಸಂಪೂರ್ಣವಾಗಿ ನಾಶವಾದಾಗ ಅಪಾರವಾಗಿ ಹಸ್ತಪ್ರತಿಗಳು ನಾಶವಾದವು. ದಾಳಿಕಾರರು ಅಲ್ಲಿಯ ಮನೆಗಳನ್ನೂ ಮಠಗಳನ್ನೂ ಸುಟ್ಟು ಹಾಕಿದ್ದು ಮಾತ್ರವಲ್ಲದೆ, ವಿದ್ಯಾರ್ಥಿಗಳನ್ನೂ ಅಧ್ಯಾಪಕರನ್ನೂ ಕಡಿದು ಹಾಕಿದರೆಂದು ತಿಳಿಯುವುದು. ಹಾಗೆಯೇ ದಕ್ಷಿಣದಲ್ಲಿ, ಮೈಸೂರು ಒಡೆಯರು ಬೆಳೆಸಿದ್ದ ಸರಸ್ವತಿ ಭಂಡಾರದ ಬಹುಪಾಲು ಹಸ್ತಪ್ರತಿಗಳೂ ಕಡತಗಳು ಟಿಪ್ಪುಸುಲ್ತಾನನ ಆದೇಶದಂತೆ ಅರಮನೆಯ ಕುದುರೆಯ ಲಾಯಕ್ಕೆ ಒಯ್ಯಲ್ಪಟ್ಟು ಅಲ್ಲಿ ಕುದುರೆಗಳಿಗೆ ಹುರುಳಿ ಬೇಯಿಸಲು ಬೇಕಾಗುವ ಕಟ್ಟಿಗೆಗಳಾದವು ಎಂದೂ ತಿಳಿಯುವುದು.”೭

ಹಸ್ತಪ್ರತಿಗಳು ಹಾಳಾಗಲು ರಾಜಕೀಯ ಮತ್ತು ಮತೀಯ ಕಾರಣಗಳು ಮುಖ್ಯವಾಗಿವೆ. ರಾಜ ಮಹಾರಾಜರ ಮತಾಂಧ ಮನಸ್ಥಿತಿ ಕಾರಣವಾಗಿ ತನ್ನದಲ್ಲದ ಬೇರೆ ಧರ್ಮೀಯರ ಗ್ರಂಥಗಳನ್ನು ನಾಶ ಮಾಡಿದ ಉದಾಹರಣೆಗಳು ಸಾಕಷ್ಟಿವೆ. ಮೈಸೂರಿನ ಚಿಕ್ಕದೇವರಾಯನ (ಕ್ರಿ.ಶ. ೧೬೭೨–೧೭೦೪) ಕಾಲದಲ್ಲಿ ನಂಜನಗೂಡಿನಲ್ಲಿ ೪೦೦ ಜನ ಮಠಾಧೀಶರನ್ನು ಹತ್ಯೆಗೈದು ೭೦೦ ಮಠಗಳನ್ನು ಒಂದೇ ದಿನ ಸುಟ್ಟು ಹಾಕಿದರು. ಆ ವಿರಕ್ತ ಮಠಾಧೀಶರನ್ನು ಕೊಲ್ಲಲು ಮುಖ್ಯ ಕಾರಣವೆಂದರೆ, ವೈಷ್ಣವ ಮತಾಂಧರು ಚಿಕ್ಕದೇವರಾಯನಿಗೆ ಚಾಡಿ ಹೇಳಿದ್ದು– ‘ಈ ಜಂಗಮರು ೧೨ನೇ ಶತಮಾನದ ಬಸವಣ್ಣನವರ ಮತ್ತು ಶರಣರ ವಚನಗಳನ್ನು ಪ್ರಸಾರ ಮಾಡುತ್ತಿದ್ದಾರೆ. ಆ ಕಾಲದಲ್ಲಿಯೇ ವಚನಗಳು ಕಲಚೂರಿ ರಾಜ ಪ್ರಭುತ್ವಕ್ಕೆ ಮಾರಕವಾಗಿ, ಬಿಜ್ಜಳನ ಕೊಲೆಯಲ್ಲಿ ಸಮಾಪ್ತಿಯಾಗಿತ್ತು. ವಚನಗಳು ಪ್ರಭುತ್ವಕ್ಕೆ ವಿರೋಧವಾಗಿವೆ. ಆದ್ದರಿಂದ ಈ ವಚನಗಳ ಪ್ರಸಾರದಿಂದ ನಿಮ್ಮ ಸಿಂಹಾಸನಕ್ಕೆ ಧಕ್ಕೆ ಬರುತ್ತದೆ’ ಎಂಬ ಚಾಡಿ ಮಾತು ಕೇಳಿ, ವಚನ ಕಟ್ಟುಗಳನ್ನು ಮನೆ ಮನೆಗೆ ಪ್ರಸಾರ ಮಾಡುತ್ತಿದ್ದ ೪೦೦ ಜನ ವಿರಕ್ತ ಜಂಗಮರನ್ನು ಒಂದೇ ದಿನ ಕೊಂದು ಹಾಕಿದ್ದು ಇತಿಹಾಸದಲ್ಲಿ ನಡೆದ ಘೋರ ದುರಂತವೆಂದೇ ಹೇಳಬೇಕು.

“ಇಕ್ಕೇರಿಯ ಅರಸರಿಗೂ ರಂಭಾಪುರಿ ಪೀಠದ ಸ್ವಾಮಿಗಳಿಗೂ ಜಗಳವಾದ ಕಾರಣವಾಗಿ, ಇಕ್ಕೇರಿ ಅರಸ ತನ್ನ ಪ್ರಭುತ್ವವನ್ನು ದುರುಪಯೋಗಪಡಿಸಿಕೊಂಡು ಮಠದಲ್ಲಿದ್ದ ಗ್ರಂಥಭಂಡಾರವನ್ನು ಸುಟ್ಟು ಹಾಕಿದ ಎಂಬುದನ್ನು ಇತಿಹಾಸದಲ್ಲಿ ಓದುತ್ತೇವೆ.”೮

ಹೀಗೆ ಅನೇಕ ಕಾರಣಗಳಿಂದ ಹಸ್ತಪ್ರತಿಗಳು ನಾಶವಾಗಿವೆ. ಮತೀಯ ಸಾಹಿತ್ಯದ ಬಗೆಗಿನ ವಿಪರೀತ ವ್ಯಾಮೋಹ, ಪರಧರ್ಮ ದ್ವೇಷ ಕಾರಣವಾಗಿಯೂ ಸಾಹಿತ್ಯ ರಚನಾಕಾರರಿಂದಲೂ ಹಸ್ತಪ್ರತಿಗಳ ನಾಶಕಾರ್ಯ ನಿರಂತರವಾಗಿ ನಡೆದಿದೆ. ಈ ವಿಷಯವನ್ನು ಕೆ. ರವೀಂದ್ರನಾಥ ಅವರು ಹೀಗೆ ವಿವರಿಸಿದ್ದಾರೆ:

"ಧರ್ಮ 'ಮತವಾಗಿ' ಪರಿಣಮಿಸಿ ಮತೀಯ ಸಂಘರ್ಷಕ್ಕೆ ಕಾರಣವಾಗಿದೆ. ಇಂಥ ಮತೀಯ ಸಂಘರ್ಷ ಘಟಿಸಿದಾಗಲೆಲ್ಲ ಹಸ್ತಪ್ರತಿಗಳು ನಾಶಹೊಂದಿರಬಹುದು. ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದ ಜೈನ, ಬೌದ್ಧ, ಶೈವ, ಲಿಂಗಾಯತ, ವೈಷ್ಣವ ಮತಗಳಿಗೆ ಈ ಮಾತು ಅನ್ವಯಿಸುತ್ತದೆ. ಕನ್ನಡ ಮತೀಯ ಕಾವ್ಯಗಳ ಹೊಗಳಿಕೆ–ತೆಗಳಿಕೆಗಳ ಸಂದರ್ಭಗಳು ಒಂದು ಹಸ್ತಪ್ರತಿಯ 'ಅಗ್ನಿದಿವ್ಯ'ವನ್ನು ಚಿತ್ರಿಸುವ ಕಥಾನಕಗಳಾಗಿವೆ. ಮಹಾಭಾರತವನ್ನು ಹಿಂದಿಟ್ಟು ಪ್ರೌಢದೇವರಾಯನ ಆಸ್ಥಾನದಲ್ಲಿ ಪ್ರಭುಲಿಂಗಲೀಲೆಗೆ ಸಂದಿದ 'ಕನಕಸ್ನಾನ' ಗೌರವ, ಹರಿಹರನ ರಗಳೆಯಲ್ಲಿ ವರ್ಣಿತವಾದ ತೆಲುಗು ಬೊಮ್ಮಯ್ಯ ರಗಳೆಯ ವೈಷ್ಣವ ಪುರಾಣ ಪಠಣದ ಪುರಾಣ ಭಟ್ಟನ ಹತ್ಯೆ ಪ್ರಸಂಗ, ವರದಾನಿ ರಾಮಯ್ಯನೆದುರು ಬಸವ ಪುರಾಣವನ್ನು ಎತ್ತಿನ ಪುರಾಣವೆಂದು ಟೀಕಿಸಿದ ಹಿನ್ನೆಲೆಯಲ್ಲಿ ಬೆಂಕಿಯಲ್ಲಿ ಹಾಕಿದಾಗ ಸುಡಲಾರದೆ ಕಂಗೊಳಿಸಿದ ಸಂದರ್ಭ. ಕಾದಂಬರಿಯನ್ನು ಸುಡಿಸಿ ಲೀಲಾವತಿಗೆ ಕಪ್ಪನಿಟ್ಟ ಪ್ರಸಂಗಗಳು ಸಾವಿರಾರು ಹಸ್ತಪ್ರತಿಗಳು ಮತೀಯ ಭ್ರಮೆಯಲ್ಲಿ ನಲುಗಿ ಹಾಳಾದ ಸತ್ಯ ಸಂಗತಿಗಳಿಗೆ ದ್ಯೋತಕವಾಗಿವೆ. ಈ ಮೇಲಿನ ಅನಿರೀಕ್ಷಿತ ಘಟನೆಗಳಂಥ ಮಾನವನ ಆಲಸ್ಯ, ಅಜ್ಞಾನದ ಫಲವಾಗಿ ಘಟಿಸಿದ ನಿರೀಕ್ಷಿತ ಆಪತ್ತುಗಳು ಹಸ್ತಪ್ರತಿಗಳ ನಾಶಕ್ಕೆ ತುಂಬಲಾರದಷ್ಟು ಹಾನಿ ಮಾಡಿವೆ."[೯]

ಬೆಳಗಾವಿ ಪರಿಸರದ ಹಸ್ತಪ್ರತಿಗಳ ಸ್ಥಿತಿಯೂ ಮೇಲೆ ವಿವರಿಸಿದ ಕಾರಣಗಳಿಂದಲೆ ಬಹಳಷ್ಟು ನಾಶವಾಗಿ ಹೋಗಿವೆ ಎಂದು ಹೇಳಬಹುದು. ನಾನು ಹುಕ್ಕೇರಿ ತಾಲೂಕಿನ ಉಳ್ಳಾಗಡ್ಡಿ ಖಾನಾಪುರದಲ್ಲಿ ಕ್ಷೇತ್ರಕಾರ್ಯ ಮಾಡುವ ಕಾಲಕ್ಕೆ ಅಲ್ಲಿಯ ಸಿದ್ಧಲಿಂಗಯ್ಯ ಹೊಳಿಮಠ ಅವರು ಒಂದು ವಿಷಯವನ್ನು ತಿಳಿಸಿದರು. ಅವರಲ್ಲಿ ಅನೇಕ ಹಸ್ತಪ್ರತಿ ಕಟ್ಟುಗಳಿದ್ದವು. ಅವರ ತಾಯಿ ಅವುಗಳನ್ನು ಕೆಂಪು ಅರಿವೆಯಲ್ಲಿ ಸುತ್ತಿ ಸಂದುಕದಲ್ಲಿ ಮುಚ್ಚಿಡುತ್ತಿದ್ದರು. ದಸರಾ ಹಬ್ಬದ ಸಂದರ್ಭದಲ್ಲಿ ಖಂಡೇ ಪೂಜೆ ಮಾಡುವ ದಿನ ಅವುಗಳನ್ನು ಹೊರಗೆ ತೆಗೆದು, ಆಯುಧಗಳ ಪೂಜೆಯೊಂದಿಗೆ ಈ ಹಸ್ತಪ್ರತಿಗಳನ್ನು ಇಟ್ಟು ಪೂಜೆ ಮಾಡುತ್ತಿದ್ದರು. ಮರುದಿನ ಮತ್ತೆ ಅವುಗಳನ್ನು ಸಂದುಕದಲ್ಲಿಟ್ಟು ಭದ್ರವಾಗಿ ಕೀಲಿಹಾಕಿ ಬಿಡುತ್ತಿದ್ದರು. ಇದರ ಪರಿಣಾಮವಾಗಿ ಸಿಲ್ವರ್ ಫೀಶ್‌ಗಳಾಗಿ ಹಸ್ತಪ್ರತಿಗಳನ್ನು ನಿಧಾನವಾಗಿ ಹಾಳುಮಾಡುತ್ತ ಬಂದಿದ್ದವು. ವಯೋಸಹಜ ಕಾರಣದಿಂದ ಅವರ ತಾಯಿ ನಿಧನರಾದರು. ನಂತರ ಸಿದ್ಧಲಿಂಗಯ್ಯ ಹೊಳಿಮಠ ಅವರು ಸ್ವಲ್ಪ ವೈಚಾರಿಕ ಮನೋಭಾವದವರು. ಆ ಸಂದುಕದಲ್ಲಿದ್ದ ಎಲ್ಲ ಹಸ್ತಪ್ರತಿಗಳನ್ನು ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ ನಿರ್ದೇಶಕರಾದ ಎಸ್.ಆರ್. ಗುಂಜಾಳ ಅವರಿಗೆ ತಂದು

ಒಪ್ಪಿಸಿದರು. ಅವರ ಸಂಗ್ರಹದಲ್ಲಿ 'ಬೋಳಬಸವೇಶ್ವರ ದೇವರು ಸಂಕಲಿಸಿದ ೧೦೦೮ವಚನಗಳು' ಎಂಬ ಕಟ್ಟು ಖ್ಯಾತ ಹಸ್ತಪ್ರತಿ ತಜ್ಞ ಎಸ್. ಶಿವಣ್ಣನವರ ಗಮನ ಸೆಳೆಯಿತು. ಈ ಕಟ್ಟಿನಲ್ಲಿ ಶರಣ ಅಜಗಣ್ಣನ ೧೦ ವಚನಗಳು ಇರುವುದನ್ನು ಗಮನಿಸಿ, ಇವು ಹೊಸ ವಚನಗಳೆಂದು ಪ್ರತಿಮಾಡಿಕೊಂಡು ಹೋದರು.

ಬೆಳಗಾವಿ ನಾಗನೂರು ಸ್ವಾಮಿಗಳ ಪ್ರಸಾದ ನಿಲಯದ ವ್ಯವಸ್ಥಾಪಕರಾಗಿದ್ದ ಸೊಲಬಯ್ಯನವರು ಎಂಬುವರ ಮೂಲ ಊರು ಘೋಡಗೇರಿ ಹತ್ತಿರ ಶಿವಾಪುರ. ಅವರ ಮನೆಯಲ್ಲಿ ಅನೇಕ ಹಸ್ತಪ್ರತಿಗಳು ಇದ್ದವು. ಅವರು ಬೆಳಗಾವಿಯಲ್ಲಿದ್ದ ಕಾರಣ, ಆ ಹಸ್ತಪ್ರತಿಗಳನ್ನು ಯಾರೂ ನೋಡಿಕೊಳ್ಳುವರು ಇಲ್ಲದೆ ನಾಶವಾಗಿ ಹೋದವು. ಎಸ್. ಆರ್. ಗುಂಜಾಳ ಅವರು ಈ ಮನೆಗೆ ಭೇಟಿಕೊಟ್ಟ ಸಂದರ್ಭದಲ್ಲಿ ಅಲ್ಲಿಯ ಹಸ್ತಪ್ರತಿಗಳೆಲ್ಲ ಗೆದ್ದಲಿಗೆ ಆಹಾರವಾಗಿರುವುದನ್ನು ಕಂಡು ಅವರು ತುಂಬಾ ನೊಂದುಕೊಂಡರು. ಈ ವಿಷಯವನ್ನು ನನಗೆ ಸಂದರ್ಶನ ಕಾಲದಲ್ಲಿ ಗುಂಜಾಳ ಅವರು ನೆನಪಿಸಿಕೊಂಡರು.

ನಿಡಸೋಸಿ ಗ್ರಾಮದ ಒಬ್ಬ ಲಿಂಗಾಯತ ವ್ಯಕ್ತಿಯ ಮನೆಯಲ್ಲಿ ನಿತ್ಯ ಜಗುಲಿ ಮೇಲೆ ಹಸ್ತಪ್ರತಿಯನ್ನು ಪೂಜೆ ಮಾಡುತ್ತಿದ್ದರು. ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಆ ಮನೆಗೆ ಭೇಟಿಕೊಟ್ಟೆ. ಆದರೆ ಅವರು ಆ ಹಸ್ತಪ್ರತಿಯನ್ನು ಅವಲೋಕಿಸಲು ಅವಕಾಶ ಕಲ್ಪಿಸಲಿಲ್ಲ. ಇದು ನಮ್ಮ ಮನೆತನದ ಭಾಗ್ಯ. ನಾನು ಈ ಕಟ್ಟನ್ನು ಬಿಚ್ಚಿದರೆ, ನಮ್ಮ ವಂಶಕ್ಕೆ ಒಳ್ಳೆಯದಾಗುವುದಿಲ್ಲವೆಂದು ನಿರಾಕರಿಸಿದರು. ಅಜ್ಞಾನ ಮೂಢನಂಬಿಕೆ ತುಂಬಿರುವ ಇಂಥ ಮನಸ್ಥಿತಿಯ ಜನರ ಕಾರಣವಾಗಿಯೇ ನಮ್ಮ ಬಹುತೇಕ ಹಸ್ತಪ್ರತಿ ಸಂಪತ್ತು ನಾಶವಾಗಿದೆ ಎಂದು ಹೇಳಬಹುದು.

ನಾನು ೨೦೧೪ರಲ್ಲಿ ಕ್ಷೇತ್ರಕಾರ್ಯ ಮಾಡುತ್ತ ಸಂಚರಿಸುತ್ತಿದ್ದ ಸಂದರ್ಭದಲ್ಲಿ ಲೋಕಸಭಾ ಚುನಾವಣೆ ನಿಮಿತ್ಯ ಅಲ್ಲಲ್ಲಿ ಪೋಲಿಸ್ ಚೆಕ್‌ಪೋಸ್ಟ್ ನಿರ್ಮಿಸಿದ್ದರು. ಕೊಲ್ಲಾಪುರದಿಂದ ಇಬ್ಬರು ಅಪರಿಚಿತ ವ್ಯಕ್ತಿಗಳು ಒಂದು ಪ್ರಾಚೀನ ತಾಡೋಲೆ ಪ್ರತಿಯನ್ನು ತೆಗೆದುಕೊಂಡು ಬರುತ್ತಿದ್ದರು. ಪೋಲಿಸರು ಆ ತಾಡೋಲೆ ಪ್ರತಿಯನ್ನು ವಶಪಡಿಸಿಕೊಂಡರು. ಬೆಳಗಾವಿ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾಗಿದ್ದ ಸಂದೀಪ ಪಾಟೀಲರು ಈ ತಾಡೋಲೆ ಪ್ರತಿಯನ್ನು ಬೆಳಗಾವಿ ಖ್ಯಾತ ಕವಿಗಳಾದ ಸರಜೂ ಕಾಟ್ಕರ್ ಅವರಿಗೆ ತೋರಿಸಿದರು. ಅವರು ಹಸ್ತಪ್ರತಿ ಜ್ಞಾನವಿದ್ದ ಇಬ್ಬರು ವಿದ್ವಾಂಸರನ್ನು ಕರೆದು ಈ ತಾಡೋಲೆ ಪ್ರತಿಯನ್ನು ತೋರಿಸಿದರು. ಅದು ಜ್ಯೋತಿಷ್ಯಶಾಸ್ತ್ರದ ಗ್ರಂಥವಾಗಿತ್ತು. ಈ ಗ್ರಂಥವನ್ನು ಪೂಜಿಸಿದರೆ, ಸಂಪತ್ತು ದೊರೆಯುತ್ತದೆ ಎಂದು ಯಾರೋ ಸುಳ್ಳು ಹೇಳಿ ಈ ಅಪರಿಚಿತರಿಗೆ ಮಾರಿದ್ದರು. ಹಳ್ಳಿಯ ಮೂಢ ಜನ ಅವರ ಮಾತನ್ನು ನಂಬಿ ಒಂದು ಸಾವಿರ ರೂಪಾಯಿ ಕೊಟ್ಟು ಈ ತಾಡೋಲೆ ಪ್ರತಿಯನ್ನು ತೆಗದುಕೊಂಡು ಬಂದಿರುವೆವು ಎಂದು ಒಪ್ಪಿಕೊಂಡರು. ಈ ಘಟನೆಯನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸರಜೂ ಕಾಟ್ಕರ್ ನನಗೆ ತಿಳಿಸಿದರು.

ಹೀಗೆ ಹಸ್ತಪ್ರತಿಗಳ ನಾಶದ ಕಥೆಯೂ ನಿರಂತವಾಗಿ ನಡೆಯುತ್ತಿರುವಾಗಲೇ, ಕೆಲವು ಸಾಹಿತ್ಯಾಭಿಮಾನಿಗಳು ಹಸ್ತಪ್ರತಿಗಳನ್ನು ಜತನವಾಗಿ ಸಂಗ್ರಹಿಸಿಟ್ಟುಕೊಂಡಿರುವುದು ಅಭಿಮಾನದ ಸಂಗತಿಯಾಗಿದೆ.

**೭.೩ ಲಿಪಿಕಾರರು :**

ಸಾಹಿತ್ಯಲೋಕದ ಅಮೂಲ್ಯ ಕೃತಿಗಳನ್ನು ಮತ್ತೆ ಮತ್ತೆ ಪ್ರತಿಮಾಡುತ್ತ, ಶತಶತಮಾನಗಳಿಂದ ಓದುಗಲೋಕಕ್ಕೆ ಸಂವಹನ ಮಾಡುತ್ತಿರುವ ಏಕೈಕ ವ್ಯಕ್ತಿ ಲಿಪಿಕಾರನಾಗಿದ್ದಾನೆ. ಇಲ್ಲಿಯವರೆಗೆ ಕರ್ನಾಟಕದಲ್ಲಿ ದೊರೆತ ಕನ್ನಡ ಮತ್ತು ಇತರ ಭಾಷೆಯ ಹಸ್ತಪ್ರತಿಗಳು ವಿಪುಲ ಸಂಖ್ಯೆಯಲ್ಲಿ ದೊರೆಯುವಲ್ಲಿ ಲಿಪಿಕಾರರ ಪಾತ್ರ ಅತ್ಯಂತ ಅವಿಸ್ಮರಣೀಯವಾದುದು.

'ಲಿಪಿಕಾರ' ಎಂಬ ಶಬ್ದ ಕುಮಾರವ್ಯಾಸನ ಭಾರತದ ಕಥೆಯಲ್ಲಿ ಮೊದಲ ಬಾರಿಗೆ ದೊರೆಯುತ್ತದೆ. ಆದರೆ ಲಿಪಿಕಾರ ಬಳಸುವ 'ಕಂಠ', 'ತಾಳೆಎಲೆ'ಗಳ ಉಲ್ಲೇಖ ಹಳಗನ್ನಡ ಸಾಹಿತ್ಯದಲ್ಲಿಯೂ ನಮಗೆ ದೊರೆಯುತ್ತವೆ. ಲಿಪಿಕಾರ ಎಂಬುದುರ ಅರ್ಥವ್ಯಾಪ್ತಿ ಅದು ಒಂದು ವೃತ್ತಿಯನ್ನು ಸೂಚಿಸುತ್ತದೆ. ಲಿಪಿಕಾರ ಶಬ್ದಕ್ಕೆ ಪರ್ಯಾಯವಾಗಿ ಪ್ರತಿಕಾರ ಎಂಬ ಶಬ್ದವನ್ನು ಎಚ್. ದೇವೀರಪ್ಪನವರು ಬಳಸುತ್ತಾರೆ. ಇನ್ನು ಕೆಲವರು ಲೇಖಕ, ಬರೆಪಕಾರ ಎಂದು ಕರೆಯುತ್ತಾರೆ. 'ಹಸ್ತಪ್ರತಿಗಳ ನಕಲುಗಳನ್ನು ಕಂಟ, ಕುಂಚ, ಮೊದಲಾದ ಲೇಖನಗಳಿಗಳ ಸಹಾಯದಿಂದ ಕೊರೆಯುವವ ಅಥವಾ ಬರೆಯುವವನನ್ನು ಲಿಪಿಕಾರ' ಎಂದು ಟಿ.ವಿ. ವೆಂಕಟಾಚಲಶಾಸ್ತ್ರಿಗಳು ಹೇಳುತ್ತಾರೆ. ಲಿಪಿಕಾರರು ಹಸ್ತಪ್ರತಿಯ ಕೊನೆಯಲ್ಲಿ ಬರೆಯುವ ಅಂತ್ಯಪ್ರಶಸ್ತಿಗಳ ಕಾರಣವಾಗಿ ಕನ್ನಡ ನಾಡಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಪುನರ್‌ವ್ಯಾಖ್ಯಾನಿಸಬಹುದಾಗಿದೆ. ಲಿಪಿಕಾರರ ವ್ಯಾಖ್ಯಾನವನ್ನು ಎಂ.ಎಂ. ಕಲಬುರ್ಗಿ ಅವರು ಹೀಗೆ ಮಾಡುತ್ತಾರೆ:

"ಈ ವರೆಗೆ ಸಿಕ್ಕ, ಸಿಗಬಹುದಾದ ಸುಮಾರು ೪೦ ಸಾವಿರ ಕನ್ನಡ ಹಸ್ತಪ್ರತಿ ಕಟ್ಟುಗಳನ್ನು ಶ್ರಮ, ಶ್ರದ್ಧೆಗಳಿಂದ ಬರೆದವರು ಲಿಪಿಕಾರರು. ಅಳಿದು ಹೋಗಿಯೂ ಉಳಿದುನಿಂದ ಇಷ್ಟು ದೊಡ್ಡ ಸಂಖ್ಯೆಯ ಹಸ್ತಪ್ರತಿಗಳನ್ನು ಉತ್ಪಾದಿಸುವಲ್ಲಿ ದುಡಿದ ಇವರನ್ನು

೧. ನಿಯುಕ್ತ ಲಿಪಿಕಾರರು

೨. ವೃತ್ತಿ ಲಿಪಿಕಾರರು

೩. ಹವ್ಯಾಸಿ ಲಿಪಿಕಾರರು

ಎಂದು ವರ್ಗೀಕರಿಸಬಹುದು. ಇವರಲ್ಲಿ ನಿಯುಕ್ತ ಲಿಪಿಕಾರರು ಸಂಬಳ ತೆಗೆದುಕೊಂಡು ಸರಕಾರದಲ್ಲಿ ಲೇಖನವೃತ್ತಿ ಮಾಡುವವರೇ ಹೊರತು, ಹಸ್ತಪ್ರತಿ ನಕಲುಕಾರ್ಯಕ್ಕಾಗಿಯೇ ನೇಮಿಸಲ್ಪಟ್ಟವರಲ್ಲ..... ವೃತ್ತಿಲಿಪಿಕಾರರೆಂದರೆ ಬರವಣಿಗೆಯನ್ನು ಉಪಜೀವನದ ಸಾಧನ ಮಾಡಿಕೊಂಡವರು. ಇವರು ಹಣ, ಬಟ್ಟೆ, ಮೊದಲಾದವುಗಳನ್ನು ಪಡೆದು ಹಸ್ತಪ್ರತಿ ಬರೆದುಕೊಟ್ಟ

ಬಗ್ಗೆ ಉದಾಹರಣೆಗಳನ್ನು ನೋಡಬಹುದು. ಮೇಲೆ ಹೇಳಿದ ನಿಯುಕ್ತ ಲಿಪಿಕಾರರು, ವೃತ್ತಿಲಿಪಿಕಾರರಿಗಿಂತ ಹವ್ಯಾಸಿ ಲಿಪಿಕಾರರ ಸಂಖ್ಯೆ ದೊಡ್ಡದು. ಇವರು ಸ್ವಪ್ರಯೋಜನ, ಪರಪ್ರಯೋಜನಕ್ಕಾಗಿ ಬರವಣಿಗೆ ಕಾರ್ಯವನ್ನು ಪೂರೈಸಿದ್ದಾರೆ."[೧೦]

ಖ್ಯಾತ ವಿದ್ವಾಂಸ ಡಿ.ಎಲ್.ಎನ್. ಅವರು ತಮ್ಮ ಕನ್ನಡ ಗ್ರಂಥಸಂಪಾದನೆ ಕೃತಿಯಲ್ಲಿ.

೧. ವೃತ್ತಿ ನಿರತ ಲಿಪಿಕಾರರು

೨. ವೃತ್ತಿನಿರತರಲ್ಲದ ಲಿಪಿಕಾರರು

ಎಂದು ಎರಡು ಬಗೆಯಾಗಿ ವಿವರಿಸಿದ್ದಾರೆ.

ಎಚ್. ದೇವೀರಪ್ಪ ಅವರು ಲಿಪಿಕಾರ ಬದಲಾಗಿ ಪ್ರತಿಕಾರ ಶಬ್ದ ಬಳಿಸಿದ್ದಾರೆ. ಬಿ. ಆರ್. ಹಿರೇಮಠ, ಸೀತಾರಾಮ ಜಾಗೀರದಾರ್ ಮೊದಲಾದವರು ಕಲಬುರ್ಗಿ ಅವರ ವರ್ಗೀಕರಣವನ್ನೇ ಒಪ್ಪಿಕೊಂಡು ಬಳಸುತ್ತ ಬಂದಿದ್ದಾರೆ. ಆದರೆ ಬಿ.ಕೆ. ಹಿರೇಮಠ ಅವರು ಈ ಎಲ್ಲ ವಿದ್ವಾಂಸರ ವರ್ಗೀಕರಣ ಪದ್ಧತಿಗೆ ಸ್ವಲ್ಪ ಭಿನ್ನವಾಗಿ ಈ ರೀತಿ ವಿಶ್ಲೇಷಿಸಿದ್ದಾರೆ.

೧. ವೃತ್ತಿ ಬರೆಪಕಾರರು

೨. ಪ್ರವೃತ್ತಿ ಬರೆಪಕಾರರು

ವೃತ್ತಿ ಬರೆಪಕಾರರಲ್ಲಿ ೧. ನಿಯುಕ್ತ ಬರೆಪಕಾರರು ಮತ್ತು ನೇಮಿತ ಬರೆಪಕಾರರು ಎಂದು ಎರಡು ವಿಧವಾಗಿ ವರ್ಗೀಕರಿಸಿದ್ದಾರೆ.

ಹಸ್ತಪ್ರತಿ ಲಿಪಿಕಾರರ ಇತಿವೃತ್ತವನ್ನು ತಿಳಿಯಪಡಿಸುವ ಹಸ್ತಪ್ರತಿಗಳಲ್ಲಿನ ಅಂತ್ಯ ಪ್ರಶಸ್ತಿಗಳು ಆಯಾ ವ್ಯಕ್ತಿಯ, ಪ್ರದೇಶದ, ಗುರು–ಶಿಷ್ಯ ಪರಂಪರೆಯ, ಶರಣ ಸಂಪ್ರದಾಯದ, ರಾಜಮನೆತನದ ಮೊದಲಾಗಿ ಬೇರೆ ಬೇರೆ ಅಧಿಕಾರಿಗಳ, ಆಯಾ ಪ್ರದೇಶದ ದೇವತೆಗಳ, ಇಷ್ಟದೇವತೆಗಳ ಆಖ್ಯಾಯಿಕೆ ಐತಿಹಾಸಿಕತೆಗಳನ್ನು ತಿಳಿದುಕೊಳ್ಳುವಲ್ಲಿ ಸಹಾಯಕವಾಗುತ್ತವೆ. ಆ ದೃಷ್ಟಿಯಿಂದ ಇವು ಆಯಾ ವ್ಯಕ್ತಿ, ಘಟನೆ, ಸಂಬಂಧಗಳನ್ನು ಪಡಿಮೂಡಿಸುವ ಕನ್ನಡಿಗಳು ಎಂಬ ಪ್ರಮುಖ ಅಂಶಗಳನ್ನು ಎಂ. ಎಂ. ಕಲಬುರ್ಗಿ ಮತ್ತು ಬಿ. ಆರ್. ಹಿರೇಮಠ ಅವರುಗಳು ಗುರುತಿಸಿದ್ದಾರೆ.

"ಹಸ್ತಪ್ರತಿಯೇ ಆಗಿದ್ದರೂ ಕವಿಯ ಮೂಲ ನಿರ್ಮಿತಿಯನ್ನು 'ಕೃತಿ' ಎಂದೂ, ಆಮೇಲಿನ ಲಿಪಿಕಾರರ ನಿರ್ಮಿತಿಗಳನ್ನು 'ಪ್ರತಿ' ಎಂದೂ ಕರೆಯುವುದು ನ್ಯಾಯಸಮ್ಮತವೆನಿಸುತ್ತದೆ. ಇವುಗಳಲ್ಲಿ ಕೃತಿಯೆನ್ನುವುದು 'ಸೃಷ್ಟಿ'ಯಾದರೆ ಪ್ರತಿಯೆನ್ನುವುದು 'ಉತ್ಪಾದನೆ'ಯಾಗಿರುತ್ತದೆ."[೧೧] ಎಂದು ಎಂ.ಎಂ. ಕಲಬುರ್ಗಿ ಅವರು ಸೂತ್ರರೂಪವಾಗಿ ಲಿಪಿಕಾರನ ಮಹತ್ವವನ್ನು ತಿಳಿಸುತ್ತಾರೆ.

ಲಿಪಿಕಾರರು ಅತ್ಯಂತ ಭಕ್ತಿ–ಶ್ರದ್ಧೆಗಳಿಂದ ಹಸ್ತಪ್ರತಿಗಳನ್ನು ಪ್ರತಿ ಮಾಡುತ್ತಿದ್ದರು. ಮುಹೂರ್ತ ಘಳಿಗೆಗಳನ್ನು ನೋಡಿ ಮಡಿಯಿಂದ ಲಿಪಿಕರಣ ಕಾರ್ಯ ಪ್ರಾರಂಭಿಸುತ್ತಿದ್ದರು. ರಾಜಾಶ್ರಯ ಮತ್ತು ಶ್ರೀಮಂತರ ಆಶ್ರಯದಲ್ಲಿ ನಿಯುಕ್ತರಾಗಿದ್ದ ಲಿಪಿಕಾರರಿಗೆ ಮಾನಸನ್ಮಾನ–ಗೌರವಾದರಗಳು

ಹೆಚ್ಚಾಗಿರುತ್ತಿದ್ದವು. ನೇಮಿತ ಲಿಪಿಕಾರರು ಅವಶ್ಯಕತೆ ಬಿದ್ದಾಗ ಬಂದು ಲಿಪಿಕರಣ ಮಾಡಿ ಸಂಬಳ ಪಡೆದು ಹೋಗುತ್ತಿದ್ದರು. ನೇಮಿತ ಲಿಪಿಕಾರರು ತಮಗೆ ಬಿಡುವಿನ ಸಮಯ ಸಿಕ್ಕಾಗ, ಜನಪ್ರಿಯ ಕೃತಿಗಳನ್ನು ಪ್ರತಿಮಾಡಿಕೊಂಡು, ನಂತರ ಬೇಕಾದವ್ಯಕ್ತಿಗಳಿಗೆ ಮಾರಿ ಹಣ ಸಂಪಾದಿಸುತ್ತಿದ್ದರು. ಈ ವೃತ್ತಿಧರ್ಮದ ಲಿಪಿಕಾರರ ಹೊರತಾಗಿಯೂ ಹವ್ಯಾಸಿ ಲಿಪಿಕಾರರ ಸೇವೆ ಅತ್ಯಂತ ಅಮೂಲ್ಯವಾದುದು. ಗುರುಗಳಿಗೆ–ಹಿರಿಯರಿಗೆ, ಮಠ–ಬಸದಿಗಳಿಗೆ ಭಕ್ತಿಯಿಂದ ಮತ್ತು ಸ್ವಇಚ್ಛೆಯಿಂದ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಲಿಪಿಕರಣ ಮಾಡಿ ಹಸ್ತಪ್ರತಿಗಳನ್ನು ಸಿದ್ಧಗೊಳಿಸಿ ಸಮರ್ಪಿಸುತ್ತಿದ್ದರು. ಇಂಥವರನ್ನು ಹವ್ಯಾಸಿ ಲಿಪಿಕಾರರೆಂದು ಕರೆದುದು ಯಥಾಯೋಗ್ಯವಾಗಿದೆ. ಲಿಪಿಕಾರರ ಮನೋಧರ್ಮವನ್ನು ಕುರಿತು ಎಂ.ಎಂ. ಕಲಬುರ್ಗಿ ಅವರು ತುಂಬಾ ಸ್ವಾರಸ್ಯವಾಗಿ ಹೀಗೆ ಹೇಳುತ್ತಾರೆ:

"ಹಸ್ತಪ್ರತಿಯನ್ನು ಯಥಾವತ್ ನಕಲುಗೊಳಿಸಬೇಕಾದುದು ಲಿಪಿಕಾರನ ವೃತ್ತಿಧರ್ಮ. ಇದಕ್ಕೆ ವ್ಯತಿರಿಕ್ತವಾಗಿ ಕೆಲವು ಮೈಗಳ್ಳರು ಅಕ್ಷರ, ಪದ, ಪದ್ಯಗಳನ್ನು ಲೋಪಿಸುತ್ತಾರೆ. ಇವರು ಹೊಣೆಗೇಡಿ ಲಿಪಿಕಾರರು. ಇನ್ನು ಕೆಲವರು ಲೋಪಿಸುವುದರೊಂದಿಗೆ ಆಗಮ, ಆದೇಶ ಕಾರ್ಯಗಳನ್ನು ಮಾಡುತ್ತಾರೆ. ಹಸ್ತಪ್ರತಿಯೊಂದಿಗೆ ಲಘುವಾಗಿ ವ್ಯವಹರಿಸುತ್ತಾರೆ. ಇವರು ಕಿಡಿಗೇಡಿ ಲಿಪಿಕಾರರು. ಹೊಣೆಗೇಡಿ ಲಿಪಿಕಾರನಿಗೆ ಶ್ರಮ ಉಳಿಸಿಕೊಳ್ಳುವ ಉದ್ದೇಶವಿದ್ದರೆ, ಕಿಡಿಗೇಡಿ ಲಿಪಿಕಾರನಿಗೆ ಹಸ್ತಪ್ರತಿಯನ್ನು ಮಾರ್ಪುಗೊಳಿಸುವ ಕೀಳು ಅಭಿರುಚಿ ಇರುತ್ತದೆ. ಈ ಇಬ್ಬರೂ ಲಿಪಿಕಾರರಿಂದ ನಕಲು ಮಾಡಿಸದಿರುವುದು ಕ್ಷೇಮ."[೧೨]

ಒಬ್ಬ ಲಿಪಿಕಾರ ಮಾಡುವ ತಪ್ಪನ್ನೇ ಮತ್ತೊಬ್ಬ ಲಿಪಿಕಾರ ಮುಂದುವರಿಸುವ ಕಾರಣ, ಪಠ್ಯದ ನಿಜವಾದ ಅರ್ಥ ತಿಳಿಯುವುದು ಕಷ್ಟವಾಗುತ್ತದೆ. ಬಸವಣ್ಣನವರ ಷಟ್‌ಸ್ಥಲ ವಚನದ ನೂರಾರು ಕಟ್ಟುಗಳು ಇಂದು ನಮಗೆ ದೊರೆಯುತ್ತವೆ. ಅವುಗಳಲ್ಲಿ ಮೂಲ ಪ್ರತಿಯಲ್ಲಿ ಒಬ್ಬ ಲಿಪಿಕಾರ ಮಾಡಿದ ತಪ್ಪು ಉಳಿದ ನೂರಾರು ಲಿಪಿಕಾರರ ಹಸ್ತಪ್ರತಿಯಲ್ಲಿಯೂ ಹಾಗೆಯೇ ಉಳಿದುಕೊಂಡು ಬಂದ ಎರಡು ದೋಷಗಳನ್ನು ಶಿ. ಶಿ. ಬಸವನಾಳ ಮತ್ತು ಎಂ. ಎಂ. ಕಲಬುರ್ಗಿ ಅವರು ಗುರುತಿಸಿದರು. ಬಸವಣ್ಣನವರ ವಚನಗಳನ್ನು ಮೊದಲ ಬಾರಿಗೆ ಪ್ರಕಟಿಸಿದ ಮರಿಶಂಕರದೇವರು (೧೮೯೬), ಫ.ಗು.ಹಳಕಟ್ಟಿ (೧೯೨೩) ಮೊದಲಾದವರ ಕೃತಿಗಳಲ್ಲಿ ಒಂದು ವಚನದ ಪಾಠ ಹೀಗಿತ್ತು:

"ಒಲವಿಲ್ಲದ ಪೂಜೆ, ನೇಹವಿಲ್ಲದ ಮಾಟ:
ಆ ಪೂಜೆಯು, ಆ ಮಾಟವು
ಚಿತ್ರದ ರೂಹು ಕಾಣಿರಣ್ಣಾ, ಚಿತ್ರದ ರಬ್ಬು ಕಾಣಿರಣ್ಣಾ.
ಅಪ್ಪಿದಡೆ ಸುಖವಿಲ್ಲ, ಮೆಲಿದಡೆ ರುಚಿಯಿಲ್ಲ.
ಕೂಡಲಸಂಗಮದೇವಾ, ನಿಜವಿಲ್ಲದವನ ಭಕ್ತಿ."[೧೩]

ಈ ವಚನದಲ್ಲಿನ ಮೂರನೇ ಸಾಲಿನ ಶಬ್ದಗಳಿಂದ ಇಡೀ ವಚನದ ಅರ್ಥವೇ ಆಗುತ್ತಿರಲಿಲ್ಲ. ಲಿಪಿಕಾರರ ಅವಜ್ಞೆ ಕಾರಣವಾಗಿ ನೂರಾರು ಹಸ್ತಪ್ರತಿಗಳಲ್ಲಿ 'ರಬ್ಬು' ಎಂಬ ಶಬ್ದವೇ ಲಿಪಿಕರಣವಾಗಿತ್ತು. ಈ ತಪ್ಪನ್ನು ಮೊದಲು ಗುರುತಿಸಿದ ಶಿ.ಶಿ.ಬಸವನಾಳರು 'ರಬ್ಬು' ಶಬ್ದದ ಬದಲಾಗಿ 'ಕಬ್ಬು' ಎಂದು ಬದಲಾಯಿಸಿದರು. ಇದರಿಂದ ವಚನದ ಒಟ್ಟು ಅರ್ಥ ನಿಚ್ಚಳವಾಯಿತು.

ಇದೇ ವಚನ ಸಂಕಲನದಲ್ಲಿ ಬಸವಣ್ಣನವರ ಮತ್ತೊಂದು ವಚನ ಲಿಪಿಕಾರನ ಅನ್ಯಥಾ ಜ್ಞಾನ ಕಾರಣವಾಗಿ ಕೇವಲ ಒಂದು ಒತ್ತಕ್ಷರದಿಂದ ಇಡೀ ವಚನದ ಅರ್ಥ ಅಪಾರ್ಥಕ್ಕೀಡುಮಾಡುವಂತ್ತಿತ್ತು.

"ಬಲ್ಲಿದರೊಡನೆ ಬವರವಾದಡೆ ಗೆಲಲುಂಟು, ಸೋಲಲುಂಟು,
ಕಳ್ಳನೊಳಗೆ ಭಾಷೆ ಪೂರಾಯವಯ್ಯಾ.
ನಮ್ಮ ಕೂಡಲಸಂಗನ ಶರಣರಿಗೆ ಮಾಡಿ ಮಾಡಿ
ಧನ ಸವೆದು ಬಡವನಾದಡೆ
ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು."[೧೪]

ಇಲ್ಲಿ ಬರುವ 'ಕಳ್ಳ' ಶಬ್ದದ ಅರ್ಥವೇ ಆಗುತ್ತಿರಲಿಲ್ಲ. ಲಿಪಿಕಾರನ ಅನ್ಯಥಾಜ್ಞಾನವನ್ನು ಕಲಬುರ್ಗಿ ಅವರು ಗುರುತಿಸಿ

"ಬಲ್ಲಿದರೊಡನೆ ಬವರವಾದಡೆ ಗೆಲಲುಂಟು, ಸೋಲಲುಂಟು,
ಕ[ಳ]ನೊಳಗೆ ಭಾಷೆ ಪೂರಾಯವಯ್ಯಾ.
ನಮ್ಮ ಕೂಡಲಸಂಗನ ಶರಣರಿಗೆ ಮಾಡಿ ಮಾಡಿ
ಧನ ಸವೆದು ಬಡವನಾದಡೆ
ಆ ಭಕ್ತನು ಆ ಲಿಂಗಕ್ಕೆ ಪೂಜೆಯಹನು."

ಹೀಗೆ ಬದಲಾಯಿಸಿದರು. 'ಕಳ' ಎಂದರೆ ನಿಘಂಟಿನಲ್ಲಿ 'ರಣಾಂಗಣ' ಎಂಬ ಅರ್ಥವಿದೆ. ಇದು ಇಡೀ ವಚನಕ್ಕೆ ಸರಿ ಹೊಂದುವ ಶಬ್ದವಾಗಿ ವಿದ್ವಜ್ಜನರ ಮನ್ನಣೆ ಪಡೆಯಿತು.

ಹೀಗೆ ಮಾಡುವ ಸಣ್ಣ ಸಣ್ಣ ತಪ್ಪುಗಳು ಓದುಗರಿಗೆ ಅಪಾರ್ಥವನ್ನುಂಟು ಮಾಡಬಾರದು ಎಂಬುದು ಲಿಪಿಕಾರರ ಆಶಯವಾಗಿತ್ತು. "ವೃತ್ತಿಯಿಂದ ಲಿಪಿಕಾರನಾಗಿರುವವನದು ಕೇವಲ ನಕಲುಕಾರ್ಯ. ಕೆಲವೊಮ್ಮೆ ಮನುಷ್ಯ ಸಹಜ ಮರಹು ಆಲಸ್ಯಗಳ ಮೂಲಕ ಈತನು ಕೈತಪ್ಪು, ಕಣ್ತಪ್ಪು, ಕಿವಿತಪ್ಪುಗಳಿಗೆ ಒಳಗಾಗಿ ತಪ್ಪು ಓದುವುದು, ತಪ್ಪು ಕೇಳುವುದು, ತಪ್ಪು ಬರೆಯುವುದು ಸ್ವಾಭಾವಿಕ. ಇದರಿಂದ ಅಕ್ಷರ, ಪದ, ಪದ್ಯಗಳ ಲೋಪ, ಆಗಮ, ಆದೇಶ, ಪಲ್ಲಟ ಮಟ್ಟಿನ ಸ್ಖಾಲತ್ಯಗಳು ತಲೆದೋರುತ್ತವೆ. ಇದು ಲಿಪಿಕಾರನ ಅನವಧಾನ. ಈ ಅನವಧಾನದಿಂದ ಹುಟ್ಟಿದ ಹನಿಯಷ್ಟು ತಪ್ಪು, ಕ್ರಮೇಣ ಹಳ್ಳದಷ್ಟು ಬೆಳೆದು ನಿಂತಾಗ, ದೋಷ ಗಮನಕ್ಕೆ ಬರುತ್ತದೆ."[೧೫]

"ಲಿಪಿಕಾರನ ಅನ್ಯಥಾಜ್ಞಾನ, ಅನವಧಾನ ಮತ್ತು ಅಜ್ಞಾನ ಕಾರಣವಾಗಿ ಅನುದ್ದೇಶಿತ ಸ್ಖಾಲಿತ್ಯಗಳು ಘಟಿಸುತ್ತವೆ. ಸಾಮಾನ್ಯವಾಗಿ ಒಳ್ಳೆಯ ಲಿಪಿಕಾರ ಪ್ರತಿಮಾಡುವುದು ಅಕ್ಷರಗಳನ್ನಲ್ಲ,

ಪದಗಳನ್ನು, ಅದಕ್ಕಾಗಿ ಪ್ರತಿಯೊಂದು ಪದವನ್ನು ಆತ ಅರ್ಥ ಮಾಡಿಕೊಂಡು ಬರೆಯಬೇಕಾಗುತ್ತದೆ. ಸಾಮಾನ್ಯ ಲಿಪಿಕಾರ ಮಾತ್ರ ಅಕ್ಷರಗಳನ್ನು ಅರ್ಥಮಾಡಿಕೊಳ್ಳುವ ಮಟ್ಟಕ್ಕೆ ನಿಂತು ಬಿಡುತ್ತಾನೆ. ಹೀಗಾಗಿ ಅಸ್ಪಷ್ಟ, ಅಶುದ್ಧ ಮತ್ತು ಅಪರಿಚಿತ ಪದ ಇಲ್ಲವೆ ಅಕ್ಷರಗಳನ್ನು ಸಾಮ್ಯಭ್ರಾಂತಿಯಿಂದ ಬೇರೊಂದನ್ನಾಗಿ ಆತ ಓದಿಕೊಂಡರೆ ಸುಷ್ಠಪಾಠ ಮುಳುಗಿ, ದುಷ್ಟಪಾಠ ತೇಲಿಬರುತ್ತದೆ. ಇದು 'ಲಿಪಿಕಾರನ ಅನ್ಯಥಾಜ್ಞಾನಮೂಲ ಸ್ಖಾಲಿತ್ಯ"[೧೬] ಕಲಬುರ್ಗಿ ಅವರು ಹೇಳಿದಂತೆ ಲಿಪಿಕಾರರ ತಪ್ಪು ಉದ್ದೇಶಪೂರ್ವಕ ಅಥವಾ ಅನುದ್ದೇಶಿತಪೂರ್ವಕವಾಗಿರಬಹುದು. ಆದರೆ ನಾನು ಗಮನಿಸಿದ ಅನೇಕ ಹಸ್ತಪ್ರತಿ ಲಿಪಿಕಾರರು ನಯ-ವಿನಯ ಸೌಜನ್ಯಗಳಿಂದ ತಮ್ಮಿಂದ ಎಡೆವಾಯ್ದು ಬಂದ ತಪ್ಪುಗಳನ್ನು ಕ್ಷಮಿಸಬೇಕೆಂದು ವಿನಂತಿಸಿಕೊಂಡಿದ್ದಾರೆ.

ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರದಲ್ಲಿಯ ದೀಪದ ಕಲಿಯಾರ ಕಾವ್ಯವನ್ನು ಲಿಪಿಕರಣ ಮಾಡಿದ ಹನುಮಂತಪ್ಪ ಎಂಬುವನು ಹೀಗೆ ವಿನಂತಿಸಿಕೊಳ್ಳುತ್ತಾನೆ. ಮದಮಕ್ಕನ ಕಾಳಗೌಡರ ಅನ್ನದಾನಪ್ಪ ಗುರುಸಿದ್ಧಪ್ಪ ಎಂಬಾತನಿಗೆ ಈ ಕೃತಿಯನ್ನು ಓದಿಕೊಳ್ಳುವ ಸಲುವಾಗಿ ಬರೆದುಕೊಟ್ಟಿದ್ದೇನೆಂದೂ, ಬೆಳಗಾವಿಯ ಪರಮಾಜ ಮಲ್ಲಪ್ಪನವರು ಬರೆಸಿರುತ್ತಾರೆಂದೂ ಹನುಮಂತಪ್ಪ ಸ್ಪಷ್ಟಪಡಿಸಿದ್ದಾನೆ. ಹಸ್ತಪ್ರತಿಯ ಕೊನೆಯಲ್ಲಿ "ಯೀ ಪುಸ್ತಕದೊಳಗೆ ಮರತು ಮತಿಭ್ರಮಣೆಯಾಗಿದ್ದರೆ ಅಕ್ಷರಗಳು ಒಂದೆರಡು ಮರತಿದ್ದರೆ ಗುಡುಸುಕೊಂಬು ಯತ್ವ ಸೊನ್ನಿ ದೀರ್ಘ ಮರತಿದ್ದ ಕಾಲಕ್ಕೆ ಬಲ್ಲಂತ ಪ್ರಾಜ್ಞರು ತಿದ್ದಿವೋದಿಕೊಂಡು ಕಥೆಯ ಸಾಗಿಸಬೇಕು. ಬೈಲುಬೇಡಂ ಪಂಚಾಮೃತದೊಳು ಸ್ವಲ್ಪ ಕಪ್ಪುಯಿದ್ದರೆ ತಗದು ಊಟ ಮಾಡಬೇಕು ಬಲ್ಲಂಥ ಸಂಗಡಿಗರು" ಎಂದು ಓದುಗರಲ್ಲಿ ಅರಿಕೆ ಮಾಡಿಕೊಂಡಿದ್ದಾನೆ. ಈ ಮಾತುಗಳನ್ನು ಗಮನಿಸಿದರೆ ಲಿಪಿಕಾರನ ವಿನಯ ಸೌಜನ್ಯ, ಪ್ರಾಮಾಣಿಕತೆಗಳನ್ನು ಮೆಚ್ಚಲೇಬೇಕು.

ಚರಲಿಂಗಯ್ಯ ಎಂಬ ಮತ್ತೊಬ್ಬ ಲಿಪಿಕಾರ "ಯಿದರೊಳಗೆ ಹಸ್ತದೋಷಯಿಕ ಬುದ್ದುಯಿದ್ದರೆ ತಿದ್ದಕೊಂಡು ವೋದುವುದು ನಿಂಮ ಬಾಲಕನ ಸಮಾನಯಂದು ಅರಿವುದು ಚಿಕ್ಕವರಿಗೆ ವಿಯೆ ಹೇಳುತ್ತ ಬರದುಹಿನಿ ಪ್ರಹುಡರು ತಿದ್ದಿ ವೋದುವುದು' ಎಂದು ಪ್ರಾರ್ಥಿಸಿದ್ದಾನೆ.

'ಯಿದರೊಳಗೆ ಹಸ್ತದೋಷ ಬಿದ್ದಿದ್ದರೆ ಬೈಯಲಾಗದು ನಿಂಮುತ್ತಮ ಗುಣದಿಂದ ತಿದ್ದುವುದು' ಎಂದು ಲಿಪಿಕಾರ ಬಸವಲಿಂಗಯ್ಯ ಬಿನ್ನವಿಸಿಕೊಂಡಿದ್ದಾನೆ.

ಮುರಿಗೆಪ್ಪ ಎಂಬ ಲಿಪಿಕಾರ ಭಾವಚಿಂತಾರತ್ನ ಪ್ರತಿಮಾಡಿ ಕೊನೆಯಲ್ಲಿ "ಯಾರೂ ತಕ್ಕೊಳ್ಳಿಕ್ಕಾಗದು ತಕ್ಕೊಂದರೆ ಓದಿಕೊಡಬೇಕು ತಪ್ಪು ದೋಷವಿದ್ದರೆ ಬಲ್ಲಂಥ ಶಾಸ್ತ್ರಜ್ಞರು ತಿದ್ದಿ ಓದುವುದು. ಬಯ್ಯಲಿಕ್ಕಾಗದು ನಿಮ್ಮ ಬಾಲಕನು ನಾನು" ಎಂದು ಪುಸ್ತಕ ಸಂರಕ್ಷಣೆ, ವಿನಯ, ಪ್ರಾಮಾಣಿಕತೆಯನ್ನು ಮೆರೆದಿದ್ದಾನೆ.

ಇಂಚಲಮಠದ ಚರಮೂರ್ತಿಯಾಗಿದ್ದ ಶಾಂತಲಿಂಗಪ್ಪನು ಫಾಲ್ಗುಣನಾಮ ಸಂವತ್ಸರ ಆಶ್ವೀಜಮಾಸ ಬಹುಳ ಬಿದಿಗಿ ಗುರುವಾರ ನಕ್ಷತ್ರ ಅಶ್ವೀನಿ ಚಂದ್ರನ ಹೋರ್ಯದಲ್ಲಿ ೭ ಸಂಧಿ, ೧೧೧೯

ಪದ್ಯಗಳನ್ನೊಳಗೊಂಡ ಬಸವನ ಕಾವ್ಯವನ್ನು ಬರೆದು ಮುಗಿಸಿದ್ದಾನೆ. ತಮ್ಮ ಗುರು ಕರುಣ ಕಟಾಕ್ಷದಿಂದಲಿ ಬರೆಸಿದವರು ಚನ್ನಮಲ್ಲಪ್ಪನ ಸುಪುತ್ರನಾದ ಪರಪ್ಪ. ಕೊನೆಯಲ್ಲಿ

"ತಪ್ಪು ತಿದ್ದಲಿನರಿಯ ಯಿಪ್ಪಂತೆ ಬರದೆನು
ಸರ್ಪಭೂಷಣ ಭಜಕಾರು
ತಪ್ಪುಳ್ಳರೆ ವಪ್ಪಿ ನಡೆಸುವುದು ಸಜ್ಜನರು
ಕಂದ ಬರದಾನೆಂದು ನಿಂದ್ಯವನಾಡದೆ
ಯಿಂದು ನಡೆಸುವುದು ರಸಿಕರು
ಕುಂದುಕೊರತೆಯ ಯಿತ್ತದೆ ನಡಸುವ ತಂಡಿಗೆ
ಯಿಂದೊಂಮೆ ಶರಣ ಮಾಡುವೆನು."[೧೭]

ಎಂಬ ಅರಿಕೆಯು ಲಿಪಿಕಾರನ ಸೃಜನಶೀಲತೆಗೂ ನಿದರ್ಶನವಾಗಿದೆ.

ಗೋಕಾಕ ತಾಲೂಕಿನ ಯಾದವಾಡ ಗ್ರಾಮದ ಅಗಡಿಮಠದ ಸ್ವಾಮಿಗಳಿಗೆ ಪಡದಯ್ಯ ಎಂಬುವನು 'ಪ್ರೌಢದೇವರಾಯನ ಕಾವ್ಯ'ವನ್ನು ಲಿಪಿಮಾಡಿಕೊಟ್ಟಿದ್ದಾನೆ. ಈತ ವೃತ್ತಿ ಲಿಪಿಕಾರನಾಗಿದ್ದಾನೆ. ಯಾರಿಗಾದರೂ ಬೇಕಾದರೆ ಪ್ರತಿ ಮಾಡಿಕೊಡುವುದು ಆತನ ವೃತ್ತಿಧರ್ಮವಾಗಿತ್ತು. ಈತ ಇನ್ನೂ ಒಂದೆರಡು ಕೃತಿಗಳನ್ನು ಪ್ರತಿ ಮಾಡಿದ ವಿವರ ದೊರೆಯುತ್ತದೆ.

ಪಡದಯ್ಯನಿಂದ ಪ್ರತಿ ಮಾಡಿಸಿಕೊಂಡಿದ್ದ ಅಗಡಿಮಠದ ಚೆನ್ನಬಸವ ಸ್ವಾಮಿಗಳು ತಮ್ಮ ಪೂಜಾ ತಪ ಅನುಷ್ಠಾನಗಳ ಮಧ್ಯೆಯೂ ಸಿದ್ಧನಂಜೇಶನ ರಾಘವಾಂಕ ಚಾರಿತ್ರ ಮತ್ತು ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣವನ್ನು ತಮ್ಮ ಸ್ವಂತ ಓದಿಗೆ ಪ್ರತಿಮಾಡಿಕೊಂಡಿದ್ದಾರೆ. ಇದು ಅವರ ಆಸಕ್ತಿ ಮತ್ತು ಹವ್ಯಾಸವನ್ನು ತೋರಿಸುತ್ತದೆ. ಈ ಎರಡೂ ಹಸ್ತಪ್ರತಿಗಳನ್ನು ನಾನು ಗಮನಿಸಿದಾಗ ತಿಳಿದು ಬಂದ ಅಂಶವೆಂದರೆ– ಅಕ್ಷರಗಳು ತುಂಬಾ ದುಂಡಾಗಿವೆ. ಸ್ಪಷ್ಟವಾಗಿವೆ. ವೃತ್ತಿಲಿಪಿಕಾರರಂತೆಯೇ ಇವರು ಲಿಪಿಕರಣ ಮಾಡುವುದರಲ್ಲಿ ತುಂಬ ಪರಿಣತರಾಗಿದ್ದರು ಎಂಬುದನ್ನು ಈ ಎರಡೂ ಹಸ್ತಪ್ರತಿಗಳು ತೋರಿಸುತ್ತವೆ.

ಬೀಳಗಿ ಹಿರೇಮಠದ ಈರಸಂಗಯ್ಯ ಸ್ವಾಮಿಗಳು ಕ್ರಿ.ಶ. ೧೬೫೪ರಲ್ಲಿ ಷಡಕ್ಷರದೇವನ 'ರಾಜಶೇಖರ ವಿಳಾಸ' ಕೃತಿಯನ್ನು ತಮ್ಮ ಓದಿನ ಅನುಕೂಲಕ್ಕೆ ಸ್ವಂತ ಪ್ರತಿಮಾಡಿಕೊಂಡಿದ್ದಾರೆ. ಇವರು ಷಡಕ್ಷರದೇವನ ಸಮಕಾಲೀನರು. ರಾಜಶೇಖರ ವಿಳಾಸ ರಚನೆಯಾದ ಕೇವಲ ಮೂರು ವರ್ಷಗಳ ಅವಧಿಯೊಳಗೆ ಇವರು ಪ್ರತಿಮಾಡಿಕೊಂಡಿರುವುದು ವಿಶೇಷ. ದಕ್ಷಿಣ ಭಾಗದ ದನಗೂರಿನಲ್ಲಿದ್ದ ಷಡಕ್ಷರದೇವನ ಕೃತಿ ಬಾಗಲಕೋಟ ಜಿಲ್ಲೆಯ ಬೀಳಗಿಯವರೆಗೆ ಆ ಕಾಲದಲ್ಲಿ ಪ್ರಚಾರಗೊಂಡಿತೆಂಬ ಸಂಗತಿ ಇದರಿಂದ ತಿಳಿದುಬರುತ್ತದೆ.

ರಾಮದುರ್ಗ ತಾಲೂಕಿನ ಮುದೇನೂರ ಗ್ರಾಮದ ಬಸಯ್ಯನು ಯಾದಗಿರಿ ಜಿಲ್ಲೆಯ ಶಿರಗುಪ್ಪಿ ಗ್ರಾಮದ ಪಂಚಾಕ್ಷರಿ ಮರಿದೇವರಿಗೆ ಪ್ರೀತಿಯಿಂದ ಶರಣ ಲೀಲಾಮೃತ ಕೃತಿಯನ್ನು ಪ್ರತಿ ಮಾಡಿಕೊಟ್ಟಿದ್ದಾನೆ. ಇಲ್ಲಿ ಭಕ್ತಿ ಮತ್ತು ಶ್ರದ್ಧೆಗಳೇ ಕೆಲಸ ಮಾಡಿವೆ ಎಂದು ಹೇಳಬಹುದು.

ಹಸ್ತಪ್ರತಿಗಳು ಚಲನಶೀಲತೆಯ ಲಕ್ಷಣವುಳ್ಳವುಗಳಾಗಿದ್ದವು. ಹೀಗಾಗಿ ಯಾವುದೋ ದೂರದ ಭಾಗದಿಂದ ಈ ಭಾಗಕ್ಕೆ ಹಸ್ತಪ್ರತಿಗಳ ಕೊಡುಕೊಳ್ಳುವಿಕೆಯ ಕ್ರಮ ನಿರಂತರವಾಗಿ ನಡೆಯುತ್ತಿತ್ತು. ಒಳ್ಳೆಯ ಲಿಪಿಕಾರರು ಎಲ್ಲಿದ್ದರೂ ಅವರಿಗೆ ಗೌರವವಿರುತ್ತಿತ್ತು. ದೂರದ ಊರಿನಲ್ಲಿದ್ದರು ಅವರಿಂದ ಹಸ್ತಪ್ರತಿಗಳನ್ನು ಪಡೆಯುತ್ತಿದ್ದರು. ಅದಕ್ಕೆ ಉದಾಹರಣೆ ಎಂದರೆ ಬಳ್ಳಾರಿ ಜಿಲ್ಲೆಯ ಕಂಪ್ಲಿ ಹನುಮಂತಪ್ಪ ಎಂಬುವನು ಬೆಳಗಾವಿಯ ಪರಮಾಜ ಮಲ್ಲಪ್ಪನವರಿಗೆ ದೀಪದ ಕಲಿಯಾರ ಕಾವ್ಯವನ್ನು ಪ್ರತಿ ಮಾಡಿಕೊಟ್ಟಿರುವುದು. ಹಾಗೆಯೇ ಬೆಂಗಳೂರಿನ ಅರಳೆಪೇಟೆಯಲ್ಲಿ ವಾಸವಾಗಿದ್ದ ಹುಮನಾಬಾದ ಗ್ರಾಮದ ವೀರಭದ್ರಯ್ಯನ ಮಗ ನಿಜಗುಣ ಶಿವಯೋಗಿ ವಿವೇಕಚಿಂತಮಣಿಯನ್ನು ಲಿಪಿಮಾಡಿ ಹುಬ್ಬಳ್ಳಿಗೆ ಬಂದ ಅಲ್ಲಿ ಸಿದ್ಧಾರೂಢ ಸ್ವಾಮಿಗಳಿಗೆ ಸಮರ್ಪಿಸಿದ್ದಾನೆ. ಯಾವ ಸೌಕರ್ಯಗಳು ಇಲ್ಲದ ಆ ಕಾಲದಲ್ಲಿ ಹೀಗೆ ದೂರದಿಂದ ಬಂದು ಪ್ರತಿ ಮಾಡಿಕೊಟ್ಟು ಹೋಗುತ್ತಿದ್ದರು ಎಂಬುದು ಗಮನಿಸುವ ಅಂಶವಾಗಿದೆ.

ಶಕೆ ೧೭೧೦ ಕೀಲಕನಾಮ ಸಂವತ್ಸರ ಜೇಷ್ಠ ಸಂಚ್ರ ೨ ರ ಮುಂಜಾನೆ ಶುಭದಿನ ಶುಬತಿತಿ ಶುಭನಕ್ಷತ್ರ ಶುಭಯೋಗ ಕರಣದಲ್ಲಿ ರೇವಣಸಿದ್ಧೇಶ್ವರ ಪುರಾಣವನ್ನೂ ಶಕೆ ೧೭೧೦ ಕೀಲಕನಾಮ ಸಂವತ್ಸರ ವೈಶಾಖ ಶುದ್ಧ ೧೧ ಯೆಕಾದಶಿ ಗುರುವಾರ ಉತ್ರಿನಕ್ಷತ್ರ ಚಂದ್ರಶೋಭನ (೧೬.೫.೧೭೮೮)ದಲ್ಲಿ ಸಿದ್ಧರಾಮಯ್ಯನ ಕಾವ್ಯವನ್ನೂ ಬರಡೂರು ಜಿಗಜಿಣಗಿಮಠದ ವಿಸರಪ್ಪನವರ ಮರಿಮಗನ ಮೊಮ್ಮಗನಾದ ಚನ್ನಬಸವದೇವರು ಬರೆದು ಮುಗಿಸಿದ್ದಾರೆ. ಈ ಕೃತಿಗಳನ್ನು ಕಸ್ಬೆ ಬರಡೂರು ವೊಗ್ಯೆರೆ ಹಾಡಲಸಂಗ ಪರಗಣೆ ಹೊರ್ತಿ ಸಂಗಪ್ಪನವರ ಪುತ್ರನಾದಂತ ಸಿದ್ಧಪ್ಪನು ಪ್ರೀತಿಯಲ್ಲಿ ವೋದಿ ಪರಿಣಾಮಿಸಿಕೊಳಬೇಕಂತ ಬರೆಸಿಕೊಂಡನು. ಇಲ್ಲಿ ಆರು ತಲೆಮಾರಿನ ಇತಿಹಾಸವೇ ಅಡಗಿರುವುದನ್ನು ಕಾಣಬಹುದು. ವಿಸರಪ್ಪನ ಮರಿಮಗನ ಮೊಮ್ಮಗ ಎಂದರೆ ಆರುತಲೆಮಾರು ಆಗುವುದು.

ಹೀಗೆ ಹಸ್ತಪ್ರತಿಗಳ ಅಂತ್ಯಪ್ರಶಸ್ತಿಗಳಲ್ಲಿ ಲಿಪಿಕಾರರ ಬದುಕು ವಂಶಾವಳಿ, ಸ್ಥಳನಾಮ, ವ್ಯಕ್ತಿನಾಮಗಳ, ವೃತ್ತಿನಾಮಗಳ, ಮಠ-ಮಂದಿರಗಳ ಇತಿಹಾಸವನ್ನು ಅರಿತುಕೊಳ್ಳಬಹುದಾಗಿದೆ. ಈ ನಿಟ್ಟಿನಲ್ಲಿ ಇನ್ನೂ ಅಧ್ಯಯನ ನಡೆಯಬೇಕಾಗಿದೆ.

## ಕೊನೆ ಟಿಪ್ಪಣಿಗಳು

೧. ಬಿ. ಕೆ. ಹಿರೇಮಠ – ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ ಪು. ೨೪೮

೨. ಎಚ್. ದೇವೀರಪ್ಪ : ಕನ್ನಡ ಹಸ್ತಪ್ರತಿಗಳ ಇತಿಹಾಸ ಪು. ೯೮

೩. ಎಂ.ಎಂ. ಕಲಬುರ್ಗಿ : ಕನ್ನಡ ಹಸ್ತಪ್ರತಿಶಾಸ್ತ್ರ ಪು. ೭೫

೪. ಅದೇ ಪು. ೮೦

೫. ಎಂ. ಉಷಾ : ಹಸ್ತಪ್ರತಿ ಅಧ್ಯಯನದ ಹೊಸ ಸಾಧ್ಯತೆಗಳು ಪು. ೧೨೬

೬. ಎಫ್. ಟಿ. ಹಳ್ಳಿಕೇರಿ : ಕಂಠಪತ್ರ–೩, ಪು. ೨೯೭–೨೯೮

೭. ಹಸ್ತಪ್ರತಿ ವ್ಯಾಸಂಗ : ೫ ಪು. ೧೪

೮. ಬಿ.ಕೆ. ಹಿರೇಮಠ– ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ ಪು. ೨೩೭

೯. ಕೆ. ರವೀಂದ್ರನಾಥ– ಹಸ್ತಪ್ರತಿಗಳು : ಕನ್ನಡಿಗರ ಬದುಕು ಪು. ೪೭

೧೦. ಎಂ. ಎಂ. ಕಲಬುರ್ಗಿ: ಕನ್ನಡ ಹಸ್ತಪ್ರತಿ ಶಾಸ್ತ್ರ. ಪು. ೧೯–೨೧

೧೧. ಅದೇ ಪು. ೬

೧೨. ಅದೇ ಪು. ೭೬

೧೩. ಬಸವಣ್ಣನವರ ಷಟ್‌ಸ್ಥಲ ವಚನಗಳು ವಚನ ೧೨೬

೧೪. ಅದೇ ವಚನ ೧೫೦

೧೫. ಎಂ.ಎಂ. ಕಲಬುರ್ಗಿ: ಕನ್ನಡ ಗ್ರಂಥಸಂಪಾದನಾಶಾಸ್ತ್ರ. ಪು. ೧೦೩

೧೬ ಅದೇ ಪು. ೭೬

೧೭. ಎಫ್.ಟಿ. ಹಳ್ಳಿಕೇರಿ : ಕಂಠ ಪತ್ರ ೩ ಪು. ೫೫, ವಿಕಾಸ ಪ್ರಕಾಶನ, ಹೊಸಪೇಟೆ

## ಅಧ್ಯಾಯ – ಎಂಟು

# ಅನ್ಯಭಾಷಾ ಹಸ್ತಪ್ರತಿಗಳು

ಬೆಳಗಾವಿ ಪರಿಸರ ಎರಡು ನೆರೆರಾಜ್ಯಗಳನ್ನು ಹೊಂದಿದೆ. ಒಂದು ಕಡೆ ಮಹಾರಾಷ್ಟ್ರ ಇನ್ನೊಂದು ಕಡೆ ಗೋವಾ ಈ ರಾಜ್ಯಗಳ ಸಮ್ಮಿಶ್ರ ಸಂಸ್ಕೃತಿ ಕಾರಣವಾಗಿ ಬೆಳಗಾವಿ ಸಾಂಸ್ಕೃತಿಕವಾಗಿ ಸಮೃದ್ಧವಾಗಿ ಬೆಳೆದು ನಿಂತಿದೆ. ಮಹಾರಾಷ್ಟ್ರ ಮತ್ತು ಕರ್ನಾಟಕದ ಸಾಂಸ್ಕೃತಿಕ ಸಂಬಂಧಗಳಂತೂ ಅತ್ಯಂತ ಸೌಹಾರ್ದತೆಯಿಂದ ಕೂಡಿವೆ. ೧೩ನೇ ಶತಮಾನದಲ್ಲಿದ್ದ ಜ್ಞಾನೇಶ್ವರಿಯಲ್ಲಿ ಸಾವಿರಾರು ಕನ್ನಡ ಪದಗಳಿವೆ. ಕನ್ನಡ ಬಾರದ ಪಂಡಿತರಿಗೆ ಜ್ಞಾನೇಶ್ವರಿ ಅರ್ಥವೇ ಆಗುವುದಿಲ್ಲವೆಂದು ಬೆಳಗಾವಿಯ ಹಿರಿಯ ವಿದ್ವಾಂಸ ರಂ.ಶಾ. ಲೋಕಾಪುರ ಅವರ ಹೇಳಿರುವುದು ಅಕ್ಷರಶಃ ನಿಜ. ಮರಾಠಿ ಜ್ಞಾನೇಶ್ವರಿಯನ್ನು ಸಮಗ್ರವಾಗಿ ಶಾಸ್ತ್ರಶುದ್ಧವಾಗಿ ಕನ್ನಡಕ್ಕೆ ಅನುವಾದಿಸಿದ ಶ್ರೇಯಸ್ಸು ರಂ.ಶಾ. ಅವರದು. ಅವರ ಈ ಕೃತಿಗೆ ಕೇಂದ್ರಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪ್ರಾಪ್ತವಾಗಿದೆ.

ಕರ್ನಾಟಕ ಮತ್ತು ಮಹಾರಾಷ್ಟ್ರ ಎರಡೂ ರಾಜ್ಯಗಳು ಅಕ್ಕಪಕ್ಕದ ರಾಜ್ಯಗಳು. ಇವುಗಳ ನಡುವೆ ರಾಜಕೀಯದ ಗಡಿ ಎಳೆದಿರುವುದರಿಂದ ಇವೆರಡೂ ಬೇರೆ ಬೇರೆ ರಾಜ್ಯಗಳೆಂದು ಹೇಳಬೇಕೇ ಹೊರತು ಆಚಾರದಲ್ಲಿ, ವಿಚಾರದಲ್ಲಿ, ನಡವಳಿಕೆಗಳಲ್ಲಿ, ಆಹಾರ ವಿಹಾರಗಳ ಕ್ರಮದಲ್ಲಿ ಇವು ಪ್ರತ್ಯೇಕವಾದ ರಾಜ್ಯಗಳೆಂದು ಹೇಳಲು ಸಾಧ್ಯವಿಲ್ಲ. ಈ ರಾಜ್ಯದ ಎರಡೂ ಜನಾಂಗಗಳ ಅನೇಕ ಶ್ರದ್ಧಾಸ್ಥಾನಗಳೂ ಒಂದೇ ಆಗಿವೆ. ಎರಡೂ ರಾಜ್ಯಗಳಲ್ಲಿ ಪ್ರಾಚೀನ ಕಾಲದಿಂದಲೂ ಕರುಳಬಳ್ಳಿಯ ಸಂಬಂಧವಿದೆ. ಭಾರತೀಯ ಸಂಸ್ಕೃತಿಯ ಅವಳಿ–ಜವಳಿ ಮಕ್ಕಳಂತೆ ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಸಂಸ್ಕೃತಿ ಪರಸ್ಪರ ರೂಪುಗೊಂಡಿವೆ. ಭಾರತದ ಯಾವುದೇ ಎರಡು ರಾಜ್ಯಗಳಲ್ಲಿರದ ಸಾಂಸ್ಕೃತಿಕ ಕೊಡುತೆಗೆದುಕೊಳ್ಳುವಿಕೆ ಅಥವಾ ಆದಾನ ಪ್ರದಾನ ಈ ಎರಡೂ ರಾಜ್ಯಗಳಲ್ಲಿವೆ.

ಕರ್ನಾಟಕಕ್ಕೆ ಪ್ರಾಚೀನವಾದ ಇತಿಹಾಸವಿದೆ. 'ಕನ್ನಡ' ಎಂಬ ಪದವು ದೇಶ ಸೂಚಕವಾಗಿಯೂ, ಭಾಷಾವಾಚಕವಾಗಿಯೂ ಶಾಸನಗಳಲ್ಲಿ ಮತ್ತು ಸಾಹಿತ್ಯ ಕೃತಿಗಳಲ್ಲಿ ಬಳಕೆಯಾಗಿದೆ. ಕ್ರಿ. ಶ.

೮೫೦ರಲ್ಲಿಯೇ 'ಕವಿರಾಜಮಾರ್ಗ'ದಲ್ಲಿ 'ಕನ್ನಡ' ಎಂಬ ಪದವನ್ನು ದೇಶ ಹಾಗೂ ಭಾಷೆಯ ಸೂಚಕವಾಗಿ ನಿರ್ದೇಶಿಸಲಾಗಿದೆ.

"ಕಾವೇರಿಯಿಂದ ಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್
ಭಾವಿಸಿದ ಜನಪದಂ ವಸುಧಾವಲಯ ವಿಲೀನ ವಿಶದ ವಿಶೇಷಂ."[೧]

ಕವಿರಾಜಮಾರ್ಗ ಬರೆದ ನೃಪತುಂಗ ಅಥವಾ ಶ್ರೀವಿಜಯ ಕಾವೇರಿ ನದಿಯಿಂದ ಗೋದಾವರಿಯವರೆಗೆ ಕನ್ನಡ ನಾಡು ವಿಸ್ತಾರಗೊಂಡಿತ್ತೆಂದು ಹೇಳುತ್ತಾನೆ. ಇದಕ್ಕಿಂತ ಹಿಂದೆ ನೂರಾರು ವರ್ಷಗಳ ಹಿಂದೆ ಮಹಾಭಾರತದ 'ಸಭಾಪರ್ವ'ದಲ್ಲಿ ಹಾಗೂ 'ಭೀಷ್ಮಪರ್ವ'ದಲ್ಲಿ 'ಕರ್ನಾಟಕ' ಶಬ್ದದ ಬಳಕೆಯಾಗಿದೆ. ಸ್ಕಂದ ಪುರಾಣ, ಭಾಗವತ ಪುರಾಣ, ಮಾರ್ಕಂಡೇಯ ಪುರಾಣ, ವಿಷ್ಣು ಪುರಾಣ ಮತ್ತು ಪದ್ಮ ಪುರಾಣಗಳಲ್ಲಿಯೂ 'ಕರ್ನಾಟಕ'ದ ಪ್ರಸ್ತಾಪ ಬಂದಿದೆ. ಕ್ರಿ. ಶ. ೪೦೦ ರಲ್ಲಿದ್ದ ಶೂದ್ರಕ ತನ್ನ 'ಮೃಚ್ಛಕಟಿಕ' ನಾಟಕದಲ್ಲಿ 'ಕರ್ನಾಟ ಕಲಹ ಪ್ರಯೋಗಂ ಕರೋಮಿ' ಎಂಬ ವಾಕ್ಯವನ್ನು ಪಾತ್ರ ಒಂದರಿಂದ ನುಡಿಸುತ್ತಾನೆ. ತಮಿಳು ಭಾಷೆಯ 'ಶಿಲಪ್ಪದಿಗಾರಂ' ಕೃತಿಯಲ್ಲೂ ಕನ್ನಡಿಗರನ್ನು 'ಕರುನಾಡರ್' ಎಂದು ಕರೆಯಲಾಗಿದೆ. 'ಶಿಲಪ್ಪದಿಗಾರಂ' ಕಾಲ ಕ್ರಿ.ಶ. ಸು. ೬೦೦ ರದ್ದು. ಹೀಗೆ 'ಕನ್ನಡ', 'ಕರ್ನಾಟಕ' ಶಬ್ದಗಳು ಕನ್ನಡವಲ್ಲದೆ ವಿವಿಧ ಭಾರತೀಯ ಭಾಷೆಗಳ ಕೃತಿಗಳಲ್ಲಿ ಮತ್ತು ಶಾಸನಗಳಲ್ಲಿ ಪ್ರಯೋಗಗೊಂಡಿದ್ದನ್ನು ಕಾಣಬಹುದು.

ವರರುಚಿಯ ವ್ಯಾಕರಣ ಕೃತಿಯಲ್ಲಿ 'ಮಹಾರಾಷ್ಟ್ರ' ಎಂಬ ಶಬ್ದದ ಮೊದಲ ದರ್ಶನ ಕಾಣಿಸಿಕೊಂಡಿದೆ. ವರರುಚಿ ಕ್ರಿಸ್ತ ಶಕೆಯ ಆರಂಭದ ಕಾಲದವನು. ಆಗ ರಾಷ್ಟ್ರವೆಂದು ಈ ದೇಶ ಅಸ್ತಿತ್ವದಲ್ಲಿರದಿದ್ದರೂ ಭಾಷೆಯ ದೃಷ್ಟಿಯಿಂದ ಇದಕ್ಕೆ ಗೌರವದ ಸ್ಥಾನವಿತ್ತೆಂದು ವರರುಚಿಯ ವ್ಯಾಕರಣ ಕೃತಿ ಹೇಳುತ್ತದೆ. 'ಶೇಷಂ ಮಹಾರಾಷ್ಟ್ರೀವತ್' ಎಂಬ ಹೆಗ್ಗಳಿಕೆಯಿಂದ 'ಮಹಾರಾಷ್ಟ್ರೀ' ಎಂಬ ಈ ಭಾಷೆ ಪ್ರಮಾಣವೆನಿಸಿತ್ತು ಎಂದು ವರರುಚಿ ಹೇಳುತ್ತಾನೆ. 'ಮಹಾರಾಷ್ಟ್ರ' ಎಂಬ ಶಬ್ದ ಪ್ರಾಚೀನ ಕಾವ್ಯಗಳಲ್ಲಿಯೂ ಕಾಣಸಿಗುವುದರಿಂದ ಇದೇ ಈ ಪ್ರದೇಶದ ಮೂಲರೂಪವಿರಬೇಕೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದರಿಂದ ಕ್ರಮೇಣ 'ಮರಹಟ್ಟ' ಮತ್ತು 'ಮರ್ಹಾಟಿ' ಶಬ್ದಗಳು ರೂಪುಗೊಂಡಿರುವ ಸಾಧ್ಯತೆಗಳಿವೆ ಎಂಬುದೂ ವಿದ್ವಾಂಸರ ಅನ್ನಿಸಿಕೆ. ಸುಮಾರು ಆರನೆಯ ಶತಮಾನದಲ್ಲಿ ಬರೆಯಲ್ಪಟ್ಟ ಪಾಲಿ ಗ್ರಂಥ 'ಮಹಾವಂಶಿ'ದಲ್ಲಿ ಮಹಾರಾಷ್ಟ್ರವನ್ನು 'ಮಹಾರಟ್ಟ'ವೆಂದು ಕರೆಯಲಾಗಿದೆಯೆಂದು ಖ್ಯಾತ ಮರಾಠಿ ಲೇಖಕಿ ಸರೋಜಿನಿ ಬಾಬರ್ ಅಭಿಪ್ರಾಯಪಟ್ಟಿದ್ದಾರೆ. ಹದಿಮೂರನೆಯ ಶತಮಾನದಲ್ಲಿಯ ಮಹಾನುಭಾವ ಗ್ರಂಥದಲ್ಲಿ 'ಮಹಾರಾಷ್ಟ್ರ' ಶಬ್ದದ ಉಲ್ಲೇಖ ಸಿಗುತ್ತದೆ. ಭಂಡಾರಕರರು 'ಮಹಾರಾಷ್ಟ್ರರೆಂದು ಮುಂದೆ ಹೆಸರುಗೊಂಡ ಜನಾಂಗದವರು ಮೊಟ್ಟಮೊದಲಿಗೆ ನೆಲಸಿದುದು ವರ್ಹಾಡದಲ್ಲಿ. ಈ ವರ್ಹಾಟ ಅಥವಾ ವರ್ಹಾಡದಿಂದಾಗಿಯೇ ಮರ್ಹಾಟಿ ಶಬ್ದ ಬಂದಿತು' ಎಂದು ಹೇಳುತ್ತಾರೆ. ಕೇತ್ಕರ್‌ರು ತಮ್ಮ 'ಮಹಾರಾಷ್ಟ್ರ ಸಂಸ್ಕೃತೀಚಾ ಇತಿಹಾಸ'ದಲ್ಲಿ 'ವರ್ಹಾಟವೇ ಪ್ರಥಮ ಮಹಾರಾಷ್ಟ್ರ'

ವೆಂದು ಅಭಿಪ್ರಾಯಪಟ್ಟಿದ್ದಾರೆ. ಮರ್ಹಾಟಿಗಳು ತಮ್ಮ ಮೂಲಸ್ಥಾನವಾದ ವರ್ಹಾಟದಿಂದ ಹೊರಟು ಗೋದಾವರಿ–ಕೃಷ್ಣಾ ತೀರಗಳ ಕಡೆಗೆ ಹೋಗಿ ನಿಂತು ಒಕ್ಕಲಾಗುವ ಮೊದಲು ಆಗಿನ ಮಹಾರಾಷ್ಟ್ರ ಕ್ರಿ. ಶ. ೧೧೯೦ ರಲ್ಲಿ ರಚಿತವಾದ ಮಹಾನುಭಾವ ಪಂಥದ ಲೀಳಾ ಚರಿತ್ರೆಯಲ್ಲಿ 'ಸಾರಿ ಲಕ್ಷ ಮಹಾರಾಷ್ಟ್ರತೇಹಿ ವಸವಿಲೆ ಗಂಗಾ ತೀರೂ ತ್ರ್ಯಂಬಕೂ ವ್ಹೇರಿ' ಎಂದಿದೆ. ೧೦ನೆಯ ಶತಮಾನದ ಧನಪಾಲನ 'ಭವಿಸ್ಯ ಯತ್ತ ಕಹಾ' ಕೃತಿಯಲ್ಲಿ 'ವೇರಾಡ' ಎಂಬ ಪದ ಬಂದಿದೆ. ಇಲ್ಲಿಯ ವೇರಾಡವೇ 'ಮರ್ಹಾಡ' ವಾಗಿರಬೇಕೆಂಬ ಅಭಿಪ್ರಾಯವಿದೆ.

ಕ್ರಿ.ಶ. ೭೭೮ರ ಉದ್ಯೋತನ ಸೂರಿಯ 'ಕುವಲಯ ಮಾಲಾ ಕಹಾ'ದಲ್ಲಿ 'ಮರಹಟ್ಟ' ಎಂಬ ಶಬ್ದ ಪ್ರಯೋಗವಾಗಿದೆ. ಪಂಪಕವಿಯ ಆದಿ ಪುರಾಣದಲ್ಲಿ (ಕಾಲ ಕ್ರಿ.ಶ. ೯೪೧) ಮಹಾರಾಷ್ಟ್ರ ವಿಷಯದ ಪ್ರಸ್ತಾಪವಿದೆ. ಕೊಲ್ಲಾಪುರದಲ್ಲಿದ್ದ ಕವಿ ಕರ್ಣಪಾರ್ಯ ವಿರಚಿತ ನೇಮಿನಾಥ ಪುರಾಣದಲ್ಲಿ ಮಹಾರಾಷ್ಟ್ರ ದೇಶದ ಉಲ್ಲೇಖವಿದೆ. ಈ ಕರ್ಣಪಾರ್ಯನ ಕಾಲ ೧೧೬೦ ವೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಅಚ್ಚರಿಯ ವಿಷಯವೆಂದರೆ ಕನ್ನಡದ ಪಂಪ ತನ್ನ ಭಾರತದಲ್ಲಿ ಅರ್ಜುನನನ್ನು ಹೊಗಳುವ ಸಂದರ್ಭದಲ್ಲಿ ದ್ರೋಣರ ಬಾಯಿಯಿಂದ 'ಅರೇ ಹೋಯ್' ಎಂಬ ಶಬ್ದವನ್ನು ಉಚ್ಚರಿಸಿದ್ದಾನೆ. ಕ್ರಿ.ಶ. ೧೨೦೯ ರಲ್ಲಿ ಜನ್ನನು ತನ್ನ 'ಅನಂತನಾಥ ಪುರಾಣ'ದಲ್ಲಿ 'ಊಠಿ ಊಠಿ ಮಾಗಾ ಬೈಸ ಜಾ ತೂ ಹಳೂ' (ಏಳು ಏಳು ನಿಧಾನವಾಗಿ ನೀನು ಹಿಂದೆ ಹೋಗಿ ಕುಳಿತುಕೋ) ಎಂದು ಮರಾಠಿ ವಾಕ್ಯವನ್ನೇ ಬರೆದಿದ್ದಾನೆ.

ಕರ್ನಾಟಕ ಮತ್ತು ಮಹಾರಾಷ್ಟ್ರಗಳ ಸಂಬಂಧ ಹಳೆಯದ್ದು. ಮರಾಠಿಯ ಮೊಟ್ಟಮೊದಲ ಶಿಲಾಶಾಸನ ಸಿಕ್ಕಿರುವುದೇ ಕರ್ನಾಟಕದ ಶ್ರವಣಬೆಳಗೋಳದಲ್ಲಿ. ಆ ಶಿಲಾಶಾಸನದಲ್ಲಿ ಕೆತ್ತಿರುವ ವಾಕ್ಯವೇ ಮರಾಠಿಯ ಮೊಟ್ಟಮೊದಲ ಶಿಲಾಶಾಸನವೆಂದು ಸಂಶೋಧಕರ ಅಭಿಪ್ರಾಯವಾಗಿದೆ. ಶ್ರವಣಬೆಳಗೋಳದಲ್ಲಿ ನಿಂತಿರುವ ಗೊಮ್ಮಟೇಶ್ವರನ ಪಾದದ ಬುಡದಲ್ಲಿ 'ಶ್ರೀ ಚಾವುಂಡರಾಜೇ ಕರವೀಯಲೇ' ಎಂದೂ 'ಗಂಗಾರಾಜೇ ಸುತ್ತಾಲೆ ಕರವೀಯಲೇ' ಎಂಬ ವಾಕ್ಯಗಳು ಕಾಣಸಿಗುತ್ತವೆ. ಚಾವುಂಡರಾಯನ ಕಾಲ ೯ನೆಯ ಶತಮಾನ. ಆ ಹೊತ್ತಿಗಾಗಲೇ ಮರಾಠಿ ಭಾಷೆಯು ಚಾಲ್ತಿಯಲ್ಲಿತ್ತು ಎಂಬುದು ಈ ಶಾಸನಗಳ ವಾಕ್ಯಗಳಿಂದ ಗೊತ್ತಾಗುತ್ತದೆ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿಯೂ ಅಲ್ಲಲ್ಲಿ ಮರಾಠಿ ಪದಗಳ ಬಳಕೆಯಾಗಿರುವುದನ್ನು ಕಾಣಬಹುದು. ಅಲ್ಲಮಪ್ರಭುವಿನ ಒಂದು ವಚನದಲ್ಲಿ

"ಹೆಂಡತಿಯಿಲ್ಲದ ಗಂಡಂಗೆ
ಆರು ಮಾನಿಸ ಮಕ್ಕಳು
ಅಖಂಡಿತ ಗುಹೇಶ್ವರ ಹಾ ನಿರಾಳು ರೇ."[೨]

ಎಂದು ಉಲ್ಲೇಖಿತವಾಗಿದೆ. ಸೊನ್ನಲಗಿಯ ಸಿದ್ಧರಾಮನ ವಚನಗಳಲ್ಲಿಯೂ ಮರಾಠಿ ಪದಗಳು ಸಾಕಷ್ಟು ಬಂದಿವೆ. ಸಿದ್ಧರಾಮ ಕನ್ನಡದವನಾಗಿದ್ದರೂ ಕನ್ನಡ ಮರಾಠಿ ಎಂಬ

ಭೇದವಿಲ್ಲದೆಯೇ ಆತ ಸೊಲ್ಲಾಪುರದ ಗ್ರಾಮದೇವತೆಯಾಗಿ ರೂಪುಗೊಂಡ. ಬಸವಣ್ಣ ಮತ್ತು ಚನ್ನಬಸವಣ್ಣನವರ ವಚನಗಳಲ್ಲಿಯೂ ಒಂದೆರಡು ಕಡೆಗಳಲ್ಲಿ ಮರಾಠಿ ಶಬ್ದಗಳು ಬಂದಿವೆ.

ಮಹಾರಾಷ್ಟ್ರದ ವಾರಕರೀ ಪಂಥ ಹಾಗೂ ಕನ್ನಡ ನಾಡಿನ ದಾಸಪಂಥಗಳು ಒಂದೇ ಕಾಲದಲ್ಲಿ ಹುಟ್ಟಿದವುಗಳು. ಈ ಎರಡೂ ಪರಂಪರೆಗಳ ಮುಖ್ಯ ವಸ್ತು ಕೃಷ್ಣಭಕ್ತಿ ಅಥವಾ ವಿಠಲಭಕ್ತಿಯೇ ಆಗಿದೆ. ಪಂಢರಪೂರದಲ್ಲಿ ನೆಲೆಸಿರುವ ವಿಠಲನು ಕನ್ನಡದವನೆಂದು ಮರಾಠಿ ಸಂತರು ಘಂಟಾಘೋಷವಾಗಿಯೇ ಹೇಳಿದ್ದಾರೆ. ಮರಾಠಿಯ ಶ್ರೇಷ್ಠ ಸಂತನಾದ ಜ್ಞಾನೇಶ್ವರನು ವಿಠಲನನ್ನು ಕನ್ನಡಿಗನೆಂದು ಕರೆದಿದ್ದಾನೆ.

"ಕಾನಡಾ ಹೋ ವಿಠ್ಠಲ ಕರ್ನಾಟಕು
ಯೇಣಿ ಮಜ ಲಾವಿಲೇ ವೇಧಿಂ."[೩]

ಎಂದು ವಿಠಲನು ಕರ್ನಾಟಕದಿಂದ ಪಂಢರಪುರಕ್ಕೆ ಬಂದಿದ್ದಾನೆಂದು ಹೇಳುತ್ತಾನೆ. ವಿಠಾಬಾಯಿಯೂ ಒಬ್ಬ ಶ್ರೇಷ್ಠ ಸಂತಳಾಗಿದ್ದಳು. ಅವಳ ಅಭಂಗದಲ್ಲಿಯೂ ಕರ್ನಾಟಕದ ಪ್ರಸ್ತಾಪ ಬರುತ್ತದೆ.

"ಪಂಢರಪೂರೀ ಗೇಲೆ ಪ್ರಾರ್ಥಿಲೆ ವಿಠ್ಠಲಾ
ಚಿದಂಬರ ಕೋಣ ಸಾಂಗೆ ಮಲಾ
ರಾತ್ರೀ ಹೋ ದೃಷ್ಟಾಂತೀ ವಿಠ್ಠಲ ಸಾಂಗತೀ
ರೂಪ ಹೋವೋನಿ ಬೋಲತೀ ಚಿದಂಬರಾಚೆ
ಮೀ ಅವತರೀಲೋ ಚಿದಂಬರ ರೂಪೆ
ಜಾವೆ ತುಲಾ ತೇಥೆ ಕರ್ನಾಟಕ
ವಿಠಾಬಾಯಿ ಮ್ಹಣೆ ಆನಂದೆ ನಿಘಾಲೆ
ಕುಂದಗೋಳಿ ಆಲೆ ಸ್ವಾಮೀ ಜವಳೀ."[೪]

ಸಂತ ಏಕನಾಥನು 'ನಮೋ ಕಾನಡಿ ಭಾಷಾ' ಎಂದು ಕನ್ನಡ ಭಾಷೆಯನ್ನು ಗೌರವಿಸಿದ್ದಾನೆ. ಆತನ ಕಾವ್ಯ ಕೃತಿಗಳಲ್ಲಿ ಕನ್ನಡ ಪದಗಳು ಬಳಕೆಯಾಗಿವೆ. ಏಕನಾಥ ಕನಕದಾಸರು ಸಮಕಾಲೀನರು. ಏಕನಾಥನ ಭಾರುಡಗಳ ಮೇಲೆ ಕನಕದಾಸನ ಮಂಡಿಗೆಗಳ ಪ್ರಭಾವವಾಗಿರುವುದನ್ನು ಕಾಣಬಹುದು. ಮರಾಠಿ ಸಂತ ಸಾಹಿತ್ಯದಲ್ಲಿ ಮುಕ್ತೇಶ್ವರನಿಗೆ ವಿಶಿಷ್ಟವಾದ ಸ್ಥಾನವಿದೆ. ಮುಕ್ತೇಶ್ವರ ಏಕನಾಥನ ಮೊಮ್ಮಗ. ಮುಕ್ತೇಶ್ವರನ ತಂದೆ ಬಾಲಕೃಷ್ಣ ಪಂತ ಅಥವಾ ಚಿಂತಾಮಣಿ ಗದಗ ಹತ್ತಿರದ ಡಂಬಳದಲ್ಲಿ ವಾಸಿಸುತ್ತಿದ್ದ. ತುಂಗಭದ್ರಾ ನದಿ ತೀರದ ಚೌಡದಾನಪುರದಲ್ಲಿ ಮುಕ್ತೇಶ್ವರನ ದೇವಾಲಯವಿದೆ. ಮುಕ್ತೇಶ್ವರನ ಮೇಲೆ ಕುಮಾರವ್ಯಾಸನ ಪ್ರಭಾವವಾಗಿದೆಯೆಂದು ಶಂ. ಬಾ. ಜೋಶಿ ಹೇಳಿದ್ದಾರೆ.

ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯನ್ನು ಶಾಂತಲಿಂಗ ಸ್ವಾಮಿಗಳು ಮರಾಠಿಗೆ ಅನುವಾದಿಸಿದ್ದಾರೆ. ಕುಮಾರವ್ಯಾಸನ ಕಾವ್ಯವನ್ನು ಮರಾಠಿಗೆ ಅನುವಾದಿಸಿದವನು ಚಂದ್ರಾತ್ಮಜ ರುದ್ರ, ಈತನ ಕಾಲವನ್ನು ೧೬೪೦-೧೭೦೦ ಎಂದು ಗುರುತಿಸಲಾಗಿದೆ. 'ನನಗೆ ಸಂಸ್ಕೃತ ಗೊತ್ತಿಲ್ಲ; ಕರ್ನಾಟಕದ ಕವಿ ಕುಮಾರವ್ಯಾಸನನ್ನು ಆಧರಿಸಿ ನಾನು ಕಾವ್ಯ ರಚಿಸುತ್ತಿರುವೆ' ಎಂದು ಚಂದ್ರಾತ್ಮಜ ರುದ್ರ ಹೇಳಿಕೊಂಡಿದ್ದಾನೆ.

"ಮಝು ಸಂಸ್ಕೃತ ನಾಹೀ ಅಭ್ಯಾಸ
ಕರ್ನಾಟಕ ಕವಿ ಕುಮಾರವ್ಯಾಸ
ತ್ಯಾಚೇನಿ ಆಧಾರ ಗ್ರಂಥ ವಿಲಾಸ
ಪ್ರಾರಂಭಿಲಾ ಹಾ ಹೇತು."[೫]

ಎಂದು ತನ್ನ ಕಾವ್ಯದ ಆರಂಭದಲ್ಲಿಯೇ ಸ್ಪಷ್ಟಪಡಿಸುತ್ತಾನೆ.

ಚಂದ್ರಾತ್ಮಜ ರುದ್ರ ಮರಾಠಿಯಂತೆಯೇ ಕನ್ನಡದಲ್ಲಿಯೂ ಕಾವ್ಯವನ್ನು ಬರೆದಿದ್ದಾನೆ. ಆತ ಕನ್ನಡ ಮರಾಠಿಯ ಸ್ನೇಹಸೇತುವೆಯಾಗಿದ್ದನೆಂದು ಮರಾಠಿಯ ಖ್ಯಾತ ಸಂಶೋಧಕರಾದ ಪಂಡಿತ ಅವಳೀಕರರು ಅಭಿಪ್ರಾಯಪಟ್ಟಿದ್ದಾರೆ. ಆತನು ಭಾಮೀನಿಯಲ್ಲಿ ಬರೆದ ಕನ್ನಡದ ಪದ್ಯಗಳು ದೊರಕಿವೆ. ೧೬೪೦-೧೭೦೫ ಕಾಲದಲ್ಲಿ ಜೀವಿಸಿದ್ದ ಕಾಖಂಡಕಿಯ ಮಹಿಪತಿದಾಸರು ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಕೀರ್ತನೆಗಳನ್ನು ಬರೆದಿದ್ದಾರೆ. ಮಹಿಪತಿದಾಸರ ೭೫೪ ಕೀರ್ತನೆಗಳು ದೊರಕಿದ್ದು ಅದರಲ್ಲಿ ೬೮೫ ಕನ್ನಡವಾದರೆ ೪೫ ಮರಾಠಿ ರಚನೆಗಳಿವೆ. ಸಿಂದಗಿಯ ಜಕ್ಕಪ್ಪಯ್ಯನವರ 'ಅಗ್ನಿ ಪರೀಕ್ಷೆ' ಖಂಡಕಾವ್ಯವು ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿದೆ. ಒಂದೇ ಕಥೆಯನ್ನು ಒಂದೇ ಓಘದಲ್ಲಿ ಎರಡು ಭಾಷೆಗಳಲ್ಲಿ ಹೇಳುತ್ತ ಹೋದ ಉದಾಹರಣೆ ಬಹುಶಃ ಬೇರೆ ಭಾಷೆಗಳ ಇತಿಹಾಸದಲ್ಲಿ ದೊರೆಯಲಿಕ್ಕಿಲ್ಲ.

"ಗಣೇಶ ಅಂಬಾ ವಿಷ್ಣು ಸಾಂಬಾ ಸೂರ ಕದಂಬ ವಂದುನೀ ।
ದಿನೇಶ ಸದ್ಗುರು ಪರೇಶ ಪಾದ ಪದ್ಮ ಚಿಂತುನೀ ॥
ಆಗ ಬಳಿಕಲ್ಲಿಂದ ಕಪಿವೃಂದಮಂ ಕೂಡಿ ।
ರಾಘವೇಂದ್ರ ತೆಂಕಡಲ ತೀರಕೆ ಬರಲು
ಪೋಗಿ ಕಾಂಬುವೆನೆಂದು ಬಂದ ವಿಭೀಷಣಗೆ ಲಂಕಾಧಿಪತ್ಯ ಕೊಟ್ಟಾ ।"[೬]

ಹೀಗೆ ಈ ಕಾವ್ಯ ಕನ್ನಡ ಮರಾಠಿ ಎರಡೂ ಭಾಷೆಗಳಲ್ಲಿ ಹರಿಯುತ್ತದೆ.

ಮರಾಠಿ ಸಂತ ಪರಂಪರೆಯಲ್ಲಿ ಸಂತ ರಾಮದಾಸರಿಗೆ ಹಿರಿಯ ಸ್ಥಾನವಿದೆ. ಅವರು ಕರ್ನಾಟಕವನ್ನು ಕುರಿತು 'ಚಿತ್ರಕಲಾ ನಾನಾ ನಾಟಕ ಮಣನಿ ನಾಮ ಕರ್ನಾಟಕ' (ಚಿತ್ರಕಲೆ, ನಾನಾ ನಾಟಕಗಳು ಇರುವದರಿಂದಾಗಿ ಕರ್ನಾಟಕವಾಗಿದೆ) ಎಂದು ಹೇಳಿದ್ದಾರೆ. ಗುರ್ಲಹೊಸೂರಿನ ಅವಧೂತರಾಗಿದ್ದ ಚಿದಂಬರ ದೀಕ್ಷಿತರ ಜೀವನ ಚರಿತ್ರೆ ಮರಾಠಿಯಲ್ಲಿದೆ. ಚಿದಂಬರ ದೀಕ್ಷಿತರ

ಪರಮ ಶಿಷ್ಯರಾದ ರಾಜಾರಾಮ ತನ್ನ ಅಭಂಗಗಳನ್ನು ಮರಾಠಿಯಲ್ಲಿ ಬರೆದರೂ ಅವರ ಸಮಾಧಿ ಇರುವುದು ಬೆಳಗಾವಿಯ ಗೋವಾವೇಸ್ ಬಳಿ.

ಮರಾಠಿ ಜನರ ಶ್ರದ್ಧಾಸ್ಥಾನಗಳಲ್ಲಿ ಜ್ಞಾನೇಶ್ವರನೂ ಒಬ್ಬ. ಜ್ಞಾನೇಶ್ವರ ೧೩ನೆಯ ಶತಮಾನದವ. ಈತ ಸಂಸ್ಕೃತದ ಭಗವದ್ಗೀತೆಯನ್ನು ಜನ ಭಾಷೆಯಾಗಿರುವ ಮರಾಠಿಯಲ್ಲಿ ಬರೆದ. ಈತನ ಕೈಯಿಂದ ದೇವಭಾಷೆಯ ಭಗವದ್ಗೀತೆ ಮನುಷ್ಯ ಭಾಷೆಯಲ್ಲಿ 'ಜ್ಞಾನೇಶ್ವರಿ'ಯಾಯಿತು. ಈ ಜ್ಞಾನೇಶ್ವರಿಯಲ್ಲಿ ಅಸಂಖ್ಯಾತ ಕನ್ನಡ ಪದಗಳಿರುವುದನ್ನು ಸಂಶೋಧಕರು ಗುರುತಿಸಿದ್ದಾರೆ. ಮಹಾರಾಷ್ಟ್ರದ ಸಂಸ್ಕೃತಿ ಸಂಶೋಧಕರಲ್ಲಿ ಒಬ್ಬರಾಗಿರುವ ಶಂ ಬಾ ಜೋಶಿಯವರು 'ಜ್ಞಾನೇಶ್ವರಿಯನ್ನು ಅರ್ಥಮಾಡಿಕೊಳ್ಳಬೇಕಾದರೆ, ಅರ್ಥ ಮಾಡಿಕೊಳ್ಳುವವನಿಗೆ ಕನ್ನಡ ಬರಲೇ ಬೇಕು' ಎಂದು ಹೇಳಿದ್ದಾರೆ. ಇದನ್ನು ಮರಾಠಿಯ ಸಂಶೋಧಕರೂ ಒಪ್ಪಿಕೊಂಡಿದ್ದಾರೆ. ಜ್ಞಾನೇಶ್ವರಿಯಲ್ಲಿ ಕನ್ನಡದ ಶಬ್ದಗಳಷ್ಟೇ ಅಲ್ಲ ವಾಕ್ಯಗಳೂ ಕಾಣಸಿಗುತ್ತವೆ. ಜ್ಞಾನೇಶ್ವರನೇ ಮೊಟ್ಟ ಮೊದಲಿಗೆ ಪಂಢರಪೂರದ ವಿಠ್ಠಲನು ಕನ್ನಡದವನೆಂದು ಹೇಳಿದ್ದು. ಜ್ಞಾನೇಶ್ವರನ ಒಂದು ಪದ್ಯಕ್ಕೂ ಪುರಂದರದಾಸ ಬರೆದ ಒಂದು ಪದ್ಯಕ್ಕೂ ವಿಲಕ್ಷಣವಾದ ಸಾಮ್ಯವಿದೆ. ಪುರಂದರದಾಸ ಮರಾಠಿಯಲ್ಲಿರುವ ಜ್ಞಾನೇಶ್ವರನ ಈ ಪದ್ಯವನ್ನು ಯಥಾವತ್ತಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ.

**ಜ್ಞಾನೇಶ್ವರನ ಪದ್ಯ (ಮರಾಠಿ)**

"ಕಾಂಟ್ಯಾಚ್ಯಾ ಅಣಿವರ ವಸತಿ ತೀನ ಗಾಂವ
ದೋನ ಓಸಾಡ, ಏಕ ವಸೇಚಿನಾ ॥
ವಸೇಚಿನಾ ತೇಥೆ ಅಲೆ ತೀನ ಕುಂಬಾರ
ದೋನ ಥೋಟೆ, ಏಕ ಘಡೀಚ ನಾ ॥
ಘಡೀಚನಾ ತ್ಯಾನೆ ಘಡಲೀ ತೀನ ಮಡಕಿ
ದೋನ ಕಚ್ಚೀ, ಏಕ ಭಾಜೆಚಿ ನಾ ॥
ಭಾಜೆಚಿನಾ ತ್ಯಾತ ರಾಂಧಲೆ ತೀನ ಮುಗೆ
ದೋನ ಹಿರವೆ, ಏಕ ಶಿಜೆಚಿ ನಾ ॥
ಶಿಜೆಚಿ ನಾ ತೇಥೆ ಅಲೆ ತೀನ ಪಾಹುಣೆ
ದೋನ ರುಸಲೆ, ಏಕ ಜೇವೀಚ ನಾ ॥
ಜೇವೀಚ ನಾ ತ್ಯಾಲಾ ದಿಲ್ಹ್ಯಾ ತೀನ ಮ್ಹಸೀ
ದೋನ ವಾಂಜಾ, ಏಕ ಫಳೇಚಿ ನಾ ॥
ಫಳೇಚಿ ನಾ ತಿಲಾ ಛಾಲೆ ತೀನ ಟೊಣಗೆ
ದೋನ ಮೇಲೆ, ಏಕ ವಾಂಚೆಚಿ ನಾ ॥
ವಾಂಚೆಚಿ ನಾ ತ್ಯಾಚೆ ಅಲೆ ತೀನ ರುಪಯೆ

ದೋನ ಖೋಟೆ, ಏಕ ಚಾಲೇಚಿನಾ ॥
ಚಾಲೇಚಿ ನಾ ತೇಥೆ ಅಲೆ ತೀನ ಪಾರಖೀ
ದೋನ ಅಂಧಳೆ, ಏಕ ದಿಸೇಚೆ ನಾ ॥
ದಿಸೇಚಿ ನಾ ತ್ಯಾಲಾ ಮಾರಲ್ಯಾ ತೀನ ಬುಕ್ಕಾ
ದೋನ ಹುಕಲ್ಯಾ, ಏಕ ಲಾಗೇಚಿ ನಾ ॥
ಜ್ಞಾನದೇವ ಮ್ಹಣೆ ಯಾಚಾ ತೂ ಅನುಭವ
ಸದ್ಗುರುವಾಚುನಿ ಕಳೇಚಿ."[೭]

ಎಂದು ಹೇಳಿದ್ದಾನೆ.

ಅದೇ ಪದ್ಯವನ್ನು ಕುರಿತು ಪುರಂದರದಾಸ ಕನ್ನಡದಲ್ಲಿ ಹೇಳಿದ್ದನ್ನು ಕಾಣುತ್ತೇವೆ.

**ಪುರಂದರದಾಸರ ಪದ್ಯ (ಕನ್ನಡ)**

"ಮುಳ್ಳು ಕೊನೆಯ ಮೇಲೆ ಮೂರು ಕೆರೆಯ ಕಟ್ಟಿ
ಎರಡು ಬರಿದು, ಒಂದು ತುಂಬಲಿಲ್ಲ
ತುಂಬಲಿಲ್ಲದ ಕೆರೆಗೆ ಬಂದರು ಮೂವರು ಒಡ್ಡರು
ಇಬ್ಬರು ಕುಂಟರು, ಒಬ್ಬಗೆ ಕಾಲೇ ಇಲ್ಲ
ಕಾಲು ಇಲ್ಲದ ಒಡ್ಡರಿಗೆ ಕೊಟ್ಟರು ಮೂರು ಎಮ್ಮೆಗಳ
ಎರಡು ಬರಡು, ಒಂದಕ್ಕೆ ಕರುವೆ ಇಲ್ಲ
ಕರುವಿಲ್ಲದ ಎಮ್ಮೆಗೆ ಕೊಟ್ಟರು ಮೂರು ಹೊನ್ನುಗಳ
ಎರಡು ಸವಕಲು, ಒಂದು ಸಲ್ಲಲೆ ಇಲ್ಲ
ಸಲ್ಲದ ಹೊನ್ನುಗಳಿಗೆ ಬಂದರು ಮೂರು ನೋಟಕಾರರು.
ಇಬ್ಬರು ಕುರುಡರು ಒಬ್ಬಗೆ ಕಣ್ಣೇ ಇಲ್ಲ
ಕಣ್ಣಿಲ್ಲದ ನೋಟಕರಿಗೆ ಕೊಟ್ಟರು ಮೂರು ಊರುಗಳ
ಎರಡು ಹಾಳೂರು, ಒಂದು ಒಕ್ಕಲೇ ಇಲ್ಲ
ಒಕ್ಕಲಿಲ್ಲದ ಊರಿಗೆ ಬಂದರು ಮೂವರು ಕುಂಬಾರರು
ಇಬ್ಬರು ಚೊಂಚರು, ಒಬ್ಬಗೆ ಕೈಯೇ ಇಲ್ಲ
ಕೈ ಇಲ್ಲದ ಕುಂಬಾರ ಮಾಡಿದ ಮೂರು ಮಡಿಕೆಗಳ
ಎರಡು ಒಡಕು, ಒಂದಕ್ಕೆ ಬುಡವೇ ಇಲ್ಲ
ಬುಡವಿಲ್ಲದ ಗಡಿಗೆಗೆ ಹಾಕಿದರು ಮೂರು ಅಕ್ಕಿಗಳ
ಎರಡು ಹಂಜಕ್ಕಿ, ಒಂದು ಬೇಯಲಿಲ್ಲ
ಬೇಯಲಿಲ್ಲದ ಅಕ್ಕಿಗೆ ಬಂದರು ಮೂವರು ನೆಂಟರು

ಇಬ್ಬರು ಉಣ್ಣರು, ಒಬ್ಬಗೆ ಹಸಿವೇ ಇಲ್ಲ
ಹಸಿವೆ ಇಲ್ಲದ ನೆಂಟನಿಗೆ ಕೊಟ್ಟರು ಮೂರು ಟೊಣಪೆಗಳ
ಎರಡು ಸೋತವು, ಒಂದು ತಾಕಲೇ ಇಲ್ಲ
ಇನ್ನು ಈ ಅರ್ಥಗಳೆಲ್ಲ ಪುರಂದರ ವಿಠ್ಠಲ ಬಲ್ಲ
ಅನ್ಯರಾರೂ ತಿಳಿದವರಿಲ್ಲ."[೮]

ಅನುವಾದಿಸಿದ್ದಾರೆ. ಈ ಪದ್ಯ ಬೆಡಗಿನ ರೂಪದಲ್ಲಿದೆ. ಮರಾಠಿಯಲ್ಲಿ ಬೆಡಗಿನ ಪದಗಳಿಗೆ 'ಭಾರೂಢ' ಎನ್ನುತ್ತಾರೆ. ಕನ್ನಡದಲ್ಲಿ ಇದನ್ನು 'ಮಂಡಿಗೆ' ಎಂದೂ ಕರೆಯುತ್ತಾರೆ. ಮರಾಠಿಯ 'ಭಾರೂಢ' ಕನ್ನಡ 'ಬೆಡಗು' ಮತ್ತು 'ಮಂಡಿಗೆ'ಗಳ ತೌಲನಿಕ ಅಧ್ಯಯನ ಇನ್ನೂ ನಡೆಯಬೇಕಾಗಿದೆ.

ಜ್ಞಾನೇಶ್ವರನಿಗೆ ಕನ್ನಡವು ಚೆನ್ನಾಗಿ ಬರುತ್ತಿರಬೇಕು. ಆತನ ಮೇಲೆ ಕನ್ನಡದ ವಚನಕಾರರ ಪ್ರಭಾವವಾಗಿರುವುದನ್ನು ಗುರುತಿಸಬಹುದು. ಆತನ ಒಂದು ಅಭಂಗವಂತೂ ಚೊಕ್ಕ ಕನ್ನಡದಲ್ಲಿದೆ.

"ಅಕ್ಕಾ ನೀ ಕೇಳೇ ಚಿಕ್ಕನ ಮಾತು
ಕಾರಲೇದಾಸಿಗೆ ಮರುಳಾದನೇ ।
ಚೆಲುವಾನೆ ಚೆಲುವಾನೆ ಪಂಢರಿರಾಯಾ
ಚೆಲುವಾನೆ ಎಲ್ಲಿ ದೊರಕುವನೇ ॥
ಪುಂಡಲೀಕನ ಭಕ್ತಿಗೆ ಬಂದಾ–
ರುಖುಮಾದೇವೀ ವರವಿಠಲನೆ."[೯]

ವಚನಕಾರರು ತಮ್ಮ ವಚನಗಳಲ್ಲಿ ಬಳಸಿದ ಶೂನ್ಯ, ಲಿಂಗ, ಲಿಂಗಭೇದ, ಗುರುಲಿಂಗ, ಶೂನ್ಯಲಿಂಗ, ಆರಾಧ್ಯಲಿಂಗ ಮುಂತಾದ ಪದಗಳನ್ನು ಜ್ಞಾನೇಶ್ವರ ತನ್ನ ಕೃತಿಯಲ್ಲಿ ಪದೇ ಪದೇ ಬಳಸಿದ್ದಾನೆ.

ಕನ್ನಡದ ಮಹತ್ವದ ಶರಣ ಸಾಹಿತ್ಯ ಕೃತಿಗಳಾದ ಚನ್ನಬಸವಣ್ಣನವರ ಕರಣ ಹಸಿಗೆ, ಚಾಮರಸನ ಪ್ರಭುಲಿಂಗಲೀಲೆ, (ಮರಾಠಿಯಲ್ಲಿ ಲೀಲಾ ವಿಶ್ವಂಭರ ಹೆಸರಿನಿಂದ ಅನುವಾದಗೊಂಡಿದೆ), ನಿಜಗುಣ ಶಿವಯೋಗಿಯ ವಿವೇಕ ಚಿಂತಾಮಣಿ, ರಾಘವಾಂಕ ಕವಿಯ ಸಿದ್ಧರಾಮ ಚಾರಿತ್ರ ಮೊದಲಾದ ಕೃತಿಗಳು ಮರಾಠಿ ಭಾಷೆಗೆ ೧೬ನೇ ಶತಮಾನದಲ್ಲಿಯೇ ಅನುವಾದಗೊಂಡಿವೆ. ಬೆಳಗಾವಿಯಲ್ಲಿ ವಾಸವಾಗಿದ್ದ ಎಂ.ಪಿ. ಪಾಟೀಲರು ಕನ್ನಡ ಮರಾಠಿ ಎರಡೂ ಭಾಷೆಗಳಲ್ಲಿ ಉತ್ಕೃಷ್ಟವಾದ ಸಂಶೋಧನಾತ್ಮಕ ಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಅಷ್ಟೇ ಅಲ್ಲ 'ಜ್ಞಾನಪ್ರಸಾದ' ಎಂಬ ಮಾಸಪತ್ರಿಕೆಯನ್ನು ಕನ್ನಡ ಮತ್ತು ಮರಾಠಿ ಎರಡೂ ಭಾಷೆಗಳಲ್ಲಿ ಹಲವು ವರ್ಷಗಳ ವರೆಗೆ ಪ್ರಕಟಿಸುತ್ತ ಬಂದಿದ್ದರು.

ನಾನು ಗಡಿಭಾಗದ ಗಡಹಿಂಗ್ಲಜ ತಾಲೂಕಿನ ಕೆಲವು ಹಳ್ಳಿಗಳಲ್ಲಿ ಕ್ಷೇತ್ರಕಾರ್ಯ ಮಾಡಿದಾಗ, ಆಶ್ಚರ್ಯಕರ ಸಂಗತಿಯೊಂದು ತಿಳಿದುಬಂದಿತು. ಹಲಕರ್ಣಿ ಗ್ರಾಮದಲ್ಲಿ ಒಬ್ಬ ಜಂಗಮರ

ಮನೆಯಲ್ಲಿ ನಿಜಗುಣ ಶಿವಯೋಗಿ ನಾಟಕದ ಹಸ್ತಪ್ರತಿ ದೊರೆಯಿತು. ಅದನ್ನು ತೆರೆದು ನೋಡಿದರೆ, ಭಾಷೆ ಕನ್ನಡ, ಲಿಪಿ ಮರಾಠಿಯಾಗಿತ್ತು. ಮಹಾರಾಷ್ಟ್ರದ ಹಳ್ಳಿಯಾಗಿರುವ ಕಾರಣ, ಅಲ್ಲಿನ ಮರಾಠಿ ಭಾಷಿಕರು ನಿಜಗುಣ ಶಿವಯೋಗಿ ನಾಟಕವನ್ನು ಮರಾಠಿ ಲಿಪಿಯಲ್ಲಿ ಪ್ರತಿ ಮಾಡಿಕೊಂಡಿದ್ದರು. ಅದೇ ತಾಲೂಕಿನ ಇದರಗುಚ್ಚಿ ಎಂಬ ಗ್ರಾಮದಲ್ಲಿ ಕೆಂಪಣ್ಣಾ ಕಾಡಪ್ಪನವರ ಎಂಬವರ ಮನೆಯಲ್ಲಿ ಸಂಗ್ಯಾಬಾಳ್ಯಾ ಮತ್ತು ರಾಧಾನಾಟ ಎರಡು ನಾಟಕದ ಹಸ್ತಪ್ರತಿಗಳನ್ನು ಪರಿಶೀಲಿಸಿದಾಗ ಅವು ಕೂಡ ಕನ್ನಡ ಭಾಷೆಯ ನಾಟಕಗಳು, ಲಿಪಿ ಮಾತ್ರ ಮರಾಠಿಯಾಗಿತ್ತು. ಗಡಹಿಂಗ್ಲಜ ತಾಲೂಕಿನ ಸುತ್ತಮುತ್ತಲಿನ ಮುತ್ನಾಳ, ನಿಲಜಿ, ನೂಲ, ಜರಳಿ, ಹಿಟ್ಟಣಗಿ, ಕಡಲಗಿ, ಬಸರಗಿ ಮೊದಲಾದ ಗ್ರಾಮಗಳಲ್ಲಿ ಪ್ರತಿವರ್ಷ ಜಾತ್ರಾ ಸಂದರ್ಭದಲ್ಲಿ ಈ ನಾಟಕಗಳನ್ನು ಆಡುತ್ತಾರೆ. ಮಾನಸಿಕವಾಗಿ ಈ ಹಳ್ಳಿಗಳೆಲ್ಲ ಮಹಾರಾಷ್ಟ್ರಕ್ಕೆ ಸೇರಿದ್ದರೂ ಅಲ್ಲಿನ ಜನಸಮುದಾಯ ಇನ್ನೂ ಕನ್ನಡದ ಸಂಪರ್ಕವನ್ನು ಕಡಿದುಕೊಂಡಿಲ್ಲ. ಗಡಹಿಂಗ್ಲಜದಲ್ಲಿ ಜಡಿಸಿದ್ಧೇಶ್ವರ ಬಿಲ್ವಾಶ್ರಮ ಇದೆ. ಅಲ್ಲಿ ನಾನು ಕ್ಷೇತ್ರಕಾರ್ಯ ಮಾಡಿದಾಗ ಮರಾಠಿ ಹಸ್ತಪ್ರತಿಗಳು ಇದ್ದುದು ಕಂಡು ಬಂದಿತು. ಕನ್ನಡದ ಸ್ವಾಮಿಗಳೊಬ್ಬರು ಅಲ್ಲಿ ಆಶ್ರಮ ಕಟ್ಟಿದ್ದು ಹೆಮ್ಮೆಯ ಸಂಗತಿಯಾಗಿದೆ.

ಗೋಕಾಕ ತಾಲೂಕಿನ ಮೂಡಲಗಿ ಕನ್ನಡ ಮರಾಠಿ ಸಂಸ್ಕೃತಿಗಳ ಸಮನ್ವಯಭೂಮಿಯಾಗಿದೆ. ಇಲ್ಲಿಯ ಶಿವಬೋಧರಂಗ ಮಠದಲ್ಲಿ ಅನೇಕ ಮರಾಠಿ–ಕನ್ನಡ ಹಸ್ತಪ್ರತಿಗಳು ನೋಡಲು ದೊರೆಯುತ್ತವೆ. ಅಲ್ಲಿಯ ಕೆಲವು ಕೃತಿಗಳ ವಿವರ ಹೀಗಿದೆ.

**ದೇಶಿಕ ಚರಿತ್ರೆ :**

ಮೂಡಲಗಿ ಶಿವಬೋಧರಂಗ ಮಠದ ಗದ್ದುಗೆಯಲ್ಲಿ 'ದೇಶಿಕ ಚರಿತ್ರ' ಎಂಬ ಹಸ್ತಪ್ರತಿ ಇದೆ. ಅದನ್ನು ಜಗುಲಿಯ ಮೇಲಿಟ್ಟು ನಿತ್ಯ ಪೂಜೆ ಮಾಡಲಾಗುತ್ತದೆ. ಆ ಹಸ್ತಪ್ರತಿಯನ್ನು ನಾವು ಗಮನಿಸಬೇಕಾದರೆ ಮಡಿಯಿಂದ ಒಳಗೆ ಹೋಗಬೇಕು. ದೇಶಿಕ ಚರಿತ್ರವು ಒಟ್ಟು ಏಳು ಅಧ್ಯಾಯಗಳಲ್ಲಿ ೮೯೬ ಪದ್ಯಗಳನ್ನು ಒಳಗೊಂಡಿದೆ. ಇದು ಮೂಡಲಗಿಯ ಮಠದ ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತದೆ. ಈ ಕೃತಿಯಲ್ಲಿ ಮೂಡಲಗಿ ಶಿವಬೋಧರಂಗದ ಪೀಠಾಧಿಪತಿಗಳಾದ ರಂಗಬೋಧ, ಅದ್ವಯಬೋಧ, ಶಿವಬೋಧ, ರಂಗಬೋಧ (ಎರಡನೆಯ) ಮತ್ತು ಶಿವಬೋಧ (ಎರಡನೆಯ) ಈ ಐದು ಜನ ಪ್ರಮುಖ ಸಂತರ ಬದುಕು ಸಾಧನೆಯ ವಿವರಗಳು ಇಲ್ಲಿ ದೊರೆಯುತ್ತವೆ.

ಈ ಕೃತಿಯನ್ನು ರಚಿಸಿದವನು ಗುರುನಾಥ. ಅವನ ಊರು ಘಟಪ್ರಭಾ ದಂಡೆಯ ಮೇಲಿನ ಮುತ್ನಾಪೂರ. ಆದರೆ ಆತ ಕೆಲವು ಕಾಲ ಹುಕ್ಕೇರಿಯಲ್ಲಿ ಬಂದು ನೆಲೆಸಿದ. ಹುಕ್ಕೇರಿಯಲ್ಲಿದ್ದಾಗಲೇ ದೇಶಿಕ ಚರಿತ್ರೆಯನ್ನು ಬರೆದು ಮುಗಿಸಿದ. ಈ ಪುಸ್ತಕವನ್ನು ಎರಡನೆಯ ಶಿವಬೋಧನ ಮಗ ಸಂಗಬೋಧ ಪ್ರತಿಮಾಡಿಕೊಂಡಿದ್ದಾನೆ. ಅಂತ್ಯಪ್ರಶಸ್ತಿಯಲ್ಲಿ ಹೀಗೆ ಹೇಳಿದ್ದಾನೆ:

"ಶಕೆ ೧೭೭೯ ಪ್ಲವಂಗನಾಮ ಸಂವತ್ಸರ ಅಶ್ವಿಜ ವದಿ ೩ ಇಂದುವಾರ ಶುಭದಿನ ದೇಶಿಕಚರಿತ್ರ ಗ್ರಂಥಲೇಖನ ಸಮಾಪ್ತಃ। ಶುಭಂ ಭವತು। ಶ್ರೀ ಸದ್ಗುರು ಶಿವಬೋಧಸ್ವಾಮಿ ಚರಣಕಮಲ ಭೃಂಗ ಸಂಗಬೋಧ ಲಿಖಿತೆ॥" ೧೦

ಮೂಲ ಕೃತಿ ರಚನೆಯಾದ ಎರಡು ವರ್ಷದ ತರುವಾಯ ಈ ಕೃತಿಯನ್ನು ಪ್ರತಿಮಾಡಿಕೊಂಡಿದ್ದು ತಿಳಿದುಬರುತ್ತದೆ.

ಮೂಲಡಗಿಯ ಪರಂಪರೆಯು ರಂಗಬೋಧರಿಂದ ಪ್ರಾರಂಭವಾಗುತ್ತಿದ್ದರೂ ಅವರ ತಂದೆ ಕೋನೇರಿ ಬೋಧರಿಂದ ಈ ಚರಿತ್ರೆ ಆರಂಭಗೊಳ್ಳುತ್ತದೆ. ಅವರು ಗೋದಾವರಿ ದಂಡೆಯ ಟಾಕಳಿ ಊರಿನವರು. ಅವರು ಸಹಜಬೋಧಸ್ವಾಮಿ ಮಠವನ್ನು ಅಸ್ತಿತ್ವಕ್ಕೆ ತಂದಿದ್ದರು. ಕೋನೇರಿಬೋಧರು ಕಾಶಿಯಲ್ಲಿ ನಿಧನರಾದರು. ಅವರ ಪತ್ನಿ ವೇಣುಬಾಯಿ ಸಹಗಮನ ಮಾಡಿದಳು. ಇವರ ಮಗ ರಂಗಬೋಧರು ಸನ್ಯಾಸಿಗಳಾಗಿ ಗೋಕಾಕದ ತಟೇಶ್ವರ ಸಮೀಪ ತಪಸ್ಸು ಮಾಡಿದರು. ಅವರು ವಿಠಲನ ಪರಮ ಭಕ್ತರಾಗಿದ್ದರು. ಪ್ರತಿವರ್ಷ ಪಂಡರಪೂರಕ್ಕೆ ದಿಂಡಿ ಹೋಗುತ್ತಿದ್ದರು. ಅವರು ಮೂಡಲಗಿ ಪರಂಪರೆಯನ್ನು ಪ್ರಾರಂಭ ಮಾಡಿದರು.

ರಂಗಬೋಧರ ನಂತರ ಅವರ ಮಗ ಅದ್ವಯಬೋಧರು ಈ ಪೀಠಕ್ಕೆ ಬಂದರು. ಅದ್ವಯಬೋಧರ ಪುತ್ರ ಮೊದಲನೆಯ ಶಿವಬೋಧರು ಪಾರ್ವತಿಬಾಯಿ ಅವರೊಂದಿಗೆ ವಿವಾಹವಾದರು. ಅವರಿಗೆ ಒಬ್ಬಳೇ ಮಗಳು ಜನಿಸಿದಳು. ಅವಳ ಹೆಸರು ಕಾಶಿಬಾಯಿ. ಅವರಿಗೆ ಪುತ್ರಲಾಭವಾಗಲಿಲ್ಲ. ಒಂದು ಸಲ ಹೊಸೂರು ಹಳ್ಳಿಗೆ ಹೋದಾಗ ಒಬ್ಬ ಬಾಲಕನನ್ನು ಕಂಡರು. ಅವನ ಹೆಸರು ಸಂಗಮನಾಥ. ಅವನಲ್ಲಿ ಯೋಗಿಯ ಲಕ್ಷಣಗಳಿದ್ದವು. ಆ ಹುಡುಗನನ್ನು ತಮ್ಮೊಂದಿಗೆ ಕರೆದುಕೊಂಡು ಬಂದರು. ಮುಂದೆ ತಮ್ಮ ಮಗಳು ಕಾಶಿಬಾಯಿ ಅವರೊಂದಿಗೆ ಮದುವೆ ಮಾಡಿದರು. ಸಂಗಮನಾಥನ ತಂದೆ-ತಾಯಿಗಳು ಭೀಮಾತೀರದವರು. ಅವರು ಬಸವಣ್ಣನವರ ಐಕ್ಯಭೂಮಿ ಕೂಡಲಸಂಗಮದಲ್ಲಿರುವ ಸಂಗಮೇಶ್ವರ ದೇವಸ್ಥಾನದ ಒಕ್ಕಲಾಗಿರಬಹುದು. ಇದಕ್ಕೆ ಸಾಕ್ಷಿಯೆನ್ನುವಂತೆ, ಸಂಗಮನಾಥನ ಮೊಮ್ಮಗ ಮಹಾಕವಿ ಚಂದ್ರಾತ್ಮಜರುದ್ರನು 'ಸಂಗಮೇಶ್ವರ' ತಮ್ಮ ಮನೆತನದ ಕುಲದೇವತೆಯೆಂದು ಹೇಳಿದ್ದಾನೆ.

ಶಿವಬೋಧರ ಕಾಲಕ್ಕೆ ಎರಡನೆಯ ಇಬ್ರಾಹಿಮ ವಿಜಯಪುರದ ಆದಿಲ್‌ಶಾಹಿ ಆಗಿದ್ದ. ಶಿವಬೋಧರನ್ನು ಒಮ್ಮೆ ಬಂಧಿಸಿಟ್ಟಿದ್ದ. ಆದರೆ ಅವರು ಕ್ಷಣಾರ್ಧದಲ್ಲಿ ಭಕ್ತನೊಬ್ಬನ ಮನೆಯಲ್ಲಿದ್ದರು. ಅವರನ್ನು ಪರೀಕ್ಷಿಸಬೇಕೆಂದು ನೈವೇದ್ಯವೆಂದು ಮಾಂಸದ ಅಡಿಗೆಯನ್ನು ಕೊಟ್ಟು ಕಳಿಸಿದ್ದನು. ಶಿವಬೋಧರ ದಿವ್ಯದೃಷ್ಟಿಯಿಂದ ಮಾಂಸದ ತುಂಡುಗಳು ಹೂಗಳಾಗಿ ಪರಿವರ್ತನೆಗೊಂಡಿದ್ದವು. ಶಿವಬೋಧರ ನಂತರ ಎರಡನೆಯ ರಂಗಬೋಧರು ಅಧಿಕಾರಕ್ಕೆ ಬಂದರು. ವೈರಾಗ್ಯಶೀಲರಾಗಿದ್ದ ಇವರು ಗೀತಾ ಅನುಷ್ಠಾನ ಮಾಡುತ್ತಿದ್ದರು. ಇವರಿಗೆ ನಾಲ್ವರು ಹೆಣ್ಣುಮಕ್ಕಳು ಹುಟ್ಟಿದ ನಂತರ ಒಬ್ಬ ಮಗ ಹುಟ್ಟಿದ ಆತನೇ ಎರಡನೆಯ ಶಿವಬೋಧರಾಗಿ ಈ ಪರಂಪರೆಯನ್ನು ಮುಂದುವರಿಸಿದರು.

**ರಂಗ ಬೋಧಿನಿ ಮತ್ತು ಯೋಗವಾಸಿಷ್ಠ :**

ರಂಗಭೋಧರು ಎರಡು ಕೃತಿಗಳನ್ನು ಮರಾಠಿ ಭಾಷೆಯಲ್ಲಿ ರಚಿಸಿದ್ದಾರೆ. ರಂಗಬೋಧಿನಿಯ ಒಂದೇ ಅಧ್ಯಾಯ ಇಂದು ಉಪಲಬ್ಧವಿದೆ. ಹಸ್ತಪ್ರತಿಯ ಮೊದಲ ಪುಟದಲ್ಲಿ ' ಇತಿ ಟೀಕಾ ಪದಭೇದ ಪ್ರಥಮೋಧ್ಯಾಯ' ಎಂದು ಕೊನೆಯ ಪುಟದಲ್ಲಿ 'ಇತಿಶ್ರೀ ಪದಭೇದ ಟೀಕಾಯಾಂ ಪ್ರಥಮೋಧ್ಯಾಯ ಸಮಾಪ್ತ' ಎಂಬ ನಿರ್ದೇಶನವಿದೆ. ರಂಗಬೋಧಿನಿ ಕೃತಿಯು ಕ್ರಿ.ಶ. ೧೬೬೮ರಲ್ಲಿ ರಚನೆಯಾಗಿರಬಹುದು. ಯೋಗವಾಸಿಷ್ಠ ಟೀಕೆಯನ್ನು ರಂಗಬೋಧರು ರಚಿಸಿದ್ದಾರೆ. ಸತತ ಮೂವತ್ತುಮೂರು ವರ್ಷಗಳ ಈ ಗ್ರಂಥ ರಚನೆಯಲ್ಲಿ ಅವರು ಕಳೆದರೆಂದು ಹೇಳಲಾಗುತ್ತದೆ. ೬೦೦೦ಕ್ಕಿಂತ ಹೆಚ್ಚು ಶ್ಲೋಕಗಳಿಗೆ ಟೀಕೆ ಬರೆಯುವ ಅವರ ಸಾಹಸ ಮೆಚ್ಚುವಂತಹದು.

'ಬೃಹದ್ ಯೋಗವಾಸಿಷ್ಠ'ದ ಉತ್ಪತ್ತಿ ಪ್ರಕರಣದಲ್ಲಿನ ಸರ್ಗ ೧೦೪ರಿಂದ ೧೦೯ ಈ ೬ ಸರ್ಗಗಳಲ್ಲಿ 'ಶಾಂಬರಿಕೋಪಾಖ್ಯಾನ' ಬಂದಿದೆ. ಅಲ್ಲಿ ಈ ಆಖ್ಯಾನಗಳ ಹೆಸರನ್ನು 'ಇಂದ್ರಜಾಲೋಪಾಖ್ಯಾನ' ಎಂದು ಕೊಡಲಾಗಿದೆ. ಮೂಲ ಕಥಾಭಾಗ ಒಟ್ಟು ೨೨೮ ಶ್ಲೋಕಗಳನ್ನು ಒಳಗೊಂಡಿದೆ. ಈ ಕಥೆಯನ್ನೇ ಲಘುಯೋಗ ವಾಸಿಷ್ಠದ ೯ನೆಯ ಸರ್ಗದ ಕೇವಲ ೯೦ ಶ್ಲೋಕಗಳಲ್ಲಿ ಕೊಡುವ ಪ್ರಯತ್ನ ಮಾಡಿದ್ದಾರೆ. ರಂಗಭೋಧರು ಈ ಸಂಕ್ಷೇಪದ ಆಧಾರದಿಂದ ತಮ್ಮ 'ಶಾಂವರಿಕೋಪಾಖ್ಯಾನ' ರಚಿಸಿದ್ದಾರೆ. ಕಥಾಭಾಗವನ್ನು ಪಂಡಿತ ಅವಳಿಕರ ಅವರು ಹೀಗೆ ವಿವರಿಸುತ್ತಾರೆ:

'ಈ ಕಥೆಯ ರೂಪರೇಷೆ : ಮುಂದೆ ಉತ್ತರಾಪಾಂಡವ ಹೆಸರಿನ ದೇಶದಲ್ಲಿ ಹರಿಶ್ಚಂದ್ರ ಕುಲೋತ್ಪನ್ನ ಲವಣರಾಜನು ರಾಜ್ಯವಾಳುತ್ತಿದ್ದನು. ಅವನ ಯಶೋಪುಷ್ಪ ಪರಾಗದಿಂದ ಪರ್ವತ ಶಿಖರಗಳು ಶುಭ್ರವಾಗಿದ್ದವು. ಅವನಿಗೆ ಕುಟಿಲತೆ ಗೊತ್ತಿರಲಿಲ್ಲ. ಉದ್ದಾಮತೆಯನ್ನು ಅವನು ಕಂಡಿರಲಿಲ್ಲ. ಇಂಥ ಲವಣರಾಜನು ಒಂದು ಆಸ್ಥಾನದಲ್ಲಿ ಕುಳಿತಿರುವಾಗ ಒಬ್ಬ ಇಂದ್ರಜಾಲಕನು ಅಲ್ಲಿಗೆ ಬಂದು, ಅರಸನಿಗೆ ಅಭಿವಂದಿಸಿ, 'ಮಹಾರಾಜರೇ ನಾನೊಂದು ಮಂತ್ರ ಪ್ರಯೋಗ ಮಾಡಿ ತೋರುವೆ, ಅದನ್ನು ತಾವು ನೋಡಬೇಕು' ಎಂದನು.

ಐಂದ್ರಜಾಲಿಕನು ತನ್ನ ಕೈಯಲ್ಲಿಯ ನವಿಲುಗರಿಯನ್ನು ಹವೆಯಲ್ಲಿ ತಿರುಗಿಸಲು ಅಲ್ಲಿ ಒಬ್ಬ ಅಶ್ವಪಾಲಕನು ಸುಂದರ ಕುದುರೆಯೊಂದಿಗೆ ಬಂದನು. ಅರಸನು ಆ ಕುದುರೆಯ ಕಡೆಗೆ ನೋಡುತ್ತ ಎರಡು ಮುಹೂರ್ತ ಧ್ಯಾನಸಕ್ತನಾದನು. ತರುವಾಯ ಎಚ್ಚರನಾದ ರಾಜನನ್ನು ಸಭಾಸದರು ವಿಚಾರಿಸಲಾಗಿ ನಡೆದ ಸಂಗತಿಯನ್ನು ಹೀಗೆ ವಿವರಿಸಿದನು:

ರಾಜನು ಆ ಕುದುರೆಯನ್ನು ಹತ್ತಿ ಒಂದು ಅರಣ್ಯಕ್ಕೆ ಹೋದನು. ಅಲ್ಲಿ ಸಾಕಷ್ಟು ಅಡ್ಡಾಡಿದ ಮೇಲೆ ಕುದುರೆ ತಪ್ಪಿಸಿಕೊಂಡು ಹೋಯಿತು. ಅಲ್ಲಿ ಅನ್ನ ಪಾನೀಯಗಳಿಗೆ ಎರವಾಗಿ, ಚಳಿಯಲ್ಲಿ ನಡುಗುತ್ತ ಅವನು ರಾತ್ರಿಯನ್ನು ಕಳೆದನು. ಮರುದಿವಸ ಮುಂಜಾನೆ ತನ್ನ ತಂದೆಯ

ಬುತ್ತಿಯನ್ನು ಒಯ್ಯುತ್ತಿದ್ದ ಓರ್ವ ಚಾಂಡಾಲ ಕನ್ನಿಕೆಯು ಅವನಿಗೆ ಕಂಡಳು. ಅವನು ಅವಳಲ್ಲಿ ಅನ್ನವನ್ನು ಬೇಡಿದನು. ಆದರೆ ಅವಳು ರಾಜನಿಗೆ ಪತಿಯಾಗಬೇಕೆಂದು ಕರಾರು ಒಡ್ಡಿದಳು. ರಾಜನು ಒಪ್ಪಿಗೆಯಿತ್ತನು. ಅವಳು ಅವನನ್ನು ಮನೆಗೆ ಕರೆದೊಯ್ದಳು. ತರುವಾಯ ಅವನ ವಿವಾಹವಾಯಿತು. ರಾಜನು ಚಾಂಡಾಲರ ಸಹವಾಸದಲ್ಲಿ ಸಾಕಷ್ಟು ಸಮಯ ಕಳೆದನು. ಅವನಿಗೆ ನಾಲ್ವರು ಮಕ್ಕಳಾದರು. ಮುಂದೆ ಅನಾವೃಷ್ಟಿ, ದುರ್ಭಿಕ್ಷೆಯಿಂದ ಆ ಚಾಂಡಾಲರಿಗೆ ದುರ್ದಶೆಯಿಂಟಾಯಿತು. ಹೆಂಡತಿ ಮಕ್ಕಳೊಂದಿಗೆ ಲವಣ ರಾಜನು ಮನೆಯಿಂದ ಹೊರಟನು. ಎಲ್ಲಕ್ಕಿಂತ ಚಿಕ್ಕ ಮಗುವಿನ ಹಸಿವೆಯಿಂದಾದ ಅವಸ್ಥೆಯನ್ನು ನೋಡಿ ರಾಜನು ಅಗ್ನಿಪ್ರವೇಶಕ್ಕಾಗಿ ಬೆಂಕಿಯನ್ನು ರಚಿಸಿದನು. ಅದರಲ್ಲಿ ಅವನು ಜಿಗಿಯುವುದರಲ್ಲಿದ್ದನ್ನು, ಅಷ್ಟರಲ್ಲಿ ಅವನಿಗೆ ಎಚ್ಚರವಾಯಿತು.

ರಾಜನು ಈ ವೃತ್ತಾಂತವನ್ನು ಹೇಳಿ ಮಾತು ನಿಲ್ಲಿಸಿದನು. ಅಷ್ಟರಲ್ಲಿ ಆ ಶಾಂಬರಿಕ ಮಾಯವಾದನು. ಸಭಾಸದರೆಂದರು, "ಮಹಾರಾಜರೇ, ಇವನು ದ್ರವ್ಯದಲ್ಲಿ ಆಸಕ್ತನಾದ ಗಾರುಡಿಯಲ್ಲ, ಸಂಸಾರಸ್ಥಿತಿಯ ಬೋಧವನ್ನೀಯುವ ದೈವಿ ಮಾಯಾ ಶಕ್ತಿಯುಳ್ಳವನಾಗಿರಬಹುದು. ಸಂಸಾರವು ಮನೋವಿರ್ವತವಾಗಿದೆಯೆಂಬುದೇ ಇದರಿಂದ ಸ್ಪಷ್ಟವಾಗುವುದು."[೧೧] ಈ ಕಥಾಭಾಗವೇ ಮಾಧವಸ್ವಾಮಿ ಕೃತ 'ಯೋಗವಾಶಿಷ್ಠ'ದ ಉತ್ಪತ್ತಿ ಸರ್ಗ ೧೨ರಲ್ಲಿ ಬಂದಿದೆ.

ರಂಗಬೋಧರು ಭಗವದ್ಗೀತೆಗೆ 'ರಂಗಬೋಧಿನಿ' ಎಂಬ ಟೀಕೆ ಬರೆದಂತೆ ಇಲ್ಲಿಯೂ ಪ್ರತಿಯೊಂದು ಪದ್ಯಕ್ಕೂ ವಿಸ್ತಾರವಾದ ಅರ್ಥವತ್ತಾದ ಟೀಕೆ(ಪದಚ್ಛೇದಟೀಕೆ)ಯನ್ನು ಬರೆದಿದ್ದಾರೆ. ಇಲ್ಲಿ ಗದ್ಯಕ್ಕಿಂತ ಹೆಚ್ಚಾಗಿ ಓವಿಗಳನ್ನು ಆಶ್ರಯಿಸಿದಂತೆ ಕಾಣುತ್ತದೆ. ನಾನು ಪರಿಶೀಲಿಸಿದ ಹಸ್ತಪ್ರತಿಯಲ್ಲಿಯ ಒಂದು ಪದ್ಯದ ಅರ್ಥವನ್ನು ರಂಗಬೋಧರು ಹೀಗೆ ನೀಡಿದ್ದಾರೆ:

ಯಧ್ಯಶಃ ಕುಸುಮೋತ್ತಂಸ ಪಾಂಡುರಸ್ಕಂಧಮಂಡಲಾಃ।
ಸರ್ವೇ ಶೈಲಾ ವಿರಾಜಂತೆ ಹಾರಾ ಪ್ರೋದ್ಗಲಿತಾ ಇವ ॥೩-೮-೯॥

**ಈ ಶ್ಲೋಕಕ್ಕೆ ರಂಗಬೋಧರ ಟೀಕೆ:**

"ಉತ್ತರಾ ಶಬ್ದೆ ಧನನಿಳಾ । ಸೇಖರ ರಸೆ ಬೋಲಿಲಾ
ಮಸ್ತಕಿ ಖೋವಿಲಾ । ಪುಷ್ಪಸೆಲಾ ಸೋಭಾರ್ಥ ತೋ
ತುರಾ ಮಾ ಐಸೆ ಪ್ರಾಕೃತಿ ಜ್ಯಾಸ ಕಾಂಹಿ ಮ್ಹಣತಿ
ಜೋ ಸೀರಿ ಸೋವಿತಿ । ತೋ ರಘುಪತಿ ಸೇಖರಾ
ಜಾ ಲವನಾಚೆ ಯಶ । ತ್ತಂಲಕ್ಷಣ ಜೇ ಕುಶಮೊತೌಸ
ತೇಹಿ ಕರೂನ ಆಶೆಶೆ ಬಹುವಸ ಶ್ರೀರಾಮಾ
ಪಾಂಡುರ ಮ್ಹಣಿಜೆ ಢವಳ । ಆಹೆ ಸ್ಕಂದಮಂಡಳ

ಜ್ಯಾಂಚೆ ಕಾ ಸರ್ವಕಾಳ । ಐಸೆ ಸೈಲ ಸರ್ವ ತೇ
ಕುಶಮೋತಂಶೆ ಕರೂನ । ಝೋ ಪರಾಗಾಂಚೆ ಪತನ
ತ್ಯಾ ಪತನಾಪಾಸೂನ । ಸ್ಕಂದ ಮಂಡಳೆ ಆಪಣ ಶುಭ ಹೋತಿ
ಐಸೆ ಪ್ರಸಿದ್ಧ ಆಹೆ । ಯಾ ಲೋಕಾಮಾಜಿ ಪಾಹೆ
ಐಸೆ ಪ್ರಕಾರಿಚೆ ಪರ್ವತೆ ಹೇ । ಕೈಸೆ ಸ್ವಯೆ ಸೋಭತಿ
ಪ್ರೋಧುಲಿ ತಯಾ ಬೋಲೆ । ಅತ್ಯಂತ ವಿಮಲ ಕೇಲೆ
ಜಾಣೊ ಹಾರಚ ಕಾಯ ಟಾಂಗಲೆ । ಐಸೆ ಸೋಭಲೆ ಪರ್ವತ
ಜ್ಯಾಂಚ್ಯಾ ಕೀರ್ತನೆ । ದಿಗಂತರಚ ಅನುದಿನೆ
ವ್ಯಾಪಿಲೆ ಸರ್ವಗುಣೆ । ಐಸಾ ಜಾಣಣೆ ತಾತ್ವರ್ಯಾರ್ಥ."[೧೨]

ಸಂಸ್ಕೃತ ಟೀಕೆಯೂ ಇದೇ ಮಾದರಿಯಲ್ಲಿದೆ ಎಂಬ ಸಂಗತಿಯನ್ನು ಇಲ್ಲಿಯ ಮಠದ ಗುರುಗಳು ತಿಳಿಸುತ್ತಾರೆ. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

**ಶಿವಬೋಧರ ಹಸ್ತಪ್ರತಿಗಳು :**

ಶಿವಬೋಧರ ೧೬ ಪದ್ಯಗಳ ಒಂದು ಓವಿಬದ್ಧ ಕಾಗದ ಮಾತ್ರ ಲಭ್ಯವಿದೆ. ಅಲ್ಲದೆ ಗೋಕಾಕದ ಸಿದ್ಧರಾಮ ದೇಸಾಯಿ ಅವರಿಗೆ ಬರೆದ 'ನಿರ್ಯಾಣ ಪತ್ರಿಕೆ' ಕೂಡ ಒಂದು ಓವಿ ಬದ್ಧ ಕಾಗದವಾಗಿದೆ. ಪದ್ಯಗಳಲ್ಲಿ ತಮ್ಮ ವಾಸಸ್ಥಾನ ಬೆಳಗಾವಿ ಜಿಲ್ಲೆ ಮೂಡಲಗಿ ಎಂಬುದನ್ನು ಸ್ಪಷ್ಟವಾಗಿ ದಾಖಲಿಸಿದ್ದಾರೆ:

"ಲೌಕಿಕ ಭಾವ ವದತೀ । ದೋಘೇ ಆಮುಚೆ ಸಾಂಗಾತೀ
ಗೇಲೆ ನಿಜಧಾಮಾ ಪ್ರತೀ । ಮಲ್ಲಿಕಾರ್ಜುನ ಮೂರ್ತಿ ಆಣಾವಯಾ
ಏಕ ತಟೇಶ್ವರೀ ರಾಹಿಲಾ । ಏಕ ಮೂಡಲಗಿರಿ ವಾಸ ಕೇಲಾ
ಆಮ್ಹೀಹೀ ಇಚ್ಛಿತೊ ಜಾಯಾಲಾ । ಅನಿತ್ಯ ಲೋಕಾಲಾ ಟಾಕುನಿ"[೧೩]

ಶಿವಬೋಧರು ತಮ್ಮ ಅಂತ್ಯ ಸಮೀಪಿಸಿರುವುದನ್ನು ಸಿದ್ಧರಾಮ ದೇಸಾಯಿಗೆ ಬರೆದ ನಿರ್ಯಾಣ ಪತ್ರಿಕೆಯಲ್ಲಿ ವಿವರಿಸಿದ್ದಾರೆ. ನಮ್ಮ ನಂತರ 'ಪಾಂಡುರಂಗಬೋಧ' (ಅಂದರೆ ಎರಡನೆಯ ರಂಗಬೋಧ)ರನ್ನು ಗುರುವೆಂದು ಮನ್ನಿಸಿ ಅವರನ್ನು ಭಜಿಸಬೇಕೆಂದೂ ಈ ಪತ್ರಿಕೆಯಲ್ಲಿ ತಿಳಿಸಿದ್ದಾರೆ.

**ಮೂಡಲಗಿ ಪರಂಪರೆಯ ಇತರ ಸ್ವಾಮಿಗಳ ಸಾಹಿತ್ಯ :**

ಎರಡನೆಯ ರಂಗಬೋಧರ ರಚನೆ ಅತ್ಯಲ್ಪವಾಗಿವೆ. ಅವರ ನಾಲ್ಕು ಪದಗಳು ನನಗೆನೋಡಲು ದೊರೆಯುತ್ತವೆ. 'ಬನಶಂಕರಿ' ಆರತಿ ಪದ ತುಂಬ ಪ್ರಖ್ಯಾತವಾಗಿದೆ. ರಂಗಬೋಧ ಎಂಬ ಚತುರಾಕ್ಷರೀ ಮಂತ್ರವನ್ನು ಆದ್ಯಾಕ್ಷರದಲ್ಲಿ ರಚಿಸಿದ್ದಾರೆ. ಮೂರನೆಯ ಪದದಲ್ಲಿ ತಮ್ಮ ಶಿವಬೋಧರ ಲೀಲೆಗಳನ್ನು ಹೇಳಿದ್ದಾರೆ.

ಮೂಡಲಗಿ ಪರಂಪರೆಯ ಅಧಿಪತಿಗಳು ಸಂಸಾರಸ್ಥರು. ಅವರ ಪತ್ನಿಯರು ಕಾವ್ಯ ರಚಿಸಿರುವದು ಕಂಡುಬರುತ್ತದೆ. ಅದ್ವಯಬೋಧರ ಪತ್ನಿ ರಾಧಾಬಾಯಿ ಮತ್ತು ಶಿವಬೋಧರ ಪತ್ನಿ ಪಾರ್ವತಿ ಬಾಯಿ ಅವರ ಪ್ರಭಾವದಿಂದ ಅನೇಕ ಕವಿಯತ್ರಿಯರು ಕಾವ್ಯ ರಚನೆ ಮಾಡಿದ್ದು ಕಂಡುಬರುತ್ತದೆ. ರಾಧಾ ಎಂಬುವರು ಬರೆದ 'ಗಂಗಾ ಮಹಾತ್ಮೆ' ಎಂಬ ಅಪೂರ್ಣ ಹಸ್ತಪ್ರತಿಯೊಂದು ಮಠದ ಸಂಗ್ರಹದಲ್ಲಿದೆ.

ರಂಗಬೋಧರ ಎರಡನೆಯ ಮಗ ಪೂರ್ಣಬೋಧರು ಅವರು ಬರೆದ 'ಗುರು ರಂಗಬೋಧ' ಎಂಬ ಹಿಂದಿ ಭಾಷೆಯ ಪದ್ಯವೊಂದು ನಮಗೆ ನೋಡಲು ದೊರೆಯುತ್ತದೆ.

ಪೂರ್ಣಬೋಧರ ಶಿಷ್ಯರಾದ ರಾಮಾನಂದ ಅವರು ಲಾವಣಿ ಪದಗಳಲ್ಲಿ ಗುರುಮಹಾತ್ಮೆಯನ್ನು ವಿವರಿಸಿದ್ದಾರೆ. ಒಂದು ಆರತಿಪದ ಕೂಡ ಮಠದ ಸಂಗ್ರಹದಲ್ಲಿದೆ. ಅದು ಇನ್ನೂ ಬೆಳಕಿಗೆ ಬಂದಿಲ್ಲ.

ಗೋವಿಂದಬೋಧರ ಒಂದು ಹಿಂದಿ ಪದ ಕೂಡ ಮಠದ ಸಂಗ್ರಹದಲ್ಲಿದೆ. ಉತ್ತರದ ನಾಥಪಂಥದ ಸಾಧುಗಳು ಆಗಾಗ ನಾಸಿಕಕ್ಕೆ ಬರುತಿದ್ದರು. ಆಗ ಮೂಡಲಗಿಗೂ ಬರುತ್ತಿದ್ದರು. ಅವರೊಂದಿಗೆ ವಿಚಾರ ವಿನಿಮಯ ಮಾಡುವ ಸಲುವಾಗಿ ಹಿಂದಿ ರಚನೆಯ ಪದ್ಯಗಳನ್ನು ಇವರು ರಚಿಸಿರುವ ಸಾಧ್ಯತೆ ಇದೆ. ಗೋವಿಂದ ಬೋಧರ ಮಗ ಜ್ಞಾನಬೋಧರು ಬರೆದ ಒಂದು ಪದದ ಹಸ್ತಪ್ರತಿ ಮಠದ ಸಂಗ್ರಹದಲ್ಲಿದೆ.

ರಂಗಬೋಧರ ಶಿಷ್ಯ ಕೇಶವಸ್ವಾಮಿ ಅವರು 'ದಾಸ ಪಂಚಾತನ'ದಲ್ಲಿಯ ಕೊನೆಯವರು. ಕೇಶವಸ್ವಾಮಿ ಅವರು ಮೂಡಲಗಿಗೆ ಬಂದು ಕೆಲ ಕಾಲ ನೆಲೆನಿಂತಿದ್ದರು. ಅವರು ಅನೇಕ ಅನುಭಾವ ಪದಗಳನ್ನು ರಚಿಸಿದ್ದಾರೆ. ಮರಾಠಿಯ ಖ್ಯಾತ ಸಂಶೋಧಕರಾದ ರಾಮಚಂದ್ರ ಚಿಂತಾಮಣ ಢೇರೆ ಅವರು 'ಶ್ರೀ ಕೇಶವಸ್ವಾಮೀಂಚಾ ಕವಿತಾ' ಎಂಬ ಸಂಗ್ರಹ ಕೃತಿಯನ್ನು ಪ್ರಕಟಿಸಿದ್ದಾರೆ. ಅಲ್ಲದೆ ಮೂಡಲಗಿ ಮಠದಲ್ಲಿ ಕೇಶವಸ್ವಾಮಿಯ ಏಳು ಅಪ್ರಕಟಿತ ಪದಗಳು ದೊರೆತಿವೆ.

ನಾರಾಯಣ ಎಂಬ ಕವಿಯ ಎರಡು ಆರತಿ ಪದಗಳು ದೊರೆತಿವೆ.

ಚಂದ್ರಾತ್ಮಜರುದ್ರ ಒಬ್ಬ ಶ್ರೇಷ್ಠ ಕವಿಯಾಗಿದ್ದಾನೆ. ಆತನು ಕುಮಾರವ್ಯಾಸ ಕವಿಯ ಉದ್ಯೋಗ ಪರ್ವವನ್ನು ಮರಾಠಿ ಭಾಷೆಗೆ ಅನುವಾದಿಸಿದ್ದಾನೆ. ಇತನಿಗೂ ಮೂಡಲಗಿ ಮಠಕ್ಕೂ ಅವಿನಾಭಾವ ಸಂಬಂಧವಿದೆ. ಇತನು ಎರಡನೆಯ ಶಿವಬೋಧರ (ತಂದೆಯ ಮತನೆತನದಿಂದ) ಚಿಕ್ಕಪ್ಪನ ಮಗನಾಗಿದ್ದಾನೆ. ಮೂಡಲಗಿಮಠದಲ್ಲಿ ದೊರೆತ ಅವನ ಪದಗಳಲ್ಲಿ 'ಶ್ರೀ ದೇಶಿಕಾ ಕೃಪಾ' ಮತ್ತು 'ಬೋಧಸುಧಾರಸ' ಎಂಬ ಪದಗಳು ಗಮನ ಸೆಳೆಯುತ್ತವೆ. ಈತನ ಉದ್ಯೋಗ ಪರ್ವ ಕುಮಾರವ್ಯಾಸನ ಉದ್ಯೋಗ ಪರ್ವದ ಯಥಾವತ್ತಾದ ಭಾಷಾಂತರವೆಂದು ಅನೇಕ ಮರಾಠಿ

ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಆದರೆ ಶ. ಗು. ತುಳಪುಳೆ ಅವರು ಈತನ ಮೇಲೆ ಮುಕ್ತೇಶ್ವರನ ಪ್ರಭಾವ ಹೆಚ್ಚಾಗಿದೆ ಎಂಬ ಅಂಶದತ್ತ ಗಮನ ಸೆಳೆದರು. ಆಗ ಖ್ಯಾತ ಸಂಶೋಧಕ ಶಂಬಾ ಜೋಶಿ ಅವರು 'ಚಂದ್ರಾತ್ಮಜಜರುದ್ರರು ಮುಕ್ತೇಶ್ವರರ ಅನುಕರಣೆ ಮಾಡಿದರೆನ್ನುವುದಕ್ಕಿಂತ ಮುಕ್ತೇಶ್ವರರ ಮೇಲೆ ಯಾವ ಪರಿಣಾಮಗಳಾಗಿವೆ ಎಂಬುದನ್ನು ಯೋಚಿಸಬೇಕಾಗುವುದು. "ಮುಕ್ತೇಶ್ವರರ 'ಸಭಾಪರ್ವ'ದಲ್ಲಿಯ ಕೆಲ ಓವಿಗಳು ಕುಮಾರ ವ್ಯಾಸನ 'ಉದ್ಯೋಗಪರ್ವದ' ಒಂದು ಭಾಗದೊಂದಿಗೆ ಇರುವ ಸಾಮ್ಯವನ್ನು ಶಂಬಾ ಜೋಶಿ ಅವರು 'ಮರಹಾಟಿ ಸಂಸ್ಕೃತಿ : ಕಾಂಹೀ ಸಮಸ್ಯಾ' ಎಂಬ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ."[೧೪]

ಎರಡನೆಯ ಶಿವಬೋಧರ ಶಿಷ್ಯ ಹರಿಬೋಧರ ೩೨ ಓವಿಗಳ ಒಂದು ರಚನೆಯ ಹಸ್ತಪ್ರತಿ ಮಠದ ಸಂಗ್ರಹದಲ್ಲಿದೆ. ಇವರು 'ವಿವೇಕ ಸಿಂಧು' ಎಂಬ ಸಂಸ್ಕೃತ ಗ್ರಂಥವನ್ನು ಆಳವಾಗಿ ಅಧ್ಯಯನ ಮಾಡಿದ್ದರೆಂಬ ಅಂಶ ಈ ಪದಗಳಿಂದ ತಿಳಿದುಬರುತ್ತದೆ. ಅಲ್ಲದೆ ಮರಾಠಿಯ ಖ್ಯಾತ ಅನುಭಾವಿ ಮುಕುಂದರಾಜರ ಪ್ರಭಾವವೂ ಕೂಡ ಇತನ ಮೇಲೆ ಆಗಿರುವುದನ್ನು ಗಮನಿಸಬಹುದು.

ದುಂಡಿರಾಜೇಶ್ವರ ಎಂಬ ಕವಿ ಎರಡನೆಯ ರಂಗಬೋಧರ ಮಗಳ ಮಗ. ಈತ ಮೂಕನಾಗಿದ್ದನು. ಆದರೆ ದೊಡ್ಡವನಾದ ನಂತರ ರಂಗಬೋಧರ ಕೃಪೆಯಿಂದ ಅವನಿಗೆ ಮಾತನಾಡುವುದಷ್ಟೇ ಅಲ್ಲದೇ ಕವಿತ್ವ ಶಕ್ತಿಯೂ ಲಭಿಸಿತೆಂದು 'ದೇಶಿಕ ಚರಿತ್ರೆ'ಯಲ್ಲಿ ವಿವರಿಸಲಾಗಿದೆ. ಧುಂಡಿರಾಜನ ರಚನೆಗಳು ಸ್ತೋತ್ರದ ಮಾದರಿಯಾಗಿವೆ. ಮೂಡಲಗಿ ಪರಂಪರೆಯ ಸ್ತ್ರೀ-ಪುರುಷರ ವಿವರವನ್ನು ಇವನಷ್ಟು ವಿವರವಾಗಿ ಯಾರೂ ಕೊಟ್ಟಿಲ್ಲ. ಎರಡನೆಯ ರಂಗಬೋಧ ಮತ್ತು ಮೊದಲನೆಯ ಶಿವಬೋಧರ ಪತ್ನಿ (ಅಂದರೆ ಕವಿಯ ಅಜ್ಜಿ) ಪಾರ್ವತಿಬಾಯಿ ಅವರ ಕುರಿತು ಅಷ್ಟಕಗಳನ್ನು ಅವನು ಭಕ್ತಿಭಾವದಿಂದ ರಚಿಸಿದ್ದಾನೆ.

ಮೂಡಲಗಿ ಪರಂಪರೆಯಲ್ಲಿ ಮೊದಲನೆಯ ಶಿವಬೋಧರ ಶಿಷ್ಯ ಅನಂತಬೋಧರ ಕಾವ್ಯವನ್ನು ಮೊದಲ ಬಾರಿಗೆ ಬೆಳಕಿಗೆ ತಂದವರು ರಾ. ಚಿಂ. ಢೇರೆ ಅವರು. ಈತ 'ವಾಕ್ಯಸುಧಾ' ಎಂಬ ಗ್ರಂಥವನ್ನು ಕನ್ನಡದ ನೆಲದಲ್ಲಿ ನಿಂತು ರಚಿಸಿದನೆಂಬ ವಿಷಯ ತಿಳಿದುಬರುತ್ತದೆ.

**ಮೂಡಲಗಿ ಪರಂಪರೆಯ ಕನ್ನಡ ಸಾಹಿತ್ಯದ ಹಸ್ತಪ್ರತಿಗಳ ವಿವರ :**

ರಂಗಬೋಧಸ್ವಾಮಿ ಕರ್ನಾಟಕದ ಬೆಳಗಾವಿ ಜಿಲ್ಲೆ ಮೂಡಲಗಿ ಗ್ರಾಮಕ್ಕೆ ಬಂದು ನೆಲಸಿದ ನಂತರ ಅವರ ಪರಂಪರೆಯ ಶಿಷ್ಯ-ಪ್ರಶಿಷ್ಯರು ಕನ್ನಡದಲ್ಲಿಯೂ ಕೆಲಮಟ್ಟಿಗೆ ಸಾಹಿತ್ಯ ರಚನೆ ಮಾಡಿರುವುದು ಸ್ವಾಭಾವಿಕವಾಗಿದೆ.

ಅದ್ವಯಬೋಧ ಸ್ವಾಮಿಗಳು ಬರೆದ ಮೂರು ಕನ್ನಡ ಪದಗಳು ನನಗೆ ನೋಡಲು ದೊರೆತವು. 'ಲಿಂಗ ಬಂದಾನೆ' ಎಂಬ ಪದದಲ್ಲಿ ಅದ್ವಯಬೋಧ ಗೌರಿವಲ್ಲಭನ ಸ್ತುತಿಯನ್ನು ಮಾಡಿದ್ದಾರೆ. ಇಲ್ಲಿ ಲಿಂಗಾಯತರ ಪ್ರಭಾವ ಹೆಚ್ಚಾಗಿರುವ ಕಾರಣ 'ಗುರು' 'ಲಿಂಗ' ಎಂಬ

ಲಿಂಗಾಯತ ಪರಿಭಾಷೆಯ ಪದಗಳ ರಚನೆ ಮಾಡಿದಂತೆ ತೋರುತ್ತದೆ. ಇವರ ಪದಗಳ ಅಂಕಿತ 'ರಂಗಯ್ಯ' ಎಂದಿದೆ.

ಕವಿ ಜ್ಞಾನಬೋಧ ಅವರ ಒಂದು ಕನ್ನಡ ಪದ್ಯ ಲಭ್ಯವಿದೆ. ಅಲ್ಲದೆ ಅವರು ಬರೆದ 'ಶಿವರಾತ್ರಿ ಕಥಾ' ಎಂಬ ಕಿರುಕೃತಿಯ ಹಸ್ತಪ್ರತಿಯೊಂದು ಲಭ್ಯವಿದೆ.

ಕುಮಾರವ್ಯಾಸನ ಉದ್ಯೋಗಪರ್ವವನ್ನು ಮರಾಠಿಗೆ ಅನುವಾದಿಸಿದ ಚಂದ್ರಾತ್ಮಜರುದ್ರ 'ಮನೀಷಾ ಪಂಚಕ' ಮತ್ತು 'ಮಹಿಮ್ನ ಸ್ತೋತ್ರ'ದ ಕನ್ನಡ ಟೀಕೆಯನ್ನು ಬರೆದಿರುವನು. ಅಲ್ಲದೆ ಈ ಮಠದ ಸಂಗ್ರಹದಲ್ಲಿ 'ಉದ್ಬೋಧಪ್ರಾಜ್ಞ' ಹೆಸರಿನ ಒಂದು ಕನ್ನಡ ಕೃತಿ ಲಭ್ಯವಿದೆ. ಭಾಷೆ ಮಾತ್ರ ದೇವನಾಗರಿ ಇರುವುದು ಗಮನಾರ್ಹ ಅಂಶ. ಈ ಕೃತಿಯಲ್ಲಿ ಕವಿಯ ಉಲ್ಲೇಖವಿಲ್ಲ. ಆದರೆ ಮರಾಠಿ ವಿದ್ವಾಂಸರಾದ ಅವಳೀಕರ ಅವರು ಇದು ಚಂದ್ರಾತ್ಮಜರುದ್ರನದಿರಬಹುದೆಂದು ತರ್ಕಿಸಿದ್ದಾರೆ."[೧೪] (ಕರ್ನಾಟಕ ಮತ್ತು ಮರಾಠಿ ಸಾಹಿತ್ಯ ಪು. ೧೫೨)

ಶಿವಬೋಧ ಮತ್ತು ಶಿವಕಲ್ಯಾಣಬೋಧರ ಒಂದೊಂದು ಪದಗಳು ಲಭ್ಯವಿವೆ.

ಮೂಡಲಗಿಮಠದಲ್ಲಿ ಇನ್ನೂ ಹತ್ತಾರು ಹಸ್ತಪ್ರತಿಗಳ ಸಂಗ್ರಹವಿದೆ. ಆದರೆ ಈಗಿನ ಶ್ರೀಗಳು ಅವುಗಳನ್ನು ಅವಲೋಕನ ಮಾಡಲು ಕೊಡುವುದಿಲ್ಲ. ದೇಶಿಕ ಚರಿತ್ರೆಯನ್ನು ಜಗುಲಿಯ ಮೇಲಿಟ್ಟು ಪೂಜಿಸುತ್ತಾರೆ. ಈ ಮರಾಠಿ ಹಸ್ತಪ್ರತಿಗಳನ್ನು ಸಂಪೂರ್ಣವಾಗಿ ಅವಲೋಕಿಸಿದವರು ಮರಾಠಿಯ ವಿದ್ವಾಂಸರಾದ ಪಂಡಿತ ಅವಳೀಕರ ಅವರು. ಹಿರಿಯ ಜಾನಪದ ವಿದ್ವಾಂಸ ಬೆಟಗೇರಿ ಕೃಷ್ಣಶರ್ಮರ ನೆರವಿನಿಂದ ಅವರು ಮೂಡಲಗಿಗೆ ಬಂದು, ಮಡಿಯಿಂದ ಈ ಹಸ್ತಪ್ರತಿಗಳನ್ನು ಅವಲೋಕಿಸಿ, ಮರಾಠಿಯಲ್ಲಿ ಒಂದು ಪುಸ್ತಕವನ್ನು ರಚನೆ ಮಾಡಿದ್ದಾರೆ. ಮೂಡಲಗಿ ಪರಂಪರೆ ಸಾಹಿತ್ಯ ಕುರಿತು ಅವರು ಹೇಳುವ ಮಾತುಗಳು ಸ್ಮರಣೀಯವಾಗಿವೆ.

"ಮೂಡಲಗಿ ಸ್ವಾಮಿಯ ಪರಂಪರೆ ಮತ್ತು ವಾಙ್ಮಯ ವಿಷಯ ಕುರಿತು ಇನ್ನೂ ಅದೆಷ್ಟೋ ಕೆಲಸ ಆಗಬೇಕೆಂಬುದರ ಕಲ್ಪನೆ ನನಗಿದೆ. ಈ ಸಂಶೋಧನೆಯ ಮೂಲಾಧಾರವಾದ 'ದೇಶಿಕ ಚರಿತ್ರ'ವನ್ನು ಇನ್ನು ಪ್ರಕಟಿಸಲು ಸಾಧ್ಯವಾಗಿಲ್ಲ. ಅದರ ಇನ್ನೂ ಕೆಲ ಪ್ರತಿಗಳನ್ನು ದೊರಕಿಸಿ (ಅಥವಾ ದೊರೆಯುವುದಿಲ್ಲವೆಂಬುದು ನಿರ್ಧಾರವಾದ ಮೇಲೆ) 'ದೇಶಿಕ ಚರಿತ್ರ'ವನ್ನು ಸಂಪಾದಿಸಿ ಪ್ರಕಟಿಸಬೇಕೆಂಬ ಉತ್ಕಟ ಇಚ್ಛೆ ಇದೆ.

ಮೂಡಲಗಿ ಪರಂಪರೆಯ ಎಳೆಗಳನ್ನು ಬೇರೆಡೆಯೂ ಪರಿಶೋಧಿಸಬೇಕಾಗುವುದು. ಈ ಪರಂಪರೆಯ ವಾಙ್ಮಯ ಇಂದಿಗೂ ಅಲ್ಲಲ್ಲಿ ಮರೆಯಾಗಿ ಹೋಗಿದೆ. ತಂಜಾವೂರದ 'ಸರಸ್ವತಿ ಮಹಲ'ದಲ್ಲಿ ಕೆಲ ರಚನೆಗಳಿದ್ದ ಬಗೆಗೆ ಅಲ್ಲಿಯ ಮರಾಠಿ ಗ್ರಂಥಗಳ ವರ್ಣನಾತ್ಮಕ ಸೂಚಿಯಿಂದ ಸ್ಪಷ್ಟವಾಗುವುದು. ಈ ಸಂಪಾದನೆಯಲ್ಲಿ ಸಮಾವೇಶವಾಗದ ವಾಙ್ಮಯವನ್ನು ನಿಧಾನವಾಗಿ ಸಂಕಲನ ಮಾಡುವೆ. ಈ ಪರಂಪರೆಯ ವಾಙ್ಮಯ, ಭಾಷೆ ಮತ್ತು ಸಂಸ್ಕೃತಿಯ ಕಾರ್ಯ

ತುಂಬಾ ಮಹತ್ವದ್ದಾಗಿದೆ. ವಿವಿಧ ಪಂಥ ಮತ್ತು ಪರಂಪರೆ; ಭಾಷೆ ಮತ್ತು ಸಾಹಿತ್ಯ; ಸ್ಥಳ ಮತ್ತು ಕಾಲ ಇವುಗಳ ನಡುವಿನ ಅಂತರವನ್ನು ಅಳಿಸಿಹಾಕುವ ಅದರ ಪ್ರಯತ್ನ ಮತ್ತು ಅದರಿಂದಾಗಿ ಅದಕ್ಕುಂಟಾದ ಸರ್ವಸಮಾವೇಶಕ ವ್ಯಾಪಕ ಸ್ವರೂಪ ಓದುಗರಿಗೆ ಗಮನಾರ್ಹವೆನಿಸುವುದರಲ್ಲಿ ಸಂದೇಹವಿಲ್ಲ. ಮೂಡಲಗಿಯ 'ಮಾರ್ಗ'ವನ್ನು ನನಗೆ ನಿಜವಾಗಿ ತೋರಿದವರು ಬೆಟಗೇರಿ ಕೃಷ್ಣಶರ್ಮ ಅವರು. ಅವರೇ ಈಗಿನ ಸ್ವಾಮಿಗಳ ಪರಿಚಯ ಮಾಡಿಕೊಟ್ಟರು. ಅದಕ್ಕಾಗಿ ನಾನು ಅವರಿಗೆ ತುಂಬ ಕೃತಜ್ಞನಾಗಿದ್ದೇನೆ."[೧೫]

ಮೂಡಲಗಿಯ ಶ್ರೀಮಠದ ಕುರಿತು ಕ್ಷೇತ್ರ ಕಾರ್ಯಕ್ಕೆ ಹೋದಾಗ ಮಠದ ಆಸ್ತಿವಿವರ ಕುರಿತು ಮೋಡಿ–ಮರಾಠಿ ಹಸ್ತಪ್ರತಿಗಳು ದೊರಕಿವೆ. ಛಾಪಾ ಕಾಗದದ ಮೇಲೆ ದಸ್ತಾವೇಜುಗಳ ಬರವಣಿಗೆ ಮಾತ್ರ ಮರಾಠಿ ಇದ್ದರೆ ಸಹಿಗಳು ಮಾತ್ರ ಕನ್ನಡದಲ್ಲಿರುವುದು ವಿಶೇಷ.

**ಶ್ರೀಮಚ್ಚರಿತ್ರ : ಮರಾಠಿಯಲ್ಲಿ ಮೂಡಿಬಂದ ಕನ್ನಡಿಗರ ಮೊದಲ ಚರಿತ್ರೆ :**

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನಲ್ಲಿ ಗುರ್ಲಹೊಸೂರು ಎಂಬ ಊರು ಇತ್ತು. ಈ ಊರಿನಲ್ಲಿ ಚಿದಂಬರ ದೀಕ್ಷಿತರೆಂಬ ಅವತಾರಿ ಪುರುಷರು ಆಗಿ ಹೋಗಿದ್ದಾರೆ. ಇದೇ ಊರಿನಲ್ಲಿ ಖ್ಯಾತ ಸಂಶೋಧಕ ಶಂಬಾ ಜೋಶಿ ಅವರು ಹುಟ್ಟಿದ್ದು. ಆದರೆ ಇಂದು ಈ ಊರು ಮಲಪ್ರಭಾ ಡ್ಯಾಂನ ಹಿನ್ನೀರಿನಲ್ಲಿ ಮುಳುಗಿಹೋಗಿದೆ. ಚಿದಂಬರ ದೀಕ್ಷಿತರ ನಾಲ್ಕು ಜೀವನ ಚರಿತ್ರೆಗಳು ಲಭ್ಯವಿವೆ. ಅವುಗಳಲ್ಲಿ ಮೂರು ಮರಾಠಿ ಭಾಷೆಯಲ್ಲಿದ್ದರೆ, ಒಂದು ಸಂಸ್ಕೃತದಲ್ಲಿದೆ. 'ಶ್ರೀ ಮಚ್ಚರಿತ್ರ' ಎಂಬುದು ರಾಜಾರಾಮ ಎಂಬ ಕವಿ ಬರೆದ ಕೃತಿಯಾಗಿದೆ. ಈ ಕೃತಿಯ ಕವಿ ರಾಜಾರಾಮ ಮತ್ತು ಚಿದಂಬರ ದೀಕ್ಷಿತರು ಸಮಕಾಲೀನರು. ಹೀಗಾಗಿ ಈ ಕೃತಿಗೆ ಒಂದು ಔಚಿತ್ಯಪ್ರಾಪ್ತವಾಗಿದೆ.

ಕವಿ ರಾಜಾರಾಮನು ತನ್ನ 'ಶ್ರೀ ಚಿದಂಬರ ಚರಿತ್ರ' ಎಂದು ಕರೆಯದೆ, 'ಶ್ರೀಮಚ್ಚರಿತ್ರ' ಎಂದು ಕರೆದಿದ್ದಾನೆ. ಸರ್ವಪದಗಳಲ್ಲಿ 'ಶ್ರೀ'ಪದ ಶ್ರೇಷ್ಠವಾಗಿದೆ ಎಂಬ ಕಾರಣಕ್ಕಾಗಿ ಈ ಹೆಸರು ಇಟ್ಟಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಅಲ್ಲದೆ ಕವಿ ತನ್ನ ಕೃತಿಗೆ 'ಬ್ರಹ್ಮಗಿರಿ' ಮತ್ತು 'ಜಾಹ್ನವಿ' ಎಂಬ ಹೆಸರುಗಳನ್ನೂ ಕೊಟ್ಟಿದ್ದಾನೆ. ಈ ಕೃತಿಯಲ್ಲಿ ಒಟ್ಟು ನಾಲ್ಕು ಪಾದಗಳಿವೆ. ಮೊದಲನೆಯದರಲ್ಲಿ ೨೭, ಎರಡನೆಯದರಲ್ಲಿ ೪೯, ಮೂರನೆಯದರಲ್ಲಿ ೪೪, ಹಾಗೂ ನಾಲ್ಕನೆಯದರಲ್ಲಿ ೧೯ ಅಧ್ಯಾಯಗಳಿವೆ. ಕೊನೆಯಲ್ಲಿ ನಿರ್ಯಾಣ ಕಥೆಯ ೩ ಅಧ್ಯಾಯಗಳು ಪ್ರತ್ಯೇಕವಾಗಿವೆ.

ಕವಿ ರಾಜಾರಾಮನ ಮೂಲ ಹೆಸರು ಸಖಾರಾಮ ತ್ರ್ಯಂಬಕ ಗರ್ದೆ. ಧಾಮಾಪೂರದ ಸೋಮೇಶ್ವರನು ವಂಶದೇವ, ಜೇಜುರಿಯ ಖಂಡೋಬಾ ಕುಲದೈವ, ಗುಹಾಗರದ ದುರ್ಗಾ ಕುಲಸ್ವಾಮಿನಿ, ಗೋತ್ರ ಜಮದಗ್ನಿ, ಶಾಖೆ ಶಾಕಲ. ಕವಿ ತನ್ನ ವಂಶಾವಳಿಯನ್ನು ಹೀಗೆ ಕೊಡುವನು : ಕೇಶವ (ಮಣಿಕರ್ಣಿಕಾ)– ಕೃಷ್ಣದೇವ (ರುಕ್ಮಿಣಿ)– ತ್ರ್ಯಂಬಕ (ಆನಂದೀ)–

ಸಖಾರಾಮ. ಕವಿಯ ತಾಯಿ ಆನಂದಿಯು 'ಮಯೂರ ಪಂಡಿತ ಕಾಶ್ಯಪಗೋತ್ರಿ'ಯೊಬ್ಬನ ಸುಪುತ್ರಿ. ಕವಿಯ ಊರು ಯಾವುದು ಎಂಬುದು ತಿಳಿಯುವುದಿಲ್ಲ. ಆದರೂ ಮಹಾರಾಷ್ಟ್ರದ ವಿದ್ವಾಂಸರು ವೇಣುಗ್ರಾಮ (ಬೆಳಗಾವಿ)ಯಲ್ಲಿ ಸೆರೆಮನೆಯಲ್ಲಿದ್ದ ಎಂದು ಹೇಳುತ್ತಾರೆ. ಯಾವ ಕಾರಣಕ್ಕೆ ಸೆರೆಮನೆ ಸೇರಿದ್ದ ಎಂಬುದರ ಬಗ್ಗೆ ದಾಖಲೆಗಳಿಲ್ಲ. ಕವಿ ಸದಾಕಾಲ ಲೋಕಸಂಚಾರಿಯಾಗಿದ್ದನೆಂದು ಕಾಣುತ್ತದೆ. ತನ್ನ ಕೃತಿಯ ಅಧ್ಯಾಯಗಳು ಯಾವ ಯಾವ ಊರಿನಲ್ಲಿ ಯಾವ ದಿನ ಪೂರ್ಣಗೊಂಡಿತು ಎಂಬುದರ ಉಲ್ಲೇಖ ಶ್ರೀಮಚ್ಚರಿತ್ರೆಯಲ್ಲಿ ನೋಡಲು ಸಿಗುತ್ತದೆ.

ಎಂ.ಎಂ. ಕಲಬುರ್ಗಿ ಮತ್ತು ಕೆ. ರವೀಂದ್ರನಾಥ ಮೊದಲಾದವರು ಕಟ್ಟುತ್ತ ಬಂದ ಕಲ್ಯಾಣಗಳ ವಿವರ ಕೊಡುತ್ತ 'ಧರ್ಮ ಕಲ್ಯಾಣ', 'ಅಮರ ಕಲ್ಯಾಣ'ಗಳ ಕುರಿತು ಶೋಧ ಮಾಡಿದ್ದಾರೆ. ಶ್ರೀಮಚ್ಚರಿತ್ರ ಕೃತಿಯ ಮೂರನೆಯ ಪಾದದ ೨೯ನೆಯ ಅಧ್ಯಾಯದ ಕೊನೆಯಲ್ಲಿ–

ಅಮರ ಕಲ್ಯಾಣಪುರೀ । ಹೇಚ ಮುರ್ಗೋಢ ಭೂವರೀ
ಈಶ್ವರ ನಾಮ ಸಂವತ್ಸರೀ । ಗ್ರಂಥ ಶ್ರೀಪದೀ ಮಂಗಳ ಹಾ॥
ಅಂಕತ್ರೀಮುನಿ ಇಂದು ಯಾ ಶಕಿ ವಿಭೂ ಶಾಲೀವಹಾನಾಖ್ಯ ಹೇ
ಶ್ರೀಮದ್ರಾಮಜಯಂತಿ ವಾರ ಗುರೂಚಾ ನಕ್ಷತ್ರ ತ್ಯೈ ಪುಣ್ಯ (ಷ್ಯ) ಹೇ॥[೧೬]

ಎಂಬ ಉಲ್ಲೇಖ ಬರುತ್ತದೆ. ಈ ಕವಿಯ ದೃಷ್ಟಿಯಲ್ಲಿ ಅಮರ ಕಲ್ಯಾಣವೆಂದರೆ ಶರಣ ಕ್ಷೇತ್ರ ಮುರಗೋಡ ಆಗಿದೆ. ಈ ಕುರಿತು ಇನ್ನಷ್ಟು ಸಂಶೋಧನೆ ಅಗತ್ಯವಿದೆ.

ಕವಿಯ ವಿದ್ವತ್ತು ಅಪಾರವಾದುದು. ಬಹುಶ್ರುತತ್ವ ವಿಸ್ತಾರವಾದುದು ಎಂಬುದರ ಅನುಭವ ಇಡೀ ಗ್ರಂಥದಲ್ಲೆಲ್ಲ ಚೆಲ್ಲುವರಿದಿದೆ. ಶಿವರಾತ್ರಿ ಕಥಾ, ಗುರುಚರಿತ್ರ, ಸುಂದರಕಾಂಡ ಮೊದಲಾದ ಇತಿಹಾಸ ಕಥಾ ಆಖ್ಯಾನಗಳನ್ನು ಹೇಳಿ ಕೃತಿಯನ್ನು ಮಹತ್ವಪೂರ್ಣಗೊಳಿಸಿದ್ದಾನೆ. ಅವಕಾಶ ದೊರೆತಾದ ತಮ್ಮಲ್ಲಿದ್ದ ಜ್ಞಾನವನ್ನು ಪ್ರದರ್ಶಿಸಿಕೊಳ್ಳಬೇಕೆಂಬ ವಾಂಛೆ ಪ್ರಾಚೀನ ಕವಿಗಳಲ್ಲಿತ್ತು. ಈ ಕವಿಯೂ ಇದಕ್ಕೆ ಅಪವಾದವಾಗಿಲ್ಲ. ತನ್ನ ಈ ಕೃತಿಯಲ್ಲಿ ಸಂಗೀತ, ಛಂದಶಾಸ್ತ್ರ, ಜ್ಯೋತಿಷ್ಯ, ಪತ್ರಲೇಖನ, ಉಪನಯನ, ವಾಸ್ತುಶಾಸ್ತ್ರ ಮೊದಲಾದ ವಿಷಯಗಳನ್ನು ಕುರಿತು ಅಲ್ಲಲ್ಲಿ ನೀಡುತ್ತ ಹೋಗುತ್ತಾನೆ. ಚಿದಂಬರ ದೀಕ್ಷಿತರು 'ಗುರೂಪುರ' ಕಟ್ಟಿಸಿದ ಪ್ರಸಂಗ ವರ್ಣಿಸುವಾಗ ಕವಿ ಆ ಮನೆಗಳ ನಕ್ಷೆಯನ್ನು ಬಿಡಿಸಿದ್ದಾನೆ. ಕೃತಿಯುದ್ದಕ್ಕೂ ಶಾರ್ದೂಲ ವಿಕ್ರೀಡಿತ ಛಂದಸ್ಸನ್ನು ಬಳಸಿ ಕಾವ್ಯವನ್ನು ಮುಂದುವರೆಸಿದ್ದಾನೆ.

ಕವಿಗೆ ಕನ್ನಡ ಭಾಷೆಯೂ ಚೆನ್ನಾಗಿ ಬರುತ್ತಿತ್ತು ಎಂಬುದು ಕೃತಿ ಪರಿಶೀಲನೆಯಿಂದ ತಿಳಿದು ಬರುತ್ತದೆ. ಕನ್ನಡ ನಾಡಿನ ಕೆಲವು ಊರುಗಳ ಸ್ಥಳನಾಮಗಳ ಅಧ್ಯಯನಕ್ಕೆ ಈತನ ಕಾವ್ಯ ತುಂಬಾ ಸಹಕಾರಿಯಾಗುತ್ತದೆ. ಕೆಂಗೇರಿ ಅಂದರೆ ರಕ್ತಾಂಬು, ಹುಬ್ಬಳ್ಳಿ ಎಂದರೆ ಪುಷ್ಪಲತಿಕೆ, ಹಾವನೂರ ಅಂದರೆ ಸರ್ಪಗ್ರಾಮ–ಇಂಥ ಸಂಸ್ಕೃತೀಕರಣದ ಉದಾಹರಣೆಗಳು ಈ ಕೃತಿಯಲ್ಲಿ

ಧಾರಾಳವಾಗಿವೆ. ಒಟ್ಟಾರೆ ವಿದ್ವತ್ತು ಹಾಗೂ ಕವಿತ್ವಗಳ ಸಂಗಮವಾಗಿದೆ ಈ ಶ್ರೀಮಚ್ಚರಿತ್ರ ಕೃತಿ. ಈ ಕೃತಿಯಲ್ಲಿ ಅನೇಕ ಐತಿಹಾಸಿಕ ಮತ್ತು ಚಾರಿತ್ರಿಕ ಘಟನೆಗಳ ಪ್ರಸ್ತಾಪವಿರುವುದನ್ನು ಗಮನಿಸಬೇಕಾಗುತ್ತದೆ.

ಶಕೆ ೧೭೧೫ (ಕ್ರಿ.ಶ. ೧೭೯೩)ರಲ್ಲಿ ಚಿದಂಬರ ದೀಕ್ಷಿತರ ತಂದೆ ಮಾರ್ತಾಂಡ ದೀಕ್ಷಿತರು ತೀರಿಕೊಂಡರು. ಆಗ ಚಿದಂಬರರು ಮುರುಗೋಡಗ್ರಾಮದ ವಾಸ್ತವ್ಯದಲ್ಲಿದ್ದರು. ಅಲ್ಲಿಯ ದೇಸಾಯಿಯೊಬ್ಬ ಲಿಂಗೋಪಂತ ಎಂಬ ಬ್ರಾಹ್ಮನನ್ನು ಹತ್ಯೆಮಾಡಿದ್ದ ಸಂದರ್ಭವದು. ಬ್ರಾಹ್ಮಣನ ಹತ್ಯೆಯಾದ ಸ್ಥಳದಲ್ಲಿ ಕನಿಷ್ಠ ಪಕ್ಷ ೧೨ ವರುಷವಾದರೂ ಇರಕೂಡದೆಂಬ ಶಾಸ್ತ್ರವಚನವಿದ್ದ ಕಾರಣ ಚಿದಂಬರರು ಮುರಗೋಡು ಗ್ರಾಮವನ್ನು ಬಿಟ್ಟರು. ಅಲ್ಲಿಂದ ಚಿದಂಬರರು ದೇವಲಾಪುರ, ಕುಸಗಲ್ಲ, ಹುಬ್ಬಳ್ಳಿ ಹಿಪ್ಪರಗಿ, ಚೌಡದಾನಪುರ, ಶಿರಹಟ್ಟಿ, ಕುಂದಗೋಳ ಮೊದಲಾದ ಕಡೆ ಹನ್ನೆರಡು ವರ್ಷಗಳ ಕಾಲ ಸಂಚಾರ ಮಾಡಿದರು. ಶಕ ೧೭೩೦ (ಕ್ರಿ.ಶ. ೧೮೦೮)ರಲ್ಲಿ ಮರಳಿ ಗುರ್ಲಹೊಸೂರಿಗೆ ಬಂದರು.

ಚಿದಂಬರರ ಕಾಲದಲ್ಲಿ ಉತ್ತರ ಕರ್ನಾಟಕದ ಮೇಲೆ ಟಿಪ್ಪು ಸುಲ್ತಾನ, ಪೇಶ್ವೆ ಮತ್ತು ಧೋಂಡಜಿ ವಾಘರ ಉಪಟಳ ಹೆಚ್ಚಾಗಿತ್ತು. ಟಿಪ್ಪು ಸುಲ್ತಾನ ಚಿದಂಬರರ ಹೆಂಡತಿಗೆ (ಸರಸ್ವತಿ)ಗೆ ತೊಂದರೆ ಕೊಟ್ಟ ಕಾರಣ ತನ್ನ ಕಣ್ಣುಗಳನ್ನು ಕಳೆದುಕೊಂಡು ಪಶ್ಚಾತ್ತಾಪ ಪಟ್ಟ ಘಟನೆ ಇಲ್ಲಿ ಪ್ರಸ್ತಾಪಿತವಾಗಿದೆ. ಟಿಪ್ಪುವಿಗೆ ಪಶ್ಚಾತ್ತಾಪ ಆದ ಘಟನೆಯನ್ನು ಶೃಂಗೇರಿ ಜಗದ್ಗುರುಗಳು ಚಿಂದಬರ ದೀಕ್ಷಿತರಿಗೆ ಪತ್ರ ಬರೆದು ತಿಳಿಸುವರು. **"ಟಿಪ್ಪುವಿಗೆ ತನ್ನ ದುಷ್ಕರ್ಮಕ್ಕಾಗಿ ಪಶ್ಚಾತ್ತಾಪವಾಗಿದೆ. ತಮಗೆ ಭೇಟಿಯಾಗಲು ಅವನು ಹೆದರುವನು. ತಾವು ಅವನಿಗೆ ಕೊಡುವ ಶಿಕ್ಷೆಯನ್ನು ಅನುಭವಿಸಲು ಅವನು ಸಿದ್ಧನಿದ್ದಾನೆ'** ಎಂಬ ವಿಷಯ ಶ್ರೀಮಚ್ಚರಿತ್ರದಲ್ಲಿ ಉಲ್ಲೇಖವಾಗಿದೆ."[೧೬]

ಈ ಚರಿತ್ರೆಯಲ್ಲಿ ಬರುವ ಮತ್ತೊಂದು ಮಹತ್ವದ ವಿಷಯವೆಂದರೆ ಪೇಶ್ವೆ ಬಾಜೀರಾಯನು ಚಿದಂಬರ ದೀಕ್ಷಿತರ ಆಶೀರ್ವಾದ ಪಡೆಯುವುದು. ಸಂಡೂರಿನ ಕಾರ್ತಿಕಸ್ವಾಮಿಯ ದರ್ಶನಕ್ಕೆಂದು ಬಂದ ಬಾಜೀರಾಯ ಮುರುಗೋಡಕ್ಕೆ ಬಂದು ಚಿದಂಬರರ ದರ್ಶನ ಪಡೆಯುವ ಘಟನೆಯನ್ನು ಕವಿ ಇಲ್ಲಿ ಐತಿಹಾಸಿಕವಾಗಿ ದಾಖಲು ಮಾಡಿದ್ದಾನೆ. ಶಕೆ ೧೭೩೦ (ಕ್ರಿ.ಶ. ೧೮೦೮)ರಲ್ಲಿ ದರ್ಶನವಾಯಿತೆಂದು ಬರೆಯುತ್ತಾನೆ. ಇದು ನಿಜವೆನಿಸುತ್ತದೆ. ಯಾಕೆಂದರೆ ಕಿತ್ತೂರು ಸಂಸ್ಥಾನದ ಮಲ್ಲಸರ್ಜನನ್ನು ಇದೇ ಸಂದರ್ಭದಲ್ಲಿ ಆತ ಪುಣೆ ವರೆಗೆ ಕರೆದುಕೊಂಡು ಹೋಗಿ ಗೃಹಬಂಧನದಲ್ಲಿಡುವ ವಿಷಯವನ್ನು ಈ ಹಿಂದಿನ ಅಧ್ಯಾಯದಲ್ಲಿ ಪ್ರಸ್ತಾಪಿಸಲಾಗಿದೆ.

ಚಿದಂಬರ ದೀಕ್ಷಿತರಿಗೆ ಇಬ್ಬರು ಪತ್ನಿಯರಿದ್ದರು. ಅವರಿಗೆ ದಿವಾಕರ, ಶಂಕರ, ಮೃತ್ಯುಂಜಯ, ಮಾರ್ತಂಡ, ಭಾಸ್ಕರ ಮತ್ತು ಕಾಶೀನಾಥ ಎಂಬ ಆರು ಜನ ಮಕ್ಕಳಿದ್ದರು. ಓರ್ವ ಹೆಣ್ಣುಮಗಳು ಇದ್ದಳು. ಇಷ್ಟಾಗಿಯೂ ಚಿಂದಬರರು ತಮ್ಮ ಬಟ್ಟೆಗಳನ್ನು ತಾವೆ ಮಡಿ ಮಾಡಿಕೊಳ್ಳುತ್ತಿದ್ದರು.

ಅವರು ಯಾರ ಮೇಲೆ ಪರಾವಲಂಬಿಗಳಾಗಿರಲಿಲ್ಲ, ಸಾದಾ ಜೀವನ ಉದಾತ್ತ ಚಿಂತನೆ ಎಂಬ ನುಡಿಗೆ ವ್ಯಾಖ್ಯಾನವಾಗಿ ಅವರು ಬದುಕುತ್ತಿದ್ದರೆಂಬ ಸೂಕ್ಷ್ಮ ವಿಷಯಗಳನ್ನು ಈ ಕೃತಿ ನಮಗೆ ತಿಳಿಸುತ್ತದೆ.

**ಮರಾಠಿಯ ಹಸ್ತಪ್ರತಿಗಳು :**

ಅಥಣಿಯ ಆರ್. ಪಿ. (ರಾಮಚಂದ್ರ ಪಾಂಡುರಂಗ) ಕುಲಕರ್ಣಿ ಅವರು ಕನ್ನಡ ಮರಾಠಿ ಭಾಷೆಗಳಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಅವರು ರಚಿಸಿದ ಮರಾಠಿ ಮತ್ತು ಇಂಗ್ಲಿಷ್ ಕೃತಿಗಳ ಹಸ್ತಪ್ರತಿಗಳ ವಿವರ ಹೀಗಿದೆ.

೧. ಶರಣಾಗತಿ (ಮರಾಠಿ)

೨. ಶ್ರೀ ಗುರುದೇವ ದರ್ಶನ (ಮರಾಠಿ)

೩. ಭಕ್ತೀ ಚಾ ಕಳಸ (ಮರಾಠಿ)

೪. ಶ್ರೀಗುರುದೇವ ವಚನಾಮೃತ (ಇಂಗ್ಲಿಷ್)

೫. ದಾಸ ಬೋಧಾಚೆ ಅಧ್ಯಾತ್ಮಿಕ ಶಿಕವಣ (ಮರಾಠಿ)

೬. ಶ್ರೀಭಾವೂ ಸಾಹೇಬ ಮಹಾರಾಜ ಉಮದೀಕರವರಾಂಚೆ ಶಿಕವಣ (ಮರಾಠಿ)

೭. ನಾಮಸಾಧನಾಚೇ ಮಾರ್ಗದರ್ಶನ (ಮರಾಠಿ)

೮. ಮೀ ಪಾಹಿಲೇಲೇ ಕಾಕಾ ತುಳಪುಳೆ (ಮರಾಠಿ)

೯. ನಿತ್ಯನೇಮಾವಳೀಚೆ ಅಂತರಂಗ (ಮರಾಠಿ)

೧೦. ಶ್ರೀ ಗುರುದೇವ ರಾನಡೆ ಆಣಿ ಅನುಭೂತಿ ಶಾಸ್ತ್ರ (ಮರಾಠಿ)

೧೧. ಜ್ಞಾನೇಶ್ವರತೀ ಸಾಕ್ಷಾತ್ಕಾರ ದರ್ಶನ (ಮರಾಠಿ)

೧೨. ಸಾಧಕಾಚೆ ಚಿಂತನ (ಮರಾಠಿ)

೧೩. ರತ್ನಾಕರ ವರ್ಣಿಯ ಭರತೇಶ ವೈಭವ (ಮರಾಠಿ)

೧೪. ಪ್ರಭುಲಿಂಗಲೀಲೆ ಏಕ ಸಮೀಕ್ಷೆ (ಮರಾಠಿ)

**ಸಂಸ್ಕೃತ ಹಸ್ತಪ್ರತಿಗಳು :**

ಬೆಳಗಾವಿ ಭಾಗದಲ್ಲಿ ೧೮೬೬ ಸುಮಾರಿಗೆ ಇಂಗ್ಲಿಷ್ ಅಧಿಕಾರಿಗಳ ಪ್ರಯತ್ನದಿಂದ ಶಾಲೆಗಳು ಪ್ರಾರಂಭವಾದವು. ಇಲ್ಲಿ ಜಂಗಮರು ಒಂದಿಷ್ಟು ಸಂಸ್ಕೃತ ಕಲಿಯಬೇಕೆಂಬುದು ಅವರ ಆಶಯವಾಗಿತ್ತು. ಈ ಕುರಿತು ಸಂಸ್ಕೃತದ ತರಬೇತಿಯ ಯೋಜನೆಯನ್ನು ಮಾಡಲಾಯಿತು. ಈ ಬಗ್ಗೆ ೧೭-೧೧-೧೮೬೯ ರಂದು ಹೊರಟ ಆಂಗ್ಲ ಅಧಿಕಾರಿಗಳ ಪರಿಪತ್ರ ನಂ. ೧೧೧೨ ರಲ್ಲಿ ಹೀಗೆ ಹೇಳಲಾಗಿದೆ:

"ದಕ್ಷಿಣ ಭಾಗದೊಳಗಿನ ಡಿಪುಟಿ ಇಜ್ಯುಕೇಶನಲ್ ಇನಸ್ಪೆಕ್ಟರರಿಗೆ ತಿಳಿಯಪಡಿಸುವದೇನಂದರೆ ಫರ್ಸ್ಟಗ್ರೇಡ ಅಂಗ್ಲೋ ವೆರ್ನಾಕ್ಯುಲರ ಶಾಲೆಗಳಲ್ಲಿ ಸಂಸ್ಕೃತ ಶಿಕ್ಷಕರನ್ನು ನೇಮಿಸಬೇಕಾಗಿದೆ. ಅವರಿಗೆ ತಿಂಗಳಿಗೆ ೩೦ ರೂಪಾಯಿಗಳಂತೆ ಕಾಯಂ ಪಗಾರವು ಫೀ ಫಂಡಿನೊಳಗಿಂದ ಅಥವಾ ಬೇರೆ ಯಾವದೊಂದು ಅನುಕೂಲವಿದ್ದ ಉತ್ಪನ್ನದೊಳಗಿಂದ ಸಿಕ್ಕುವದು. ಈ ಶಿಕ್ಷಕರನ್ನು ಕೆಲಸದ ಮೇಲೆ ನೇಮಿಸುವದಕ್ಕೆ ಮುಂಚೆ, ಇವರು ಒಂದು ವರ್ಷ ಟ್ರೇನಿಂಗ ಕಾಲೇಜದಲ್ಲಿ ಶಿಕ್ಷಣ ಪದ್ಧತಿಯನ್ನು ಕಲಿಯಬೇಕಾಗುವದಲ್ಲದೆ, ತಮ್ಮ ಸಂಸ್ಕೃತ ಅಭ್ಯಾಸದ ಬಗ್ಗೆ ಪರೀಕ್ಷೆಯ ಕೊಡಬೇಕಾಗುವದು. ಇವರು ಶಾಲೆಗಳಲ್ಲಿ ಕನ್ನಡ ಭಾಷೆಯಿಂದ ಸಂಸ್ಕೃತವನ್ನು ಕಲಿಸಬೇಕಾಗುವದು. ಲಿಂಗವಂತರಲ್ಲಿ ಅಯ್ಯಗಳೂ, ಬ್ರಾಹ್ಮಣರಲ್ಲಿ ಆಚಾರ್ಯರೂ ಈ ಕೆಲಸಕ್ಕೆ ಯೋಗ್ಯರಾಗಿರುವ ಕಾರಣ ಅವರಲ್ಲಿ ಯೋಗ್ಯರಾಗಿರುವವರನ್ನೂ ಕುರಿತು ಶಿಫಾರಸಿಯನ್ನು ಮಾಡಬಹುದು....... ಡಬ್ಲು ಎ. ರಸೆಲ್."[೧೮]

ರಸೆಲ್ ಸಾಹೇಬರ ಈ ಆಜ್ಞೆಯಂತೆ ಆಂಗ್ಲೋ ವರ್ನಾಕ್ಯೂಲರ್ ಶಾಲೆಗಳು ಬೆಳಗಾವಿ ಪರಿಸರದಲ್ಲಿ ಅಸ್ತಿತ್ವಕ್ಕೆ ಬಂದವು. ಗೋಕಾಕದಲ್ಲಿ ಬೈಲಹೊಂಗಲದಲ್ಲಿ ಈ ಶಾಲೆಗಳು ಪ್ರಾರಂಭವಾದವು. ಈ ಅಂಗ್ಲಾವರ್ನಾಕ್ಯೂಲರ ಶಾಲೆಗಳಲ್ಲಿ ಕಲಿತ ಶಿ. ಚೆ. ನಂದೀಮಠ, ಡಿ.ಸಿ.ಪಾವಟೆ ಮೊದಲಾದವರು ಇಂಗ್ಲಿಷ್ ಭಾಷೆಯಲ್ಲಿ ಪ್ರಭುತ್ವಗಳಿಸಿ ವಿದೇಶಿ ಅಧ್ಯಯನ ಮಾಡಿ ಬಂದರು ಎಂಬುದು ಹೆಮ್ಮೆಯ ಸಂಗತಿ. ಅಷ್ಟೇಅಲ್ಲದೇ ಶಿ.ಚೆ. ನಂದೀಮಠರು 'ಸಂಸ್ಕೃತ ಬಸವ ಪುರಾಣ'ವನ್ನು ಸಂಪಾದಿಸಿ ಪರಿಷ್ಕರಿಸಿದ್ದರು ಎಂಬುದನ್ನು ಇಲ್ಲಿ ಗಮನಿಸಬೇಕು. ನಂದೀಮಠರು ಪರಿಷ್ಕರಿಸಿ ಸಂಪಾದಿಸಿದ ಸಂಸ್ಕೃತ ಬಸವಪುರಾಣದ ಹಸ್ತಪ್ರತಿಯನ್ನು ಅವರು ನಿವೃತ್ತಿಯ ನಂತರ ಗೋಕಾಕ ತಮ್ಮ ಮನೆಯಲ್ಲಿಟ್ಟಿದ್ದರು. ಅವರ ನಿಧನಾನಂತರ ಅವರ ಮಗ ಶ್ರೀಯುತರ ಹಸ್ತಪ್ರತಿ ಪುಸ್ತಕಗಳನ್ನೆಲ್ಲ ನಂದಿ ಗ್ರಾಮಕ್ಕೆ ಸಾಗಿಸಿದರು. ಅಲ್ಲಿ ಮಳೆ ಬಂದು ಮನೆ ಬಿದ್ದು ಹಸ್ತಪ್ರತಿ ಮತ್ತು ಪುಸ್ತಕ ಸಂಗ್ರಹವೆಲ್ಲ ನಾಶವಾದವೆಂದು ತಿಳಿದು ಬರುತ್ತದೆ. ಸಂಸ್ಕೃತ ಭಾಷೆಯ ಹಸ್ತಪ್ರತಿಗಳನ್ನು ಇನ್ನೂ ಅಧ್ಯಯನ ಮಾಡಬೇಕಾದ ಅನಿವಾರ್ಯತೆ ಇದೆ. ಇಲ್ಲಿಯವರೆಗೆ ನಮ್ಮ ವಿದ್ವಾಂಸರು ಕನ್ನಡ ಹಸ್ತಪ್ರತಿಗಳನ್ನು ಮಾತ್ರ ಸಂಗ್ರಹ-ಸಂಪಾದನೆ-ಪರಿಷ್ಕರಣೆ ಆಯಾಮಗಳಲ್ಲಿ ಬೆಳಕಿಗೆ ತರುವ ಕೆಲಸ ಮಾಡಿದ್ದಾರೆ. ಸಂಸ್ಕೃತ ಭಾಷೆಯ ಕೃತಿಗಳು ಸಾಕಷ್ಟು ಇದ್ದರೂ ಅವುಗಳತ್ತ ಗಮನ ಹರಿಸಿರುವುದು ವಿರಳವೆಂದೇ ಹೇಳಬೇಕು.

ಬಸವಾದಿ ಶಿವಶರಣರ ವಚನ ಸಾಹಿತ್ಯವು ೧೫ನೇ ಶತಮಾನದ ಹೊತ್ತಿಗೆ ವಿಜಯನಗರ ಅರಸರ ಕಾಲಕ್ಕೆ ಧಾರ್ಮಿಕ ನೆಲೆಯ ಪಠ್ಯವಾಗಿ ರೂಪುಗೊಳ್ಳುತ್ತಿದ್ದ ಸಂದರ್ಭದಲ್ಲಿ, ಒಂದಿಷ್ಟು ಸಂಸ್ಕೃತೀಕರಣಕ್ಕೆ ಒಳಗಾಯಿತು. ೧೬ನೇ ಶತಮಾನದಲ್ಲಿದ್ದ ಮಹಾಕವಿ ಮಗ್ಗೆಯ ಮಾಯಿದೇವರು, ಅಲ್ಲಮಪ್ರಭುದೇವರ ಷಟ್‌ಸ್ಥಲ ವಚನಗಳನ್ನು 'ಪ್ರಭುಗೀತಾ' ಎಂಬ ಹೆಸರಿನಲ್ಲಿ ಸಂಸ್ಕೃತಕ್ಕೆ ಅನುವಾದಿಸಿರುವುದು ಮೊದಲ ಉದಾಹರಣೆಯಾಗಿದೆ. ಮಗ್ಗೆಯ ಮಾಯಿದೇವರು ಸಂಸ್ಕೃತದಲ್ಲಿ

ಪ್ರಕಾಂಡ ಪಂಡಿತರಾಗಿದ್ದರು. ಅವರು ತಮ್ಮ ಶಿವಾಧವಾ ಶತಕ, ಮಹದೈಪುರೀಶ್ವರ ಶತಕ, ಶಿವಾವಲ್ಲಭ ಶತಕಗಳನ್ನು ಸಂಸ್ಕೃತ ಭಾಷೆಯಲ್ಲಿ ರಚಿಸಿರುವುದು ಕಂಡುಬರುತ್ತದೆ. ಕೆಳದಿ ಅರಸರ ಕಾಲಕ್ಕೆ ವಚನ ಸಾಹಿತ್ಯ ಮೂಲೆಗುಂಪಾಗಿ, ಸಂಸ್ಕೃತ ಸಾಹಿತ್ಯವೇ ಹೆಚ್ಚಾಯಿತು. ಕೆಳದಿ ಅರಸರು ಲಿಂಗಾಯತಧರ್ಮವನ್ನು ಅಪ್ಪಿಕೊಂಡಿದ್ದರು. ಹೀಗಾಗಿ ಶರಣ ಸಿದ್ಧಾಂತವನ್ನು ಸಂಸ್ಕೃತದಲ್ಲಿ ರಚಿಸುವ ಒಂದು ಸಾಹಸ ಕಾರ್ಯ ಅಲ್ಲಿ ಭರದಿಂದ ಸಾಗಿತು. ಲಿಂಗಾಯತ ಧರ್ಮದ ಅನೇಕ ಸಂಸ್ಕೃತ ಕೃತಿಗಳ ಸಂಗ್ರಹ ಅರಟಾಳ ರುದ್ರಗೌಡರ ಸಂಗ್ರಹದಲ್ಲಿತ್ತು. ಅರಟಾಳ ರುದ್ರಗೌಡರ ಸಂಗ್ರಹವೆಲ್ಲ ಅವರ ನಿಧನಾನಂತರ ನಾಗನೂರು ರುದ್ರಾಕ್ಷಿಮಠವನ್ನು ಸೇರಿತು. ಅವರಲ್ಲಿದ್ದ ಸಂಸ್ಕೃತ ಹಸ್ತಪ್ರತಿಗಳ ವಿವರದ ಒಂದು ಪಟ್ಟಿಯನ್ನು ಎಸ್.ಆರ್. ಗುಂಜಾಳ ಅವರು ನನಗೆ ನೀಡಿದರು. ಆ ಪಟ್ಟಿ ಹೀಗಿದೆ:

೧. ಅನುಭವ ಸೂತ್ರ ೨. ವೀರಶೈವ ಸದಾಚಾರ ಸಂಗ್ರಹ ೩. ಸಿದ್ಧಾಂತ ಶಿಖಾಮಣಿ (೧೯೦೪) ೪. ವ್ಯಾಸೋಕ್ತ ಬಸವಪುರಾಣ

೫. ವೀರಶೈವಾಚಾರ ಪ್ರದೀಪಿಕಾ ೬. ಹರಿಹರ ತಾರತಮ್ಯ ೭. ವಿಶೇಷಾರ್ಥ ಪ್ರಕಾಶಿಕಾ ೮. ರಾಮಾಯಣ ಸಾರ ಸಂಗ್ರಹ ೯. ಉಪಯುಕ್ತ ವೆಂಚೆ ೧೦. ವಿರಕ್ತೋತ್ಪತ್ತಿಕ್ರಿಯಾ ಲಕ್ಷಣ (ಕನ್ನಡ) ೧೧. ಪಾರಮೇಶ್ವರಾಗಮ ೧೨. ಕೈವಲ್ಯಸಾರ ೧೩. ಪ್ರಭುಲಿಂಗಲೀಲಾ ೧೪. ಪಂಚಾಚಾರ್ಯ ಮತೋತ್ಪತ್ತಿ ಪ್ರಕರಣ ೧೫. ವೀರಮಾಹೇಶ್ವರ ಪ್ರಕರಣ ೧೬. ದೀಕ್ಷಾದಿಕಥನ ೧೭. ಸೂಕ್ಷ್ಮಾಗಮ ೧೮. ವೀರಶೈವ ಲಿಂಗೀಬ್ರಾಹ್ಮಣ ವಂಶಾವಲಿ ಪಟ ೧೯. ವೀರಮಾಹೇಶ್ವರಾಚಾರ ಸಂಗ್ರಹ ೨೦. ಶಿವಪುರಾಣ ವಾಯುವಿಯ ಸಂಹಿತಾ ೨೧. ಭಾರತ ಸಾರಸಂಗ್ರಹ ೨೨. ಅನಾದಿ ವೀರಶೈವಾಚಾರ ಸಂಗ್ರಹ ೨೩. ವಿರಕ್ತೋತ್ಪತ್ತಿ ಕ್ರಿಯಾ ಲಕ್ಷಣ ೨೪. ಸಂಕ್ಷಿಪ್ತ ವಿವಾಹ ವಿಧಿ ೨೫. ದಶಕರ್ಮ ಪದ್ಧತಿ ೨೬. ತಾತ್ಪರ್ಯ ಸಂಗ್ರಹ ೨೭. ಶಿವ ಚರಿತ್ರ ೨೮. ವೀರಶೈವಾಂಚಾ ಧರ್ಮಸಮಜುತೀಸ ಸರಕಾರಾಂತುನ ಮಾನ, ೨೯. ಸ್ತೋತ್ರ ಸಂಗ್ರಹ ೩೦. ರುದ್ರಾದಿ ಪಂಚಕ ೩೧. ಬಿಲ್ವೋಪನಿಷತ್ತು ೩೨. ಶಿವಾದ್ವೈತ ಮಂಜರಿ (ಕನ್ನಡ) ೩೩. ಪಾದೋದಕ ವಿಚಾರ, ೩೪. ವೀರಶೈವ ಶಿವಪೂಜಾ ವಿಧಿ ೩೫. ಸಪ್ರಯೋಗ ದತ್ತವಿಧಾನ (ಪುತ್ರಸ್ವೀಕಾರವಿಧಿ) ೩೬. ಸಂಕ್ಷಿಪ್ತ ಲಿಂಗಪೂಜಾ ವಿಧಿ ೩೭. ವೇದಾಂತ ಸಾರ ವೀರಶೈವ ಚಿಂತಾಮಣಿ ಉತ್ತರಭಾಗ ೩೮. ಶೈವ ರತ್ನಾಕರ ೩೯. ವೀರಶೈವೋತ್ಕರ್ಷಪ್ರದೀಪಿಕಾ ೪೦. ಸೂಕ್ಷ್ಮತಂತ್ರ ೬ ವ್ಯಾ ಪಟಲಾಂತೀಲ ಲಿಂಗಸ್ವರೂಪ ಪೂಜಾ ಫಲ ಕಥನ ೪೧. ವೀರಶೈವ ದೀಕ್ಷಾವಿಧಿ ೪೨. ವೀರಮಾಹೇಶ್ವರ ದೀಕ್ಷಾವಿಧಿ ೪೩. ಶಿಷ್ಯವರ್ಗಸಂಪ್ರದಾಯ ನಿರೂಪಣ ೪೪. ಬ್ರಾಹ್ಮಣ ವರ್ಣನ ೪೫. ಶೈವವೀರಶೈವಭೇದಾಗಮ ನಿರೂಪಣ (ಸೂಕ್ಷ್ಮಾಗಮ ಪಟಲ ೮) ೪೬. ಸೂಕ್ಷ್ಮತಂತ್ರ ಪಾಂಚವ್ಯಾ ಪಟಲಾಂತೀಲ ಗುರುಶಿಷ್ಯ ಲಕ್ಷಣ ೪೭. ಗುರುಶಿಷ್ಯ ಲಕ್ಷಣ ೪೮. ವೀರಶೈವ ಖಾನೆಸುಮಾರಿ ೪೯. ವೀರಶೈವ ಮತಸಂವರ್ಧಿನಿ ೫೦. ವಿವೇಕ ಚಿಂತಾಮಣಿ ಪೂರ್ವಭಾಗ

೫೧. ವೀರಶೈವಾಂಚಿ ಸ್ಥಿತಿ ೫೨. ಸಿದ್ಧರಾಮೇಶ್ವರ ಚರಿತ್ರ (ಮರಾಠಿ ಚರಿತ್ರೆ) ೫೩. ವ್ಯಾಪಾರ ಸಾಮ್ರಾಜ್ಯ ಪೂರ್ವಾರ್ಧ ೫೪. ಶಿವಪರ ಅಭಂಗ ೫೫. ಶಿವೋತ್ಕರ್ಷ ಕೀರ್ತನ ತರಂಗಿಣಿ ೫೬. ವೀರಶೈವಲಿಂಗೀಬ್ರಾಹ್ಮಣಧರ್ಮಪರ ಅಭಂಗ ೫೭. ಉಪನ್ಯಾಸ ವಿದ್ಯಾ (ಕನ್ನಡ) ೫೮. ಅಮರಕೋಶ ಪ್ರಥಮ ಕಾಂಡ ೫೯. ಶೌಚವಿಧಿ ೬೦. ಕ್ರಿಯಾಸಾರ ೬೧. ವೇದಾಂತಸಾರ ವೀರಶೈವ ಚಿಂತಾಮಣಿ ಪೂರ್ವಭಾಗ ೬೨. ಶೀಲಸಂಪಾದನ

ಒಟ್ಟು ೬೨ ಕೃತಿಗಳ ವಿವರ ದೊರೆಯುತ್ತದೆ. ಈ ಕೆಲವು ಹಸ್ತಪ್ರತಿಗಳು ಸಂಶೋಧನ ಕೇಂದ್ರದಲ್ಲಿವೆ. ಇವುಗಳಲ್ಲಿ ಕೆಲವು ಪ್ರಕಟವಾದ ವಿಷಯ ನನಗೆ ಅಲ್ಲಿಯ ಗ್ರಂಥ ಭಂಡಾರದ ವರ್ಣಾನಾತ್ಮಕ ಸೂಚಿ ಗಮನಿಸಿದಾಗ ತಿಳಿದು ಬಂದಿತು. ಈ ಕೃತಿಗಳನ್ನು ಸಂಸ್ಕೃತ ವಿದ್ವಾಂಸರು ಒಮ್ಮೆ ಪರಿಶೀಲಿಸಿ, ಅವುಗಳ ಸತ್ವ ಸಾಮರ್ಥ್ಯವನ್ನು ಲೋಕದ ಜನತೆಗೆ ತಿಳಿಸುವ ವ್ಯವಸ್ಥೆ ಇನ್ನೂ ಆಗಬೇಕಾಗಿದೆ. ಎಸ್. ಆರ್. ಗುಂಜಾಳ ಅವರ ಅನಿಸಿಕೆಯಂತೆ ಇಲ್ಲಿಯ ಇನ್ನೂ ಹತ್ತಾರು ಕೃತಿಗಳು ಹಸ್ತಪ್ರತಿ ರೂಪದಲ್ಲಿಯೇ ಇವೆ.

**ಇಂಗ್ಲಿಷ್ ಹಸ್ತಪ್ರತಿಗಳು :**

ಆಂಗ್ಲರು ಭಾರತವನ್ನು ಆಳತೊಡಗಿದ ನಂತರ ೧೮೩೫ ಲಾರ್ಡ ಮೆಕಾಲೆ ಶಿಕ್ಷಣ ವರದಿಯನ್ವಯ ಆಂಗ್ಲ ಶಿಕ್ಷಣ ಪದ್ಧತಿ ಜಾರಿಗೆ ಬಂದಿತು. ೧೮೬೮ರ ತನಕ ಬೆಳಗಾವಿ ಪರಿಸರದಲ್ಲಿ ಶಿಕ್ಷಣದ ಯಾವ ಸೌಲಭ್ಯಗಳೂ ಇರಲಿಲ್ಲ. ಡೆಪ್ಯೂಟಿ ಚೆನ್ನಬಸಪ್ಪನವರು ಕಾಲ್ನಡಿಗೆಯಿಂದ ಪುಣೆವರೆಗೆ ಹೋಗಿ ಶಿಕ್ಷಣ ಕಲಿತರು ಎಂಬುದನ್ನು ಅವರ ಚರಿತ್ರೆಯಲ್ಲಿ ಓದುತ್ತೇವೆ. ಇಂಗ್ಲಿಷ್ ಶಿಕ್ಷಣ ಪಡೆಯಲು ಪುಣೆಯ ಡೆಕ್ಕನ್ ಎಜ್ಯುಕೇಶನ್ ಸೊಸೈಟಿ ಅಥವಾ ಫರ್ಗ್ಯೂಸನ್ ಕಾಲೇಜಿಗೆ ಹೋಗಬೇಕಾಗಿತ್ತು. ರಸೆಲ್ ಸಾಹೇಬರು ಮತ್ತು ಡೆಪ್ಯೂಟಿ ಚೆನ್ನಬಸಪ್ಪನವರ ಪ್ರಭಾವ ಕಾರಣದಿಂದ ಇಲ್ಲಿ ಶಾಲೆಗಳು ಪ್ರಾರಂಭವಾದವು ಎಂಬುದನ್ನು ಗಮನಿಸಬಹುದು. ಇದರ ಪರಿಣಾಮವಾಗಿ ಅರಟಾಳ ರುದ್ರಗೌಡರಂಥವರು ಆಂಗ್ಲ ಶಿಕ್ಷಣ ಪಡೆದು, ಡೆಪ್ಯೂಟಿ ಕಲೆಕ್ಟರ್ ಹುದ್ದೆ ವರೆಗೆ ಏರಿದರು. ಅವರು ತಮ್ಮ ಆತ್ಮಕಥೆಯನ್ನು ಇಂಗ್ಲಿಷ್ ಭಾಷೆಯಲ್ಲಿ ಬರೆದಿದ್ದಾರೆ. ಇದರ ಹಸ್ತಪ್ರತಿ ನಾಗನೂರು ರುದ್ರಾಕ್ಷಿಮಠದಲ್ಲಿದೆ. ಇದನ್ನು ಪರಿಷ್ಕರಿಸಿ, ಸಂಪಾದಿಸಿ ಪ್ರಕಟಿಸುವ ಪ್ರಯತ್ನವಾಗಬೇಕಾಗಿದೆ. ಅಲ್ಲದೆ ಅರಟಾಳ ರುದ್ರಗೌಡರು ಇಂಡಿಯನ್ ಅಂತ್ರಾಪೋಲಿಜಿಕಲ್ ಸೊಸೈಟಿ ಪತ್ರಿಕೆಯಲ್ಲಿ ಬೆಳಗಾವಿ ಪ್ರದೇಶದ ದೇವತೆಗಳ ಬಗ್ಗೆ ಜಾನಪದ ಸಾಹಿತ್ಯದ ಬಗ್ಗೆ ಹತ್ತು ಸಂಶೋಧನಾತ್ಮಕ ಲೇಖನಗಳನ್ನು ಬರೆದು ಪ್ರಕಟಿಸಿದ್ದರು. ಈ ಪತ್ರಿಕೆಗಳು ಪುಣೆಯ ಭಂಡಾರಕರ್ ಸಂಶೋಧನ ಸಂಸ್ಥೆಯಲ್ಲಿ ಸುರಕ್ಷಿತವಾಗಿದ್ದವು. ಎಸ್. ಆರ್. ಗುಂಜಾಳ ಅವರು ಒಮ್ಮೆ ಪುಣೆ ಭಂಡಾರಕರ ಸಂಶೋಧನ ಕೇಂದ್ರಕ್ಕೆ ಹೋಗಿ ಅರಟಾಳ ರುದ್ರಗೌಡರು ಬರೆದ ಹತ್ತೂ ಲೇಖನಗಳನ್ನು ಜೆರಾಕ್ಸ್ ಮಾಡಿಸಿಕೊಂಡು ಬಂದರು. ಆ ಲೇಖನಗಳ ವಿವರ ಹೀಗಿದೆ:

1. A theoretical Accounr of the Goddess Yellamma, Volume vii Issue 8
2. The Village Goddess Dyamava, Volume vii Issue 8
3. Indigeneous School Ceremony performed, Volume viii Issue 1
4. A Short Account of the Veerashaiva Faith (Lingayat), Volume viii Issue 3
5. An Account of Dakkalgers, Volume viii Issue 4
6. A note on Krishna with 72 Birudavali, Volume viii Issue 5
7. An Account of Hanabars, Volume viii Issue 6
8. Ten Incarnations of Vishnu, Volume ix Issue 1
9. Basavis... in Peninsular India, Volume ix Issue 2
10. A Note on Cross palanquin procession, Volume ix Issue 3

ಅರಟಾಳ ರುದ್ರಗೌಡರು ಸವದತ್ತಿಯ ಎಲ್ಲಮ್ಮನ ಬಗ್ಗೆ ಮೊದಲ ಬಾರಿಗೆ ಇಂಗ್ಲಿಷ್‌ನಲ್ಲಿ ಲೇಖನ ಬರೆದು ಪ್ರಕಟಿಸಿದರು. ಹಾಗೆಯೇ ಹಣಬರು, ದಕ್ಕಲಗೇರದಂಥ ಕೆಳವರ್ಗದ ಜನಾಂಗದ ಇತಿಹಾಸವನ್ನು ಮೊದಲು ಬಾರಿಗೆ ಬೆಳಕಿಗೆ ತಂದರು. ವಿಷ್ಣುವಿನ ದಶಾವತಾರ ಮತ್ತು ಆತನ ೭೨ ಬಿರುದಾವಳಿಗಳ ಕುರಿತು ಸಂಶೋಧನೆ ಮಾಡಿದರು. ವೀರಶೈವ ಲಿಂಗಾಯತ ನಂಬಿಕೆ-ಆಚರಣೆಗಳ ಕುರಿತು ಇಲ್ಲಿ ಬರೆದರು. ಎಲ್ಲಕ್ಕಿಂತ ಮುಖ್ಯವಾಗಿ ದೇವದಾಸಿಯರ ಬಗ್ಗೆ (ಬಸವಿ ಬಿಡುವದು ಎನ್ನುತ್ತಾರೆ) ಲೇಖನ ಬರೆದು ಲೋಕದ ಗಮನ ಸೆಳೆದರು. ಈ ಎಲ್ಲ ಲೇಖನಗಳನ್ನು ಒಳಗೊಂಡ Antropological Society Journal Mumbai ಪತ್ರಿಕೆಯ ಸಮಗ್ರ ಸಂಪುಟಗಳು ಭಂಡಾರಕರ ಸಂಶೋಧನ ಕೇಂದ್ರದಲ್ಲಿದ್ದವು. ಆದರೆ ೨೦೦೪ರಲ್ಲಿ ಬೆಂಕಿ ಅವಘಡದಿಂದ ಅರ್ಧ ಸಂಶೋಧನ ಕೇಂದ್ರ ಅಗ್ನಿಗಾಹುತಿಯಾಯಿತು. ಅಲ್ಲಿದ್ದ ಅಂತ್ರೋಪಾಲಿಜಿಕಲ್ ಪತ್ರಿಕೆಗಳೆಲ್ಲ ನಾಶವಾಗಿ ಹೋದವು. ಮತ್ತೆಲ್ಲಿಯೂ ದೊರೆಯದ ಅಪರೂಪದ ಸಂಗ್ರಹ ಅಲ್ಲಿತ್ತು.

ಸುದೈವದಿಂದ ಎಸ್. ಆರ್. ಗುಂಜಾಳ ಅವರು ಅವುಗಳನ್ನು ಜೆರಾಕ್ಸ್ ರೂಪದಲ್ಲಿ ತಂದು ಸಂಗ್ರಹಿಸಿ ಮಹದುಪಕಾರ ಮಾಡಿದ್ದಾರೆ. ಅವುಗಳನ್ನು ಒಮ್ಮೆ ಎಂ. ಎಂ. ಕಲಬುರ್ಗಿ ಅವರ ಗಮನಕ್ಕೆ ತಂದಿದ್ದರು. ಅವರು ಅವುಗಳನ್ನು ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಬೇಕೆಂದು ಸಮಾಜಶಾಸ್ತ್ರದ ವಿಷಯದಲ್ಲಿ ಪರಿಣತರಾದ ಮಹೇಶ ತಿಪಶೆಟ್ಟಿ ಅವರಿಗೆ ಈ ಲೇಖನಗಳನ್ನು ಕೊಡಮಾಡಿದ್ದರು. ಆದರೆ ಈ ಕೆಲಸ ಇನ್ನೂವರೆಗೆ ಆಗಿಲ್ಲವೆಂಬುದು ವಿಷಾದದ ಸಂಗತಿಯಾಗಿದೆ.

ಕ್ಷೇತ್ರಕಾರ್ಯ ಮಾಡಿದ ಸಂದರ್ಭದಲ್ಲಿ ಇಲ್ಲಿ ಹಿಂದಿ ಭಾಷೆಯ ಹಸ್ತಪ್ರತಿಗಳ ವಿವರ ನನಗೆ ತಿಳಿದು ಬರಲಿಲ್ಲ. ಮೂಡಲಗಿ ಮಠದಲ್ಲಿರುವ ಸಂಗ್ರಹದಲ್ಲಿ ಕೆಲವು ಹಿಂದಿ ಪದ್ಯಗಳ ಹೊರತಾಗಿ

ಯಾವ ಹಿಂದಿ ಹಸ್ತಪ್ರತಿಗಳ ವಿವರ ತಿಳಿಯಲಿಲ್ಲ. ಇಲ್ಲಿ ಕನ್ನಡ ಮರಾಠಿ ಇಂಗ್ಲಿಷ್ ಭಾಷೆ ಬಳಕೆಯಲ್ಲಿರುವುದರಿಂದ ಪ್ರಾಯಶಃ ಈ ಮೂರು ಭಾಷೆಗಳ ಕೃತಿಗಳ ವಿವರ ನಮಗೆ ದೊರೆಯುತ್ತವೆ. ಇನ್ನಷ್ಟು ಕ್ಷೇತ್ರಕಾರ್ಯ ಮಾಡಿದರೆ ಇನ್ನೂಳಿದ ಅನ್ಯಭಾಷಾ ಹಸ್ತಪ್ರತಿಗಳು ದೊರೆಯುವ ಸಂಭವ ಹೆಚ್ಚಾಗಿದೆ.

ಜೈನ ಸಾಹಿತ್ಯವೆಲ್ಲ ಕನ್ನಡ–ಪ್ರಾಕೃತ ಭಾಷೆಯಲ್ಲಿ ಮೂಡಿಬಂದಿದೆ, ಶರಣ ಸಾಹಿತ್ಯ ಕನ್ನಡ–ಸಂಸ್ಕೃತ ಭಾಷೆಗಳಲ್ಲಿ ಬೆಳೆದು ಬಂದಿದೆ. ಹೀಗೆ ಧಾರ್ಮಿಕ ಸಾಹಿತ್ಯವು ತನ್ನ ಪ್ರದೇಶದ ಭಾಷೆಯೊಂದಿಗೆ ಇನ್ನಿತರ ಭಾಷೆಯೊಂದಿಗೆ ಸಂವಹನ ಮಾಡಿಕೊಂಡ ವಿಷಯ ಇದರಿಂದ ನಮಗೆ ತಿಳಿದುಬರುತ್ತದೆ.

## ಕೊನೆ ಟಿಪ್ಪಣಿಗಳು

೧. ಕವಿರಾಜ ಮಾರ್ಗ ಸರಳಾನುವಾದ : ಎಸ್. ಎಸ್. ಅಂಗಡಿ ಪು.೩

೨. ಬಿ. ವಿ. ಮಲ್ಲಾಪುರ ಸಂ: ಅಲ್ಲಮಪ್ರಭುದೇವರ ವಚನ ಸಂಪುಟ ಪು. ೨೫೪ ಕನ್ನಡ ಪುಸ್ತಕ ಪ್ರಾಧಿಕಾರ ೨೦೧೧

೩. ಪಂಡಿತ ಅವಳಿಕರ : ಕರ್ನಾಟಕ ಮತ್ತು ಮರಾಠಿ ಸಾಹಿತ್ಯ ಪು. ೧೫೫ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭

೪. ಅದೇ ಪು. ೧೫೬

೫. ಅದೇ ಪು. ೧೬೨

೬. ಅದೇ ಪು. ೧೬೭

೭. ಅದೇ ಪು. ೧೬೨

೮. ಅದೇ ಪು. ೧೬೩

೯. ರಂ. ಶಾ. ಲೋಕಾಪುರ : ಕನ್ನಡ ಜ್ಞಾನೇಶ್ವರಿ ಪು. ೧೨೦

೧೦. ದೇಶಿಕ ಚರಿತ್ರೆ ಹಸ್ತಪ್ರತಿಯ ಅಂತ್ಯಭಾಗ

೧೧. ಪಂಡಿತ ಅವಳಿಕರ : ಕರ್ನಾಟಕ ಮತ್ತು ಮರಾಠಿ ಸಾಹಿತ್ಯ ಪು. ೧೨೫

೧೨. ಮೂಡಲಗಿ ಶ್ರೀಗಳು ಸಮಕ್ಷಮ ಭೇಟಿಯಾದಾಗ ಈ ವಿಷಯ ತಿಳಿಸಿದರು.

೧೩. ಮೂಡಲಗಿ ಶಿವಬೋಧರಂಗ ಸ್ವಾಮಿಗಳ ಹತ್ತಿರ ಇದ್ದ ಮೂಲ ಪತ್ರಿಕೆ

೧೪. ಶಂಬಾ ಜೋಶಿ : ಮರಹಾಟಿ ಸಂಸ್ಕೃತಿ : ಕಾಂಹೀ ಸಮಸ್ಯಾ ಪು. ೧೦೪

೧೫. ಪಂಡಿತ ಅವಳಿಕರ : ಕರ್ನಾಟಕ ಮತ್ತು ಮರಾಠಿ ಸಾಹಿತ್ಯ ಪು. ೧೫೨

೧೬. ಶ್ರೀಮಚ್ಚರಿತ್ರೆ ೨೯ನೆಯ ಅಧ್ಯಾಯದ ಕೊನೆಯ ಪದ್ಯ

೧೭. ಅದೇ ಪು. ೧೫೬

೧೮. ರಾ.ಯ. ಧಾರವಾಡಕರ : ಹೊಸಗನ್ನಡ ಸಾಹಿತ್ಯದ ಉದಯ ಕಾಲ ಪು. ೩೪)

ಅಧ್ಯಾಯ : ಒಂಬತ್ತು

# ಸಮಾರೋಪ

**ಬೆಳಗಾವಿ ಜಿಲ್ಲೆಯ ಹಸ್ತಪ್ರತಿಗಳ ವೈಶಿಷ್ಟ್ಯ :**

ಕರ್ನಾಟಕದ ಸಾಹಿತ್ಯ ಪರಂಪರೆಯು ಉತ್ತರ ಭಾರತವನ್ನು ಅನುಕರಣ ಮಾಡುತ್ತ ಬಂದಿತು. ಇದರ ಪರಿಣಾಮವಾಗಿ ರಾಮಾಯಣ-ಮಹಾಭಾರತಗಳ ಕುರಿತು ಸಾಹಿತ್ಯ ಸೃಷ್ಟಿಸುವ ಕಾರ್ಯ ನಿರಂತರವಾಗಿ ನಡೆಯಿತು. ಇದರ ಪರಿಣಾಮವಾಗಿ ಕನ್ನಡ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿತ್ತಾದರೂ ಅಸ್ಮಿತೆಯನ್ನು ಕಳೆದುಕೊಂಡಿತು ಎಂಬ ವಿಷಯವನ್ನು ಬೆಳಗಾವಿಯಲ್ಲಿ ಜರುಗಿದ ವಿಶ್ವಕನ್ನಡ ಸಮ್ಮೇಳನದಲ್ಲಿ (೨೦೧೧) ಎಂ. ಎಂ. ಕಲಬುರ್ಗಿ ಅವರು ಮಾತನಾಡಿದ್ದರು. ಅವರ ಮಾತುಗಳಿಗೆ ಪೂರಕವೆಂಬಂತೆ ೨೦೧೪ರಲ್ಲಿ ಧಾರವಾಡದಲ್ಲಿ ಜರುಗಿದ ಹತ್ತನೆಯ ಹಸ್ತಪ್ರತಿ ಸಮ್ಮೇಳನದಲ್ಲಿ 'ಪಠ್ಯ-ಪ್ರತೀಕರಣ ಮತ್ತು ಸಾಹಿತ್ಯ ವಲಯ' ಎಂಬ ವಿಷಯವನ್ನು ಕುರಿತು ನಟರಾಜ ಬೂದಾಳ ಅವರು ಮಾತನಾಡುತ್ತಾ "ಈ ಸುದೀರ್ಘ ಕಾಲಮಾನವು ಸಾಹಿತ್ಯಿಕ ಕೃತಿಗಳ ಪ್ರತಿನಿಧೀಕರಣಕ್ಕೆ ಬಳಸಿದ್ದು ಉತ್ತರದ ಕಾವ್ಯಮಾರ್ಗ, ಉತ್ತರದ ಧರ್ಮ, ಭಾರತೀಯ ಕಾವ್ಯಮೀಮಾಂಸೆಯೆಂಬ ಉತ್ತರದ ಸಂಸ್ಕೃತ ಕಾವ್ಯ ಮೀಮಾಂಸೆ ಮತ್ತು ದಿವ್ಯ ಪ್ರಭುತ್ವದೊಡನೆ ನಿರಂತರ ಮೈತ್ರಿ. ಇದರಿಂದಾಗಿ ಸ್ಥಳೀಯ ಜೀವನ ಕ್ರಮ ಮತ್ತು ಮೀಮಾಂಸೆಗಳ ನಿರಾಕರಣೆಗೆ ಸುಲಭದ ದಾರಿಯೊಂದು ಸೃಷ್ಟಿಯಾಯಿತು. ಈ ಉತ್ತರದ ಯಾಜಮಾನ್ಯ ಇಂದಿಗೂ ನಿರಂತರವಾಗಿ ಮುಂದುವರಿದೇ ಇದೆ" (ಹಸ್ತಪ್ರತಿ ವ್ಯಾಸಂಗ-೧೪ ಪು. ೭೭)ಎಂದು ಹೇಳಿದ್ದರು.

ಈ ಇಬ್ಬರು ವಿದ್ವಾಂಸರ ಹೇಳಿಕೆಗಳು ಪೂರ್ಣಸತ್ಯವಲ್ಲವೆಂಬುದಕ್ಕೆ ಬೆಳಗಾವಿ ಪರಿಸರದ ಹಸ್ತಪ್ರತಿಗಳ ಅಧ್ಯಯನ ಮಾಡಿದರೆ ಅರ್ಥವಾಗುತ್ತದೆ. ಬೆಳಗಾವಿ ಪರಿಸರದ ಹಸ್ತಪ್ರತಿಗಳಲ್ಲಿ ಕಾವ್ಯಮೀಮಾಂಸೆಯ ಸಿದ್ಧಾಂತಗಳನ್ನು ಮೀರಿ 'ಕೂಡಲಸಂಗಮದೇವ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ' ಎಂಬ ಬಸವಣ್ಣನವರ ವಚನದ ಆಶಯದಂತೆ, ಸಮಾಜಕ್ಕೆ ಕೇಡಿಲ್ಲದಂತೆ, ತಮಗೆ ತಿಳಿದಂತೆ ಸಾಹಿತ್ಯ ರಚನೆ ಮಾಡಿದ ನೂರಾರು ಉದಾಹರಣೆಗಳನ್ನು ನೋಡಬಹುದು. ಮುಖ್ಯವಾಗಿ ಸಣ್ಣಾಟಗಳನ್ನು ಗಮನಿಸಿದರೆ, ನಮ್ಮ ಕವಿಗಳು ಉತ್ತರ ಭಾರತದ ಅನುಕರಣೆ

ಮಾಡದೆ, ರಾಮಾಯಣ–ಮಹಾಭಾರತಗಳಿಗೆ ಪರ್ಯಾಯವಾಗಿ ಅಲ್ಲಮಪ್ರಭು, ನಿಜಗುಣಶಿವಯೋಗಿ, ಅಕ್ಕಮಹಾದೇವಿ, ಬಸವಣ್ಣ, ಸತ್ಯೇಂದ್ರಚೋಳ ಮೊದಲಾದ ಅವೈದಿಕ ಪರಂಪರೆಯ ವ್ಯಕ್ತಿಗಳನ್ನು ಕುರಿತು ಸಣ್ಣಾಟಗಳನ್ನು ರಚಿಸಿದರು. ವೈದಿಕಶಾಹಿ–ವಸಾಹತುಶಾಹಿ ವಿರುದ್ಧವಾದ ಆಧುನಿಕ ನಾಟಕಗಳನ್ನು ಚಿಕ್ಕೋಡಿ ಶಿವಲಿಂಗಸ್ವಾಮಿಗಳಂಥವರು ರಚಿಸಿದರು. ಅವರು ಬರೆದ 'ಅಸ್ಪೃಶ್ಯೋದ್ಧಾರ' 'ಗುರು ವಿರಕ್ತರ ಪ್ರಪಂಚ' ವರ್ತಮಾನದ ಬದುಕಿನ ವಾಸ್ತವ ಚಿತ್ರಣವನ್ನು ತೋರಿಸುವ ಆಶಯವನ್ನು ಒಳಗೊಂಡಿತ್ತು.

ಕಲಬುರ್ಗಿ, ಬೀದರ, ರಾಯಚೂರ ಪ್ರಾಂತ್ಯದಲ್ಲಿ ನೂರಾರು ಜನ ತತ್ವಪದಕಾರರು ಸಿಗುತ್ತಾರೆ. ಆದರೆ ಬೆಳಗಾವಿ ಜಿಲ್ಲೆಯಲ್ಲಿ ತತ್ವಪದಕಾರರ ಗೈರುಹಾಜರಿ ಎದ್ದುಕಾಣುತ್ತದೆ. ಅಲಭೈರಿ, ಸಿದ್ದಪ್ಪ ಸವದತ್ತಿ, ಬಾಬಾಜಿ ಜಮಾದಾರ, ಮೀರಾಸಾಬ ಮುಲ್ಲಾ, ಸಿರಗುರು ಕಲ್ಮೇಶರಂಥ ಕೆಲವೇ ಕೆಲವು ತತ್ವಪದಕಾರರು ಕ್ವಚಿತ್ತಾಗಿ ಸಿಗುತ್ತಾರೆ. ಆದರೆ ನೂರಾರು ಜನ ಲಾವಣಿಕಾರರು ದೊರೆಯುತ್ತಾರೆ. ತತ್ವಪದಕಾರರಿಗಿಂತ ಲಾವಣಿಕಾರರ ಸಂಖ್ಯೆ ಹೆಚ್ಚು ಸಿಗುತ್ತದೆ. ತತ್ವಪದಕಾರರು ಸಂಸಾರವನ್ನು ನಿಸ್ಸಾರವೆನ್ನುತ ಅದರಲ್ಲೂ ಹೆಣ್ಣನ್ನು ನಿರಾಕೃತ ವಿನ್ಯಾಸದಲ್ಲಿ ಕಾಣಿಸುತ್ತ ಬಂದಿದ್ದಾರೆ. 'ಇಂದುಮುಖಿಯರ ಗುಣವ ತಿಳಿಯಲಸಾಧ್ಯ, ನಿತ್ಯದ ಹುಸಿಯ ನಾಡುವರು, ಮನವ ವಂಚಿಸಿ ಮಾತನಾಡುವರು' ಎಂದು ಹೇಳುತ್ತ ಹೆಣ್ಣು ಅಂದರೆ ಅಪಾಯ, ಹೆಣ್ಣು ಎಂದರೆ ಭೋಗದ ವಸ್ತು. ಬ್ರಹ್ಮವೊಂದೇ ಸತ್ಯ ಜಗತ್ತು ಮಿಥ್ಯ ಎಂದು ಸಾರುವ ತತ್ವಪದಕಾರರಿಗಿಂತ ಭಿನ್ನವಾಗಿ ನಮ್ಮ ಲಾವಣಿಕಾರರು ಆಲೋಚಿಸಿದರು. ದೇಶದ ಸ್ವಾತಂತ್ರ್ಯ ಸಂಗ್ರಾಮದಂಥ ಬಹುದೊಡ್ಡ ಹೋರಾಟ ನಡೆಯುತ್ತಿದ್ದ ಸಂದರ್ಭದಲ್ಲಿ ಸಂಸಾರ ನಿಸ್ಸಾರತೆಯನ್ನು ಬೋಧಿಸುತ್ತ ಕುಳಿತ ತತ್ವಪದಕಾರರಿಗಿಂತ, ಲಾವಣಿಕಾರರು ತಮ್ಮ ಲಾವಣಿಗಳ ಮೂಲಕ ಜನತೆಯಲ್ಲಿ ರಾಷ್ಟ್ರಭಕ್ತಿ–ದೇಶಪ್ರೇಮವನ್ನು ತುಂಬುವ ಕಾರ್ಯ ಮಾಡಿದ್ದು ಅತ್ಯಂತ ಔಚಿತ್ಯಪೂರ್ಣವೆಂದು ನಾನು ಭಾವಿಸಿದ್ದೇನೆ. ಈ ಹಿನ್ನೆಲೆಯಲ್ಲಿ ಬೆಳಗಾವಿ ಪರಿಸರದ ಲಾವಣಿಗಳಿಗೆ ಒಂದು ಐತಿಹಾಸಿಕ ಮಹತ್ವ ಪ್ರಾಪ್ತವಾಗಿದೆ.

ಬೆಳಗಾವಿ ಜಿಲ್ಲೆಯ ನಿಪ್ಪಾಣಿಯ ಅಪ್ಪಾಸಾಹೇಬ ನಣದಿಮಠ ಅವರ ಮನೆಯಲ್ಲಿ ಒಂದು ಹಸ್ತಪ್ರತಿ ಕಟ್ಟು ಇತ್ತು. ಅದನ್ನು ಒಮ್ಮೆ ಎಂ.ಎಂ. ಕಲಬುರ್ಗಿ ಅವರ ಗಮನಕ್ಕೆ ಅವರು ತಂದರು. ಅದು ಒಂದು ನೂತನ ವಚನ ಕಟ್ಟು ಇರುವುದನ್ನು ಕಲಬುರ್ಗಿ ಅವರು ಗಮನಿಸಿದರು. ಈವರೆಗೆ ಬಂದ ವಚನ ಸಂಕಲನಗಳಲ್ಲಿಯೇ ಇದೊಂದು ವಿಭಿನ್ನ ಹಸ್ತಪ್ರತಿಯಾಗಿತ್ತು. ಈ ಹಸ್ತಪ್ರತಿಯನ್ನು ಎಂ.ಎಂ. ಕಲಬುರ್ಗಿ ಮತ್ತು ವೀರಣ್ಣ ರಾಜೂರ ಅವರು ಕೂಡಿ ಸಂಪಾದಿಸಿದರು. ಈ ಕೃತಿಯನ್ನು ಗದುಗಿನ ಜಗದ್ಗುರು ತೋಂಟದಾರ್ಯಸಂಸ್ಥಾನಮಠದ ಲಿಂಗಾಯತ ಅಧ್ಯಯನ ಸಂಸ್ಥೆಯು ೨೦೧೦ರಲ್ಲಿ ಪ್ರಕಟಿಸಿದೆ. ಇದೊಂದು ನೂತನ ಸ್ಥಲಕಟ್ಟಿನ ಕೃತಿಯಾಗಿದೆ. ಇದರಲ್ಲಿ ಜ್ಞಾನಪಾದ, ಕ್ರಿಯಾಪಾದ, ಚರ್ಯಪಾದ ಮತ್ತು ಯೋಗಪಾದ ಎಂಬ ನಾಲ್ಕು ಭಾಗಗಳಿವೆ. ಈ

ರೀತಿಯ ವಿಂಗಡಣೆ ಪರಿಕಲ್ಪನೆ ಆಗಮಗಳಲ್ಲಿದೆ. ವಚನಗಳನ್ನು 'ವಚನಾಗಮ' ಎಂದು ಕರೆದ ಸಂಕಲನಕಾರನು ಈ ಕೃತಿಗೆ 'ಪರಮಾನಂದ ಸುಧೆ' ಎಂದು ಹೆಸರಿಟ್ಟಿದ್ದಾನೆ. ಒಂದೊಂದು ಪಾದಗಳಲ್ಲಿ ಕ್ರಮವಾಗಿ ೧೧೧, ೧೨೧, ೨೧೦, ೧೮೧ರಂತೆ ಒಟ್ಟು ೬೨೩ ವಚನಗಳು ಸಂಕಲನಗೊಂಡಿವೆ. ೧೨ನೆಯ ಶತಮಾನದಿಂದ ೧೬ನೆಯ ಶತಮಾನದ ವರೆಗಿನ ೬೨ ಜನ ವಚನಕಾರರ ವಚನಗಳು ಇಲ್ಲಿವೆ. ಅವರಲ್ಲಿ ಏಕೋರಾಮೇಶ್ವರ, ಧರ್ಮಸ್ವರೂಪ ಬಸವಣ್ಣ, ಶೂನ್ಯನಾಥ ಮುದ್ರಿಕೆಗಳ ಕರ್ತೃಗಳ ಹೆಸರು ಗೊತ್ತಾಗಿಲ್ಲ. ಇವರ ವಚನಗಳು ಈ ಸಂಕಲನದ ಮೂಲಕ ಪ್ರಥಮ ಬಾರಿಗೆ ಬೆಳಕಿಗೆ ಬಂದಿವೆ. ಈ ಸಂಕಲನದ ಇನ್ನೊಂದು ವೈಶಿಷ್ಟ್ಯವೆಂದರೆ ಇದರಲ್ಲಿ ವಚನಗಳ ಜೊತೆಗೆ ೩೮ ಸ್ವರವಚನಗಳು, ೯ ಕಾಲಜ್ಞಾನ ವಚನಗಳು ಬಳಕೆಗೊಂಡಿರುವುದು. ನಿಃಕಳಂಕ ಸೋಮೇಶ್ವರ, ಚಿಂತಪುರ ಸಿದ್ಧಪ್ರಭುವೆ, ಗುರುಪ್ರಿಯ ಚೆನ್ನ ಸೋಮೇಶ್ವರ, ಸಿದ್ಧರಾಮ ಅಂಕಿತದ ಸ್ವರವಚನಗಳು ಇದುವರೆಗೆ ಉಪಲಬ್ಧವಿಲ್ಲದ ಹೊಸ ರಚನೆಗಳಾಗಿವೆ. ನಿಜಗುಣ ಶಿವಯೋಗಿಯ ಸ್ವರವಚನಗಳು ಇದೇ ಮೊದಲು ವಚನ ಸಂಕಲನದಲ್ಲಿ ಸೇರಿರುವುದೂ ಒಂದು ವಿಶೇಷವೆನಿಸಿದೆ. ಈ ಕೃತಿಯ ಕರ್ತೃ ಅಜ್ಞಾತವಾಗಿದ್ದಾನೆ. ಕಾಲದ ಉಲ್ಲೇಖವೂ ಇಲ್ಲ. ನಿಜಗುಣ ಶಿವಯೋಗಿಯ ಸ್ವರವಚನ ಎಡೆಪಡೆದಿರುವುದರಿಂದ ಅವರ ನಂತರದ ಕಾಲದಲ್ಲಿ ರಚನೆಯಾಗಿರಬೇಕು. "ಸೂಳ್ನುಡಿ, ವಚನ, ವಚನಾಗಮ–ಈ ಮೂರು ರೂಪಗಳಲ್ಲಿ ಶರಣ ಸಾಹಿತ್ಯ ಸಾಗಿಬಂದಿದೆಯೆಂದು ವಿದ್ವಾಂಸರು ಈಗಾಗಲೇ ಗುರುತಿಸಿದ್ದಾರೆ.

ಇವುಗಳಲ್ಲಿ 'ಸೂಳ್ನುಡಿ' ಘಟ್ಟದಲ್ಲಿ ಸೃಷ್ಟಿಯಾದ ಸಾಹಿತ್ಯದ ನಿಶ್ಚಿತ ಸ್ವರೂಪ ತಿಳಿದುಬಂದಿಲ್ಲ. 'ವಚನ' ಘಟ್ಟ ೧೨ನೆಯ ಶತಮಾನದಲ್ಲಿ ತಲೆದೋರಿದ್ದು, ಬಸವಾದಿ ಪ್ರಮಥರು ಇದರ ನೇತಾರರಾಗಿದ್ದಾರೆ. ಈ ಶರಣ ಸಂಪ್ರದಾಯದಲ್ಲಿ ೧೫ನೆಯ ಶತಮಾನವೊಂದು ತಿರುವು ಬಿಂದುವೆನಿಸಿದೆ. ಈ ಕಾಲಘಟ್ಟದಲ್ಲಿ ೧೨ನೆಯ ಶತಮಾನದ ಶರಣರಿಂದ ಸೃಷ್ಟಿಯಾದ ವಚನ ಸಾಹಿತ್ಯವನ್ನು ಬಳಸಿಕೊಂಡು ಸಂಗ್ರಹ, ಸಂಕಲನ, ಸಂಪಾದನೆ ಎಂಬ ಮೂರು ರೀತಿಯ ಸಂಯೋಜನ ಕಾರ್ಯಗಳು ಜರುಗಿದವು. ಇವುಗಳಲ್ಲಿ ಪ್ರಸ್ತುತ 'ಪರಮಾನಂದ ಸುಧೆ'ಯು ಸಂಕಲನ ವರ್ಗಕ್ಕೆ ಸೇರುತ್ತದೆ'. ಎಂದು ಎಂ.ಎಂ. ಕಲಬುರ್ಗಿ ಅವರು ತಿಳಿಸಿರುವುದು ಕೃತಿಯ ಮಹತ್ವವನ್ನು ತಿಳಿಸುತ್ತದೆ. ಅನುಬಂಧದಲ್ಲಿ ವಚನಗಳ ಅಕಾರಾದಿ, ವಚನಕಾರರು, ವಚನಾಂಕಿತ–ವಚನ ಸಂಖ್ಯೆಯನ್ನು ಕೊಡಲಾಗಿದೆ. ನೂತನ ಸ್ಥಲಕಟ್ಟು, ಅನೇಕ ನೂತನ ವಚನಕಾರರು–ಸ್ವರವಚನಕಾರರು ಮತ್ತು ನೂತನ ಆಶಯವನ್ನು ಇಟ್ಟುಕೊಂಡು ರಚನೆಗೊಂಡ ಈ ನೂತನ ವಚನ ಸಂಕಲನ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕಾಣಿಕೆಯಾಗಿದೆ.

ಬೆಳಗಾವಿಯಲ್ಲಿ ಚಂದ್ರಶೇಖರಮಠವಿತ್ತು. ಇಂದು ನಾಮಾವಶೇಷವಾಗಿದೆ. ೧೯೨೦ರ ದಶಕದಲ್ಲಿ ಈ ಮಠದ ಉತ್ತರಾಧಿಕಾರಿಯಾಗಿದ್ದ ಚಂದ್ರಶೇಖರದೇವರು ಕಾಶಿಯಲ್ಲಿ ಅಧ್ಯಯನ ಮಾಡುತ್ತಿದ್ದರು. ಈ ಚಂದ್ರಶೇಖರ ದೇವರು ಮುಂದೆ ನಿಡಸೋಸಿ ದುರದುಂಡೀಶ್ವರ ಸಿದ್ಧಸಂಸ್ಥಾನಮಠದ

ಜಗದ್ಗುರು ಪೀಠದ ಪೀಠಾಧಿಕಾರಿಗಳಾದರು. ಬನಾರಸ ಹಿಂದೂ ವಿಶ್ವವಿದ್ಯಾಲಯದಿಂದ ವಿದ್ಯಾವಾಚಸ್ಪತಿ ಪದವಿ ಪಡೆದಿದ್ದ ಅವರು 'ಸಂಸ್ಕೃತ ವೀರಶೈವಾನಂದ ಚಂದ್ರಿಕೆ' ಎಂಬ ಗ್ರಂಥವನ್ನು ಸಂಪಾದಿಸಿ ಕಾಶಿಯಿಂದ ಪ್ರಕಟಿಸಿದರು. ಈ ಪುಸ್ತಕದ ಕೊನೆಯಲ್ಲಿ ಕೆಲವು ಕನ್ನಡ ಗ್ರಂಥಗಳ ಹೆಸರು ಪ್ರಕಟ ಮಾಡಬೇಕಾಗಿತ್ತು. ಅದಕ್ಕಾಗಿ ಬೆಳಗಾವಿಯಿಂದ ಕನ್ನಡ ಮೊಳೆ (Font) ಗಳನ್ನು ಕಾಶಿ ವರೆಗೆ ತೆಗೆದುಕೊಂಡು ಹೋಗಿ ಪುಸ್ತಕ ಪ್ರಕಟಿಸಿದ್ದು ಸಣ್ಣ ಸಾಧನೆಯಲ್ಲ.

ಬೆಳಗಾವಿಯಲ್ಲಿ ೧೯೫೦ರ ದಶಕದಲ್ಲಿ 'ವಚನ ಮಂಟಪ' ಎಂಬ ಸಂಸ್ಥೆ ಅಸ್ತಿತ್ವದಲ್ಲಿತ್ತು. ಈ ಸಂಸ್ಥೆಯ ಸಂಗ್ರಹದಲ್ಲಿ ಸುವ್ವಿಮಲ್ಲನ 'ತೋಂಟದ ಸಿದ್ಧಲಿಂಗೇಶ್ವರ ಸಾಂಗತ್ಯ' ಎಂಬ ಕೃತಿಯ ಏಕೈಕ ಹಸ್ತಪ್ರತಿ ಇತ್ತು. ಈ ಕೃತಿಯನ್ನು ಸಂ.ಶಿ. ಭೂಸನೂರಮಠ ಅವರು ಸಂಪಾದಿಸಬೇಕೆಂದು ಆಲೋಚಿಸಿದ್ದರು. ಆದರೆ ಅದು ಸಾಧ್ಯವಾಗಲಿಲ್ಲ. ಈ ಏಕೈಕ ಹಸ್ತಪ್ರತಿಯನ್ನು ಎಸ್. ಶಿವಣ್ಣನವರು ಗಮನಿಸಿದರು. ಈ ಹಸ್ತಪ್ರತಿಯನ್ನು ಎಂ.ಎಸ್. ಬಸವರಾಜಯ್ಯ ಅವರಿಗೆ ಕೊಟ್ಟರು. ಅವರು ಈ ಕೃತಿಯನ್ನು ಸಂಪಾದಿಸಿ ಪ್ರಕಟಿಸಿದರು. ಸುವ್ವಿಮಲ್ಲನ ಏಕೈಕ ಕೃತಿ ಬೆಳಗಾವಿಯಲ್ಲಿ ದೊರೆತದ್ದು ವಿಶೇಷವೆನ್ನಬೇಕು.

ಸೋದೆ ಸಂಸ್ಥಾನದ ಅರಸರಾಗಿದ್ದ ಸದಾಶಿವರಾಯರು ೧೮ ಕೃತಿಗಳನ್ನು ಬರೆದಿದ್ದಾರೆ. ಆದರೆ 'ಸದಾಶಿವನೀತಿ' ಒಂದನ್ನು ಹೊರತುಪಡಿಸಿ ಯಾವ ಉಳಿದ ಕೃತಿಗಳು ಸಿಕ್ಕಿರಲಿಲ್ಲ. ಗೋವೆಯಲ್ಲಿ ವಾಸವಾಗಿದ್ದ ಸೋದೆ ಸಂಸ್ಥಾನದ ಕೊನೆಯ ದೊರೆ ಸದಾಶಿವರಾಜೆ ಅವರು ಸ್ವಾತಂತ್ರ್ಯಾನಂತರ ಪೋರ್ಚಗೀಜರ ಆಧೀನದಲ್ಲಿದ್ದ ಗೋವೆ ಬಿಟ್ಟು ಬೆಳಗಾವಿಗೆ ಬಂದು ನೆಲೆಸಿದರು. ಆಗ ಅವರ ಗ್ರಂಥ ಭಂಡಾರವನ್ನು ಇಲ್ಲಿ ತಂದಿದ್ದರು. ಈ ಕಾರಣವಾಗಿ ಸೋದೆ ಸದಾಶಿವರಾಯನ ಸಮಗ್ರ ಕೃತಿಗಳ ಹಸ್ತಪ್ರತಿ ದೊರೆತವು. ಬಿ.ಆರ್. ಹಿರೇಮಠ ಅವರು ಈ ಎಲ್ಲ ಕೃತಿಗಳನ್ನು ಸಂಪಾದಿಸಿ ಗದುಗಿನ ತೋಂಟದಾರ್ಯ ಸಂಸ್ಥಾನಮಠದಿಂದ ಪ್ರಕಟಿಸಿದರು.

ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಭೀಮಕವಿಯ ಬಸವ ಪುರಾಣವನ್ನು ಪ್ರಕಟಿಸಿದ್ದಾರೆ. ಈ ಬಸವ ಪುರಾಣದ ಶುದ್ಧ ಹಸ್ತಪ್ರತಿಯನ್ನು ಕೊಟ್ಟವರು ಗೋಕಾಕ ತಾಲೂಕಿನ ಸಾವಳಗಿ ಶಿವಲಿಂಗೇಶ್ವರಮಠದ ಜಗದ್ಗುರು ಸಿದ್ಧರಾಮ ಸ್ವಾಮಿಗಳು. ಈ ವಿಷಯವನ್ನು ಚಂದ್ರಶೇಖರ ಕಂಬಾರ ಅವರು ಹೆಮ್ಮೆಯಿಂದ ದಾಖಲಿಸಿದ್ದಾರೆ. (ಸಾವಳಗಿ ಶಿವಲಿಂಗೇಶ್ವರ ಪುರಾಣ ಪ್ರಸ್ತಾವನೆ ನೋಡಿ)

ಫ.ಗು. ಹಳಕಟ್ಟಿ ಅವರು ೭೮ ವಚನ ಗ್ರಂಥಗಳನ್ನು, ೨೦ಕ್ಕೂ ಕಾವ್ಯ ಕೃತಿಗಳನ್ನು ಸಂಪಾದಿಸಿ ಕನ್ನಡ ಸಾರಸ್ವತ ಪ್ರಪಂಚವನ್ನು ಶ್ರೀಮಂತಗೊಳಿಸಿದ್ದಾರೆ. ಹಳಕಟ್ಟಿಯವರಿಗೆ ಬೆಳಗಾವಿ ಜಿಲ್ಲೆಯ ಹಿರಿಯ ವಿದ್ವಾಂಸರಾಗಿದ್ದ ಕೆ.ಜಿ. ಕುಂದಣಗಾರ, ಶಿ.ಚೆ. ನಂದೀಮಠ ಮೊದಲಾದ ವಿದ್ವಾಂಸರು ಹಸ್ತಪ್ರತಿಗಳನ್ನು ಕಳಿಸಿಕೊಟ್ಟಿದ್ದಾರೆ. ಈ ಹಸ್ತಪ್ರತಿಗಳನ್ನು ಆಧರಿಸಿ ಹೊಸ ಕೃತಿಗಳನ್ನು ಹಳಕಟ್ಟಿಯವರು ಪ್ರಕಟಿಸಿದರು. ಅರಭಾವಿ ಮಠದಿಂದ ಹಳಕಟ್ಟಿ ಅವರಿಗೆ ಹಲವಾರು ಹಸ್ತಪ್ರತಿಗಳು ಕಾಣಿಕೆಯಾಗಿ

ಹೋಗಿವೆ. ೧೯೩೦ರಲ್ಲಿ ಹಳಕಟ್ಟಿ ಅವರು ಪ್ರಕಟಿಸಿದ 'ವರದಾನಿ ಗುಡ್ಡಮ್ಮೆ ಚರಿತ್ರೆ'ಯ ಮೂಲ ಹಸ್ತಪ್ರತಿ ದೊರೆತದ್ದು ಬೆಳಗಾವಿ ಜಿಲ್ಲೆಯ ಅಥಣಿ ಮೋಟಗಿ ಮಠದಲ್ಲಿ. ಅಂದಿನ ಪೀಠಾಧಿಪತಿಯಾಗಿದ್ದ ಗುರುಬಸವ ಸ್ವಾಮಿಗಳು ಈ ಹಸ್ತಪ್ರತಿಯನ್ನು ಹಳಕಟ್ಟಿಯವರಿಗೆ ಕಳಿಸಿಕೊಟ್ಟಿದ್ದರು.

ಸಂ.ಶಿ. ಭೂಸನೂರಮಠ ಅವರು ಮಹಾಲಿಂಗದೇವನ 'ಏಕೋತ್ತರ ಶತಸ್ಥಲ' ಮತ್ತು ಸಿದ್ಧನಂಜೇಶನ 'ಗುರುರಾಜ ಚಾರಿತ್ರ' ಕೃತಿಗಳನ್ನು ಸಂಪಾದಿಸಲು ಆಯ್ದುಕೊಂಡ ಹಸ್ತಪ್ರತಿಗಳು ಬೆಳಗಾವಿ ನಾಗನೂರು ಮಠದ ಶಿವಬಸವ ಸ್ವಾಮಿಗಳಿಂದ ಎಂಬುದು ಗಮನಿಸುವ ಅಂಶ.

ಕಳಲೆ ನಂಜರಾಜನ 'ಸಂಗೀತ ಗಂಗಾಧರ' ಎಂಬ ಕೃತಿಯನ್ನು ಏಕೈಕ ಹಸ್ತಪ್ರತಿಯಿಂದ ಸಂಪಾದಿಸಿದವರು ಎಂ. ಆರ್. ಸಾಖರೆ ಅವರು. ಇಂದಿಗೂ ಈ ಕೃತಿಯ ಮತ್ತೊಂದು ಹಸ್ತಪ್ರತಿ ಸಿಕ್ಕಿಲ್ಲ. ಈಗ ಸಾಖರೆ ಅವರ ಮುದ್ರಿತ ಕೃತಿಯೂ ದೊರೆಯುತ್ತಿಲ್ಲ.

ಶ್ರೀಗಿರೀಂದ್ರನ 'ಏಕೋತ್ತರ ಶತಸ್ಥಲ ಟೀಕೆ' ಎಂಬ ಅಪರೂಪದ ಹಸ್ತಪ್ರತಿ ಹೈದರಾಬಾದ ಓರಿಯಂಟಲ್ ಇನ್‌ಸ್ಟಿಟ್ಯೂಟ್, ಮೈಸೂರು ವಿಶ್ವವಿದ್ಯಾಲಯ, ಮೂರುಸಾವಿರಮಠ ಹುಬ್ಬಳ್ಳಿ ಮತ್ತು ಬೆಂಗಳೂರಿನ ಸಿ. ಮಹಾದೇವಪ್ಪನವರ ವೈಯಕ್ತಿಕ ಸಂಗ್ರಹದಲ್ಲಿ ಮಾತ್ರವಿದೆ. ಇಷ್ಟು ಹಸ್ತಪ್ರತಿಗಳನ್ನು ಬಿಟ್ಟರೆ ಐದನೆಯ ಹಸ್ತಪ್ರತಿ ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರದಲ್ಲಿರುವುದು ಗಮನಾರ್ಹ ಅಂಶವಾಗಿದೆ.

೧೩ನೆಯ ಶತಮಾನದ ರಾಘವಾಂಕನ ಸಿದ್ಧರಾಮ ಚಾರಿತ್ರವನ್ನು ಹೂಲಿಮಠದ ನೀಲಕಂಠ ಶಿವಾಚಾರ್ಯರು ತಿರುಚಿ ಕೃತಕ ಸಿದ್ಧರಾಮ ಚಾರಿತ್ರವನ್ನು ಪ್ರಕಟಿಸಿ ಧಾರ್ಮಿಕ ಕ್ಷೇತ್ರದಲ್ಲಿ ಅಲ್ಲೋಲ ಕಲ್ಲೋಲವನ್ನುಂಟು ಮಾಡಿದರು. ಹೂಲಿ ಮಠಾಧೀಶರು ಕೃತಕವಾಗಿ ಸೃಷ್ಟಿಸಿದ ಪದ್ಯಗಳನ್ನು ಗುರುತಿಸಿ ಅಂಥ ಒಂದು ದುಷ್ಟಕಾರ್ಯ ಹಸ್ತಪ್ರತಿ ಕ್ಷೇತ್ರದಲ್ಲಿ ನಡೆದ ಮೊದಲ ಘಟನೆ ಎಂಬುದನ್ನು ಇಲ್ಲಿ ಗುರುತಿಸುವ ಪ್ರಯತ್ನ ಮಾಡಿದ್ದೇನೆ.

ಈವರೆಗೆ ಪ್ರಕಟವಾದ ಗ್ರಂಥ ಸೂಚಿ, ಗ್ರಂಥಾಲಯಗಳ ವರ್ಣನಾತ್ಮಕ ಸೂಚಿ, ಮತ್ತು ಬಿ. ನಂಜುಂಡಸ್ವಾಮಿ, ತುಮಕೂರು ಅವರಂಥ ವಿದ್ವಾಂಸರ ಮಾಹಿತಿ ಆಧಾರಿಸಿ ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರದಲ್ಲಿ ೪೦ಕ್ಕೂ ಮಿಕ್ಕಿ ಅಪ್ರಕಟಿತ ಕೃತಿಗಳಿವೆ, ಎಂಬುದನ್ನು ತಿಳಿಸಿಕೊಡುವ ಪ್ರಯತ್ನ ಮಾಡಿದ್ದೇನೆ. ಕನ್ನಡ ಸಾಹಿತ್ಯಲೋಕದ ಪ್ರಮುಖ ಹಸ್ತಪ್ರತಿಗಳೆಲ್ಲ ಪುಸ್ತಕ ರೂಪದಲ್ಲಿ ಪ್ರಕಟವಾಗಿವೆ ಎಂಬ ವಿದ್ವಾಂಸರ ಹೇಳಿಕೆಗೆ ಭಿನ್ನವಾಗಿ ಇನ್ನೂ ಹಲವಾರು ಪ್ರಮುಖ ಮತ್ತು ಲಘು ಕೃತಿಗಳು ಪ್ರಕಟಣೆ ಆಗಿಲ್ಲವೆಂಬುದನ್ನು ಈ ಪ್ರಬಂಧದಲ್ಲಿ ಉಲ್ಲೇಖಿಸಿದ್ದೇನೆ.

ಲಿಪಿಕಾರರ ಅಂತ್ಯಪ್ರಶಸ್ತಿಗಳ ಮೂಲಕ ಈ ಭಾಗದ ಸಾಮಾಜಿಕ, ಧಾರ್ಮಿಕ ಸ್ಥಿತಿಗಳನ್ನು ಕುರಿತು ಕೆಲವು ಹೊಸ ವಿಚಾರಗಳನ್ನು ಮಂಡಿಸಿದ್ದೇನೆ. ಉದಾಹರಣೆಗೆ ೧೮-೧೯ನೆಯ ಶತಮಾನದಲ್ಲಿ ಅಸ್ತಿತ್ವದಲ್ಲಿದ್ದ ಅನೇಕ ಮಠಗಳು ನಾಮಾವಶೇಷವಾಗಿಹೋಗಿರುವುದನ್ನು, ಹಾಗೂ ಸ್ಥಳನಾಮಗಳ ಚಿಂತನೆ, ವೃತ್ತಿ-ವ್ಯಕ್ತಿನಾಮಗಳ ಹಿನ್ನೆಲೆಯಲ್ಲಿ ಸಾಮಾಜಿಕ ಜನಜೀವನವನ್ನು ಗುರುತಿಸುವ ಪ್ರಯತ್ನ ಮಾಡಿದ್ದೇನೆ.

* ಈ ಅಧ್ಯಯನದ ಫಲಶ್ರುತಿಯೆಂಬಂತೆ ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಭಂಡಾರದಲ್ಲಿಯ ಅಪ್ರಕಟಿತ ಕೃತಿಗಳ ವಿವರದ ಜೊತೆಗೆ, ವ್ಯಾಪಕವಾದ ಕ್ಷೇತ್ರಕಾರ್ಯದ ಅಧ್ಯಯನದ ಸಂದರ್ಭದಲ್ಲಿ ನೂರಾರು ಬಯಲಾಟ ಹಸ್ತಪ್ರತಿಗಳ ವಿವರಗಳನ್ನು ಸಂಗ್ರಹಿಸಿದ್ದೇನೆ. ಬೆಳಗಾವಿ ಜಿಲ್ಲೆಯ ಹಣ್ಣಿಕೇರಿ ಶಿವಾನಂದ ಕವಿ, ಕಾದ್ರೊಳ್ಳಿ ನೀಲಕಂಠ ಕವಿ, ಗಂದಿಗವಾಡದ ಬಾಳಂಭಟ್ಟ ಮೊದಲಾದ ಕವಿಗಳು ಬರೆದ ಸಣ್ಣಾಟ, ದೊಡ್ಡಾಟಗಳ ಹಸ್ತಪ್ರತಿಗಳನ್ನು ಗುರುತಿಸುವ ಕಾರ್ಯ ಮಾಡಿದ್ದೇನೆ. ಬಯಲಾಟ ಹಸ್ತಪ್ರತಿಗಳ ಒಂದು ಸಮಗ್ರ ಸೂಚಿಯನ್ನು ಸಿದ್ಧಪಡಿಸಬಹುದು. ಅಷ್ಟು ಬಯಲಾಟ ಕೃತಿಗಳು ನನ್ನ ಅಧ್ಯಯನ ಕಾಲಕ್ಕೆ ಶೋಧಗೊಂಡಿವೆ, ಎಂದು ವಿನಮ್ರವಾಗಿ ಹೇಳಬಯಸುತ್ತೇನೆ. ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸಂ–೨ರಲ್ಲಿ ಬಯಲಾಟ ಹಸ್ತಪ್ರತಿಗಳ ಸಮಗ್ರ ವಿವರ ಬರುತ್ತದೆ ಎಂದು ಹೇಳಲಾಗಿದ್ದರೂ, ಆ ಹಸ್ತಪ್ರತಿ ಸಂಪುಟ ಇನ್ನೂ ಪ್ರಕಟವಾಗಿಲ್ಲ. ಆದ್ದರಿಂದ ನಾನು ಬೆಳಗಾವಿ ಪರಿಸರದ ನಾಟಕಕಾರರು ಬರೆದ ಮಹತ್ವದ ಕೃತಿಗಳ ಮೊದಲ ಬಾರಿಗೆ ಇಲ್ಲಿ ಸಮಗ್ರ ಪಟ್ಟಿಯನ್ನು ಸಿದ್ಧಪಡಿಸಿರುವೆ.

ಬೆಳಗಾವಿ ಜಿಲ್ಲೆಯಲ್ಲಿ ಹತ್ತಾರು ಚಿಕ್ಕ ದೊಡ್ಡ ಸಂಸ್ಥಾನಗಳು ಆಳಿ ಹೋಗಿವೆ. ಅವುಗಳಲ್ಲಿ ಮುಖ್ಯವಾಗಿ ಕಿತ್ತೂರು ಮತ್ತು ವಂಟಮುರಿ ಸಂಸ್ಥಾನಗಳ ವಿಷಯವಾಗಿ ಚಾರಿತ್ರಿಕವಾಗಿ ಲಭ್ಯವಿರುವ ಕೃತಿಗಳ ವಿವರವನ್ನು ಇಲ್ಲಿ ಮೊದಲ ಬಾರಿಗೆ ವಿಶ್ಲೇಷಣೆ ಮಾಡಲಾಗಿದೆ. ಅದರಲ್ಲೂ ಮೋಡಿ ಲಿಪಿಯ ಬರಹಗಳನ್ನು ಆಧರಿಸಿ, ಬಾಬುರಾವ ದೇಸಾಯಿ ಅವರು ಬರೆದ 'ವಂಟಮುರಿ ಸಂಸ್ಥಾನ'ದಂಥ ಅಪರೂಪದ ಹಸ್ತಪ್ರತಿಯನ್ನು ಸಾಹಿತ್ಯಲೋಕಕ್ಕೆ ಪರಿಚಯಿಸುವ ಮೊದಲ ಪ್ರಯತ್ನ ಮಾಡಲಾಗಿದೆ.

ಜೈನ ಬಸದಿಗಳಲ್ಲಿ, ಅವಧೂತ ಪರಂಪರೆಯ ಮಠಗಳಲ್ಲಿ, ಲಿಂಗಾಯತ ಮಠಗಳಲ್ಲಿ ಈಗ ಸಂಗ್ರಹಗೊಂಡಿರುವ ಹಸ್ತಪ್ರತಿಗಳನ್ನು ಆಧುನಿಕ ಕಾಲಮಾನಕ್ಕೆ ತಕ್ಕಂತೆ ಉಳಿಸುವ ಪ್ರಯತ್ನ ಮಾಡಬೇಕು. ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿಗಳನ್ನು ಅತ್ಯಂತ ವ್ಯವಸ್ಥಿತವಾಗಿ ಇಡಲಾಗಿದೆ. ನಿಂಬೆಹಣ್ಣಿನ ರಸದಿಂದ ಹಸ್ತಪ್ರತಿಗಳನ್ನು ಸ್ವಚ್ಛಗೊಳಿಸಿ ಇಡಲಾಗಿದೆ. ಇಂಥ ಪ್ರಕ್ರಿಯೆ ಉಳಿದೆಡೆ ನಡೆದಂತೆ ಕಾಣುವುದಿಲ್ಲ. ಇನ್ನು ಕೆಲವು ವರ್ಷಗಳಾದ ನಂತರ ಈ ಹಸ್ತಪ್ರತಿಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವ ಅಪಾಯವಿದೆ. ಅದಕ್ಕಾಗಿ ಸಂಗ್ರಹಗೊಂಡ ಹಸ್ತಪ್ರತಿಗಳ ಸಂರಕ್ಷಣೆಗಾಗಿ ನಾವು ಪ್ರಯತ್ನಿಸಬೇಕಾದ ಅನಿವಾರ್ಯತೆ ಬಹಳಷ್ಟಿದೆ ಎಂಬುದನ್ನು ಈ ನನ್ನ ಅಧ್ಯಯನದಿಂದ ಕಂಡುಕೊಂಡಿದ್ದೇನೆ.

ಕೆಲವು ಬಯಲಾಟ ಹಸ್ತಪ್ರತಿಗಳನ್ನು ಕವಿಗಳ ಹೆಸರು ಮರೆಮಾಚಿ, ತಮ್ಮ ಹೆಸರು ಹಾಕಿಕೊಂಡು ಕೆಲವರು ಪ್ರತಿ ಮಾಡಿಕೊಂಡಿರುವುದನ್ನು ನಾನು ಗಮನಿಸಿದ್ದೇನೆ. ಇಂಥ ಸುಳ್ಳುಸೃಷ್ಟಿಯ ಹಸ್ತಪ್ರತಿಗಳನ್ನು ವ್ಯಾಪಕ ಅಧ್ಯಯನಕ್ಕೊಳಪಡಿಸಿ, ನಿಜವಾದ ಕವಿಗೆ ನ್ಯಾಯಸಲ್ಲಿಸಬೇಕಾದ ಕಾರ್ಯ ಇನ್ನೂ ನಡೆಯಬೇಕಾಗಿದೆ.

ಗೋಕಾವಿ ಅನಂತಾದ್ರೀಶ ಹರಿದಾಸರ ವೆಂಕಟೇಶ ಪಾರಿಜಾತದ ಹಸ್ತಪ್ರತಿಯು ಚಿತ್ರಕಲೆಯಿಂದ ಕೂಡಿದ ಸಚಿತ್ರ ಕಾವ್ಯವಾಗಿದೆ. ಬೆಂಗಳೂರಿನಲ್ಲಿ ನೆಲೆಸಿರುವ ಅನಂತಾದ್ರೀಶರ ಮೊಮ್ಮಗಳ ಮನೆಯಲ್ಲಿ ಈ ಸಚಿತ್ರ ಕಾವ್ಯದ ಹಸ್ತಪ್ರತಿ ಇದೆ. ಅದು ಪ್ರಕಟವಾಗಬೇಕಾಗಿದೆ.

ಒಟ್ಟಾರೆ, ಈ ನನ್ನ ಮಹಾಪ್ರಬಂಧವು ಉಪೇಕ್ಷೆಗೆ ಒಳಗಾಗಿದ್ದ ಬೆಳಗಾವಿ ಪರಿಸರದ ಹಸ್ತಪ್ರತಿಗಳ ಸಮಗ್ರವೂ ಸಮೃದ್ಧವೂ ಆದ ಸಂಗ್ರಹ ಸಂಪತ್ತಿನ ವಿವರಣೆ, ಅವುಗಳಲ್ಲಿ ಅಡಗಿರುವ ವಿಷಯ ಸಂಪತ್ತಿನ ವಿವರಣೆ, ಅವುಗಳ ಸಾಮಾಜಿಕ–ಧಾರ್ಮಿಕ–ಚಾರಿತ್ರಿಕ ಆಯಾಮಗಳ ವಿವರಣೆಯನ್ನು ಒಳಗೊಂಡಿದೆ ಎಂದು ಹೇಳಬಯಸುವೆ. ಬೆಳಗಾವಿ ಪರಿಸರದ ಸಾಹಿತ್ಯ–ಸಂಸ್ಕೃತಿಗಳನ್ನು ಅಧ್ಯಯನ ಮಾಡುವ ಸಂಶೋಧಕರಿಗೆ, ಆಸಕ್ತ ಸಾಹಿತ್ಯಾಭಿಮಾನಿಗಳಿಗೆ ಈ ಮಹಾಪ್ರಬಂಧ ಮಾರ್ಗದರ್ಶಿ ಆಕರ ಕೃತಿಯಾಗುವ ನಿಟ್ಟಿನಲ್ಲಿ ಪರಿಶ್ರಮಿಸಿದ್ದೇನೆ ಎಂಬುದನ್ನು ವಿನಮ್ರವಾಗಿ ಹೇಳಬಯಸುತ್ತೇನೆ.

ಇಂದು ಬೆಳಗಾವಿಯ ಗಡಿ ಸಮಸ್ಯೆ ಸುಪ್ರೀಂಕೋರ್ಟ ಮೆಟ್ಟಿಲೇರಿದೆ. ಕೋರ್ಟ್ ಯಾವಾಗಲೂ ಸಾಕ್ಷಿಗಳನ್ನು ಅವಲಂಬಿಸಿ ತೀರ್ಪು ನೀಡುತ್ತದೆ. ಈ ಹಿನ್ನೆಲೆಯಲ್ಲಿ ನಾನು ಕ್ಷೇತ್ರಕಾರ್ಯ ಮಾಡಿ ನೂರಾರು ದಾಖಲೆಗಳನ್ನು ಸಂಗ್ರಹಿಸಿದ್ದೇನೆ. ನನ್ನಂತೆ ಬೆಳಗಾವಿಯ ನ್ಯಾಯವಾದಿಯಾದ ರವೀಂದ್ರ ತೋಟಿಗೇರ ಅವರು ಹತ್ತುಸಾವಿರ ದಾಖಲೆಗಳನ್ನು ಸಂಗ್ರಹಿಸಿದ್ದಾರೆ. ನಾನು ಸಂಗ್ರಹಿಸಿದ ದಾಖಲೆಗಳನ್ನು ತೋಟಗೇರ ಅವರ ಮೂಲಕ ಸರಕಾರದ ಗಮನಕ್ಕೆ ತರುವ ಕೆಲಸ ಮಾಡಲಾಗಿದೆ.

ಅನುಬಂಧ-೧.೧

# ಅಪ್ರಕಟಿತ ಹಸ್ತಪ್ರತಿಗಳ ವಿವರ

(ನಾನು ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ಮತ್ತು ಲಿಂಗಾಯತ ಸಂಶೋಧನ ಕೇಂದ್ರ ಗ್ರಂಥಾಲಯದ ಹಸ್ತಪ್ರತಿ ಸೂಚಿಗಳನ್ನು ಗಮನಿಸಿ ಈ ಪಟ್ಟಿಯನ್ನು ಸಿದ್ಧಪಡಿಸಿರುವೆ. ಅಲ್ಲದೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಗ್ರಂಥಸೂಚಿಗಳನ್ನು ಅವಲೋಕಿಸಿದ್ದೇನೆ. ಎಸ್. ಆರ್. ಗುಂಜಾಳ, ಬಿ. ನಂಜುಂಡಸ್ವಾಮಿ, ವೀರಣ್ಣ ರಾಜೂರ ಅವರಂಥ ಹಿರಿಯ ವಿದ್ವಾಂಸರ ಅಭಿಪ್ರಾಯ ಕೇಳಿ ಈ ನಿರ್ಣಯಕ್ಕೆ ಬಂದಿರುವೆ. ಹೀಗಾಗಿ ಇದೊಂದು ಅಧಿಕೃತ ಪಟ್ಟಿ ಎಂದು ನಿಖರವಾಗಿ ಹೇಳಬಹುದು)

| ಅ.ನಂ | ಹಸ್ತಪ್ರತಿಯ ಹೆಸರು | ಕವಿ/ಲೇಖಕ | ಕವಿಯ ಕಾಲ | ಸಾಹಿತ್ಯ ಪ್ರಕಾರ | ಹಸ್ತಪ್ರತಿ ಸ್ವರೂಪ |
|---|---|---|---|---|---|
| ೧. | ಅದೃಶ್ಯಯ್ಯ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ಷಟ್ಪದಿ ಕಾವ್ಯ | ಕಾಗದಪ್ರತಿ |
| ೨. | ಅನಾಮಯ ಸ್ತೋತ್ರಂ (ದಂಡಿಕೃತ: ಕನ್ನಡ ವ್ಯಾಖ್ಯಾನ) | ಗುರುಬಸವ ಸ್ವಾಮಿಗಳು | ೧೯೬೭ | ಅನುವಾದ | ಕಾಗದ ಪ್ರತಿ |
| ೩. | ಅನುಭವ ಸಾರದ ವ್ಯಾಖ್ಯಾನ | ವೃಷಭಲಿಂಗ ಶಿವಯೋಗಿ | – | ಟೀಕಾಸಾಹಿತ್ಯ | ಕಾಗದ ಪ್ರತಿ |
| ೪. | ಅಪೂರ್ವ ಶತಕ | ಅಜ್ಞಾತ ಕರ್ತೃ | – | ಶತಕ | ತಾಡೋಲೆ |
| ೫. | ಅಲ್ಲಮಪ್ರಭು | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ಸಣ್ಣಾಟ | ಕಾಗದ ಪ್ರತಿ |
| ೬. | ಅಶ್ವಮೇಧ | ನೇಸರಗಿ ಬಸವಣ್ಣೆಪ್ಪ | ೧೮೯೧-೧೯೭೧ | ಸಣ್ಣಾಟ | ಕಾಗದ ಪ್ರತಿ |
| ೭. | ಅಷ್ಟಾವರಣದ ಗ್ರಂಥ | ಸಣ್ಣ ಬರಹದ ಗುರುಬಸವರಾಜ | ೧೫೩೦ | ಧಾರ್ಮಿಕ | ತಾಡೋಲೆ |
| ೮. | ಇಂದ್ರಕೀಲ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದ ಪ್ರತಿ |
| ೯. | ಇಂದ್ರಜಿತ ಕಾಳಗ | ನೇಸರಗಿ ಬಸವಣ್ಣೆಪ್ಪ | ೧೮೯೧-೧೯೭೧ | ಸಣ್ಣಾಟ | ಕಾಗದ ಪ್ರತಿ |
| ೧೦. | ಇಂದ್ರಿಯ ವಿಜ್ಞಾನವೂ, ಆರೋಗ್ಯಶಾಸ್ತ್ರವೂ | ಸಂ: ಕೆ. ಜಿ. ಕುಂದಣಗಾರ | ೧೯೫೦? | ವಿಜ್ಞಾನ | ಕಾಗದ ಪ್ರತಿ |
| ೧೧. | ಉಡುತಡಿ ಮಹಾದೇವಿ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ಸಣ್ಣಾಟ | ಕಾಗದಪ್ರತಿ |
| ೧೨. | ಎಲ್ಲ ಪುರಾತನವ ವಚನಗಳು (೩೨೦೬ ವಚನಗಳ ಕಟ್ಟು) | ಬೋಳಬಸವೇಶ್ವರರು | ೧೫೬೦ | ವಚನ ಸಂಕಲನ | ತಾಡೋಲೆ |
| ೧೩. | ಏಕಾಕ್ಷರ ನಿಘಂಟು ಟೀಕೆ | ವರರುಚಿ ಕೇಶವಚಂದ್ರಮುನಿ | – | ಟೀಕೆ | ತಾಡೋಲೆ |

| | | | | | |
|---|---|---|---|---|---|
| ೧೪. | ಏಕೋತ್ತರ ಶತಸ್ಥಲ ಟೀಕೆ | ಶ್ರೀ ಗಿರೀಂದ್ರ | ೧೫೬೦ | ಟೀಕೆ | ತಾಡೋಲೆ |
| ೧೫. | ಐರಾವಣಮೈರಾವಣ | ಬಾಳಂಭಟ್ಟ | ೧೮೮೭–೧೯೪೮ | ನಾಟಕ | ಕಾಗದಪ್ರತಿ |
| ೧೬. | ಐರಾವಾಣಮೈರಾವಣ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦–೧೯೫೦ | ದೊಡ್ಡಾಟ | ಕಾಗದಪ್ರತಿ |
| ೧೭. | ಕರಣ ಹಸಿಗೆಯ ವಾಚ್ಯ | ಪರ್ವತ ಶಿವಯೋಗಿ | ೧೬೫೦ | ಟೀಕೆ | ತಾಡೋಲೆ |
| ೧೮. | ಕರಣಹಸಿಗೆ ಟೀಕೆ | ಪರ್ವತ ಶಿವಯೋಗಿ | ೧೬೫೦ | ಟೀಕೆ | ತಾಡೋಲೆ |
| ೧೯. | ಕರ್ಣಾರ್ಜುನ ಕಾಳಗ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೭೧ | ನಾಟಕ | ಕಾಗದಪ್ರತಿ |
| ೨೦. | ಕರ್ಣಾರ್ಜುನರ ಕಾಳಗ | ಬಾಳಂಭಟ್ಟ | ೧೮೮೭–೧೯೪೮ | ನಾಟಕ | ಕಾಗದಪ್ರತಿ |
| ೨೧. | ಕರ್ನಾಟಕ ಪಾರ್ವತಿ ಪರಿಣಯಂ (ಬಾಣ ನಾಟಕದ ಕನ್ನಡ ಅನುವಾದ) | ಗುರುಬಸವ ಸ್ವಾಮಿಗಳು | ೧೯೬೦ | ಅನುವಾದ | ಕಾಗದಪ್ರತಿ |
| ೨೨. | ಕರ್ನಾಟಕ ವಿಷಯಜಾತಿ | ಸಂ: ಕೆ. ಜಿ. ಕುಂದಣಗಾರ | ೧೯೫೦ | ಸಂಪಾದನೆ | ಕಾಗದಪ್ರತಿ |
| ೨೩. | ಕವಿಕರ್ಣರಸಾಯನ | ಸಂ: ಡಾ. ಶಿ. ಚೆ. ನಂದೀಮಠ | ೧೯೪೫ | ಸಂಪಾದನೆ | ಕಾಗದಪ್ರತಿ |
| ೨೪. | ಕಿರಾತರ್ಜುನ ಯುದ್ಧ | ಗುರುರಾಚಯ್ಯ | ೧೯೫೦ | ದೊಡ್ಡಾಟ | ಕಾಗದಪ್ರತಿ |
| ೨೫. | ಕುಂಭಕರ್ಣ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦–೧೯೫೦ | ದೊಡ್ಡಾಟ | ಕಾಗದಪ್ರತಿ |
| ೨೬. | ಕುಣಾಲನ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೨೭. | ಕೃಷ್ಣಾರ್ಜುನ ಕಾಳಗ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೭೧ | ನಾಟಕ | ಕಾಗದಪ್ರತಿ |
| ೨೮. | ಕೈವಲ್ಯ ಪದ್ಧತಿ ವ್ಯಾಖ್ಯಾನ | ಅಜ್ಞಾತ ಕರ್ತೃ | ೧೮ನೇ ಶತಮಾನ? | ಟೀಕೆ | ಕಾಗದಪ್ರತಿ |
| ೨೯. | ಕೊಡಗದ ಮಾರಯ್ಯನ ಸಾಂಗತ್ಯ | ಅಜ್ಞಾತ ಕರ್ತೃ | – | ಸಾಂಗತ್ಯ | ತಾಡೋಲೆ |
| ೩೦. | ಗಿರಿಜಾ ಕಲ್ಯಾಣ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೭೧ | ನಾಟಕ | ಕಾಗದಪ್ರತಿ |
| ೩೧. | ಗಿರಿಜೆಗಂಗೆ ಸಂವಾದ | ಸಿದ್ಧಲಿಂಗ ದೇವರು | ೧೭೦೦ | ಮಿಶ್ರಕಾವ್ಯ | ಕಾಗದಪ್ರತಿ |

| | | | | | |
|---|---|---|---|---|---|
| ೩೨. | ಗುಂಡಬ್ರಹ್ಮಯ್ಯಗಳ ಸಾಂಗತ್ಯ | ಚನ್ನಬಸವ ದೇವರು | ೧೭೦೦ | ಸಾಂಗತ್ಯ | ತಾಡೋಲೆ |
| ೩೩. | ಗುಡ್ಡಾಪುರ ದಾನಮ್ಮದೇವಿ ಪುರಾಣ | ಗುರುಸಿದ್ಧ ಕವಿ | ೧೮೫೦ | ಪುರಾಣ | ಕಾಗದಪ್ರತಿ |
| ೩೪. | ಗುರುಭಕ್ತ | ಗುರುರಾಚಯ್ಯ | ೧೯೩೦ | ಸಣ್ಣಾಟ | ಕಾಗದಪ್ರತಿ |
| ೩೫. | ಗುರುಭಕ್ತಾಂಡಾರಿ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ಸಣ್ಣಾಟ | ಕಾಗದಪ್ರತಿ |
| ೩೬. | ಚನ್ನಬಸವ ಚಾರಿತ್ರ್ಯವು ಅರ್ಥಾತ್ | | | | |
| | ವೀರಶೈವ ಕರ್ಣಾಮೃತವು(ಭಾ. ಷಟ್ಪದಿ) | ಗುರುಬಸವ ಸ್ವಾಮಿಗಳು | ೧೯೬೦ | ಷಟ್ಪದಿ ಕಾವ್ಯ | ಕಾಗದಪ್ರತಿ |
| ೩೭. | ಚಿಕ್ಕ ನೀಲಮ್ಮನ ಸ್ತೋತ್ರ | – | – | ವಾರ್ಧಕ ಷಟ್ಪದಿ | ತಾಡೋಲೆ |
| ೩೮. | ಚೂಡಾಲಿ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ನಾಟಕ | ಕಾಗದಪ್ರತಿ |
| ೩೯. | ಜಂಗಮ ಮಹಾತ್ಮೆ | ವರ ಗುರುಶಾಂತ | ೧೭೦೦ | ಕಾವ್ಯ | ತಾಡೋಲೆ |
| ೪೦. | ಜಂಗಮಲಿಂಗ ಸಾಂಗತ್ಯ | – | – | ಸಾಂಗತ್ಯ | ಕಾಗದಪ್ರತಿ |
| ೪೧. | ಜಯದ್ರಥ | ಗುರುರಾಚಯ್ಯ | ೧೯೩೦ | ದೊಡ್ಡಾಟ | ಕಾಗದಪ್ರತಿ |
| ೪೨. | ಜಲಂಧರ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದಪ್ರತಿ |
| ೪೩. | ಜಿಗುನಿ ಮರುಳದೇವರ ಕಂದ ಟೀಕೆ | ಮರಿ ಸಂಗಯ್ಯ | ೧೬೦೦ | ಟೀಕೆ | ತಾಡೋಲೆ |
| ೪೪. | ಜೀವನ್ಮುಕ್ತಿ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದಪ್ರತಿ |
| ೪೫. | ಜೋಧಾಬಾಯಿ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ಸಣ್ಣಾಟ | ಕಾಗದಪ್ರತಿ |
| ೪೬. | ತರ್ಕಭಾಷಾ ವ್ಯಾಖ್ಯಾನ | ಶ್ರೀ ಮನ್ನುರಾರಿ | – | ಟೀಕೆ | ತಾಡೋಲೆ |
| ೪೭. | ತಾಮ್ರಧ್ವಜ | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೪೮. | ತಿರುನೀಲಕಂಠ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ನಾಟಕ | ಕಾಗದಪ್ರತಿ |
| ೪೯. | ತಿಲಕಾಂಬೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ನಾಟಕ | ಕಾಗದಪ್ರತಿ |

| | | | | | |
|---|---|---|---|---|---|
| ೫೦. | ತಿಲಕಾಂಬೆ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೫೧. | ದಾಸಾರ್ಯರಾಜನ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೫೨. | ದೀಕ್ಷಾ ವಿಧಾನ ಟೀಕೆ | – | – | ಟೀಕೆ | ತಾಡೋಲೆ |
| ೫೩. | ದೇವಸೇನ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೫೪. | ದೇವಿ ಪುರಾಣ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೬೧ | ಷಟ್ಪದಿ ಕಾವ್ಯ | ಕಾಗದಪ್ರತಿ |
| ೫೫. | ಧರ್ಮಸಾಮ್ರಾಜ್ಯ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೫೬. | ಧರ್ಮಸಾಮ್ರಾಜ್ಯ | ಶಿವಾನಂದ ಕವಿ ಹಣ್ಣಿಕೇರಿ | ೧೮೬೦–೧೯೫೦ | ದೊಡ್ಡಾಟ | ಕಾಗದಪ್ರತಿ |
| ೫೭. | ಧ್ರುವ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೫೮. | ನಂಜರಾಜ ವಾಣಿವಿಲಾಸ ಟೀಕೆ | ಕಳಲೆ ನಂಜರಾಜ | ೧೬೬ | ಟೀಕೆ | ತಾಡೋಲೆ |
| ೫೯. | ನಂದಿಪುರಾಣ | – | – | ಕಾವ್ಯ | ತಾಡೋಲೆ |
| ೬೦. | ನಂದೀನಾಥ | ಗುರುಸಿದ್ಧಯ್ಯ ಪುರಾಣಿಕಮಠ | ೧೯೫೦ | ನಾಟಕ | ಕಾಗದಪ್ರತಿ |
| ೬೧. | ನಾಗಾರ್ಜುನ ಕಾಳಗ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೬೧ | ನಾಟಕ | ಕಾಗದಪ್ರತಿ |
| ೬೨. | ನಿಜಗುಣ ಶಿವಯೋಗಿ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೬೩. | ನಿಜಗುಣ ಶಿವಯೋಗಿ | ಶಿವಾನಂದ ಕವಿ ಹಣ್ಣಿಕೇರಿ | ೧೮೬೦–೧೯೫೦ | ಸಣ್ಣಾಟ | ಕಾಗದಪ್ರತಿ |
| ೬೪. | ನೇಮಿಚಂದ್ರನ ಲೀಲಾವತಿ ಮಹಾಪ್ರಬಂಧಂ | ಸಂ: ಕೆ. ಜಿ. ಕುಂದಣಗಾರ | ೧೯೬೦ | ಸಂಪಾದನೆ | ಕಾಗದಪ್ರತಿ |
| ೬೫. | ಪಂಚಪ್ರಕಾರದ ಗದ್ಯ | ಪಾಲ್ಕುರಿಕೆ ಸೋಮನಾಥ | ೧೧೯೫ | ವೃತ್ತ–ಗದ್ಯ | ತಾಡೋಲೆ |
| ೬೬. | ಪಂಚಾಕ್ಷರಿ ರಗಳೆ | – | – | ರಗಳೆ | ತಾಡೋಲೆ |
| ೬೭. | ಪಂಚಾಕ್ಷರೀ ಮಹಾತ್ಮೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೬೨ | ನಾಟಕ | ಕಾಗದಪ್ರತಿ |
| ೬೮. | ಪದಮಂತ್ರಗೋಪ್ಯದ ಟೀಕೆ | – | – | ಟೀಕೆ | ತಾಡೋಲೆ |

| | | | | | |
|---|---|---|---|---|---|
| ೬೯. | ಪರಮ ರಹಸ್ಯ | ಉದ್ದಾನ ಸಿದ್ಧಲಿಂಗ ದೇವ ಕೃತ | ೧೬೦೦ | ಟೀಕೆ | ತಾಡೋಲೆ |
| ೭೦. | ಪಾಂಡವ ಪ್ರತಾಪ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೭೧ | ನಾಟಕ | ಕಾಗದಪ್ರತಿ |
| ೭೧. | ಪಾಖಂಡ ಕೃತಿ ಖಂಡನ ವೀರಶೈವ ಮತಮಂಡನ | ಗುರುಬಸವ ಸ್ವಾಮಿಗಳು | ೧೯೫೦ | ಧಾರ್ಮಿಕ | ಕಾಗದಪ್ರತಿ |
| ೭೨. | ಪ್ರಭುದೇವರ ಟೀಕಿನ ವಚನ | ಕುಮಾರ ಬಂಕನಾಥ | ೧೬೦೦ | ವಚನಟೀಕೆ | ತಾಡೋಲೆ |
| ೭೩. | ಬಸವಂತ ಬಲವಂತ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦–೧೯೫೦ | ಸಣ್ಣಾಟ | ಕಾಗದಪ್ರತಿ |
| ೭೪. | ಬಸವೇಶ್ವರ | ಗುರುರಾಚಯ್ಯ | ೧೯೫೦ | ಸಣ್ಣಾಟ | ಕಾಗದಪ್ರತಿ |
| ೭೫. | ಬೋಳಬಸವೇಶ್ವರ ದೇವರು ಸಂಕಲಿಸಿದ ೧೦೦೮ ವಚನಗಳು | ಬೋಳಬಸವೇಶ್ವರ | ೧೫೬೦ | ವಚನಸಂಕಲನ | ತಾಡೋಲೆ |
| ೭೬. | ಬ್ರಹ್ಮಸಿದ್ಧಾಂತ ಮಾಲೆ | ಶ್ರೀ ಬಾಬಾ | ೧೯೨೫ | ಧಾರ್ಮಿಕ | ಕಾಗದಪ್ರತಿ |
| ೭೭. | ಭಕ್ತ ಕಬೀರ | ಬಾಳಂಭಟ್ಟ | ೧೮೮೭–೧೯೪೮ | ನಾಟಕ | ಕಾಗದಪ್ರತಿ |
| ೭೮. | ಭಕ್ತ ಕಬೀರದಾಸ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦–೧೯೫೦ | ಸಣ್ಣಾಟ | ಕಾಗದಪ್ರತಿ |
| ೭೯. | ಭಕ್ತ ಪುಂಡಲೀಕ | ಬಸಪ್ಪ ನಂದಿ | ೧೯೫೫ | ನಾಟಕ | ಕಾಗದಪ್ರತಿ |
| ೮೦. | ಭಕ್ತ ಸಿರಿಯಾಳ | ಕಾಡಾಪುರ ಬಸವಂತಪ್ಪ | ೧೯೪೦ | ನಾಟಕ | ಕಾಗದಪ್ರತಿ |
| ೮೧. | ಭಕ್ತಕೋಶನ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೮೨. | ಭದ್ರವಿರಾಜ | ಭೇಂಡಿಗೇರಿ ಸಿದ್ಧಪ್ಪ | ೧೯೫೦ | ನಾಟಕ | ಕಾಗದಪ್ರತಿ |
| ೮೩. | ಭರತೇಶ ವೈಭವ (ಮರಾಠಿ ಭಾಷೆಗೆ ಅನುವಾದ) | ಸಂ: ಕೆ. ಜಿ. ಕುಂದಣಗಾರ | ೧೯೬೦ | ಅನುವಾದ | ಕಾಗದಪ್ರತಿ |
| ೮೪. | ಭಾವರತ್ನಾಕರ | – | – | ಷಟ್ಪದಿ ಕಾವ್ಯ | ತಾಡೋಲೆ |
| ೮೫. | ಭೀಮಾರ್ಜುನ ಕಾಳಗ | ನೇಸರಗಿ ಬಸವಣ್ಣೆಪ್ಪ | ೧೮೭೦–೧೯೫೦ | ನಾಟಕ | ಕಾಗದಪ್ರತಿ |
| ೮೬. | ಮಡಿವಾಳಯ್ಯನ ಚರಿತ್ರೆ | – | – | ಸಾಂಗತ್ಯ | ತಾಡೋಲೆ |

| | | | | | |
|---|---|---|---|---|---|
| ೮೭. | ಮಣ್ಣೇಶನ ಚರಿತ್ರೆ | – | ೧೬೦೦? | ಷಟ್ಪದಿ ಕಾವ್ಯ | ತಾಡೋಲೆ |
| ೮೮. | ಮಯೂರಧ್ವಜ | ಬಾಳಂಭಟ್ಟ | ೧೮೮೭–೧೯೪೮ | ನಾಟಕ | ಕಾಗದಪ್ರತಿ |
| ೮೯. | ಮರಾಠರ ಅಭ್ಯುದಯ | ಗುರುರಾಚಯ್ಯ | ೧೯೫೦ | ಸಣ್ಣಾಟ | ಕಾಗದಪ್ರತಿ |
| ೯೦. | ಮಲಯರಾಜ ಸ್ತೋತ್ರ ಟೀಕೆ | ಗುರುದೇವ | ೧೩೫೦ | ಟೀಕೆ | ತಾಡೋಲೆ |
| ೯೧. | ಮಲ್ಲಿಕಾರ್ಜುನ ಸ್ತೋತ್ರ | ರಾಮಚಂದ್ರ ಕವಿ | ೧೭೦೦ | ಪದ್ಯ | ತಾಡೋಲೆ |
| ೯೨. | ಮಹಾದೇವಿ | ಭೇಂಡಿಗೇರಿ ಸಿದ್ಧಪ್ಪ | ೧೯೬೦ | ನಾಟಕ | ಕಾಗದಪ್ರತಿ |
| ೯೩. | ಮಹಾದೇವಿಯಕ್ಕ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೯೪. | ಮಹಾನಂದೆಯ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೯೫. | ಮಹಾಭಾರತ | ನೇಸರಗಿ ಬಸವಣ್ಣೆಪ್ಪ | ೧೮೭೦–೧೯೫೦ | ನಾಟಕ | ಕಾಗದಪ್ರತಿ |
| ೯೬. | ಮಹಾಯೋಗದ ಮರ್ಮವು | ಗುರುಬಸವ ಸ್ವಾಮಿಗಳು | ೧೯೬೦ | ಧಾರ್ಮಿಕ | ಕಾಗದಪ್ರತಿ |
| ೯೭. | ಮಹಾಸತಿ ಅನುಸೂಯಾ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦–೧೯೫೦ | ಸಣ್ಣಾಟ | ಕಾಗದಪ್ರತಿ |
| ೯೮. | ಮಾಚಿದೇವ ಮನೋವಿಲಾಸ ಟೀಕೆ | ಬಸವಲಿಂಗ ಶಿವಯೋಗಿ | ೧೫೦೦ | ಗದ್ಯ–ಟೀಕೆ | ತಾಡೋಲೆ |
| ೯೯. | ಮಾಧವ ಕರುಣಾ ವಿಲಾಸ | ಬಾಳಂಭಟ್ಟ | ೧೮೮೭–೧೯೪೮ | ನಾಟಕ | ಕಾಗದಪ್ರತಿ |
| ೧೦೦. | ಮಾರುತಿ ಲಿಂಗಧಾರಣ | ನೇಸರಗಿ ಬಸವಣ್ಣೆಪ್ಪ | ೧೮೭೦–೧೯೫೦ | ನಾಟಕ | ಕಾಗದಪ್ರತಿ |
| ೧೦೧. | ಮೇದಾರ ಕೇತಯ್ಯ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೧೦೨. | ಮೋನೇಶ್ವರ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೧೦೩. | ಮೋಳಿಗೆ ಮಾರಯ್ಯನ ವಚನಗಳ ಟೀಕೆ | – | – | ವಚನ ಟೀಕೆ | ತಾಡೋಲೆ |
| ೧೦೪. | ಯಯಾತಿ | ನೇಸರಗಿ ಬಸವಣ್ಣೆಪ್ಪ | ೧೮೭೦–೧೯೫೦ | ನಾಟಕ | ಕಾಗದಪ್ರತಿ |
| ೧೦೫. | ಯಯಾತಿ ರಾಜ | ಬಸಪ್ಪ ನಂದಿ | ೧೯೪೫ | ನಾಟಕ | ಕಾಗದಪ್ರತಿ |

| | | | | |
|---|---|---|---|---|
| ೧೦೬. ಯೋಗಸ್ಥಾಪನ ಸ್ಥಲದ ಟೀಕೆ | – | – | ಟೀಕೆ | ತಾಡೋಲೆ |
| ೧೦೭. ರಾಮಾಯಣ | ನೇಸರಗಿ ಬಸವಣ್ಣೆಪ್ಪ | ೧೮೭೦-೧೯೫೦ | ನಾಟಕ | ಕಾಗದಪ್ರತಿ |
| ೧೦೮. ರಾವಣವಧೆ | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೧೦೯. ರುಕ್ಮಾಂಗರಾಜ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದಪ್ರತಿ |
| ೧೧೦. ರುಕ್ಮಿಣಿ ಸ್ವಯಂವರ | ಬಸಪ್ಪ ನಂದಿ | ೧೯೪೫ | ನಾಟಕ | ಕಾಗದಪ್ರತಿ |
| ೧೧೧. ರುದ್ರಪ್ರಭು ನೀತಿ | ಕಂಬಿ ಬಸವಾರ್ಯ | ೧೯೨೫ | ಕಂದಪದ್ಯಗಳು | ಕಾಗದಪ್ರತಿ |
| ೧೧೨. ರುದ್ರಭಾಷಾ (ಪ್ರಾಕೃತ ಟೀಕಾ) | – | – | ಟೀಕೆ | ತಾಡೋಲೆ |
| ೧೧೩. ಲಂಕಾದಹನ | ನೇಸರಗಿ ಬಸವಣ್ಣೆಪ್ಪ | ೧೮೭೦-೧೯೫೦ | ನಾಟಕ | ಕಾಗದಪ್ರತಿ |
| ೧೧೪. ಲಂಕಾದಹನ | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೧೧೫. ಲವ ಕುಶರ ಕಾಳಗ | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೧೧೬. ಲವಕುಶ | ನೇಸರಗಿ ಬಸವಣ್ಣೆಪ್ಪ | ೧೮೭೦-೧೯೫೦ | ನಾಟಕ | ಕಾಗದಪ್ರತಿ |
| ೧೧೭. ಲಿಂಗಾಗಮ | – | – | ಭಾಮಿನಿ ಷಟ್ಪದಿ | ತಾಡೋಲೆ |
| ೧೧೮. ವಸಂತ ಮಾಲತಿ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ಸಣ್ಣಾಟ | ಕಾಗದಪ್ರತಿ |
| ೧೧೯. ವಿಜಯನಗರ ಸಾಮ್ರಾಜ್ಯ | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೧೨೦. ವಿರಾಟಪರ್ವ | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೧೨೧. ವಿಶ್ವಸಂದೇಶ | ಗುರುಬಸವ ಸ್ವಾಮಿಗಳು ಅಥಣಿ | ೧೯೬೦ | ಚಿಂತನೆಗಳು | ಕಾಗದಪ್ರತಿ |
| ೧೨೨. ವೀರ ಅಭಿಮನ್ಯು | ನೇಸರಗಿ ಬಸವಣ್ಣೆಪ್ಪ | ೧೮೭೦-೧೯೫೦ | ನಾಟಕ | ಕಾಗದಪ್ರತಿ |
| ೧೨೩. ವೀರ ಅಭಿಮನ್ಯು | ಬಾಳಂಭಟ್ಟ | ೧೮೮೭-೧೯೪೮ | ನಾಟಕ | ಕಾಗದಪ್ರತಿ |
| ೧೨೪. ವೀರಶೈವಾಚಾರ ಪ್ರದೀಪಿಕಾ (ಕನ್ನಡ) | ಸಿದ್ಧಲಿಂಗ ಕವಿ | ೧೬೫೦ | ಟೀಕೆ | ತಾಡೋಲೆ |

| | | | | |
|---|---|---|---|---|
| ೧೨೫. ವೀರಸಂಗಮಾರ್ಯ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ನಾಟಕ | ಕಾಗದಪ್ರತಿ |
| ೧೨೬. ವೇದಾಂತ ವಿಮರ್ಶವು | ಗುರುಬಸವ ಸ್ವಾಮಿಗಳು | ೧೯೬೦ | ಧಾರ್ಮಿಕ | ಕಾಗದಪ್ರತಿ |
| ೧೨೭. ವೇಮನಾರಾಧ್ಯ | ಕಾಡಾಪುರ ಬಸವಂತಪ್ಪ | ೧೯೫೦ | ನಾಟಕ | ಕಾಗದಪ್ರತಿ |
| ೧೨೮. ವೈದೇವಿ ಸಾದೇವಿ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ಸಣ್ಣಾಟ | ಕಾಗದಪ್ರತಿ |
| ೧೨೯. ಶತಮುಖ ರಾವಣ | ನೇಸರಗಿ ಬಸವಣ್ಣೆಪ್ಪ | ೧೮೭೦-೧೯೫೦ | ನಾಟಕ | ಕಾಗದಪ್ರತಿ |
| ೧೩೦. ಶಾಂತವೀರ ಛಂದಸ್ಸು | ಶಾಂತವೀರ ರಾಚೀದೇವ ಕಿತ್ತೂರ | ೧೮೮೦ | ವ್ಯಾಕರಣ | ? |
| ೧೩೧. ಶಾಂತವೀರ ನಿಘಂಟು | ಶಾಂತವೀರ ರಾಚೀದೇವ ಕಿತ್ತೂರ | ೧೮೮೦ | ವ್ಯಾಕರಣ | ? |
| ೧೩೨. ಶಿಬಿ ಚಕ್ರವರ್ತಿ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದಪ್ರತಿ |
| ೧೩೩. ಶಿವಕವಚದ ಟೀಕು | – | – | ಟೀಕೆ | ತಾಡೋಲೆ |
| ೧೩೪. ಶಿವಭಕ್ತಿ ವಿಳಾಸ | ಗುರುಬಸವ ಸ್ವಾಮಿಗಳು ಅಥಣಿ | ೧೯೬೦ | ಕಾವ್ಯ | ಕಾಗದಪ್ರತಿ |
| ೧೩೫. ಶಿವಾಧಿಕ್ಯ ರತ್ನಾವಳಿ | ಷಡಕ್ಷರಿಕವಿ | ೧೭೦೦ | ಕಾವ್ಯ | ತಾಡೋಲೆ |
| ೧೩೬. ಶಿವಾನುಭವ ಶತಕಂ | ಗುರುಬಸವ ಸ್ವಾಮಿಗಳು | ೧೯೬೦ | ಶತಕ | ಕಾಗದಪ್ರತಿ |
| ೧೩೭. ಶ್ರೀ ಮದ್ವೀರಶೈವಾಭಿಷ್ಟಕಲ್ಪದ್ರುಮಂ ಪುರಾಣ | ರೇವಣಸಿದ್ಧ ಕವಿ | ೧೯೨೮ | ಷಟ್ಪದಿಕಾವ್ಯ | ಕಾಗದಪ್ರತಿ |
| ೧೩೮. ಶ್ರೀನಿವಾಸ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ನಾಟಕ | |
| ೧೩೯. ಶ್ರೀಶೈಲ ಕಲ್ಪ | – | – | ಚರಿತ್ರೆ | ತಾಡೋಲೆ |
| ೧೪೦. ಶ್ವೇತರಾಜ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫-೧೯೭೨ | ನಾಟಕ | ಕಾಗದಪ್ರತಿ |
| ೧೪೧. ಶ್ವೇತರಾಜ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದಪ್ರತಿ |
| ೧೪೨. ಷಡ್ವಿಧ ಲಿಂಗದ ವಿವರ | – | – | ಧಾರ್ಮಿಕ | ತಾಡೋಲೆ |
| ೧೪೩. ಸಂಪೂರ್ಣ ಮಹಾಭಾರತ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦-೧೯೫೦ | ದೊಡ್ಡಾಟ | ಕಾಗದಪ್ರತಿ |

| | | | | |
|---|---|---|---|---|
| ೧೪೪. ಸತ್ಯ ಹರಿಶ್ಚಂದ್ರ | ಬಾಳಂಭಟ್ಟ | ೧೮೮೭–೧೯೪೮ | ನಾಟಕ | ಕಾಗದಪ್ರತಿ |
| ೧೪೫. ಸತ್ಯ ಹರಿಶ್ಚಂದ್ರ | ಗುರುರಾಚಯ್ಯ | ೧೯೬೦ | ದೊಡ್ಡಾಟ | ಕಾಗದಪ್ರತಿ |
| ೧೪೬. ಸತ್ಯಶೀಲ | ಶಿವಾನಂದ ಕವಿ ಹಣ್ಣಿಕೇರಿ | ೧೮೭೦–೧೯೫೦ | ಸಣ್ಣಾಟ | ಕಾಗದಪ್ರತಿ |
| ೧೪೭. ಸಾನಂದ ಋಷಿಯ ಚರಿತೆ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ಸಣ್ಣಾಟ | ಕಾಗದಪ್ರತಿ |
| ೧೪೮. ಸಿಂಧು ಬಲ್ಲಾಳ | ನೇಸರಗಿ ಬಸವಣ್ಣೆಪ್ಪ | ೧೮೯೧–೧೯೭೧ | ಸಣ್ಣಾಟ | ಕಾಗದಪ್ರತಿ |
| ೧೪೯. ಸಿರಿಯಾಳ ಸತ್ವಪರೀಕ್ಷಾ | ಬಾಳಂಭಟ್ಟ | ೧೮೮೭–೧೯೪೮ | ಸಣ್ಣಾಟ | ಕಾಗದಪ್ರತಿ |
| ೧೫೦. ಸುಂದರನಂಬಿಯ ಚಂಪು | ಗುರುಬಸವ ಸ್ವಾಮಿಗಳು | ೧೯೬೦ | ಚಂಪೂಕಾವ್ಯ | ಕಾಗದಪ್ರತಿ |
| ೧೫೧. ಸೂರಿಸಿಂಹ ಮಹಾರಾಜ | | | | |
| (ಸಮ್ಯಕ್ತ್ವ ದರ್ಶನ, ಮರಾಠಿಯಿಂದ ಅನುವಾದ) | ಸಂ: ಕೆ. ಜಿ. ಕುಂದಣಗಾರ | ೧೯೫೦ | ಅನುವಾದ | ಕಾಗದಪ್ರತಿ |
| ೧೫೨. ಸೌಂದರನಂಬಿ | ಕಾದ್ರೊಳ್ಳಿ ನೀಲಕಂಠ ಕವಿ | ೧೮೯೫–೧೯೭೨ | ನಾಟಕ | ಕಾಗದಪ್ರತಿ |
| ೧೫೩. ಹಲಾಯುಧ ಸ್ತೋತ್ರ ವ್ಯಾಖ್ಯಾನ | ಗುರುದೇವರು | ೧೩೫೦ | ಟೀಕೆ | ತಾಡೋಲೆ |
| ೧೫೪. ಹೇಮದತ್ತ | ಭೇಂಡಿಗೇರಿ ಸಿದ್ಧಪ್ಪ | ೧೯೫೦ | ನಾಟಕ | ಕಾಗದಪ್ರತಿ |

ಅನುಬಂಧ–೧.೨.

## ಅಪ್ರಕಟಿತ ಲಾವಣಿ ಹಸ್ತಪ್ರತಿಗಳ ವಿವರ

### ಹುಲಕುಂದ ಶಿವಲಿಂಗ ಕವಿಯ ಲಾವಣಿಗಳು

೧. ಆದಿಯಲ್ಲಿ ಆಕಾರ ಇದ್ದಿದ್ದಿಲ್ಲ ನಿರಾಕಾರ,

೨. ಶಕ್ತಿ ಹೆಚ್ಚಂತ ಸಾರಿ ಹೇಳತಿ,

೩. ಶಕ್ತಿ ಅಲ್ಲ ಸಾಂಬನ ಸರಿ,

೪. ಯುಕ್ತಿ ಇಲ್ಲದೆ ಶಕ್ತನು ಮಾಡಾಕಿ,

೫. ಹೆಂಗಸ ಹೆಚ್ಚನ್ನು ನಾಗವ್ವ,

೬. ಶ್ರೇಷ್ಠವಾದ ಜಂಗಮಗ ನಿಷ್ಠುರಾಡುತಿ,

೭. ಪಾಯಾ ಹಿಡಿದ ಪದಾ ಹಾಡ,

೮. ಕಾಂತಿ ನೋಡಿ ನಾಡ ಭ್ರಾಂತನಾದಿನೋ,

೯. ಸಾಂಭವಕ್ಕಿಂತ ನಿಮ್ಮ ಶಕ್ತಿ ಹೆಚ್ಚಲ್ಲ,

೧೦. ಕೇಳಿದ್ದು ಹೇಳಬೇಕು,

೧೧. ಹದಾ ತಿಳಿಯದೆ ಪದಾ ಹಾಡತಿ,

೧೨. ಮಹಾದೇವನ ಸಹಾಯದಿಂದ ಶಕ್ತಿ ಮಾಡ್ಯಾಳ ಕದನ,

೧೩. ತಂದಿ ಇಂದ್ರ ಬಿದ್ದ ತಾಯಿ ಗರ್ಭದೊಳು ಪಿಂಡ,

೧೪. ಹಿತ್ತಾಳೆಗೆ ಬಂಗಾರಂತ ಒತ್ತೊತ್ತಿ ಹೇಳಿದ್ವಾಂಗ,

೧೫. ಎಷ್ಟೋ ಮಂದಿ ಹಾಳಾಗಿ ಹೋಗ್ಯಾರ ಶಕ್ತಿ ಹೆಚ್ಚಂತ,

೧೬. ಹೆಣ್ಣ ಹೆಚ್ಚಂತ ಕಣ್ಣ ಕಿಸುತಿ,

೧೭. ಎಲ್ಲಮ್ಮ ಹೆಚ್ಚಂತ ಬಲ್ಲಂಗ ಹೇಳ್ತಿ,

೧೮. ಕೆಟ್ಟ ಕಲ್ಗಿ ರಂಡಿ,

೧೯. ಮಳ್ಳ ಹುಡಗಿ ನಿನಗೇನ ಗೊತ್ತ,

೨೦. ಮೊಜ್ಜಿ ನನ್ನ ವ್ಯಾಜ್ಯ ಮಾಡಬೇಡ,

೨೧. ಆದಿಶಕ್ತಿ ಹೆಚ್ಚಂತ ವಾದ ಮಾಡತಿ,

೨೨. ಸಾಂಬನಿಂದ ಶಕ್ತಿ ಸಡಗರ,

೨೩. ಸಲಗಿ ನಾಯಿ ತಲಿಗೇರಿದಂಗ

೨೪. ಆದಿಶಕ್ತಿಯಿಂದ ಆಕಾರ,

೨೫. ಶಂಕರನ ತೆಲಿ ಮ್ಯಾಲ ನಮ್ಮ ಹೆಣ್ಣ,

೨೬. ರಾವಣನನ್ನು ಶಕ್ತಿ ಹೊಡೆದದ್ದು ಸುಳ್ಳಲ್ಲ,

೨೭. ಪರಮ ಕಪಟಿ ನಾರಾಯಣ,

೨೮. ಲಕ್ಷ್ಮೀ ಅಗಲಿ ಹರಿಗೆ ಬಂತೋ ವನವಾಸ,

೨೯. ಕುರುಡನ ಕೈಯ್ಯಾಗ ಕನ್ನಡಿ ಕೊಟ್ಟಾಂಗ

೩೦. ಗೋರಾ ಕುಂಬಾರ,

೩೧. ಬೇಡರಕಣ್ಣಪ್ಪ,

೩೨. ಭಕ್ತ ಸಿರಿಯಾಳ,

೩೩. ದಾಮೋಜಿ ಪಂತ,

೩೪. ಲಿಂಗಶೆಟ್ಟಿ,

೩೫. ರಾಮದುರ್ಗ ದುರಂತ,

೩೬. ಕಿತ್ತೂರ ಚೆನ್ನಮ್ಮ,

೩೭. ಕಿತ್ತೂರ ಯುದ್ಧ,

೩೮. ಅಪ್ಪಯ್ಯಸ್ವಾಮಿ,

೩೯. ನರಸಾಬಾಯಿ,

೪೦. ಕನ್ನಡ ನಾಡಿನ ಹುಲಿಗಳು,

೪೧. ಇಂದಿರಾಗಾಂಧಿ ಕೊಲೆ

**ಹುಲಕುಂದ ಭೀಮಕವಿಯ ಲಾವಣಿಗಳು**

೪೨. ಪರಮ ಶ್ರೀಗುರು

೪೩. ರಾಮೇಶ್ವರ ಸ್ತುತಿ

೪೪. ವಿಷ್ಣು ಸ್ತೋತ್ರ

೪೫. ಕನ್ನಡಾಂಬೆ ಸ್ತುತಿ

೪೬. ಕಿತ್ತೂರು ಚೆನ್ನಮ್ಮ

೪೭. ಬೆಳವಡಿ ಸಂಸ್ಥಾನ

೪೮. ಬಾಪೂಜಿ

೪೯. ಚಲೇಜಾವ್ ಚಳುವಳಿ

೫೦. ಸರ್ವೋದಯ ತತ್ವ

ಅನುಬಂಧ-೨

## ಸಂದರ್ಶಕರ ವಿವರ

೧. ಬಿ. ನಂಜುಂಡಸ್ವಾಮಿ ತುಮಕೂರು

೨. ಸುರೇಶ ಹನಗಂಡಿ, ಕಲ್ಲೋಳಿ

೩. ವ್ಹಿ. ಎಸ್. ಮಾಳಿ, ಹಾರೂಗೇರಿ

೪. ಜ್ಯೋತಿ ಹೊಸೂರ, ರಾಯಬಾಗ

೫. ವೈ. ಬಿ. ಹಿಮ್ಮಡಿ, ರಾಯಬಾಗ

೬. ಎಸ್. ಆರ್. ಗುಂಜಾಳ, ಧಾರವಾಡ

೭. ಬಾಬುರಾವ್ ದೇಸಾಯಿ, ಅಮ್ಮಣಗಿ

೮ ಸಿದ್ಧರಾಮ ಸ್ವಾಮೀಜಿ, ಬೆಳಗಾವಿ

೯. ಸರಜೂ ಕಾಟ್ಕರ್, ಬೆಳಗಾವಿ

೧೦. ಪ್ರಭು ಚನ್ನಬಸವ ಸ್ವಾಮೀಜಿ, ಅಥಣಿ

೧೧. ಚಂದ್ರಶೇಖರ ಅಕ್ಕಿ, ಗೋಕಾಕ

೧೨. ಸಿ. ಕೆ. ನಾವಲಗಿ, ಗೋಕಾಕ

೧೩. ಪಿ. ಜಿ. ಕೆಂಪಣ್ಣವರ, ಚಿಕ್ಕೋಡಿ

೧೪. ಪ್ರಕಾಶ ಕೋಟಿನತೋಟ, ಕೌಜಲಗಿ

೧೫. ಪ್ರಕಾಶ ಗಿರಿಮಲ್ಲನವರ, ಬೆಳಗಾವಿ

೧೬. ರವೀಂದ್ರ ತೋಟಿಗೇರ, ಬೆಳಗಾವಿ

೧೭. ಗುರುಪಾದ ಮರಿಗುದ್ದಿ, ಸಂಕೇಶ್ವರ

೧೮. ರಾಜಶೇಖರ ಇಚ್ಚಂಗಿ, ಹುಕ್ಕೇರಿ

೧೯. ಡಿ. ಜಿ. ಹಾಜವ್ವಗೋಳ, ಧಾರವಾಡ

೨೦. ರಮೇಶ ಕಮತಗಿ, ಹಾರೂಗೇರಿ

೨೧. ದತ್ತಾತ್ರೇಯ ಸ್ವಾಮೀಜಿ, ಮೂಡಲಗಿ

೨೨. ಮಹಾದೇವ ಜಿಡ್ಡಿಮನಿ, ಮೂಡಲಗಿ

## ೩. ಪರಾಮರ್ಶನ ಗ್ರಂಥಗಳು


೧. **ಅಗ್ನಿದಿವ್ಯ**

ಕೆ. ರವೀಂದ್ರನಾಥ ಪ್ರ : ಅಮರ ಪ್ರಕಾಶನ, ಗುಲಬರ್ಗಾ ೨೦೦೩

೨. **ಅಥಣಿ ತಾಲೂಕು ಸಮಗ್ರ ದರ್ಶನ**

ಸಂ: ವಿ. ಎಸ್. ಮಾಳಿ ಪ್ರ : ವಿಮೋಚನಾ ಸಂಸ್ಥೆ, ಅಥಣಿ, ೨೦೦೭

೩. **ಅಲಭೈರಿ ಕವಿಯ ಭಜನೆಯ (ತತ್ವ)ಪದಗಳು**

ಸಂ: ಆರ್. ಬಿ. ಚಿಲುಮಿ, ಹಾರೂಗೇರಿ, ೨೦೦೭

೪. **ಉದ್ಧರಣೆ ಪಟಲ**

ಸಂ: ಸಿ.ಬಿ.ಹೊನ್ನುಸಿದ್ಧಾರ್ಥ ಪ್ರ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೨೦೧೪

೫. **ಕಂಠಪತ್ರ ೩**

ಎಫ್.ಟಿ. ಹಳ್ಳಿಕೇರಿ ಪ್ರ : ವಿಕಾಶ ಪ್ರಕಾಶನ, ಹೊಸಪೇಟೆ, ೨೦೧೪

೬. **ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ ಸೂಚಿ ೧೦**

ಸಂ: ವೀರಣ್ಣ ರಾಜೂರ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೭. **ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಸೂಚಿ ೧**

ಸಂ: ವೀರಣ್ಣ ರಾಜೂರ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೮. **ಕನ್ನಡ ಅಧ್ಯಯನಪೀಠದ ಹಸ್ತಪ್ರತಿ ಸೂಚಿ ೭**

ಸಂ: ವೀರಣ್ಣ ರಾಜೂರ ಪ್ರ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೯. **ಕನ್ನಡ ಗ್ರಂಥ ಸಂಪಾದನ ಶಾಸ್ತ್ರ**

ಎಂ. ಎಂ. ಕಲಬುರ್ಗಿ ಪ್ರ: ಸಪ್ನ ಬುಕ್ ಹೌಸ, ಬೆಂಗಳೂರು ೨೦೧೫

೧೦. **ಕನ್ನಡ ಗ್ರಂಥ ಸಂಪಾದನೆ ಬಂಧ ವಿನ್ಯಾಸ**

ಎಸ್. ಎಸ್. ಅಂಗಡಿ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೭

೧೧. **ಕನ್ನಡ ಮೋಡಿಲಿಪಿ ಸಂರಚನೆ ಮತ್ತು ಸಂವರ್ಧನೆ**

ವೀರೇಶ ಬಡಿಗೇರ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೧೨. **ಕನ್ನಡ ಲಾವಣಿಗಳು**

ಶ್ರೀಕಂಠ ಕೂಡಗಿ ಪ್ರ: ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೯

೧೩. **ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ೨**

ಸಂ: ವೀರೇಶ ಬಡಿಗೇರ ಹಾಗೂ ಚನ್ನವೀರಪ್ಪ ಎಸ್. ಆರ್. ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೧೪. **ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ೩**

ಸಂ: ಎಫ್. ಟಿ.ಹಳ್ಳಿಕೇರಿ ಹಾಗೂ ಕೆ. ರವೀಂದ್ರನಾಥ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩

೧೫. **ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ೪**

ಸಂ: ವಿರೇಶ ಬಡಿಗೇರ ಹಾಗೂ ಎಸ್. ಆರ್. ಚನ್ನವೀರಪ್ಪ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩

೧೬. **ಕನ್ನಡ ವಿಶ್ವವಿದ್ಯಾಲಯ ಹಸ್ತಪ್ರತಿ ಸೂಚಿ ೫**

ಸಂ: ವೀರೇಶ ಬಡಿಗೇರ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩

೧೭. **ಕನ್ನಡ ಹಸ್ತಪ್ರತಿ ಶಾಸ್ತ್ರ**

ಎಂ. ಎಂ. ಕಲಬುರ್ಗಿ ಪ್ರ: ಸ್ನೇಹ ಪ್ರಕಾಶನ, ಬೆಂಗಳೂರು, ೧೯೯೩

೧೮. **ಹಸ್ತಪ್ರತಿ ಶಾಸ್ತ್ರ**

ನಾ. ಗೀತಾಚಾರ್ಯ ಪ್ರ: ಬಿ. ಎಂ. ಶ್ರೀ ಪ್ರತಿಷ್ಠಾನ, ಬೆಂಗಳೂರು, ೨೦೦೯

೧೯. **ಕನ್ನಡ ಹಸ್ತಪ್ರತಿಗಳ ಇತಿಹಾಸ**

ಎಚ್. ದೇವೀರಪ್ಪ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

೨೦. **ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ೩**

ಎಚ್.ದೇವೀರಪ್ಪ ಪ್ರ: ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೩

೨೧. **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**

ಬಿ. ಕೆ. ಹಿರೇಮಠ ಪ್ರ: ವೀರಶೈವ ವಿಚಾರ ವೇದಿಕೆ, ಹಿರೇಮಠ ಕಸಬಾ ಜಂಬಗಿ, ೧೯೯೨

೨೨. **ಕನ್ನಡ ಹಸ್ತಪ್ರತಿಗಳು ಮತ್ತು ದೈವತ್ವದ ನೆಲೆ**

ಕ್ರಿಷ್ಟಪ್ಪ ಪ್ರ: ಮಯ ಪ್ರಕಾಶನ, ಹೊಸಪೇಟೆ ೨೦೧೪

೨೩. **ಕನ್ನಡದಲ್ಲಿ ವೈದ್ಯಶಾಸ್ತ್ರದ ಹಸ್ತಪ್ರತಿಗಳು**

ಆಯ್. ಎನ್. ಹುರಳಿ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೧೧

೨೪. **ಕರ್ನಾಟಕ ಕವಿ ಚರಿತೆ ೧**

ಆರ್. ನರಸಿಂಹಾಚಾರ್ಯ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೫

೨೫. **ಕರ್ನಾಟಕ ಕವಿ ಚರಿತೆ ೨**

ಆರ್. ನರಸಿಂಹಾಚಾರ್ಯ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೫

೨೬. **ಕರ್ನಾಟಕ ಕವಿ ಚರಿತೆ ೩**

ಆರ್. ನರಸಿಂಹಾಚಾರ್ಯ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೫

೨೭. **ಕರ್ನಾಟಕ ಜೈನಮಠಗಳು ಮತ್ತು ಕನ್ನಡ ಸಾಹಿತ್ಯ**

ಕೆ. ರವೀಂದ್ರನಾಥ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೨೮. **ಕರ್ನಾಟಕ ಮತ್ತು ಮರಾಠಿ ಸಾಹಿತ್ಯ**

ಮೂ: ಪಂಡಿತ ಅವಳಿಕರ ಅನು: ಎಸ್. ಪಿ. ಪಾಟೀಲ ಪ್ರ: ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೭

೨೯. **ಕಾಡಸಿದ್ಧೇಶ್ವರರ ಕುರಿತು ಭಕ್ತರ ಆಖ್ಯಾಯಿಕೆಗಳು**

ಮಲ್ಲಪ್ಪ ಕೊಚ್ಚರಗಿ ಪ್ರ: ಕಾಡಸಿದ್ಧೇಶ್ವರಮಠ, ಕೊಣ್ಣೂರು ಮರಡಿಮಠ, ೧೯೯೨

೩೦. **ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ.೧**

ಸಂ: ಎಂ. ಎಂ. ಕಲಬುರ್ಗಿ ಪ್ರ: ತೋಂಟದಾರ್ಯ ಸಂಸ್ಥಾನಮಠ, ಗದಗ ೧೯೯೯

೩೧. **ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ.೨**

ಸಂ: ಎಂ. ಎಂ. ಕಲಬುರ್ಗಿ ಪ್ರ: ತೋಂಟದಾರ್ಯ ಸಂಸ್ಥಾನಮಠ, ಗದಗ ೨೦೦೫

೩೨. **ಕಿತ್ತೂರು ಸಂಸ್ಥಾನ ಸಾಹಿತ್ಯ ಸಂ.೩**

ಸಂ: ಎಂ. ಎಂ. ಕಲಬುರ್ಗಿ ಪ್ರ: ತೋಂಟದಾರ್ಯ ಸಂಸ್ಥಾನಮಠ, ಗದಗ ೨೦೧೫

೩೩. **ಕೆ.ಜಿ. ಕುಂದಣಗಾರರ ಲೇಖನ ಸಾಹಿತ್ಯ**

ಸಂ: ಮ.ಗು.ಬಿರಾದಾರ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೯

೩೪. **ಗೋಕಾಕ ಶಿಕ್ಷಣ ಸಂಸ್ಥೆ**

ಸಿ. ಕೆ. ನಾವಲಗಿ ಪ್ರ: ಜೆ.ಎಸ್. ಎಸ್. ಸಂಸ್ಥೆ, ಗೋಕಾಕ, ೨೦೧೫

೩೫. **ಗೋಕಾವಿ ಸಂಪಾದನೆಮಠದ ಚನ್ನಬಸವ ಸ್ವಾಮಿಗಳು**

ಬಾಳಪ್ಪ ಯರಗಟ್ಟಿ ಪ್ರ: ಸಂಪಾದನೆಮಠ, ಗೋಕಾಕ, ೧೯೮೦

೩೬. **ಗೋಕಾವಿ ಸಿರಿ ಸಂಪದ**

ಸಂ. ಚಂದ್ರಶೇಖರ ಅಕ್ಕಿ ಮತ್ತು ಮಹಾಲಿಂಗ ಮಂಗಿ ಪ್ರ: ಗೋಕಾವಿ ನಾಡಿನ ಸಾಹಿತ್ಯ ಸಮಾವೇಶ, ಗೋಕಾಕ ೨೦೦೬

೩೭. **ಗ್ರಂಥ ಸಂಪಾದನೆ ಕೆಲವು ಅಧ್ಯಯನಗಳು**

ವೈ. ಸಿ. ಭಾನುಮತಿ ಪ್ರ: ಕೇಶವ ಪ್ರಕಾಶನ, ಮೈಸೂರು, ೧೯೯೭

೩೮. **ಜೈನ ಟೀಕಾ ಸಾಹಿತ್ಯ**

ಕೆ. ರವೀಂದ್ರನಾಥ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೩೯. **ತೇರದಾಳದ ಲಾವಣಿಕಾರರು**

ಸಂಗಮೇಶ ಬಿರಾದಾರ ಪ್ರ: ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು ೧೯೯೫

೪೦. **ದಕ್ಷಿಣ ಭಾರತದಲ್ಲಿಯ ಹಸ್ತಪ್ರತಿ ಗ್ರಂಥಾಲಯಗಳು**

ಎಸ್. ಆರ್. ಗುಂಜಾಳ ಮತ್ತು ಶ್ರೀಶೈಲ ಪಾಟೀಲ, ಪ್ರ: ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೨೦೦೨

೪೧. **ನಾಗನೂರು ರುದ್ರಾಕ್ಷಿಮಠದ ಹಸ್ತಪ್ರತಿ ಸೂಚಿ**

ಸಂ: ಪಿ. ಕೆ. ರಾಠೋಡ ಪ್ರ: ನಾಗನೂರು ರುದ್ರಾಕ್ಷಿಮಠ, ಬೆಳಗಾವಿ, ೧೯೯೮

೪೨. **ನೇಗಿನಹಾಳ ಪ್ರಬಂಧಗಳು**

ಎಂ. ಬಿ. ನೇಗಿನಹಾಳ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೪೩. **ಪಾರ್ಶ್ವನಾಥ ಪುರಾಣ ಒಂದು ತೌಲನಿಕ ಅಧ್ಯಯನ**

ರಾಜಶೇಖರ ಇಚ್ಚಂಗಿ ಪ್ರ: ಜೈನ ಸಂಶೋಧನ ಪೀಠ, ಶ್ರವಣಬೆಳಗೊಳ, ೨೦೦೦

೪೪. **ಪ್ರಾಚೀನ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿ ಸಂ ೧೧**

ಸಂ: ಎಸ್. ಎಂ. ವೃಷಭೇಂದ್ರಸ್ವಾಮಿ, ಪ್ರ: ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ ೧೯೮೨

೪೫. **ಪ್ರಾಚೀನ ಹಸ್ತಪ್ರತಿಗಳ ವಿವರಣಾತ್ಮಕ ಸೂಚಿ ಸಂ ೧೩**

ಸಂ: ಎಸ್. ಎಂ. ವೃಷಭೇಂದ್ರಸ್ವಾಮಿ, ಪ್ರ: ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ ೧೯೯೦

೪೬. **ಫ.ಗು.ಹಳಕಟ್ಟಿ ಸಮಗ್ರ ಸಾಹಿತ್ಯ ಸಮೀಕ್ಷೆ**

ಬಿ. ನಂಜುಂಡಸ್ವಾಮಿ ಪ್ರ: ಪ್ರಭುದೇವ ಜನಕಲ್ಯಾಣ ಪ್ರತಿಷ್ಠಾನ, ಸೊಂಡೂರು, ೨೦೦೯

೪೭. **ಫ್ಲೀಟರು ಸಂಗ್ರಹಿಸಿದ ಲಾವಣಿಗಳು**

ಸಂ: ಕ್ಯಾತನಹಳ್ಳಿ ರಾಮಣ್ಣ ಪ್ರ: ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೧

೪೮. **ಬೆಳಗಾವಿ ಜಿಲ್ಲೆಯ ಸಾಹಿತ್ಯ ದರ್ಶನ**

ಸಂ: ಪಿ.ಜಿ.ಕೆಂಪಣ್ಣವರ ಪ್ರ: ಕನ್ನಡ ಜಾಗೃತಿಮಾಲೆ, ಸಿದ್ಧಸಂಸ್ಥಾನಮಠ, ಚಿಂಚಣಿ, ೨೦೦೪

೪೯. **ಮಾರ್ಗ ಸಂ. ೧**

ಎಂ ಎಂ. ಕಲಬುರ್ಗಿ ಕಲ್ಲಯ್ಯ ಆಂಡ್ ಕಂ. ಬೆಂಗಳೂರು, ೧೯೮೮

೫೦ **ಮೋಡಿ ದಾಖಲೆಗಳಲ್ಲಿ ಕಿತ್ತೂರು**

ಸಂಗಮೇಶ ಕಲ್ಯಾಣಿ, ಜ್ಞಾನ ಭಾರತಿ ತ್ರಿವೇಣಿ ಪ್ರಕಾಶನ, ಮುಧೋಳ ೨೦೧೭

೫೦. **ಯಂತ್ರ – ಮಂತ್ರ**

ಸಂ. ಸಿ. ಬಿ. ಹೊನ್ನು ಸಿದ್ಧಾರ್ಥ ಪ್ರ: ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೧೪

೫೧. **ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ**

ಸಂ: ನಿಂಗಣ್ಣ ಸಣ್ಣಕ್ಕಿ ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೭

೫೨. **ವೀರಶೈವ ಷಟ್ಪದಿ ಸಾಹಿತ್ಯ**

ಡಿ. ಮಂಗಳಾ ಪ್ರಿಯದರ್ಶಿನಿ ಪ್ರ: ಜೆ. ಎಸ್. ಎಸ್ ಗ್ರಂಥಮಾಲೆ, ಮೈಸೂರು, ೨೦೦೩

೫೩. **ವೀರಶೈವ ಹಸ್ತಪ್ರತಿ ಪುಷ್ಪಿಕೆಗಳು**

ಎಸ್. ಶಿವಣ್ಣ ಪ್ರ: ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೯೪

೫೪. **ಶಿ. ಚೆ. ನಂದೀಮಠರ ಸಮಗ್ರ ಲೇಖನಗಳು**

ಸಂ: ಬಿ. ವಿ. ಶಿರೂರ ಪ್ರ: ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೧೦

೫೫. **ಶ್ರೀ ದುರದುಂಡೀಶ್ವರ ಚರಿತ್ರೆ**

ಉಳುವೀಶ ಹುಲೆಪ್ಪನವರಮಠ, ಪ್ರ: ದುರದುಂಡೀಶ್ವರಮಠ, ಮುರಗೋಡ, ೧೯೯೨

೫೬. **ಸಮಗ್ರ ದಾಸ ಸಾಹಿತ್ಯ ಸಂ ೨೯ ಭಾಗ ೧**

ಸಂ: ಬಸವರಾಜ ಸಬರದ ಪ್ರ: ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೩

೫೭. **ಸಾತು ಕ್ಯಾಮಣ್ಣನ ಲಾವಣಿಗಳು**

ಸಂ: ನಿಂಗಣ್ಣ ಸಣ್ಣಕ್ಕಿ ಪ್ರ: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೪

೫೮. **ಸಾವಳಗಿ ಶಿವಲಿಂಗೇಶ್ವರ ಪುರಾಣ**

ಸಂ: ಸಂಗಮೇಶ ಹಂಡಗಿ, ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೫೯. **ಸೋದೆಯ ಸದಾಶಿವರಾಯನ ಕೃತಿಗಳು**

ಸಂ: ಬಿ. ಆರ್. ಹಿರೇಮಠ ಪ್ರ: ತೋಂಟದಾರ್ಯ ಸಂಸ್ಥಾನಮಠ, ಗದಗ, ೧೯೯೫

೬೦. **ಸೋಮಲಿಂಗ ಕವಿಯ ಲಾವಣಿಗಳು**

ಸಂ. ಸಿ. ಕೆ. ನಾವಲಗಿ ಪ್ರ: ಫಕೀರಪ್ಪ ದೊಡವಾಡ, ಬೈಲಹೊಂಗಲ, ೨೦೧೨

೬೧. **ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ**

ಬಸವರಾಜ ಮಲಶೆಟ್ಟಿ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೭

೬೨. **ಹಸ್ತಪ್ರತಿ ಅಧ್ಯಯನ : ಸಮಕಾಲೀನ ಸವಾಲುಗಳು**

ಸಂ: ಸಿ.ಬಿ. ಹೊನ್ನುಸಿದ್ಧಾರ್ಥ ಪ್ರ: ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೧೩

೬೩. **ಹಸ್ತಪ್ರತಿ ಲಿಪಿಕಾರರು**

ಕ್ರಿಷ್ಣಪ್ಪ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೬೪. **ಹಸ್ತಪ್ರತಿ ವ್ಯಾಸಂಗ ೨**

ಸಂ: ಎಫ್.ಟಿ.ಹಳ್ಳಿಕೇರಿ ಕೆ. ರವೀಂದ್ರನಾಥ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೬೫. **ಹಸ್ತಪ್ರತಿ ವ್ಯಾಸಂಗ ೬**

ಸಂ: ಎಸ್ ಆರ್. ಚೆನ್ನವೀರಪ್ಪ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೬

೬೬ **ಹಸ್ತಪ್ರತಿ ವ್ಯಾಸಂಗ ೧೧**

ಸಂ: ಕೆ. ರವೀಂದ್ರನಾಥ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೬೭. **ಹಸ್ತಪ್ರತಿ ವ್ಯಾಸಂಗ ೫ ಮತ್ತು ೧೪**

ಸಂ: ವೀರೇಶ ಬಡಿಗೇರ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೫

೬೮. **ಹಸ್ತಪ್ರತಿ ವ್ಯಾಸಂಗ ೪ ಕನ್ನಡ ಹಸ್ತಪ್ರತಿಗಳ ಅಧ್ಯಯನ ಹೊಸ ಸಾಧ್ಯತೆಗಳು**

ಸಂ: ವೀರೇಶ ಬಡಿಗೇರ, ಎಸ್. ಆರ್. ಚನ್ನವೀರಪ್ಪ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೬೯. **ಹಸ್ತಪ್ರತಿ ಸಂಕಥನ**

ವೀರೇಶ ಬಡಿಗೇರ ಪ್ರ: ಮಯ ಪ್ರಕಾಶನ, ಹೊಸಪೇಟೆ, ೨೦೧೪

೭೦. **ಹಸ್ತಪ್ರತಿಗಳು : ಕನ್ನಡಿಗರ ಬದುಕು**

ಕೆ. ರವೀಂದ್ರನಾಥ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೪

೭೧. **ಹಳೆಯ ಲಾವಣಿಗಳು**

ಸಂ: ವೀರೇಶ ಬಡಿಗೇರ ಪ್ರ: ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೭೨ **ಹಾಲುಬಾನ (ನಿಂಗಣ್ಣ ಸಣ್ಣಕ್ಕಿ ಅಭಿನಂದನ ಸಂಪುಟ)**

ಸಂ: ಚಂದ್ರಶೇಖರ ಅಕ್ಕಿ ಪ್ರ: ವಿದ್ಯಾನಿಧಿ ಪ್ರಕಾಶನ, ಗದಗ, ೨೦೦೪

**English Books :**

1. A Descriptive Catalogue of Manuscripts in the Kannada Research Institute, Dharwar Volume I, Editor : R. S. Panchamukhi, Kannada Research Institute Dharwad 1953
2. A Descriptive Catalogue of Manuscripts in the Kannada Research Institute, Dharwar Volume III, Editor : B. S. Kulkarni, Kannada Research Institute Dharwad 1957
3. A Descriptive Catalogue of Manuscripts in the Kannada Research Institute, Dharwar Volume IV, Editor : A. M. Annigeri, Kannada Research Institute Dharwad 1961
4. A Descriptive Catalogue of Manuscripts in the Kannada Research Institute, Dharwar Volume V, Editor : P. B. Desai, Kannada Research Institute Dharwad 1964
5. A Descriptive Catalogue of Manuscripts in the Kannada Research Institute, Dharwar Volume VIII, Editor : P. B. Desai, Kannada Research Institute Dharwad 1968
6. A Descriptive Catalogue of Manuscripts in the Kannada Research Institute, Dharwar Volume IX, Editor : P.B. Desai, Kannada Research Institute Dharwad 1970
7. A Descriptive Catalogue of Manuscripts in the Kannada Research Institute, Dharwar Volume X, Editor : B. S. Kulkarni, Kannada Research Institute Dharwad 1976

**ಪತ್ರಿಕೆಗಳು :**

ಹಸ್ತಪ್ರತಿ ಅಧ್ಯಯನ ಸಂ ೭ ಸಂಚಿಕೆ ೧ ೨೦೦೯

ಹಸ್ತಪ್ರತಿ ಅಧ್ಯಯನ ಸಂ ೮ ಸಂಚಿಕೆ ೧ ೨೦೧೦

ಹಸ್ತಪ್ರತಿ ಅಧ್ಯಯನ ಸಂ ೩ ಸಂಚಿಕೆ ೨ ೨೦೦೬

ಶಿವಾನುಭವ ಪತ್ರಿಕೆ ಸಂ. ೬ ಸಂಚಿಕೆ ೩, ೧೯೩೨

ಕರ್ನಾಟಕ ಭಾರತಿ ರಾಜ್ಯೋದಯ ಸಂಚಿಕೆ ೧೯೭೫

